ಶ್ರೀ ಜಯಚಾಮರಾಜೇಂದ್ರ ಗ್ರಂಥ ರತ್ನಮಾಲಾ

ಸಂಖ್ಯಾ—೨೯

# ಶ್ರೀ ಹಾಲಾಸ್ಯ ಮಾಹಾತ್ಮ್ಯಂ

(ಸಂಸ್ಕೃತಮೂಲ, ಕನ್ನಡ ಅರ್ಥಾನುವಾದ ಸಹಿತ)

## ಸಂಪುಟ ೧

ಅಧ್ಯಾಯಗಳು ೧—೨೨

ಅನುವಾದಕ

ಎಸ್. ಸೀತಾರಾಮಶಾಸ್ತ್ರೀ

ಸಾಹಿತ್ಯವಿದ್ವಾನ್ ಮತ್ತು ಪ್ರಾಕ್ತನ ಪುಸ್ತಕಶಾಲಾ ಪಂಡಿತ, ಮೈಸೂರು.



ಶ್ರೀ ವಿನಾಯಕ್ ಪ್ರಿಂಟಿಂಗ್ ವರ್ಕ್ಸ್,

ಮೈಸೂರು.

೧೯೪೬

ಶ್ರೀ ಜಯಚಾಮರಾಜೇಂದ್ರ ಗ್ರಂಥ ರತ್ನಮಾಲಾ

ಸಂಖ್ಯಾ—೨೯

# ಶ್ರೀ ಹಾಲಾಸ್ಯ ಮಾಹಾತ್ಮ್ಯಂ

(ಸಂಸ್ಕೃತಮೂಲ, ಕನ್ನಡ ಅರ್ಥಾನುವಾದ ಸಹಿತ)

## ಸಂಪುಟ ೧

ಅಧ್ಯಾಯಗಳು ೧—೨೨

ಅನುವಾದಕ

ಎಸ್. ಸೀತಾರಾಮಶಾಸ್ತ್ರೀ

ಸಾಹಿತ್ಯವಿದ್ವಾನ್ ಮತ್ತು ಪ್ರಾಕ್ತನ ಪುಸ್ತಕಶಾಲಾ ಪಂಡಿತ, ಮೈಸೂರು.

ಶ್ರೀ ವಿನಾಯಕ್ ಪ್ರಿಂಟಿಂಗ್ ವರ್ಕ್ಸ್,

ಮೈಸೂರು.

೧೯೪೬

# ಮುನ್ನುಡಿ.

ಹಾಲಾಸ್ಯ ಮಹಿಮೆ ಎಂದು ಹೆಸರುಳ್ಳ ಈ ಗ್ರಂಥದಲ್ಲಿ ಮಧುರಾನಗರದ ಮಹಿಮೆಯನ್ನು ವರ್ಣಿಸಿ, ಈ ನಗರಕ್ಕೆ ಇರುವ ಅನೇಕ ಹೆಸರುಗಳು ಬರುವುದಕ್ಕೆ ಕಾರಣಗಳೆಲ್ಲವನ್ನೂ ಚೆನ್ನಾಗಿ ಹೇಳಿರುವುದು. ಮದರಾಸು ಪ್ರಾಂತ್ಯದ ತಿನ್ನವಳ್ಳಿ ಜಿಲ್ಲೆಯಲ್ಲಿರುವ ಈ ನಗರವು ಉತ್ತಮವಾದ ಶಿವಕ್ಷೇತ್ರಗಳಲ್ಲಿ ಮುಖ್ಯವಾಗಿರುತ್ತದೆ ಎಂಬ ಅಂಶವು ಈ ಗ್ರಂಥದಿಂದ ತಿಳಿಯಬರುವುದು. ಸುಂದರೇಶ್ವರ, ಮತ್ತು ಮೀನಾಕ್ಷೀದೇವಿ ಎಂಬ ಹೆಸರಿನಿಂದ ಈ ಭೂಮಿಯಲ್ಲಿ ಪ್ರಸಿದ್ಧರಾಗಿರುವ ಪಾರ್ವತೀ ಪರಮೇಶ್ವರರು ಈ ನಗರದಲ್ಲಿಯೇ ಪ್ರತ್ಯಕ್ಷರಾಗಿ ನೆಲಸಿ, ತಮ್ಮ ಮಹಿಮೆಯನ್ನು ವ್ಯಕ್ತಗೊಳಿಸಿರುವ ವಿಷಯವನ್ನು ಅಗಸ್ತ್ಯಋಷಿಯು ಇತರ ಋಷಿಗಳಿಗೆ ಚೆನ್ನಾಗಿ ಬೋಧಿಸಿರುವನು.

ಪಾಂಡ್ಯದೇಶದ ರಾಜರುಗಳಿಗೆಲ್ಲರಿಗೂ ಮೊದಲನೆಯವನಾಗಿ ಸುಂದರೇಶ್ವರನೆಂಬ ಹೆಸರಿನಿಂದ ಪರಮೇಶ್ವರನು ರಾಜ್ಯಭಾರ ಮಾಡಿದ ಕ್ರಮವೂ, ತಾನೇ ಮೂಲಪುರುಷನಾಗಿರುವುದರಿಂದ ವಂಶವು ವೃದ್ಧಿಯಾಗುವಂತೆ ಆಯಾಯ ಕಾಲಗಳಲ್ಲಿ ಪರಮೇಶ್ವರನು ಅನುಗ್ರಹಿಸಿರುವ ಬಗೆಯೂ, ಈ ಗ್ರಂಥದಲ್ಲಿ ಚೆನ್ನಾಗಿ ಹೇಳಿರುವುದು.

ತನ್ನನ್ನು ಸೇವೆ ಮಾಡಿದವರಿಗೂ, ಮತ್ತು ಪಾಂಡ್ಯದೇಶದ ರಾಜರಿಗೂ ಅನುಗ್ರಹವನ್ನು ಮಾಡಿರುವ ಶಿವನ ಅರವತ್ತುನಾಲ್ಕು ಲೀಲೆಗಳನ್ನು ವಿಸ್ತಾರವಾಗಿ ತಿಳಿಸುವ ಈ ಗ್ರಂಥವನ್ನು ಓದಿ, ಓದಿಸಿ, ಕೇಳುವವರಿಗೆ ಉಂಟಾಗುವ ಫಲಗಳನ್ನು ಚೆನ್ನಾಗಿ ಈ ಗ್ರಂಥದಲ್ಲಿ ಹೇಳಿರುವುದು.

"ಶಿವಶ್ಶಕ್ತಿರಿತಿಹ್ಯೇಕಂ ತತ್ತ್ವಮಾಹುರ್ಮನೀಷಿಣಃ" ಎಂಬ ವಚನಾನುಸಾರವಾಗಿ ಶಿವನಿಂದ ಹೊರತಾಗಿ ಶಕ್ತಿಯೂ, ಶಕ್ತಿಯಿಂದ ಹೊರತಾಗಿ ಶಿವನೂ ಇರುವುದಿಲ್ಲವೆಂಬ ಸಿದ್ಧಾಂತವನ್ನು ಬೋಧಿಸುವುದಲ್ಲದೆ, ಈ ಗ್ರಂಥದಲ್ಲಿ ಶಿವ ಪಂಚಾಕ್ಷರ ಮಂತ್ರವನ್ನು ಉಪಾಸನೆ ಮಾಡುವವರು ಆಚರಿಸಬೇಕಾದ ನಿಯಮಗಳೂ, ಶಿವನನ್ನು ಪ್ರತ್ಯಕ್ಷವಾಗಿ ಕಾಣುವವರಿಗೂ ಆಚರಿಸಬೇಕಾದ ಭಕ್ತಿಯ ನಡವಳಿಕೆಯೂ, ಚೆನ್ನಾಗಿ ತಿಳಿಯುವಂತೆ ಹೇಳಿರುವುದು.

ಉಪಾಸಕನಾದವನು ಉಪಾಸ್ಯದೇವತೆಯ ವಿಷಯದಲ್ಲಿ ಆಚರಿಸಬೇಕಾದ ಶ್ರವಣ, ಕೀರ್ತನ, ಸ್ಮರಣ, ಪಾದಸೇವನ, ಅರ್ಚನ, ವಂದನ, ದಾಸ್ಯ, ಸಖ್ಯ, ಆತ್ಮನಿವೇದನ, ಎಂಬ ನವವಿಧವಾದ ಭಕ್ತಿಗಳಿಂದ ಸೇವಿಸುವುದರ ಮೂಲಕವಾಗಿ ಆ ದೇವತೆಯ ಸಂಪೂರ್ಣವಾದ ಅನುಗ್ರಹವನ್ನು ಪಡೆಯುವ ಕ್ರಮವು ವಿವರವಾಗಿ ಹೇಳಿರುವುದು.

ಈ ಪ್ರಕಾರವಾದ ಭಕ್ತಿಯಿಂದ ಸೇವೆಯನ್ನು ಮಾಡಿ, ಶರಣು ಹೊಂದಿದ ಸ್ತ್ರೀಯರು, ಶೂದ್ರರು, ದ್ವಿಜರು, ರಾಜರು, ವೈಶ್ಯರು, ಇವರೇ ಮೊದಲಾದವರಿಗೂ, ಇನ್ನೂ ಕಡಿಮೆಯ ತರಗತಿಯ ಜನ್ಮವನ್ನು ಹೊಂದಿರುವ ತಿರ್ಯಕ್ ಪ್ರಾಣಿಗಳಿಗೂ ಕೂಡ, ಪಕ್ಷಪಾತವಿಲ್ಲದಂತೆ, ಒಂದೇ ಸಮನಾದ ಅಭಿಪ್ರಾಯದಿಂದ ಅನುಗ್ರಹವನ್ನು ಉಂಟುಮಾಡುತ್ತಿರುವ ಪರಶಿವನ ಅಪಾರವಾದ ದಯೆಯನ್ನೂ ದುಷ್ಟನಿಗ್ರಹ ಕ್ರಮ ವನ್ನೂ ಆಯಾಯ ಅಧ್ಯಾಯಗಳಲ್ಲಿ ಹೇಳಿರುವುದು.

ನಿರತಿಶಯ ದಯಾಶಾಲಿಯಾಗಿ ಬಹಳ ಮಹಿಮೆಯುಳ್ಳವನಾಗಿ ಇರುವ ಪಾರ್ವತೀ ಸಮೇತನಾದ ಪರಮೇಶ್ವರನು ಆಚರಿಸಿದ ಅರವತ್ತುನಾಲ್ಕು ಲೀಲೆಗಳನ್ನು ಸ್ತ್ರೀ ಬಾಲ ವೃದ್ಧರೂ ಚೆನ್ನಾಗಿ ತಿಳಿದುಕೊಳ್ಳುವುದರ ಮೂಲಕ ಪರಮೇಶ್ವರನ ಕೃಪಾಕಟಾಕ್ಷಕ್ಕೆ ಪಾತ್ರರಾಗುವಂತೆ ಅನುಕೂಲವನ್ನು ಕಲ್ಪಿಸಿಕೊಟ್ಟಿರುವವರಾದ, ಕರ್ಣಾಟಕ ಸಿಂಹಾಸನಾಧೀಶ್ವರರಾದ ನಮ್ಮನ್ನು ಆಳುತ್ತಿರುವ ಮಹಾಪ್ರಭುಗಳಾದ **ಶ್ರೀ ಮನ್ ಮಹಾರಾಜ ಶ್ರೀ ಜಯಚಾಮರಾಜೇಂದ್ರ ಒಡೆಯರ್, ಬಹದ್ದೂರ್ ಜಿ. ಸಿ. ಬಿ., ಜಿ. ಸಿ. ಎಸ್. ಐ. ಯವರಿಗೆ** ಸರ್ವಮಂಗಳೆಯಾದ ಚಾಮುಂಡಾಂಬಿಕೆಯೂ, ಮತ್ತು ಪರಮೇಶ್ವರನೂ, ಚತುರ್ವಿಧಪುರುಷಾರ್ಥಗಳನ್ನೂ ಆಯುರಾರೋಗ್ಯೈಶ್ವರ್ಯಾಭಿವೃದ್ಧಿಯನ್ನೂ ಉಂಟು ಮಾಡುತ್ತಿರಲಿ ಎಂದು ಕೋರುತ್ತೇನೆ.

**ಎಸ್. ಸೀತಾರಾಮಶಾಸ್ತ್ರೀ,**
ಅನುವಾದಕ.

೨೨-೩-೧೯೪೬.



# ವಿಷಯಾನುಕ್ರಮಣಿಕೆ



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯ ಮಾಹಾತ್ಮ್ಯಂ



ಶುಕ್ಲಾಂಬರಧರಂ ವಿಷ್ಣುಂ ಶಶಿವರ್ಣಂ ಚತುರ್ಭುಜಂ ।
ಪ್ರಸನ್ನವದನಂ ಧ್ಯಾಯೇತ್ಸರ್ವವಿಘ್ನೋಪಶಾಂತಯೇ ॥ ೧ ॥

ಅಜ್ಞಾನತಿಮಿರಾಂಧಸ್ಯ ಜ್ಞಾನಾಂಜನಶಲಾಕಯಾ ।
ಚಕ್ಷುರುನ್ಮೀಲಿತಂ ಯೇನ ತಸ್ಮೈ ಶ್ರೀಗುರವೇ ನಮಃ ॥ ೨ ॥

**ಐಶ್ವರ್ಯಂ ಪರಮಂ ತತ್ತ್ವಮಾದಿಮಧ್ಯಾಂತವರ್ಜಿತಂ ।**
**ಆಧಾರಂ ಸರ್ವಭೂತಾನಾಮನಾಧಾರಮವಿಕ್ರಿಯಂ ॥ ೧ ॥**

**ಅನಂತಾನಂದಬೋಧಾಂಬುನಿಧಿಮದ್ಭುತವಿಕ್ರಮಂ ।**
**ಅಂಬಿಕಾಪತಿಮೀಶಾನಮನಿಶಂ ಪ್ರಣಮಾಮ್ಯಹಂ ॥ ೨ ॥**

---

೧–೨. ಎಲ್ಲಾ ಪ್ರಾಣಿಗಳಿಗೂ ಆಧಾರವಾಗಿ, ತಾನು ಮಾತ್ರ ಇನ್ನೊಂದು ಆಧಾರ ಪಧಾರ್ಥವನ್ನು ಹೊಂದದೇ, ಎಲ್ಲರಿಗೂ ಅಧಿಪತಿಯಾಗಿ, ಎಲ್ಲಾತತ್ತ್ವಗಳಿಗಿಂತಲೂ ಹೆಚ್ಚಾಗಿರುವ, ಆದಿ, ಮಧ್ಯ, ಅಂತಗಳಿಲ್ಲದೆ, ಯಾವ ವಿಧವಾದ ವಿಕಾರವನ್ನೂ ಹೊಂದದೆ, ಅಪಾರವಾದ ಜ್ಞಾನ ಮತ್ತು ಆನಂದರೂಪದಿಂದ ಇರುವವನಾಗಿ ಇತರರಿಗೆ ಆಶ್ಚರ್ಯವನ್ನು ಉಂಟುಮಾಡುವ, ಪರಾಕ್ರಮದಿಂದ, ಕೂಡಿರುವ, ಪಾರ್ವತೀಪತಿಯಾದ ಪರಮೇಶ್ವರನನ್ನು ಎಲ್ಲಾ ಕಾಲದಲ್ಲಿಯೂ ನಮಸ್ಕರಿಸುತ್ತೇನೆ.

ವಂದೇ ಹಾಲಾಸ್ಯನಗರೀಂ ವಂದೇ ಹೇಮಾಬ್ಜಿನೀಮಪಿ ।
ವಂದೇ ಸುಮೀನನಯನಾಂ ವಂದೇ ಸುಂದರನಾಯಕಂ । ॥ ೩ ॥

ಶಿವಾಯ ಪರಿಪೂರ್ಣಾಯ ಶೀತಲಾಯ ಚಿದಾತ್ಮನೇ ।
ಚಿತ್ತನಾಥಾಯ ನಾಥಾಯ ತೇಜಸೇ ಬ್ರಹ್ಮಣೇ ನಮಃ ॥ ೪ ॥

ಆನಂದಸಾಗರರಸಾಕುಲಶೈಲಕನ್ಯಾ ।
ವಕ್ಷೋಜಕುಂಭಯುಗಳೀಪರಿರಂಭಣೇನ ॥
ರೋಮಾಂಚ ಕಂಚುಕಪರಿಷ್ಕೃತಗಾತ್ರಯಷ್ಟಿಂ ।
ದೇವಂ ಭಜಾಮಿ ಮಧುರಾಪುರನಾಥಮೀಶಂ ॥ ೫ ॥

ಇಕ್ಷುಕೋದಂಡಪುಷ್ಪೇಷುಪಾಶಾಂಕುಶಕರೋಜ್ವಲಾಂ ।
ಉದ್ಯತ್ಸೂರ್ಯನಿಭಾಂ ದೇವೀಂ ವಂದೇ ತ್ರಿಪುರಸುಂದರೀಂ ॥ ೬ ॥

---

೩. ಹಾಲಾಸ್ಯನಗರೀ ಎಂದು ಹೆಸರುಳ್ಳ ಮಧುರಾಪಟ್ಟಣಕ್ಕೂ, ಅದರಲ್ಲಿರುವ ಹೇಮಾಬ್ಜಿನೀ ಸರೋವರಕ್ಕೂ ನಮಸ್ಕಾರ ಮಾಡುತ್ತೇನೆ. ಮೀನಾಕ್ಷೀ ಎಂದು ಹೆಸರುಳ್ಳ ಪಾರ್ವತೀದೇವಿಗೂ, ಸುಂದರನಾಯಕನೆಂದು ಹೆಸರನ್ನು ಹೊಂದಿ ಆ ನಗರದಲ್ಲಿರುವ ಈಶ್ವರನಿಗೂ ನಮಸ್ಕಾರವು.

೪. ಅಣುರೇಣು ಮೊದಲಾದ ಎಲ್ಲಾವಸ್ತುಗಳಲ್ಲಿಯೂ ಶಿವನು ಪೂರ್ಣನಾಗಿರುವನು. ಅವನು ಎಲ್ಲರಿಗೂ ಸುಖವನ್ನುಂಟುಮಾಡುತ್ತಿರುವನು. ತಾನು ಚಿದ್ರೂಪದಿಂದ ಇರುತ್ತಾ ಮನಸ್ಸಿಗೆ ಅಧಿಪತಿಯಾಗಿರುವನು. ಪರಬ್ರಹ್ಮಸ್ವರೂಪನಾದ, ಪ್ರಪಂಚವೆಲ್ಲಕ್ಕೂ ಅಧಿಪನಾದ, ತೇಜೋರೂಪದಿಂದ ಇರುವ ಶಿವನಿಗೆ ನಮಸ್ಕಾರವು.

೫. ಬಹಳವಾದ ಸಂತೋಷದಿಂದ ಇರುವ ಪಾರ್ವತೀದೇವಿಯ ಆಲಿಂಗನೆಯಿಂದ ರೋಮಾಂಚವನ್ನು ಹೊಂದಿರುವ ಶರೀರದಿಂದ ಪ್ರಕಾಶಿಸುತ್ತಿರುವ, ಮಧುರಾ ನಗರಕ್ಕೆ ಒಡೆಯನಾದ ಸುಂದರೇಶ್ವರನಿಗೆ ವಂದನೆಯನ್ನು ಮಾಡುವೆನು.

೬. ಕಬ್ಬಿನಧನಸ್ಸು, ಹೂವಿನಬಾಣ, ಪಾಶ, ಅಂಕುಶ ಇವುಗಳನ್ನು ಕೈಯ್ಯಿನಲ್ಲಿ ಧರಿಸಿ ಪ್ರಕಾಶಿಸುತ್ತಿರುವ, ಆಗತಾನೇ ಉದಯವಾಗುತ್ತಿರುವ ಸೂರ್ಯನಕಾಂತಿಯನ್ನು ಧರಿಸಿರುವ ತ್ರಿಪುರಸುಂದರೀದೇವಿಗೆ ವಂದಿಸುವೆನು.

**ನಮಃ ಸುಂದರನಾಥಾಯ ತಸ್ಮೈ ಹಾಲಾಸ್ಯವಾಸಿನೇ ।**
**ಚತುಷ್ಷಷ್ಟಿವಿಧಾ ಲೀಲಾ ಯೇನ ಪ್ರತ್ಯಕ್ಷಿತಾಃ ಕ್ಷಿತೌ ॥ ೭ ॥**

**ಶ್ರೀಮತ್ಸುಂದರನಾಥಸ್ಯ ದೇವೀಂ ಶಫರಲೋಚನಾಂ ।**
**ಕಲಯೇ ಹೃದಯೇ ನಿತ್ಯಂ ಕದಂಬವನವಾಸಿನೀಂ ॥ ೮ ॥**

**ಕಾರುಣ್ಯಮದನಿಷ್ಯಂದಂ ಕೈವಲ್ಯವನಚಾರಿಣಂ ।**
**ಕಾಲಾಂಬುದಶ್ಯಾಮಲಾಂಗಂ ಕಲಭಾನನಮಾಶ್ರಯೇ ॥ ೯ ॥**

**ಆಮ್ನಾಯರಸಿಕಂ ವಂದೇ ಆನನೈಷ್ಷಡ್ಭಿರನ್ವಿತಂ ।**
**ಹಿಮಾದ್ರಿತನಯಾಸ್ತನ್ಯಕುಕ್ಷಿಂಭರಿಮಹಂ ಶಿಶುಂ ॥ ೧೦ ॥**

---

೭. ಹಾಲಾಸ್ಯನಗರದಲ್ಲಿ ನೆಲಸಿ ಭೂಮಿಯಲ್ಲಿ ತಾನು ಆಚರಿಸಿದ ಅರುವತ್ತು ನಾಲ್ಕು ಲೀಲೆಗಳನ್ನು ಎಲ್ಲರಿಗೂ ವ್ಯಕ್ತಗೊಳಿಸಿರುವ, ಸುಂದರೇಶ್ವರನೆಂದು ಹೆಸರುಳ್ಳ ಶಿವನಿಗೆ ನಮಸ್ಕಾರವು.

೮. (ಕಾಂತಿ) ಸಂಪದ್ಯುಕ್ತನಾದ ಸುಂದರೇಶ್ವರನ ದೇವಿಯಾದ, ಕದಂಬ ವನದಲ್ಲಿ ವಾಸವನ್ನು ಮಾಡುವ, ಮೀನಲೋಚನಾದೇವಿಯನ್ನು ಯಾವಾಗಲೂ ಮನಸ್ಸಿನಲ್ಲಿ ಧ್ಯಾನಮಾಡುತ್ತೇನೆ.

೯. ದಯೆಯೆಂಬ ಮದವನ್ನು ಸುರಿಸುತ್ತಾ, ಮೋಕ್ಷವನದಲ್ಲಿ ಸಂಚಾರ ಮಾಡುತ್ತಿರುವ, ಪ್ರಳಯಕಾಲದ ಮೇಘದ ಕಾಂತಿಯನ್ನು ಹೊಂದಿರುವ, ಗಜ ಮುಖನಾದ ಗಣಪತಿಗೆ ನಮಸ್ಕಾರವು.

೧೦. ವೇದಗಳ ವಿಷಯದಲ್ಲಿ ಪಾಂಡಿತ್ಯವನ್ನು ಹೊಂದಿ, ಆರುಮುಖಗಳಿಂದ ಪ್ರಕಾಶಿಸುತ್ತಾ, ಗಿರಿರಾಜಪುತ್ರಿಯ ಸ್ತನ್ಯವನ್ನು ಪಾನಮಾಡುತ್ತಿರುವ, ಶಿಶುವಾದ ಕುಮಾರಸ್ವಾಮಿಗೆ ನಮಸ್ಕಾರವನ್ನು ಮಾಡುತ್ತೇನೆ.

|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಹಾಲಾಸ್ಯಮಾಹಾತ್ಮ್ಯ ಪ್ರಾರಂಭಃ

ಶ್ರೀಕೈಲಾಸ ಇತಿ ಖ್ಯಾತಃ ಶ್ರೀಮತಾಂ ಭೂಭೃತಾಂ ವರಃ ।
ಶ್ರೀಪತಿಪ್ರಮುಖೈರ್ಲೇಖೈಃ ಶ್ರಿಯೈ ಮುಕ್ತ್ಯೈ ಚ ಸೇವಿತಃ ॥ ೧ ॥

ಶ್ರೀದಾದೀನಾಮಪಿ ಶ್ರೀದಶ್ಶ್ರೀಕಂಠಪ್ರಮಥಾಲಯಃ ।
ಶ್ರಿಯೋ ನಿಹಿತಕ್ಷೀರಾಬ್ಧೇಶ್ಶ್ರಿಯಂ ಜಿತ್ವಾ ಸಮುನ್ನತಃ ॥ ೨ ॥

ಜನಾನಾಂ ಶ್ರವಣಾದೇವ ಜನ್ಮಮೃತ್ಯುಭಯಾಪಹಃ । ॥ ೩ ॥

---

## ಮೊದಲನೆಯ ಅಧ್ಯಾಯವು.

೧–೫. ಕೈಲಾಸಪರ್ವತವೆಂದು ಪ್ರಸಿದ್ಧವಾದ, ಉತ್ತಮವಾದ ಪರ್ವತವಿರುವುದು. ಇದನ್ನು ವಿಷ್ಣುವೇ ಮೊದಲಾದ ದೇವತೆಗಳು ಐಶ್ವರ್ಯಕ್ಕಾಗಿಯೂ, ಮೋಕ್ಷಕ್ಕಾಗಿಯೂ ಸೇವಿಸುತ್ತಿರುವರು. ಈ ಪರ್ವತವು ಐಶ್ವರ್ಯವನ್ನು ಇತರರಿಗೆ ಕೊಡುವ ವಿಷ್ಣುವೇ ಮೊದಲಾದವರಿಗೆ ಐಶ್ವರ್ಯವನ್ನು ಕೊಡುತ್ತಿರುವುದು. ಇದು ಶಿವನಿಗೂ, ಪ್ರಮಥಗಣಗಳಿಗೂ ವಾಸಸ್ಥಾನವಾಗಿ ಇರುವುದು. ಇದು ಲಕ್ಷ್ಮಿಗೆ ತವರುಮನೆಯಾದ ಕ್ಷೀರಸಮುದ್ರದ ಕಾಂತಿಯನ್ನು ಮೀರಿ ಪ್ರಕಾಶಿಸುತ್ತಿರುವುದು. ಈ ಪರ್ವತದ ಹೆಸರನ್ನು ಕೇಳಿದ ಜನರೆಲ್ಲರಿಗೂ ಪಾಪಗಳ ಮತ್ತು ಜನನ ಮರಣಗಳ ಭಯವು ನಾಶವಾಗುವುದು. ಈ ಪರ್ವತದಲ್ಲಿ ಎಲ್ಲಾ ತೀರ್ಥಗಳೂ ಇರುವುವು. ಜನರೆಲ್ಲರೂ ಈ ಪರ್ವತಕ್ಕೆ ನಮಸ್ಕಾರವನ್ನು ಮಾಡುತ್ತಿರುವರು. ಈ ಪರ್ವತ

ಸರ್ವತೀರ್ಥಸಮಾಯುಕ್ತಃ ಸರ್ವಲೋಕನಮಸ್ಕೃತಃ ।
ಸ್ಮರಣಂ ಕೀರ್ತನಂ ವಾಪಿ ಕುರ್ವತಾಂ ಸರ್ವಸಿದ್ಧಿದಃ ॥ ೪ ॥

ತಪೋಬಲೇನ ಮಹತಾ ಪಶ್ಯತಾಮಪವರ್ಗದಃ ।
ವಿಮಲೈರ್ಭೂತಸಂಘಾತೈಃ ಪರಿತಃ ಪರಿರಕ್ಷಿತಃ ॥ ೫ ॥

ವಿಬುಧೈರಪ್ಯಗಮ್ಯಸ್ತು ವಿಶ್ವಭರ್ತುರ್ವಿನಾಜ್ಞಯಾ ।
ವಿಷ್ಟಪತ್ರಯವಿಖ್ಯಾತೋ ವಿಧುಮಂಡಲಪಾಂಡರಃ ॥ ೬ ॥

ವಿದ್ಯತೇ ಭುವಿ ದಿಶ್ಯೈಶ್ಯಾಂ ವಿದ್ವಜ್ಜನಮನಸ್ಯಪಿ ।
ತಸ್ಯ ಮಧ್ಯೇ ಮಹಾಮೇರೋರ್ಮಧ್ಯಶೃಂಗಂ ಮಹತ್ತರಂ ॥ ೭ ॥

ಪ್ರಶಸ್ತಮಸ್ತಿ ಶಿಖರಂ ಮಹೋಮಂಡಲಮಂಡಿತಂ ।
ತದೂರ್ಧ್ವೇ ಪಾವನೇತ್ಯಂತಂ ದರ್ಪಣೋದರವತ್ಸಮಂ ॥ ೮ ॥

---

ವನ್ನು ಸ್ಮರಿಸುವವರಿಗೂ, ಇದರ ಕೀರ್ತಿಯನ್ನು ಕೇಳುವವರಿಗೂ, ಎಲ್ಲಾ ಕಾರ್ಯಗಳೂ ಸಿದ್ಧಿಯಾಗುವುವು. ಬಹಳವಾದ ತಪಸ್ಸಿನ ಸಾಮರ್ಥ್ಯದಿಂದ ಇರುವವರು ಇದನ್ನು ನೋಡಿದ ಮಾತ್ರದಿಂದಲೇ ಮುಕ್ತರಾಗುವರು. ಈ ಪರ್ವತವನ್ನು ಪರಿಶುದ್ಧವಾಗಿರುವ ಅನೇಕ ಭೂತಗಳು ಸುತ್ತಲೂ ರಕ್ಷಿಸುತ್ತಿರುವವು.

೬-೯. ಪ್ರಪಂಚಕ್ಕೆ ಅಧಿಪತಿಯಾದ ಶಿವನ ಅಪ್ಪಣೆಯಿಲ್ಲದೆ ದೇವತೆಗಳು ಈ ಪರ್ವತವನ್ನು ಸೇರಲು ಅಸಾಧ್ಯವಾಗಿರುವುದು. ಮೂರು ಲೋಕಗಳಲ್ಲಿಯೂ ಪ್ರಸಿದ್ಧವಾದ ಈ ಪರ್ವತವು ಚಂದ್ರಮಂಡಲದಂತೆ ಶುಭ್ರವಾದ ಕಾಂತಿಯುಳ್ಳದ್ದಾಗಿರುವುದು. ಭೂಮಿಯಲ್ಲಿ ಈಶಾನ್ಯ ದಿಕ್ಕಿನಲ್ಲಿ ಈ ಪರ್ವತವು ಇರುವುದು. ಶಿವನನ್ನು ಧ್ಯಾನಮಾಡುವವರು ಈ ಪರ್ವತವನ್ನು ತಿಳಿಯಬಲ್ಲರು. ಇದರ ಮಧ್ಯದಲ್ಲಿ ಮೇರುವಿನ ಮಧ್ಯಶಿಖರವಿರುವುದು. ಈ ದೊಡ್ಡದಾದ ಶಿಖರವು ತೇಜಸ್ಸಿನ ರಾಶಿಯಿಂದ ಪ್ರಕಾಶಿಸುತ್ತಿರುವುದು. ಬಹಳ ಪವಿತ್ರವಾದ ಆ ಶಿಖರದ ಮೇಲುಗಡೆಯಲ್ಲಿ ಕನ್ನಡಿಯ ಹಾಗೆ ಇರುವ ಒಂದೇ ಸಮನಾದ (ಭೂಮಿಯು) ಪ್ರದೇಶವು ಇರುವುದು. ಅಂತರಿಕ್ಷದಂತೆ ನಿರ್ಮಲವಾಗಿಯೂ, ವಿಸ್ತಾರವಾಗಿಯೂ ಇರುವ

ವ್ಯೋಮವದ್ವಿಮಲೀಭೂತಂ ವಿಶಾಲಂ ಭವತಿ ಸ್ಥಲಂ ।
ತಪೋಂತರಾಯೈಃ ಕಾಮಾದ್ಯೈಃ ಅಪರೈಃ ಪರಿಪಂಥಿಭಿಃ ॥ ೯ ॥

ಅಜೇಯಂ ತತ್ಸ್ಥಲಂ ಭಾತಿ ಮುನೀಂದ್ರಾಣಾಂ ಮನೋ ಯಥಾ ।
ಕಾನನೈಃ ಕಲ್ಪವೃಕ್ಷಾಣಾಂ ಫಲಪುಷ್ಪಸಮನ್ವಿತೈಃ ॥ ೧೦ ॥

ಚಿಂತಾಮಣಿಮಯೈಶ್ಶೈಲೈಃ ಕಾಮಧೇನುವ್ರಜೈರಪಿ ।
ಪಯೋಧದಿಘೃತಕ್ಷೌದ್ರಸುಧಾಮಯಸರಿದ್ವರೈಃ ॥ ೧೧ ॥

ನಾನಾರತ್ನವಿಚಿತ್ರೈಶ್ಚ ಕುಟ್ಟಿಮೈರಪಿ ಮಂಜುಳೈಃ ।
ಪ್ರಮಥಾನಾಂ ಮಂದಿರೈಶ್ಚ ಮೇರೋಃ ಶಿಖರಸನ್ನಿಭೈಃ ॥ ೧೨ ॥

ಶಾತಕುಂಭಮಯಾನೇಕಪ್ರಾಕಾರದ್ವಾರಗೋಪುರೈಃ ।
ಸೂರ್ಯಕೋಟಿಪ್ರತೀಕಾಶೈಶ್ಚಂದ್ರಕೋಟಿಸಮಪ್ರಭೈಃ ॥ ೧೩ ॥

---

ಈ ಪ್ರದೇಶವನ್ನು ತಪಸ್ಸಿಗೆ ವಿಘ್ನಮಾಡುವ ಕಾಮವೇ ಮೊದಲಾದ ಅರಿಷಡ್ವರ್ಗಗಳೂ, ಇತರರೂ ಆಕ್ರಮಿಸಲು ಅವಕಾಶವಿಲ್ಲದ್ದರಿಂದ ಈ ಪ್ರದೇಶವು ಋಷಿಶ್ರೇಷ್ಠರ ಮನಸ್ಸಿನಂತೆ ಹೊಳೆಯುತ್ತಿರುವುದು.

೧೦–೧೧. ಈ ಪ್ರದೇಶದಲ್ಲಿ ಹೂವು, ಹಣ್ಣುಗಳಿಂದ ತುಂಬಿರುವ ಕಲ್ಪವೃಕ್ಷಗಳ ಕಾಡುಗಳು ಇರುವವು. ಚಿಂತಾಮಣಿ ಎಂಬ ರತ್ನಗಳು ಬೆಟ್ಟದಹಾಗೆ ರಾಶಿರಾಶಿಯಾಗಿ ಇರುವವು. ಕಾಮಧೇನುವಿನ ವಂಶದ ಹಸುಗಳು ಗುಂಪು ಗುಂಪಾಗಿರುವುವು. ಹಾಲು, ಮೊಸರು, ತುಪ್ಪ, ಜೇನು, ಅಮೃತ ಇವುಗಳಿಂದ ತುಂಬಿರುವ ಹೊಳೆಗಳು ಹರಿಯುತ್ತಿರುವವು.

೧೨–೧೩. ಆ ಪ್ರದೇಶದಲ್ಲಿ ಪ್ರಮಥಗಣಗಳ ಉಪ್ಪರಿಗೆ ಮನೆಗಳು ಅನೇಕ ವಿಧವಾದ ರತ್ನಗಳ ಕಾಂತಿಯಿಂದ ಕೂಡಿ, ಮನೋಹರವಾಗಿ ಮೇರುಪರ್ವತದ ಶಿಖರದಂತೆ ಎತ್ತರವಾಗಿರುವುವು. ಆ ಮನೆಗಳಿಗೆ ಚಿನ್ನದ ಪ್ರಾಕಾರಗಳೂ, ಹೆಬ್ಬಾಗಿಲು ಮತ್ತು ಬಾಗಿಲುಗಳೂ ಪ್ರಕಾಶಿಸುತ್ತಿರುವುವು. ಕೋಟಿ ಸೂರ್ಯರ ಹಾಗೆ ಹೊಳೆಯುತ್ತಿರುವ, ಕೋಟಿ ಚಂದ್ರರ ಹಾಗೆ ಮನೋಹರವಾದ, ಅನೇಕ ವಿಧವಾದ ವಿಮಾನಗಳು, ಬಹಳ ಮಂದಿ ದೇವತಾಸ್ತ್ರೀಯರಿಂದ ಕೂಡಿ ಅಲ್ಲಿ ಪ್ರಕಾಶಿಸುತ್ತಿರುವವು.

**ವಿಮಾನೈರತಿಚಿತ್ರೈಶ್ಚ ದಿವ್ಯಸ್ತ್ರೀಭಿಸ್ಸುಶೋಭಿತೈಃ ।**
**ರಾಜತೇ ತತ್ರ ಶಿಖರೇ ರಾಜತೇ ರಾಜತೇ ಮಹಾನ್ ॥ ೧೪ ॥**

**ಪ್ರಾಸಾದಸ್ತೇಜಸಾಂ ರಾಶಿರ್ದುರ್ನಿರೀಕ್ಷ್ಯಃ ಪಿನಾಕಿನಃ ।**
**ರತ್ನಪ್ರದೀಪವಲಯೈರತಿತೇಜಸ್ಸಮನ್ವಿತೇ ॥ ೧೫ ॥**

**ಪ್ರಾಸಾದಸ್ಯಾಂತರೇ ತಸ್ಯ ಚತುರ್ದ್ವಾರಸುಶೋಭಿತೇ ।**
**ಶ್ರೀಕಂಠಪರಮೇಶಾಖ್ಯಂ ಲಿಂಗಮಸ್ತಿ ಚಿರಂತನಂ ॥ ೧೬ ॥**

**ಸಮಕಾಲೋದಿತಾನಂತಶುಭ್ರಾಂಶುನಿಭಯಾಭಯಾ ।**
**ಸ್ವಯಂಭೂತಂ ಚ ತಲ್ಲಿಂಗಂ ಪೀಠಿಕೋಪರಿಮಂಡಿತಂ ॥ ೧೭ ॥**

**ಪ್ರಧಾನಭೂತಂ ದೇವಾನಾಂ ಬ್ರಹ್ಮವಿಷ್ಣುಬಿಡೌಜಸಃ ।**
**ಅನ್ಯೇ ದೇವಾಶ್ಚ ದೈತ್ಯಾಶ್ಚ ಯಕ್ಷಾಃ ಕಿಂಪುರುಷಾ ಅಪಿ ॥ ೧೮ ॥**

**ವಿದ್ಯಾಧರಾಶ್ಚ ಸಿದ್ಧಾಶ್ಚ ಗಂಧರ್ವಾಃ ಕಿನ್ನರಾ ಅಪಿ ।**
**ಮುನೀಶ್ವರಾಶ್ಚ ಯೋಗೀಂದ್ರಾ ಗುಹ್ಯಕಾದ್ಯಾ ಅನೇಕಶಃ ॥ ೧೯ ॥**

---

೧೪-೧೬. ಬೆಳ್ಳಿಯಕಾಂತಿಯು ಹಾಗೆ ಬೆಳಗುತ್ತಿರುವ ಆ ಶಿಖರದ ಮೇಲುಗಡೆಯಲ್ಲಿ ಬಹಳ ತೇಜಸ್ಸಿನ ರಾಶಿಯಿಂದ ಕೂಡಿರುವ ಪರಮೇಶ್ವರನ ಪ್ರಾಸಾದವು ನೋಡಲು ಅಶಕ್ಯವಾಗಿ ಇರುವುದು. ರತ್ನಗಳ ದೀಪಗಳಿಂದ ಬೆಳಗುತ್ತಿರುವ ಬಹಳ ತೇಜಸ್ಸಿನಿಂದಕೂಡಿರುವ, ನಾಲ್ಕು ಬಾಗಿಲುಳ್ಳ ಪರಮೇಶ್ವರನ ಗೃಹದ ಮಧ್ಯದಲ್ಲಿ ಶ್ರೀಕಂಠಪರಮೇಶನೆಂದು ಹೆಸರುಳ ಬಹಳ ಪುರಾತನವಾದ ಶಿವಲಿಂಗವಿರವುದು.

೧೭-೧೯. ಒಂದೇಕಾಲದಲ್ಲಿ ಒಟ್ಟಿಗೆ ಉದಯುವನ್ನು ಹೊಂದಿದ ಅನೇಕ ಚಂದ್ರರ ಕಾಂತಿಯನ್ನು ಹೊಂದಿರುವ ಆ ಶಿವಲಿಂಗವು ಪೀಠದಮೇಲೆ ಸ್ವಯಂಭು ಲಿಂಗವಾಗಿ ಪ್ರಕಾಶಿಸುತ್ತಿರುವುದು. ಈ ಶಿವಲಿಂಗವು ದೇವತೆಗಳಿಗೂ, ವಿಷ್ಣು, ಬ್ರಹ್ಮ, ಮತ್ತು ಇಂದ್ರ ಇವರುಗಳಿಗೂ ಮುಖ್ಯವಾಗಿ ಇರುವುದು. ಈ ಶಿವಲಿಂಗವನ್ನು ಇತರ ದೇವತೆಗಳೂ, ರಾಕ್ಷಸರೂ, ಯಕ್ಷರೂ, ಕಿಂಪುರುಷರೂ, ವಿದ್ಯಾಧರರೂ, ಸಿದ್ಧರೂ, ಗಂಧರ್ವರೂ, ಕಿನ್ನರೂ, ಶ್ರೇಷ್ಠರಾದ ಮುನಿಗಳೂ, ಯೋಗೀಂದ್ರರೂ, ಗುಹ್ಯಕರೂ ಮೊದಲಾದವರು ಎಲ್ಲರೂ ಆತ್ಮಶುದ್ಧಿಗಾಗಿಯೂ, ಭೋಗವನ್ನು ಹೊಂದುವುದಕ್ಕಾಗಿಯೂ, ಯಾವಾಗಲೂ ಪೂಜೆಮಾಡುತ್ತಿರುವರು.

ಅರ್ಚಯಂತ್ಯಾತ್ಮಲಾಭಾಯ ಭೋಗಾಯ ಚ ನಿರಂತರಂ ।
ಸ್ಥಾವರೇಣ ಸ್ವಲಿಂಗೇನ ಮೂರ್ತ್ಯಾ ಜಂಗಮಯಾ ಸ್ವಯಾ ॥ ೨೦ ॥

ಭಕ್ತಾನೀಶೋನುಗೃಹ್ಣಾತಿ ಜನಾನ್ ಕೈಲಾಸಪರ್ವತೇ ।
ಪೂಜಯಂತೀಹ ಯೇ ಲಿಂಗಂ ಶಾಂಭವಂ ಭಕ್ತಿತಃ ಸಕೃತ್ ॥ ೨೧ ॥

ತೇsಧಿರುಹ್ಯ ವಿಮಾನಾನಿ ದಿವ್ಯಸ್ತ್ರೀಶೋಭಿತಾನಿ ಚ ।
ಅನುಭೂಯ ಸದಾ ಭೋಗಾನಮರಾಣಾಂ ಚ ದುರ್ಲಭಾನ್ ॥ ೨೨ ॥

ಕೈಲಾಸೇ ಶಂಕರಾವಾಸೇ ಚರಂತಿ ವರತೇಜಸಃ ।
ಶ್ರೀಕಂಠಪರಮೇಶಾಖ್ಯಜ್ಯೋತಿರ್ಲಿಂಗಸ್ಯ ಸನ್ನಿಧೌ ॥ ೨೩ ॥

ಶಿವವನ್ನಿರ್ಮಲತರಮಸ್ತಿ ತೀರ್ಥಂ ಮಹತ್ತರಂ ।
ಶಿವಾನಿ ದಾತುಂ ಶಕ್ತತ್ವಾತ್ಪರತ್ವಾತ್ ಪರತತ್ತ್ವತಃ ॥ ೨೪ ॥

---

೨೦–೨೨. ಶಿವನು ತನ್ನ ರೂಪಾಂತರವಾದ ಸ್ಥಿರಮೂರ್ತಿರೂಪದಿಂದ ಇರುವ, ಈ ಶಿವಲಿಂಗದ ಆಕಾರದಿಂದಲೂ, ತಾನೇಜಂಗಮರೂಪದಿಂದಲೂ ಇರುತ್ತಾ, ಕೈಲಾಸಪರ್ವತದಲ್ಲಿ ತನ್ನ ಭಕ್ತರನ್ನು ಅನುಗ್ರಹಿಸುತ್ತಿರುವನು. ಇಲ್ಲಿ ಭಕ್ತಿಯಿಂದ ಈ ಶಿವಲಿಂಗವನ್ನು ಒಂದಾವರ್ತಿಯಾದರೂ ಪೂಜಿಸಿದವರು, ಉತ್ತಮ ಸ್ತ್ರೀಯರಿಂದ ಕೂಡಿದ ವಿಮಾನಗಳನ್ನು ಹತ್ತಿಕೊಂಡು, ದೇವತೆಗಳಿಗೂ ಹೊಂದಲಶಕ್ಯವಾದ ಭೋಗಗಳನ್ನು ಯಾವಾಗಲೂ ಅನುಭವಿಸುವರು.

೨೩–೨೪. ಇವರುಗಳು ಶಿವನ ವಾಸಸ್ಥಾನವಾದ ಕೈಲಾಸಪರ್ವತದಲ್ಲಿ ಬಹಳ ತೇಜಶ್ಶಾಲಿಗಳಾಗಿ ಸಂಚರಿಸುತ್ತಾ ಇರುವರು. ಶ್ರೀಕಂಠಪರಮೇಶ್ವರನೆಂಬ ಈ ಜ್ಯೋತಿರ್ಲಿಂಗವಿರುವ ಪ್ರದೇಶದ ಹತ್ತಿರದಲ್ಲಿಯೇ ಶಿವನ ಹಾಗೆ ಪವಿತ್ರಕರವಾದ ಪೂಜ್ಯವಾದ ತೀರ್ಥವಿರುವುದು. ಇದನ್ನು ಶಿವತೀರ್ಥವೆಂದು ಕರೆಯುವರು. ಮಂಗಳವನ್ನು ಉಂಟುಮಾಡಲು ಶಕ್ತಿಯುಳ್ಳದ್ದಾಗಿರುವುದರಿಂದಲೂ, ಶಿವನ ವಾಸಸ್ಥಾನವಾದ ಪರತತ್ತ್ವಕ್ಕಿಂತ ಉತ್ತಮವಾಗಿರುವುದರಿಂದಲೂ ಈ ತೀರ್ಥಕ್ಕೆ ಈ ಹೆಸರು ಬಂದಿರುವುದು.

ಶಿವತೀರ್ಥಮಿತಿ ಪ್ರಾಹು ಸ್ತತ್ಸಮಸ್ತವಿಚಕ್ಷಣಾಃ ।
ತತ್ತೀರೇ ತಪಸಾ ಕ್ಲಿಪ್ತೇ ಮಂಟಪೇ ವಿಶ್ವಕರ್ಮಣಾ ॥ ೨೫ ॥

ಸಹಸ್ರಸ್ತಂಭಸಂಯುಕ್ತೇ ಚಂದ್ರಕಾಂತಶಿಲಾಮಯೇ ।
ಕುಟ್ಟಿಮೋ ಭಾಸತೇ ತತ್ರ ನವರತ್ನವಿಚಿತ್ರಿತಃ ॥ ೨೬ ॥

ಧನುಃಖಂಡ ಇವೇಂದ್ರಸ್ಯ ಚಂದ್ರಿಕಾಧವಳಾಂಬರೇ ।
ತನ್ಮಧ್ಯೇಽತಿಪವಿತ್ರೇ ಚ ವಿಸ್ತೃತವ್ಯಾಘ್ರಚರ್ಮಣಿ ॥ ೨೭ ॥

ಉಪವಿಷ್ಟಂ ಸೂತಮುನಿಂ ಶಿವಧ್ಯಾನಪರಾಯಣಂ ।
ಭಸ್ಮರುದ್ರಾಕ್ಷಮಾಲಾಭಿರಲಂಕೃತಕಳೇಬರಂ ॥ ೨೮ ॥

ಸುಪ್ರಸನ್ನಮುಖಾಂಭೋಜಂ ಸರ್ವಶಾಸ್ತ್ರವಿಶಾರದಂ ।
ವ್ಯಾಸಶಿಷ್ಯಂ ಮಹಾಪ್ರಾಜ್ಞಂ ಪೌರಾಣಿಕಶಿರೋಮಣಿಂ ॥ ೨೯ ॥

ಸರ್ವವೇದಾಂತವಿಜ್ಞಾನಸುನಿಶ್ಚಿತಮಹಾರ್ಥಕಂ ।
ಶಂಭುಭಕ್ತಃ ಶತಾನಂದ ಊರ್ಧ್ವರೇತಾಃ ಪ್ರಭಾಕರಃ ॥ ೩೦ ॥

---

೨೫–೨೭. ಆ ತೀರ್ಥದ ತೀರದಲ್ಲಿ ವಿಶ್ವಕರ್ಮನು ತಪಸ್ಸನ್ನು ಮಾಡಿ ಒಂದು ಮಂಟಪವನ್ನು ನಿರ್ಮಿಸಿರುವನು. ಆ ಮಂಟಪದಲ್ಲಿ ಒಂದು ಸಾವಿರ ಕಂಬಗಳಿರುವವು. ಚಂದ್ರಕಾಂತಶಿಲೆಯಿಂದ ಮಾಡಿದ ಆ ಮಂಟಪದ ಹೊಸಲಿನ ಭಾಗವು ನವರತ್ನಗಳಿಂದ ಅಲಂಕೃತವಾಗಿ ಹೊಳೆಯುತ್ತಿರುವುದು. ಆ ಮಂಟಪದ ಮಧ್ಯಭಾಗವು ಇಂದ್ರನ ಧನುಸ್ಸಿನ ಭಾಗದಹಾಗೆಯೂ, ಬೆಳದಿಂಗಳಿನಿಂದ ತುಂಬಿರುವ ಅಂತರಿಕ್ಷದ ಹಾಗೆಯೂ, ಇರುವುದು. ಅದರ ಮಧ್ಯದಲ್ಲಿ ಬಹಳ ಪವಿತ್ರವಾದ, ದೊಡ್ಡದಾದ ಹುಲಿಯ ಚರ್ಮವನ್ನು ಆಸನವಾಗಿ ಮಾಡಿಕೊಂಡು ಸೂತಮುನಿಯು ಶಿವನನ್ನು ಧ್ಯಾನಮಾಡುತ್ತಾ ಇದ್ದನು.

೨೮–೨೯. ವ್ಯಾಸಮಹರ್ಷಿಗೆ ಶಿಷ್ಯನೂ, ಬಹಳ ಜ್ಞಾನಿಯೂ ಆಗಿ, ಪುರಾಣಗಳೆಲ್ಲವನ್ನೂ ತಿಳಿದಿರುವ ಈ ಸೂತಮುನಿಯು ಭಸ್ಮರುದ್ರಾಕ್ಷಿಗಳಿಂದ ಅಲಂಕೃತವಾದ ಶರೀರದಿಂದಲೂ, ಸಂತೋಷವುಳ್ಳ ಮುಖಕಮಲದಿಂದಲೂ ಪ್ರಕಾಶಿಸುತ್ತಿದ್ದನು.

೩೦–೩೫. ಎಲ್ಲಾ ವೇದಾಂತಗಳಲ್ಲಿಯೂ ತತ್ವಗಳೆಲ್ಲವನ್ನೂ ತಿಳಿದುಕೊಂಡಿರುವ ಜ್ಞಾನನಿಷ್ಠನಾದ ಈ ಸೂತಮುನಿಯ ಸಮೀಪಕ್ಕೆ ಶಂಭುಭಕ್ತ,

ಉಗ್ರವೀರ್ಯೋ ಮಹಾವೀರ್ಯೋ ಮಹಾಕಾಯೋ ಮಹೋದರಃ ।
ಸ್ಥೂಲಕಂಠಃ ಪ್ರಚಂಡಶ್ಚ ಕೈವಲ್ಯಪ್ರಿಯ ಉತ್ತಮಃ ॥ ೩೧ ॥

ವೇದನಿಷ್ಠೋ ಯಜ್ಞನಿಷ್ಠಸ್ತಪೋನಿಷ್ಠೋ ಮಹಾವ್ರತಃ ।
ಯೋಗನಿಷ್ಠೋ ಜ್ಞಾನನಿಷ್ಠೋ ದೇವಭಕ್ತಶ್ಶಿವಪ್ರಿಯಃ ॥ ೩೨ ॥

ಜಲಾಶೀ ಜೀರ್ಣಪರ್ಣಾಶೀ ಜಿತಕ್ರೋಧೋ ಮಹಾಮುನಿಃ ।
ಇತ್ಯಾದಿಮುನಯಸ್ಸರ್ವೇ ಶಿವಭಕ್ತ್ಯಪ್ರಚೋದಿತಾಃ ॥ ೩೩ ॥

ಸಮಾಗಮ್ಯ ಸಮಾಧಿಸ್ಥಂ ದಂಡವತ್ಪ್ರಣಿಪತ್ಯ ಚ ।
ತತ್ಪಾದಪಂಕಜಂ ಭಕ್ತ್ಯಾ ಪಂಕಜೈಃ ಪರಿಪೂಜ್ಯ ಚ ॥ ೩೪ ॥

ಸ್ತೋತ್ರೈಃ ಸ್ತುತ್ವಾ ಮಹಾತ್ಮಾನಂ ಪಪ್ರಚ್ಛುಃ ಪರಯಾ ಮುದಾ ॥ ೩೫ ॥

॥ ಋಷಯ ಊಚುಃ ॥

ವಹ್ನಿಕುಂಡಸಮುದ್ಭೂತ ಭಗವನ್ಭಕ್ತವತ್ಸಲ ।
ಸಮಸ್ತಶಿವಧರ್ಮಜ್ಞ ಸರ್ವವೇದಾಂತಪಾರಗ ॥ ೩೬ ॥

---

ಶತಾನಂದ, ಊರ್ಧ್ವರೇತಸ್ಸು, ಪ್ರಭಾಕರ, ಮಹಾವೀರ್ಯ, ಮಹಾಕಾಯ, ಮಹೋದರ, ಸ್ಥೂಲಕಂಠ, ಪ್ರಚಂಡ, ಕೈವಲ್ಯಪ್ರಿಯ, ವೇದನಿಷ್ಠ, ಯಜ್ಞನಿಷ್ಠ, ಮಹಾವ್ರತ, ಯೋಗನಿಷ್ಠ, ಜ್ಞಾನನಿಷ್ಠ, ದೇವಭಕ್ತ, ಶಿವಪ್ರಿಯ, ಜಲಾಶೀ, ಜೀರ್ಣಪರ್ಣಾಶೀ, ಜಿತಕ್ರೋಧ, ಮಹಾಮುನಿ, ಎಂಬ ಹೆಸರುಳ್ಳ ಮುನಿಗಳು, ಎಲ್ಲರೂ ಶಿವಭಕ್ತಿಯಿಂದ ಪ್ರೇರಿತರಾಗಿ ಬಂದು, ಸಮಾಧಿಯಲ್ಲಿರುವ ಅವನಿಗೆ ದಂಡಕಾರವಾಗಿ ನಮಸ್ಕಾರವನ್ನು ಮಾಡಿದನಂತರ, ಅವನ ಪಾದಕಮಲವನ್ನು ತಾವರೆಹೂವುಗಳಿಂದ ಪೂಜಿಸಿ, ಸ್ತೋತ್ರಗಳಿಂದ ಅವನನ್ನು ಸ್ತುತಿಮಾಡಿ, ಬಹಳ ಸಂತೋಷದಿಂದ ಪ್ರಶ್ನೆಮಾಡಿದರು.

೩೬–೩೯. ಋಷಿಗಳು ಹೇಳಿದರು:–ಎಲೈ ಪೂಜ್ಯನಾದ ಸೂತಪುರಾಣಿಕನೇ! ನೀನು ಅಗ್ನಿಕುಂಡದಿಂದ ಉದ್ಭವಿಸಿರುತ್ತೀಯೆ. ಎಲ್ಲಾ ವಿಧವಾದ ಶಿವಧರ್ಮಗಳನ್ನು ತಿಳಿದಿರುತ್ತೀಯೆ. ವೇದಾಂತಶಾಸ್ತ್ರವೆಲ್ಲವನ್ನೂ ತಿಳಿದುಕೊಂಡಿರುತ್ತೀಯೆ. ನಿನ್ನ ಭಕ್ತರಾಗಿರುವ ನಮ್ಮ ವಿಷಯದಲ್ಲಿ ಬಹಳ ವಿಶ್ವಾಸದಿಂದ ಭಕ್ತಿ ಮುಕ್ತಿಗಳನ್ನು ಉಂಟುಮಾಡುವ ಮೇರು, ಮಂದರ, ಕೈಲಾಸ, ಶ್ರೀಪರ್ವತ ಇವೇ ಮೊದಲಾದ

ಶಿವಕ್ಷೇತ್ರಾಣಿ ಸರ್ವಾಣಿ ಭುಕ್ತಿಮುಕ್ತಿಪ್ರದಾನಿ ಚ ।
ಮೇರುಮಂದರಕೈಲಾಸಶ್ರೀಪರ್ವತಮುಖಾನಿ ಚ ॥ ೩೭ ॥

ಸಂಕ್ಷೇಪತೋ ವಿಸ್ತರೇಣ ಭವತಾ ಕಥಿತಾನಿ ಚ ।
ಅಲ್ಪಬುದ್ಧಿಭಿರಸ್ಮಾಭಿಸ್ತಾನಿ ನಾವಧೃತಾನಿ ಚ ॥ ೩೮ ॥

ತಸ್ಮಾದ್ವಿಶಿಷ್ಟಂ ಸರ್ವೇಷಾಂ ಸ್ಥಾನಾನಾಂ ಯಚ್ಚಿರಂತನಂ ।
ಶಂಭುನಾಧಿಷ್ಠಿತಂ ನಿತ್ಯಂ ತದೇಕಂ ವಕ್ತುಮರ್ಹಸಿ ॥ ೩೯ ॥

ಇತಿ ಪೃಷ್ಟೋ ಮುನಿವರೈಸ್ಸೂತಃ ಕಾರುಣ್ಯವಿಗ್ರಹಃ ।
ಸರ್ವಜ್ಞಂ ಸಾಂಬಮೀಶಾನಂ ದೇವದೇವಂ ಜಗದ್ಗುರುಂ ॥ ೪೦ ॥

ಶ್ರೀಮಂತಂ ದಕ್ಷಿಣಾಮೂರ್ತಿಂ ತ್ರಿನೇತ್ರಂ ಚಂದ್ರಶೇಖರಂ ।
ವ್ಯಾಘ್ರಚರ್ಮಪರೀಧಾನಂ ಶುದ್ಧಸ್ಫಟಿಕನಿರ್ಮಲಂ ॥ ೪೧ ॥

ಮುದ್ರಾಂ ವಿದ್ಯಾಂ ಚ ವಹ್ನಿಂ ಚ ಭುಜಂಗಂ ಚ ಭುಜೈರ್ಧೃತಂ ।
ಧ್ಯಾತ್ವಾ ಕ್ಷೇತ್ರೋತ್ತಮಂ ಶಂಭೋರ್ವಕ್ತುಮಾರಭತೇ ಮುದಾ ॥ ೪೨ ॥

---

ಶಿವಕ್ಷೇತ್ರಗಳ ವಿಷಯವನ್ನು ಸಂಕ್ಷೇಪವಾಗಿಯೂ, ವಿಸ್ತಾರವಾಗಿಯೂ ನೀನು ಹೇಳಿರುತ್ತೀಯೆ. ನಮ್ಮ ಬುದ್ಧಿಮಾಂದ್ಯದಿಂದ ನಾವು ಅವುಗಳ ಮಹಿಮೆಯನ್ನು ಚೆನ್ನಾಗಿ ನೆನಪಿನಲ್ಲಿಡಲಿಲ್ಲ. ಈಗ ನೀನು ಅವೆಲ್ಲಕ್ಕಿಂತಲೂ ಹೆಚ್ಚು ಮಹಿಮೆಯುಳ್ಳ, ಪುರಾತನವಾದ, ಶಿವನು ಯಾವಾಗಲೂ ಪ್ರತ್ಯಕ್ಷವಾಗಿರುವ ಒಂದು ಶಿವಕ್ಷೇತ್ರದ ಮಹಿಮೆಯನ್ನು ವಿಸ್ತಾರವಾಗಿ ಹೇಳು.

೪೦–೪೨. ಆಗ ಸೂತಪುರಾಣಿಕನು ಬಹಳ ದಯೆಯುಳ್ಳವನಾಗಿ ಋಷಿಗಳ ಇಷ್ಟದಂತೆ ಹೇಳಲು ಉಪಕ್ರಮಿಸಿದನು. ಮೊದಲು ಅವನು ಸರ್ವಜ್ಞನಾದ, ಪಾರ್ವತೀಪತಿಯಾದ, ಮೂರು ಕಣ್ಣುಗಳಿಂದಲೂ, ಚಂದ್ರಕಲೆಯಿಂದಲೂ ಪ್ರಕಾಶಮಾನನಾದ, ವ್ಯಾಘ್ರಾಜಿನವನ್ನು ಹೊದ್ದಿರುವ, ಶುದ್ಧವಾದ ಸ್ಫಟಿಕದಂತೆ ನಿರ್ಮಲನಾಗಿರುವ, ಜ್ಞಾನಮುದ್ರೆ, ವಿದ್ಯಾ, ಅಗ್ನಿ, ಸರ್ಪ, ಇವುಗಳನ್ನು ತನ್ನ ಭುಜಗಳಲ್ಲಿ ಧರಿಸಿರುವ, ಸಂಪದ್ಯುಕ್ತನಾದ, ದಕ್ಷಿಣಾಮೂರ್ತಿಯನ್ನು ನಮಸ್ಕರಿಸಿ, ಶಿವನಿಗೆ ಸಂಬಂಧಪಟ್ಟ ಋಷಿಗಳ ಪ್ರಶ್ನೆಗೆ ಸರಿಯಾದ ಕ್ಷೇತ್ರವನ್ನು ನಿಶ್ಚಯಿಸಿಕೊಂಡನು. ಅನಂತರ ಋಷಿಗಳಸಂಗಡ ಮಾತನಾಡಿದನು.

॥ ಶ್ರೀಸೂತ ಉವಾಚ ॥

ಶೃಣುಧ್ವಮೃಷಯಸ್ಸರ್ವೇ ಶಿವಭಕ್ತಿಪರಾಯಣಾಃ ।
ಸಶಿಷ್ಟತರಮೇಕಂ ಯತ್ಸ್ಥಾನಂ ಶಂಭೋಃ ಪರಾತ್ಮನಃ ॥ ೪೩ ॥

ಸರ್ವಸೌಭಾಗ್ಯದಂ ಸದ್ಯಶ್ಚತುರ್ವರ್ಗಫಲಪ್ರದಂ ।
ಬ್ರಹ್ಮವಿಷ್ಣುಮಹೇಂದ್ರಾದ್ಯೈಸ್ಸೇವಿತಂ ಸರ್ವಸಿದ್ಧಯೇ ॥ ೪೪ ॥

ಪುರಾಽನಂದವನೇ ಕುಂಭಸಂಭವೇನ ಮಹರ್ಷಿಣಾ ।
ಪ್ರೋಕ್ತಂ ತದ್ವಿಸ್ತರೇಣೈವ ವಸಿಷ್ಠಾದಿಮಹಾತ್ಮನಾಂ ॥ ೪೫ ॥

ವಕ್ಷ್ಯೇ ಪುರಾತನಂ ಪುಣ್ಯಂ ಶ್ರೀಮದ್ಹಾಲಾಸ್ಯಸಂಜ್ಞಿತಂ ।
ಶ್ರವಣಾತ್ಸರ್ವಪಾಪಘ್ನಂ ವೇದಾಂತೇಷು ಪ್ರಕಾಶಿತಂ ॥ ೪೬ ॥

ವೇದಾಂತೇಷ್ವತಿಗೂಢಂ ಯತ್ಪುರಾಣೇಷು ಪ್ರವಿಸ್ತೃತಂ ।
ತಸ್ಮಾತ್ಸರ್ವಪುರಾಣೇಷು ಹಾಲಾಸ್ಯಂ ಪ್ರತಿಪಾದಿತಂ ॥ ೪೭ ॥

೪೩-೪೮. ಸೂತಪುರಾಣಿಕನು ಹೇಳಿದನು-ಶಿವಭಕ್ತಿಯಲ್ಲಿ ನಿಷ್ಠರಾದ ಋಷಿಗಳೆಲ್ಲರೂ ಕೇಳಿರಿ! ಪರಮಾತ್ಮನಾದ ಶಿವನ ಉತ್ತಮವಾದ ಕ್ಷೇತ್ರದ ಮಹಿಮೆಯನ್ನು ಹೇಳುವೆನು. ಈ ಕ್ಷೇತ್ರದ ಮಹಿಮೆಯು ಎಲ್ಲಾ ವಿಧವಾದ ಶ್ರೇಯಸ್ಸನ್ನು ಉಂಟುಮಾಡುವುದು. ಇದನ್ನು ಕೇಳಿದಕೂಡಲೆ ಧರ್ಮವೇ ಮೊದಲಾದ ನಾಲ್ಕು ವಿಧವಾದ ಪುರುಷಾರ್ಥಗಳನ್ನೂ ಕೊಡುವುದು. ಈ ಕ್ಷೇತ್ರವನ್ನು ಬ್ರಹ್ಮ, ವಿಷ್ಣು, ಮಹೇಂದ್ರರೇ ಮೊದಲಾದವರು ತಮ್ಮತಮ್ಮ ಇಷ್ಟಸಿದ್ಧಿಗಾಗಿ ಸೇವಿಸಿರುವರು. ಪೂರ್ವದಲ್ಲಿ ನಂದನವನದಲ್ಲಿ ಅಗಸ್ತ್ಯಮಹರ್ಷಿಯು ವಸಿಷ್ಠನೇ ಮೊದಲಾದ ಋಷಿಗಳಿಗೆ ಈ ಕ್ಷೇತ್ರದ ಮಹಿಮೆಯನ್ನು ವಿಸ್ತಾರವಾಗಿ ಹೇಳಿರುವನು. ಪುರಾತನವಾಗಿಯೂ, ಪುಣ್ಯಕರವಾಗಿಯೂ ಇರುವ ಹಾಲಾಸ್ಯವೆಂದು ಹೆಸರುಳ್ಳ ಕ್ಷೇತ್ರವು ತನ್ನ ಮಹಿಮೆಯನ್ನು ಕೇಳಿದವರ ಪಾಪಗಳೆಲ್ಲವನ್ನೂ ನಾಶಮಾಡುವುದೆಂದು ವೇದಾಂತಶಾಸ್ತ್ರದಲ್ಲಿಯೂ ಪ್ರಸಿದ್ಧವಾಗಿರುವುದು. ವೇದಾಂತಶಾಸ್ತ್ರದಲ್ಲಿ ಗೂಢವಾಗಿರುವ ವಿಷಯವು ಪುರಾಣದಲ್ಲಿ ಹೆಚ್ಚಾಗಿ ಪ್ರಕಟವಾಗಿರುವ ಕಾರಣ ಈ ಕ್ಷೇತ್ರದ ವಿಷಯವು ಎಲ್ಲಾ ಪುರಾಣಗಳಲ್ಲಿಯೂ ಹೇಳಿರುವುದು. ಆದಾಗ್ಯೂ ಇದರ ಮಹಿಮೆಯು ಸ್ಕಾಂದಪುರಾಣದಲ್ಲಿ ಬಹಳ ಮಟ್ಟಿಗೆ ಚೆನ್ನಾಗಿ ವರ್ಣಿತವಾಗಿರುವುದು.

**ತಥಾಪಿ ತಸ್ಯ ಮಾಹಾತ್ಮ್ಯಂ ಬಹು ಸ್ಕಾಂದೇಪಿ ವಿದ್ಯತೇ ।**
**ಸ್ಕಾಂದಮದ್ಯ ಪ್ರವಕ್ಷ್ಯಾಮಿ ಪುರಾಣಂ ಶ್ರುತಿಸಾಕಜಂ　　॥ ೪೮ ॥**

**ಷಡ್ವಿಧಂ ಸಂಹಿತಾಭೇದೈಃ ಪಂಚಾಶತ್ಖಂಡಮಂಡಿತಂ ।**
**ಆದ್ಯಾ ಸನತ್ಕುಮಾರೋಕ್ತಾ ದ್ವಿತೀಯಾ ಸೂತಸಂಹಿತಾ　　॥ ೪೯ ॥**

**ತೃತೀಯಾ ಶಾಂಕರೀ ಪ್ರೋಕ್ತಾ ಚತುರ್ಥೀ ವೈಷ್ಣವೀ ತಥಾ ।**
**ಸಂಹಿತಾ ಪಂಚಮೀ ಬ್ರಾಹ್ಮೀ ಷಷ್ಠೀ ಸಾ ಸೂರಸಂಹಿತಾ　　॥ ೫೦ ॥**

**ತೃತೀಯಾ ಶಾಂಕರೀ ಯಾತು ಸಂಹಿತಾ ಸಾ ಪ್ರಕೀರ್ತಿತಾ ।**
**ಸಾ ಚತುರ್ವೇದಸಾರಾಢ್ಯಾ ಶ್ರುತಾ ಶಕ್ತ್ಯಾ ಚ ಶಂಕರಾತ್　　॥ ೫೧ ॥**

**ಶಕ್ತ್ಯಂಕವಾಸೀ ಸ್ಕಂದೋಪಿ ಸಂಹಿತಾಂ ತಾಂ ಸಮಾಗೃಹೀತ್ ।**
**ತತೋ ವದತ್ಸ್ವಶಿಷ್ಯಾಯ ತಾಂ ಚಾಗಸ್ತ್ಯಾಯ ಪೃಚ್ಛತೇ　　॥ ೫೨ ॥**

---

ವೇದಗಳ ಸಾರರೂಪದಿಂದ ಇರುವ ಸ್ಕಾಂದಪುರಾಣದಲ್ಲಿ ಹೇಳಿರುವ ಕ್ರಮವನ್ನು ಅನುಸರಿಸಿ ಈ ಹಾಲಾಸ್ಯಮಹಿಮೆಯನ್ನು ನಾನು ಈಗ ನಿಮಗಾಗಿ ಹೇಳುವೆನು.

೪೯–೫೦. ಸ್ಕಾಂದಪುರಾಣವು ಆರು ಸಂಹಿತೆಗಳಾಗಿರುವುದು. ಆರು ಸಂಹಿತೆಯಿಂದ ಒಟ್ಟು ಐವತ್ತು ಖಂಡಗಳು ಇರುವವು. ಮೊದಲನೆಯದು ಸನತ್ಕುಮಾರಸಂಹಿತಾ; ಎರಡನೆಯದು ಸೂತಸಂಹಿತೆಯು; ಮೂರನೆಯದು ಶಾಂಕರ ಸಂಹಿತೆಯು; ನಾಲ್ಕನೆಯದು ವಿಷ್ಣುಸಂಹಿತೆಯು; ಐದನೆಯದು ಬ್ರಹ್ಮಸಂಹಿತೆಯು ; ಆರನೆಯದು ಸೂರಸಂಹಿತೆಯು.

೫೧–೫೨. ಇವುಗಳಲ್ಲಿ ಮೂರನೆಯದಾದ ಶಂಕರಸಂಹಿತೆಯು ಶಿವನು ಶಕ್ತಿಗೆ ಹೇಳಿದ್ದಾಗಿ ಇರುವುದು. ನಾಲ್ಕು ವೇದಗಳ ಸಾರಾಂಶದಿಂದ ಕೂಡಿರುವುದು. ಶಿವನು ಇದನ್ನು ಉಪದೇಶಮಾಡಿದ ಕಾರಣ ಈ ಸಂಹಿತೆಗೆ ಹೀಗೆ ಹೆಸರು ಬಂದಿರುವುದು. ಶಕ್ತಿಯ ಉತ್ಸಂಗದಲ್ಲಿ ಉಪವಿಷ್ಟನಾದ ಕುಮಾರಸ್ವಾಮಿಯು ಈ ಸಂಹಿತೆಯನ್ನು ಕೇಳಿ ತಿಳಿದುಕೊಂಡು, ತನ್ನನ್ನು ಪ್ರಶ್ನೆಮಾಡಿದ ತನ್ನ ಶಿಷ್ಯನಾದ ಅಗಸ್ತ್ಯ ಮುನಿಗೆ ಉಪದೇಶಮಾಡಿದನು.

**ಅಥಾನಂದವನೇ ತೇನ ಮುನಿನಾ ದೀರ್ಘದರ್ಶಿನಾ ।**
**ಪ್ರೋಕ್ತಾ ಸಾ ಪೃಚ್ಛತಾಂ ಪ್ರೀತ್ಯಾ ವಸಿಷ್ಠಾದಿಮಹಾತ್ಮನಾಂ ॥ ೫೩ ॥**

**ಅಗಸ್ತ್ಯಸಂಹಿತೇತ್ಯಾಸೀತ್ತನ್ನಾಮ್ನಾ ಸಾಥ ಸಂಹಿತಾ ।**
**ಸರ್ವಾನ್ಕಾಮಾನಾದಧಾತಿ ಕಾಮಧೇನುರಿವ ಶ್ರುತಾ ॥ ೫೪ ॥**

**ತಾಮದ್ಯ ವಕ್ಷ್ಯೇ ಯುಷ್ಮಾಕಂ ಲೋಕಾನಾಂ ಚ ಹಿತಾಯ ಚ ।**
**ಪುರಾ ಪುರಾತನೇ ಪುಣ್ಯೇ ಪುರಾರಾತೇಃ ಪುರೇ ಶುಭೇ ।**
**ವಾರಾಣಸೀತಿ ಪ್ರಥಿತೇ ಸರ್ವೇಷಾಂ ಮುಕ್ತಿಸಿದ್ಧಿದೇ ॥ ೫೫ ॥**

**ಭಾಗೀರಥೀಪಯಃಪೂರಪಾವನೀಕೃತಭೂತಲೇ ।**
**ವಿಶಾಲಾಕ್ಷೀವಿಶ್ವನಾಥಸಾನ್ನಿಧ್ಯಾತ್ ಸರ್ವಸಿದ್ಧಿದೇ ॥ ೫೬ ॥**

**ಶಿವಲಿಂಗಪ್ರತಿಷ್ಠಾಂ ಚ ಕರ್ತುಮುತ್ತಮಮುದ್ಧ್ವರಂ ।**
**ಸತ್ಯಲೋಕಾತ್ಸಮಾಗತ್ಯ ಬ್ರಹ್ಮಾಲೋಕಪಿತಾಮಹಃ ॥ ೫೭ ॥**

**ಪಿತಾಮಹೇಶ್ವರಂ ಲಿಂಗಂ ಪ್ರತಿಷ್ಠಾಪ್ಯ ಸ್ವನಾಮತಃ ।**
**ಅಕರೋದಶ್ವಮೇಧಾನಾಂ ದಶಕಂ ತಸ್ಯ ಸನ್ನಿಧೌ ॥ ೫೮ ॥**

೫೩–೫೪ ಜ್ಞಾನದೃಷ್ಟಿಯುಳ್ಳವನಾದ ಅಗಸ್ತ್ಯಮುನಿಯು ಆನಂದಕಾನನದಲ್ಲಿರುವಾಗ ಪ್ರೀತಿಯಿಂದ ತನ್ನ ಸಮೀಪಕ್ಕೆ ಬಂದು ಪ್ರಶ್ನೆಮಾಡಿದ ವಸಿಷ್ಠನೇ ಮೊದಲಾದ ಮುನಿಗಳಿಗೆ ಉಪದೇಶಮಾಡಿದ ಕಾರಣ ಆ ಸಂಹಿತೆಯು ಅಗಸ್ತ್ಯಸಂಹಿತೆಯೆಂಬ ಹೆಸರಿನಿಂದ ಪ್ರಸಿದ್ಧಿಯನ್ನು ಹೊಂದಿರುವುದು. ಈ ಸಂಹಿತೆಯನ್ನು ಕೇಳಿದವರ ಇಷ್ಟಾರ್ಥಗಳೆಲ್ಲವೂ ನೆರವೇರುವುವು. ಕೇಳಿದವರಿಗೆ ಎಲ್ಲಾವಿಧವಾದ ಇಷ್ಟಸಿದ್ಧಿಯನ್ನು ಕೊಡುವ ಕಾಮಧೇನುವಿನ ಹಾಗೆ ಇರುವ ಈ ಸಂಹಿತೆಯನ್ನು ನಿಮಗಾಗಿಯೂ, ಲೋಕದ ಹಿತಕ್ಕಾಗಿಯೂ ಈಗ ನಾನು ಹೇಳುವೆನು.

೫೫–೫೮. ಪೂರ್ವಕಾಲದಲ್ಲಿ ಪುರಾತನವಾದ, ಪುಣ್ಯಕರವಾದ ಮತ್ತು ಮಂಗಳಕರವಾದ, ಶಿವನ ವಾಸಸ್ಥಳವಾದ ಕಾಶೀನಗರವು ಎಲ್ಲರಿಗೂ ಮುಕ್ತಿಯನ್ನು ಉಂಟುಮಾಡುವ ಪ್ರದೇಶವಾದಕಾರಣದಿಂದಲೂ, ವಿಶಾಲಾಕ್ಷೀವಿಶ್ವನಾಥರ ಸಾನ್ನಿಧ್ಯವಿರುವುದರಿಂದಲೂ, ಬ್ರಹ್ಮನು ಸತ್ಯಲೋಕದಿಂದ ಅಲ್ಲಿಗೆ ಬಂದನು. ಅಲ್ಲಿ ಶಿವಲಿಂಗವನ್ನು ಪ್ರತಿಷ್ಠೆಮಾಡಿ ಉತ್ತಮವಾದ ಯಜ್ಞವನ್ನುಮಾಡಲು ಉದ್ದೇಶವುಳ್ಳವನಾಗಿ, ತನ್ನ ಇಷ್ಟದಂತೆ, ತನ್ನ ಹೆಸರಿನಿಂದ ಶಿವಲಿಂಗವನ್ನು ಪ್ರತಿಷ್ಠೆಮಾಡಿ ಅದರ ಹತ್ತಿರದಲ್ಲಿ ಹತ್ತು ಅಶ್ವಮೇಧಯಾಗಗಳನ್ನು ಮಾಡಿದನು.

ತದಾನೀಂ ನೈಮಿಷಾರಣ್ಯಪ್ರಮುಖಕ್ಷೇತ್ರವಾಸಿನಃ ।
ಆಯಯುರ್ಮುನಯಸ್ಸರ್ವೇ ಯಜ್ಞವಿದ್ಯಾವಿಶಾರದಾಃ ॥ ೫೮ ॥

ವಸಿಷ್ಠವಾಮದೇವಾದ್ಯಾ ಮಹಾತ್ಮಾನಶ್ಚಿರಂತನಾಃ ।
ತಸ್ಯರ್ತ್ವಿಜಸ್ಸಮಭವನ್ ಪ್ರಾರ್ಥಿತಾಃ ಪದ್ಮಯೋನಿನಾ ॥ ೫೯ ॥

ನಿವೃತ್ತೇವಭೃಥಸ್ನಾನೇ ಪಿತಾಮಹಮಹಾಕ್ರತೋಃ ।
ಸತ್ಕೃತಾಶ್ಚ ಯಥಾನ್ಯಾಯಂ ದಿವ್ಯೈರತ್ನೈಶ್ಚ ಕಾಂಚನೈಃ ॥ ೬೦ ॥

ವಾಸೋಭಿರ್ಭೂಷಣೈರನ್ಯೈರ್ಮಹಾದಾನೈಶ್ಚ ವೇಧಸಾ ।
ತೇ ಸರ್ವೇ ಪರಮಾಂ ತುಷ್ಟಿಂ ಸಂಪ್ರಾಪುರ್ಮುನಿಪುಂಗವಾಃ ॥ ೬೧ ॥

ವಿಧೇರನುಜ್ಞಯಾ ಪಶ್ಚಾತ್ತೀರ್ಥೇಷು ಸ್ನಾತುಮುದ್ಯತಾಃ ।
ದೇಶಕಾಲವಿಶೇಷಜ್ಞಾ ವಸಿಷ್ಠಾದ್ಯಾ ಮುನೀಶ್ವರಾಃ ॥ ೬೨ ॥

---

೫೮–೬೧. ಆಗ ಆ ಯಜ್ಞವು ನೆರವೇರುವುದಕ್ಕಾಗಿ ಬ್ರಹ್ಮನು ಯಜ್ಞದ ಕೆಲಸಗಳನ್ನು ಮಾಡಲು ಬುದ್ಧಿವಂತರಾದ ನೈಮಿಷಾರಣ್ಯವಾಸಿಗಳಾದ, ವಸಿಷ್ಠ ವಾಮದೇವನೇ ಮೊದಲಾದ ಪುರಾತನರಾದ ಋಷಿಗಳನ್ನು ಋತ್ವಿಜರಾಗಿರಲು ಪ್ರಾರ್ಥಿಸಿದನು. ಬ್ರಹ್ಮನ ಇಷ್ಟದಂತೆ ಅವರೆಲ್ಲರೂ ಬಂದರು. ಯಜ್ಞದಲ್ಲಿ ಅವರೆಲ್ಲರೂ ರುತ್ವಿಜರಾಗಿದ್ದರು. ಯಜ್ಞವು ಮುಗಿಯಿತು. ಆ ಮಹಾಕ್ರತುವಿನಲ್ಲಿ ಅವಭೃತ ಸ್ನಾನವಾದನಂತರ ಬ್ರಹ್ಮನು ಅವರೆಲ್ಲರನ್ನೂ ಸತ್ಕರಿಸಿದನು. ಬ್ರಹ್ಮನು ಆ ಯಜ್ಞದಲ್ಲಿ ಅವರೆಲ್ಲರಿಗೂ ಶಾಸ್ತ್ರೋಕ್ತನುಸಾರವಾಗಿ ಉತ್ತಮವಾದ ರತ್ನಗಳೂ, ಚಿನ್ನ, ಆಭರಣ, ವಸ್ತ್ರ, ಇವೇಮೊದಲಾದವುಗಳನ್ನೂ, ಇತರ ಮಹಾದಾನಗಳನ್ನೂ ಕೊಟ್ಟನು. ಆ ಮುನಿಗಳೆಲ್ಲರೂ ಇದರಿಂದ ಬಹಳ ಸಂತೋಷವನ್ನು ಹೊಂದಿದರು.

೬೨–೬೫. ಅನಂತರದಲ್ಲಿ ಅವರೆಲ್ಲರೂ ಬ್ರಹ್ಮನ ಅಪ್ಪಣೆಯಂತೆ ಆಯಾಯ ತೀರ್ಥಗಳಲ್ಲಿ ಸ್ನಾನಮಾಡಲುದ್ಯುಕ್ತರಾದರು. ವಸಿಷ್ಠ, ವಾಮದೇವ, ಗೌತಮ, ವರುಣ, ಭೃಗು, ಬೋಧಾಯನ, ಕಾಶ್ಯಪ, ಯಾಜ್ಞವಲ್ಕ್ಯ, ಪರಾಶರ, ಭರದ್ವಾಜ, ಅಂಗಿರೋರುಷಿ, ಅತ್ರಿ, ಕುತ್ಸ, ಶಕ್ತಿ,ಶುಕ, ವೇದವ್ಯಾಸ, ಕಹೋಳ, ವಾಲ್ಮೀಕಿ, ಅಗಸ್ತ್ಯ, ಸನತ್ಕುಮಾರ, ಸನಕ, ಸನಾತನ, ಸನಂದನ, ಪುಲಸ್ತ್ಯ,

ವಸಿಷ್ಠೋ ವಾಮದೇವಶ್ಚ ಗೌತಮೋ ವರುಣೋ ಭೃಗುಃ ।
ಬೋಧಾಯನಃ ಕಾಶ್ಯಪಶ್ಚ ಯಾಜ್ಞವಲ್ಕ್ಯಃ ಪರಾಶರಃ ॥ ೬೩ ॥

ಭರದ್ವಾಜೋಽಂಗಿರಾ ಅತ್ರಿಃ ಕುತ್ಸಃ ಶಕ್ತಿ ಶ್ಶುಕೋ ಮಹಾನ್ ।
ವೇದವ್ಯಾಸಃ ಕಹೋಳಶ್ಚ ವಾಲ್ಮೀಕಿಃ ಕುಂಭಸಂಭವಃ ॥ ೬೪ ॥

ಸನತ್ಕುಮಾರಸ್ಸನಕಸ್ಸನಾತನಸನಂದನೌ ।
ಪುಲಸ್ತ್ಯಃ ಪುಲಹೋ ಗರ್ಗೋ ವಿಶ್ವಾಮಿತ್ರಶ್ಚ ನಾರದಃ ॥ ೬೫ ॥

ಇತ್ಯಾದ್ಯಾಮುನಯಃ ಸರ್ವೇ ಜ್ಞಾನಿನೋ ಬ್ರಹ್ಮವಿತ್ತಮಾಃ ।
ಸ್ನಾತ್ವಾ ತೀರ್ಥೇಷು ಸರ್ವೇಷು ಜ್ಞಾನವಾಪ್ಯಾದಿಕೇಷು ಚ ॥ ೬೫ ॥

ನತ್ವಾ ವಿನಾಯಕಾನ್ಸರ್ವಾ ಧುಂಡ್ಯಾದೀನ್ಭಕ್ತಿತಃ ಕ್ರಮಾತ್ ।
ವಿಶಾಲಾಕ್ಷ್ಯಾದಿದೇವೀಶ್ಚ ಭಕ್ತ್ಯಾ ಸರ್ವಾಃ ಪ್ರಣಮ್ಯ ಚ ॥ ೬೬ ॥

ಸಂಪೂಜ್ಯ ಕಾಲರಾಜಂ ಚ ಭೈರವಂ ಕಾಲಭಕ್ಷಣಂ ।
ದಂಡನಾಯಕಮುಖ್ಯಾಂಶ್ಚ ಗಣಾನ್ಸ್ತುತ್ವಾ ವಿಶೇಷತಃ ॥ ೬೭ ॥

ಅದಿಕೇಶವಮುಖ್ಯಾಂಶ್ಚ ಕೇಶವಾನ್ಪರಿತೋಷ್ಯ ಚ ।
ಮಿತ್ರಾ ದಿತ್ಯಾದಿಸುರ್ಯಾಂಶ್ಚ ಪ್ರಣಿಪತ್ಯ ಪುನಃ ಪುನಃ ॥ ೬೮ ॥

---

ಪುಲಹ, ಗರ್ಗ, ವಿಶ್ವಾಮಿತ್ರ, ನಾರದ, ಇವರೇ ಮೊದಲಾದ ಋಷಿಗಳೆಲ್ಲರೂ ಜ್ಞಾನಿಗಳು. ಬ್ರಹ್ಮಜ್ಞಾನಿಗಳಲ್ಲಿ ಉತ್ತಮರಾದವರು. ಇವರೆಲ್ಲರೂ ಜ್ಞಾನವಾಪಿಯೇ ಮೊದಲಾದ ಎಲ್ಲಾ ತೀರ್ಥಗಳಲ್ಲಿಯೂ ಸ್ನಾನವನ್ನು ಮಾಡಿದರು.

೬೬–೬೮ ಅನಂತರ ವಿನಾಯಕನಿಗೂ, ಧುಂಡಿಯೇ ಮೊದಲಾದವರಿಗೂ, ಭಕ್ತಿಯಿಂದ ನಮಸ್ಕರಿಸಿ, ವಿಶಾಲಾಕ್ಷಿದೇವಿ, ಕಾಲರಾಜ, ಭೈರವ, ಕಾಲಭಕ್ಷಣ, ದಂಡನಾಯಕ ಇವರೆಲ್ಲರನ್ನೂ ಪೂಜಿಸಿ, ಆದಿಕೇಶವನೇ ಮುಖ್ಯರಾದ ಕೇಶವರನ್ನೂ, ದ್ವಾದಶಾದಿತ್ಯರನ್ನೂ ಭಕ್ತಿಯಿಂದ ಅನೇಕಸಾರಿ ನಮಸ್ಕಾರ ಮಾಡಿದರು.

**ಕೃತ್ವಾ ಪಿಂಡಪ್ರದಾನಾನಿ ಸರ್ವತೀರ್ಥೇಷ್ವತಂದ್ರಿತಾಃ ।**
**ಓಂಕಾರೇಶ್ವರಮುಖ್ಯಾನಿ ದೃಷ್ಟ್ವಾ ಲಿಂಗವರಾಣಿ ಚ　　॥ ೬೯ ॥**

**ಮಹಾಪೂಜೋಪಹಾರೈಶ್ಚ ತಾನಿ ಸಂಪೂಜ್ಯ ಭಕ್ತಿತಃ ।**
**ಸಹಸ್ರಭೋಜನಾದ್ಯೈಶ್ಚ ಯತೀನ್ವಿಪ್ರಾನ್ಪ್ರತರ್ಪ್ಯ ಚ　　॥ ೭೦ ॥**

**ಪುನರ್ಮುನೀಶ್ವರಾಸ್ಸರ್ವೇ ದೃಷ್ಟ್ವಾ ತು ಮಣಿಕರ್ಣಿಕಾಂ ।**
**ತ್ಯಜಂತಿ ತಾಪತ್ರಿತಯಂ ಜನ್ಮಜನ್ಮಾಂತರಾರ್ಜಿತಂ　　॥ ೭೧ ॥**

**ಸ್ನಾತ್ವಾಥ ವಿಧಿನಾ ಸರ್ವೇ ಕೃತಮಾಧ್ಯಾಹ್ನಿಕಕ್ರಿಯಾಃ ।**
**ಸಂತರ್ಪ್ಯ ದೇವಮುಖ್ಯಾಂಶ್ಚ ಕುಶಾಕ್ಷತತಿಲೋದಕೈಃ　　॥ ೭೨ ॥**

**ರತ್ನೈರ್ಹಿರಣ್ಯೈರ್ವಾಸೋಭಿರ್ದಿವ್ಯೈರಾಭರಣೈರಪಿ ।**
**ಗಂಧಾದ್ಯೈರುಪಚಾರೈಶ್ಚ ವಿಶ್ವನಾಥಂ ಪ್ರಪೂಜ್ಯ ಚ　　॥ ೭೩ ॥**

**ಸ್ತೋತ್ರೈಃ ಸ್ತುತ್ವಾ ಮಹಾದೇವಂ ಪ್ರಣಿಪತ್ಯ ಪುನಃ ಪುನಃ ।**
**ಮುಕ್ತಿಮಂಟಪಮಾಸಾದ್ಯ ಬಭೂವುರ್ವಿಗತಶ್ರಮಾಃ　　॥ ೭೪ ॥**

---

೬೯-೭೦ ಪಿತೃದೇವತೆಗಳನ್ನು ಸಂತೋಷಪಡಿಸಿದರು. ಓಂಕಾರೇಶ್ವರನೇ ಮೊದಲಾದ ಉತ್ತಮವಾದ ಶಿವಲಿಂಗಗಳನ್ನು ದರ್ಶನಮಾಡಿ ಭಕ್ತಿಯಿಂದ ಪೂಜಿಸಿದರು. ಸಾವಿರಗಟ್ಟಲೆಯಾಗಿ ಬ್ರಾಹ್ಮಣರಿಗೆ ಅನ್ನದಾನಮಾಡಿದರು.

೭೧-೭೪. ಆ ಮುನೀಶ್ವರರು ಇದೆಲ್ಲವನ್ನೂ ಮಾಡಿದನಂತರ ಮಣಿಕರ್ಣಿಕಾ ದರ್ಶನವನ್ನು ಮಾಡಿದರು. ಮಣಿಕರ್ಣಿಕಾದರ್ಶನದಿಂದ ಅನೇಕ ಜನ್ಮಗಳಲ್ಲಿ ಸಂಚಿತವಾದ ತಾಪತ್ರಯಗಳೆಲ್ಲವೂ ನಾಶವಾಗುವುವು. ಎಲ್ಲರೂ ಆ ತೀರ್ಥದಲ್ಲಿ ಸ್ನಾನಮಾಡಿದರು. ಮಾಧ್ಯಾಹ್ನಿಕ ಮುಂತಾದ ಕರ್ಮಗಳನ್ನು ನೆರವೇರಿಸಿ, ದೇವ, ಪಿತೃಗಳನ್ನು ಸಂತೋಷಪಡಿಸಿ, ವಿಶ್ವನಾಥನ ಸಮೀಪಕ್ಕೆ ಬಂದರು. ಅಲ್ಲಿ ರತ್ನ, ಚಿನ್ನ, ವಸ್ತ್ರ, ಆಭರಣ ಇವುಗಳಿಂದಲೂ, ಗಂಧವೇ ಮೊದಲಾದ ಉಪಚಾರ ದ್ರವ್ಯಗಳಿಂದಲೂ ಮಹಾದೇವನಾದ ವಿಶ್ವನಾಥನನ್ನು ಪೂಜಿಸಿದರು. ಅನೇಕ ವಿಧವಾದ ಸ್ತೋತ್ರಗಳಿಂದ ಮಹಾದೇವನನ್ನು ಸ್ತುತಿಮಾಡಿದರು. ನಮಸ್ಕಾರಗಳನ್ನೂ ಮಾಡಿದರು. ಅನಂತರ ಮುಕ್ತಿಮಂಟಪಕ್ಕೆ ಬಂದು ತಮ್ಮ ಆಯಾಸವನ್ನು ಪರಿಹರಿಸಿಕೊಂಡರು.

ತತಸ್ತು ಮೇರುಪಾರ್ಶ್ವಸ್ಥಾಃ ಕೇಚಿದ್ವೃದ್ಧಾಸ್ತಪೋಧನಾಃ ।
ಶಿವಭಕ್ತಾ ಮಹೋತ್ಸಾಹಾಶ್ಶಾಂತಾಸ್ಸತ್ಯಪರಾಯಣಾಃ ॥ ೭೫ ॥

ವಿಷ್ಣುವೃದ್ಧಾದಯಸ್ಸರ್ವೇ ಸಂಭೂಯ ಮುನಿಪುಂಗವಾಃ ।
ಆಯಾತಾಸ್ಸ್ವರ್ಧುನೀಸ್ನಾನಂ ಕರ್ತುಂ ವಿಶ್ವೇಶದರ್ಶನಂ ॥ ೭೬ ॥

ತಾನ್ದೃಷ್ಟ್ವಾ ವಿಸ್ಮಿತಾನ್ಸರ್ವೇ ವಸಿಷ್ಠಾದ್ಯಾ ಮುನೀಶ್ವರಾಃ ।
ಆಹೂಯ ಚ ಮುನಿಶ್ರೇಷ್ಠಾ ಅಂಗೀಕೃತ್ಯಾಸನಾದಿನಾ ॥ ೭೭ ॥

ಪ್ರಲಿಪ್ಯ ಗಂಧಪಂಕೈಶ್ಚ ಶೈತ್ಯಪಾನೀಯಪಾನತಃ ।
ಗತಶ್ರಮಾನ್ಸಮುನ್ವೀಕ್ಷ್ಯ ಪಪ್ರಚ್ಛುಃ ಶ್ರದ್ಧಯಾ ಸಹ ॥ ೭೮ ॥

ಕುತಃ ಕಿಮರ್ಥಂ ಯುಷ್ಮಾಭಿಃ ಪ್ರಾಪ್ತಮಾನಂದಕಾನನಂ ।
ಇತಿ ಪೃಷ್ಟಾಸ್ತು ತೇ ಸರ್ವೇ ಪ್ರತ್ಯೂಚುರ್ವಿನಯಾನ್ವಿತಾಃ ॥ ೭೯ ॥

॥ ಮುನಯ ಊಚುಃ ॥

ಮುನೀಶ್ವರಾ ವಯಂ ಸರ್ವೇ ಮೇರೋರಾಸನ್ನದೇಶತಃ ।
ಶ್ರೀಮದ್ಬ್ರಹ್ಮಪುರಂ ಪ್ರಾಪ್ತಾ ಬ್ರಹ್ಮಣಾ ತು ಪುರಾ ಕೃತಂ ॥ ೮೦ ॥

---

೭೫–೭೬. ಆಗ ಮೇರುಪರ್ವತದ ಪಾರ್ಶ್ವದಿಂದ ಕೆಲವರು ಮುದುಕರಾದ ತಪಸ್ವಿಗಳೂ, ಉಪಶಾಂತರಾದ ವಿಷ್ಣುವೃದ್ಧನೇ ಮೊದಲಾದವರೂ, ಅನೇಕ ಶಿವ ಭಕ್ತರೂ ಗಂಗಾನದಿಯಲ್ಲಿ ಸ್ನಾನವನ್ನು ಮಾಡಿ ವಿಶ್ವೇಶ್ವರನ ದರ್ಶನಕ್ಕಾಗಿ ಬಂದರು.

೭೭–೭೯. ಈ ಮುನೀಶ್ವರರೆಲ್ಲರೂ ಅವರನ್ನು ಕಂಡು, ಆಶ್ಚರ್ಯವುಳ್ಳವ ರಾಗಿ, ಅವರನ್ನು ಕರೆದು, ಆಸನಾದಿಗಳನ್ನು ಕೊಟ್ಟು, ಗಂಧಪುಷ್ಪಾದಿಗಳಿಂದ ಶೈತ್ಯೋಪಚಾರವನ್ನು ಮಾಡಿದರು. ಅವರ ಆಯಾಸವೆಲ್ಲವೂ ಪರಿಹಾರವಾದ ನಂತರ, " ನೀವುಗಳು ಈ ಆನಂದಕಾನನಕ್ಕೆ ಯಾತಕ್ಕಾಗಿ ಬಂದಿರುವಿರಿ, ?" ಎಂದು ಅವರು ಪ್ರಶ್ನೆ ಮಾಡಿದರು. ಮೇರುಪರ್ವತದಿಂದ ಬಂದ ಅವರು ವಿನಯದಿಂದ ಇವರಿಗೆ ಉತ್ತರವನ್ನು ಹೇಳಿದರು.

೮೦–೮೫. ಋಷಿಗಳು ಹೇಳಿದರು—ನಾವೆಲ್ಲರೂ ಮೇರುಪರ್ವತದ ಸಮೀ ಪದ ಪ್ರದೇಶದಲ್ಲಿ ವಾಸಮಾಡುವ ಮುನೀಶ್ವರರು. ಬ್ರಹ್ಮನು ನಿರ್ಮಿಸಿದ್ದ ಬ್ರಹ್ಮ ಪುರಕ್ಕೆ ಬಂದಿದ್ದೆವು. ಪದವಾಕ್ಯಪ್ರಮಾಣಗಳನ್ನು ತಿಳಿದ ವೃದ್ಧರು ಆನಂದ

**ಪದವಾಕ್ಯಪ್ರಮಾಣಜ್ಞೈಃ ಪುರಾಣಜ್ಞೈಃ ಪುರಾತನೈಃ ।**
**ಆನಂದವನಮಾಹಾತ್ಮ್ಯಂ ಶ್ರುತ್ವಾ ವಾಚಾಮಗೋಚರಂ ॥ ೮೧ ॥**

**ಪುಣ್ಯಕ್ಷೇತ್ರೇಷು ಸರ್ವೇಷು ವರಮಾನಂದಕಾನನಂ ।**
**ಪುಣ್ಯತೀರ್ಥೇಷು ಸರ್ವೇಷು ವಿಶಿಷ್ಟಾ ಮಣಿಕರ್ಣಿಕಾ ॥ ೮೨ ॥**

**ಸರ್ವೇಷು ಶಿವಲಿಂಗೇಷು ವಿಶ್ವನಾಥೋ ಮಹಾನಿತಿ ।**
**ಸರ್ವೇಷು ಪುಣ್ಯಕಾಲೇಷು ಶ್ರೇಷ್ಠಸ್ಸೂರ್ಯೇಂದುಸಂಗಮಃ ॥ ೮೩ ॥**

**ಸಂಧ್ಯಾಮಠೇಷು ಸರ್ವೇಷು ಸರ್ವದೇವಾಲಯೇಷು ಚ ।**
**ಅಸ್ಮದ್ದೇಶೇ ಪುರಾಣಜ್ಞಾ ವದಂತ್ಯೇವಂ ಬಹುಶ್ರುತಾಃ ॥ ೮೪ ॥**

**ಆಷಾಢಮಾಸ್ಯಮಾವಾಸ್ಯಾ ಸೋಮವಾರೇಣ ಸಂಯುತಾ ।**
**ಆಗಮಿಷ್ಯತಿ ತತ್ಕಾಲೇ ಶ್ರೀಮತೀ ಮಣಿಕರ್ಣಿಕಾ ॥ ೮೫ ॥**

---

ಕಾನನದ ಮಹಿಮೆ ಯಾವಾಗ ಗೋಚರವೆಂದು ಕೇಳಿದರು. ಪುಣ್ಯಕ್ಷೇತ್ರಗಳಲ್ಲಿ ಎಲ್ಲಕ್ಕಿಂತಲೂ ಆನಂದವನವು ಶ್ರೇಷ್ಠವಾದದ್ದು. ಎಲ್ಲಾ ತೀರ್ಥಗಳಿಗಿಂತಲೂ ಮಣಿಕರ್ಣಿಕಾ ತೀರ್ಥವು ಉತ್ತಮವು. ಶಿವಲಿಂಗಗಳಲ್ಲಿ ಎಲ್ಲಕ್ಕಿಂತಲೂ ವಿಶ್ವನಾಥನು ಶ್ರೇಷ್ಠನು. ಪುಣ್ಯಕಾಲಗಳಲ್ಲಿ ಎಲ್ಲಕ್ಕಿಂತಲೂ ಅಮಾವಾಸ್ಯೆಯು ಶ್ರೇಷ್ಠವು, ಎಂದು ನಮ್ಮ ದೇಶದಲ್ಲಿ ತಿಳಿದವರು, ಎಲ್ಲಾ ಮಠಗಳಲ್ಲಿಯೂ, ಎಲ್ಲಾ ದೇವಾಲಯಗಳಲ್ಲಿಯೂ ಹೇಳುತ್ತಿರುವರು.

೮೫–೮೮. ಆಷಾಢಮಾಸದ ಅಮಾವಾಸ್ಯೆಯು ಸೋಮವಾರದಿಂದ ಕೂಡಿ ಬರುವುದು. ಆ ಕಾಲದಲ್ಲಿ ಮಣಿಕರ್ಣಿಕೆಯು ವಿಶ್ವನಾಥನ ಸನ್ನಿಧಿಯಲ್ಲಿ ಕೂರ್ಮ ವಾಹನಳಾಗಿ ಉತ್ತರ ದಿಙ್ಮುಖವಾಗಿ ಪ್ರವಹಿಸುವಳು. ಆ ತೀರ್ಥದಲ್ಲಿ ಸ್ನಾನ ಮಾಡಿದವರ ಪಾಪಗಳೆಲ್ಲವೂ ನಾಶವಾಗಿ, ಮುಕ್ತಿಯು ಉಂಟಾಗುವುದು. ಪೂಜ್ಯನಾದ ವಿಶ್ವನಾಥನು ವಿಶಾಲಾಕ್ಷೀದೇವಿ, ಬ್ರಹ್ಮ, ವಿಷ್ಣು, ಮಹೇಂದ್ರ ಮೊದಲಾದ

ಉದಗ್ವಾಹಾ ವಿಶ್ವನಾಥಸನ್ನಿಧೌ ಕೂರ್ಮಪೃಷ್ಠಗಾ ।
ಸ್ನಾನಮಾತ್ರೇಣ ಪಾಪಘ್ನೀ ಕೈವಲ್ಯಂ ಚ ಪ್ರಯಚ್ಛತಿ ॥ ೮೬ ॥

ಭಗವಾನ್ವಿಶ್ವನಾಥೋಽಪಿ ವಿಶಾಲಾಕ್ಷ್ಯಾ ಸಮನ್ವಿತಃ ।
ಬ್ರಹ್ಮವಿಷ್ಣುಮಹೇಂದ್ರಾದ್ಯೈಃ ಕುಮಾರಾಭ್ಯಾಂ ಗಣೇಶ್ವರೈಃ ॥ ೮೭ ॥

ದ್ವಿತೀಯಮಿವ ಕೈಲಾಸಮಾರುಹ್ಯ ವೃಷವಾಹನಂ ।
ಪ್ರತ್ಯಕ್ಷೀಭೂಯ ದಯಯಾ ಭುಕ್ತಿಮುಕ್ತೀ ಪ್ರಯಚ್ಛತಿ ॥ ೮೮ ॥

ಇತಿ ಚ ಶ್ರುತಮಸ್ಮಾಭಿಶ್ಶಿವತೀರ್ಥಾದ್ಯತೀಶ್ವರಾತ್ ।
ಶನಿತ್ರಯೋದಶೀ ಚಾದ್ಯ ಪರಶ್ವಃ ಸೋಮವಾಸರೇ ॥ ೮೯ ॥

ದರ್ಶೇ ಪ್ರಾಪ್ತೇ ಮಹಾಪುಣ್ಯೇ ಕಿಂಚಿದಭ್ಯುದಿತೇ ರವೌ ।
ಯೂಯಂ ಚಾಪಿ ಸಹಾಸ್ಮಾಭಿಃ ಸ್ನಾತುಮರ್ಹಥ ತತ್ರ ತು ॥ ೯೦ ॥

ಇತಿ ತೇಷಾಂ ವಚಶ್ಶ್ರುತ್ವಾ ವಸಿಷ್ಠಾದಿಮುನೀಶ್ವರಾಃ ।
ಮಹತ್ಯಾ ಶ್ರದ್ಧಯಾ ಯುಕ್ತಾಃ ಪ್ರೋಚುಶ್ಚೈವಂ ಪರಸ್ಪರಂ ॥ ೯೧ ॥

ವ್ಯಕ್ತೀಕರ್ತುಂ ದೇಶಕಾಲತೀರ್ಥಲಿಂಗವಿಶೇಷಕಂ ।
ಪವಿತ್ರೀಕರ್ತುಮಸ್ಮಾಂಶ್ಚ ಮಹಾತ್ಮಾನಸ್ಸಮಾಗತಾಃ ॥ ೯೨ ॥

---

ದೇವತೆಗಳು, ಕುಮಾರಸ್ವಾಮಿ, ಗಣೇಶ್ವರರು ಇವರೊಡನೆ ವೃಷಭವಾಹನಾರೂಢರಾಗಿ, ಪ್ರತ್ಯಕ್ಷವಾಗಿ ದಯೆಯಿಂದ ಎಲ್ಲರಿಗೂ ಆ ದಿವಸ ದರ್ಶನವನ್ನು ಕೊಡುವನು.

೮೯–೯೦. ಈ ರೀತಿಯಲ್ಲಿ ನಾವು ಶಿವತೀರ್ಥರೆಂಬ ಯತೀಶ್ವರರಿಂದ ಕೇಳಿರುವೆವು. ಇವತ್ತು ಶನಿ ತ್ರಯೋದಶಿ. ನಾಡಿದ್ದು ಬರುವ ಸೋಮವಾರದ ದಿನ ಬಹಳ ಪುಣ್ಯಕರವಾದ ದರ್ಶವು ಪ್ರಾಪ್ತವಾಗುವುದು. ಆ ಪುಣ್ಯಕಾಲದಲ್ಲಿ ಸೂರ್ಯನು ಕೊಂಚಮಟ್ಟಿಗೆ ಉದಯವನ್ನು ಹೊಂದಿದಾಗ ನೀವುಗಳೆಲ್ಲರೂ ನಮ್ಮ ಸಂಗಡ ಆ ಮಣಿಕರ್ಣಿಕಾ ತೀರ್ಥದಲ್ಲಿ ಸ್ನಾನವನ್ನು ಮಾಡಿರಿ.

೯೧–೯೨. ಮೇರುಪರ್ವತದಿಂದ ಬಂದಿರುವ ಮುನೀಶ್ವರರು ಹೇಳಿದ, ಈ ಮಾತುಗಳನ್ನು ಕೇಳಿದ, ವಸಿಷ್ಠನೇ ಮುಂತಾದ ಋಷಿಗಳೆಲ್ಲರೂ "ಇವರೆಲ್ಲರೂ ನಮಗೆ ದೇಶಕಾಲಗಳನ್ನೂ, ಲಿಂಗದ ಮಹಿಮೆಯನ್ನೂ ತಿಳಿಸಿ, ನಮ್ಮನ್ನು ಪವಿತ್ರರನ್ನಾಗಿ ಮಾಡಲು ಬಂದಿರುವರು. ಈ ಮಹಾತ್ಮರ ಸಹವಾಸವು ಈಗ ನಮಗೆ ದೊರೆಯಿತು," ಎಂದು ಆದರದಿಂದ ಅವರವರಲ್ಲಿ ಮಾತನಾಡಿಕೊಂಡರು.

ವಸಿಷ್ಠಸ್ತು ತತಃ ಪ್ರಾಹ ವಿಲೋಕ್ಯ ಮುನಿಸತ್ತಮಾನ್ ।
ಏತೈರ್ಮುನೀಶ್ವರೈಃ ಪ್ರೋಕ್ತಂ ವಚಸ್ತಥ್ಯಂ ನ ಸಂಶಯಃ ॥ ೯೩ ॥

ಸರ್ವೇಷು ವ್ರತಬೃಂದೇಷು ಶಾಸ್ತ್ರೋಕ್ತಂ ವ್ರತಮುತ್ತಮಂ ।
ಶಾಸ್ತ್ರೋಕ್ತೇಷು ಚ ಸರ್ವೇಷು ಶಿವವ್ರತಮನುತ್ತಮಂ ॥ ೯೪ ॥

ಶಿವವ್ರತೇಷು ಸರ್ವೇಷು ಸೋಮವಾರವ್ರತಂ ಮಹತ್ ।
ಸೋಮವಾರಾದಪಿ ವರಾ ಶಿವರಾತ್ರಿರ್ಮುನೀಶ್ವರಾಃ ॥ ೯೫ ॥

ತ್ರಿಕೋಟಿಶಿವರಾತ್ರೇಸ್ತು ತುಲ್ಯಾಮಾ ಸೋಮವಾರಗಾ ।
ತತ್ರಾಪ್ಯಾಷಾಢಮಾಸಸ್ಥೋ ದರ್ಶಃ ಪುಣ್ಯೋ ವಿಶೇಷತಃ ॥ ೯೬ ॥

ತಸ್ಮಾದವಶ್ಯಂ ಸಾನ್ನಿಧ್ಯಂ ಶಂಭೋರಮಿತತೇಜಸಃ ।
ಭವಿಷ್ಯತಿ ನಸಂದೇಹೋ ಕೃತಾರ್ಥಾಶ್ಚ ವಯಂ ಧ್ರುವಂ ॥ ೯೭ ॥

ಭವಿಷ್ಯಾಮಃ ಪ್ರಸಾದೇನ ಶಿವಸ್ಯ ಪರಮಾತ್ಮನಃ ।
ಮಧ್ಯೇ ಯೋಗೀಶ್ವರಾಣಾಂತು ಶಿವತೀರ್ಥೋ ಮಹತ್ತರಃ ॥ ೯೮ ॥

---

೯೩–೯೬. ಅನಂತರದಲ್ಲಿ ವಸಿಷ್ಠಋಷಿಯು ಇತರ ಋಷಿಗಳ ಸಂಗಡ " ಈಗ ಬಂದಿರುವ ಮುನೀಶ್ವರರು ಹೇಳಿದ ವಚನವು ಸತ್ಯವಾದದ್ದು. ಇದರಲ್ಲಿ ಸಂಶಯವಿಲ್ಲವು. ಎಲ್ಲಾ ವ್ರತಗಳಲ್ಲಿಯೂ, ಶಾಸ್ತ್ರದಲ್ಲಿ ಹೇಳಿದ ವ್ರತವು ಉತ್ತಮವಾದದ್ದು. ಶಾಸ್ತ್ರಗಳಲ್ಲಿ ಹೇಳಿರುವ ವ್ರತಗಳಲ್ಲಿಯೂ, ಶಿವನನ್ನು ಪೂಜಿಸುವ ವ್ರತವು ಶ್ರೇಷ್ಠವಾದದ್ದು. ಅದರಲ್ಲಿ ಸೋಮವಾರ ವ್ರತವು ಉತ್ತಮವು, ಶಿವರಾತ್ರಿ ವ್ರತವು ಸೋಮವಾರಕ್ಕಿಂತಲೂ ಉತ್ತಮವಾದದ್ದು. ಸೋಮವಾರದಿಂದ ಕೂಡಿದ ಅಮಾವಾಸ್ಯೆಯು ಮೂರು ಕೋಟಿ ಶಿವರಾತ್ರಿಗಿಂತಲೂ ಹೆಚ್ಚಾಗಿರುವುದು. ಅದರಲ್ಲಿಯೂ ಆಷಾಢ ಮಾಸದ ಅಮಾವಾಸ್ಯೆಯು ಬಹಳ ಪುಣ್ಯಕರವಾದದ್ದು.

೯೭–೯೮. ಆ ದಿವಸದಲ್ಲಿ ಬಹಳ ತೇಜಶ್ಶಾಲಿಯಾದ ಶಿವನ ಸಾನ್ನಿಧ್ಯವು ತಪ್ಪದೆ ಉಂಟಾಗುವುದು. ನಾವೆಲ್ಲರೂ ಶಿವನ ದರ್ಶನದಿಂದ ಕೃತಾರ್ಥರಾಗುವೆವು. ಪರಮಾತ್ಮನಾದ ಶಿವನ ಅನುಗ್ರಹದಿಂದ ಶಿವತೀರ್ಥಯೋಗಿಯು ಯೋಗೀಶ್ವರರೆಲ್ಲರಿಗಿಂತಲೂ ಪೂಜ್ಯನಾಗಿರುವನು. ತ್ರಿಕಾಲಜ್ಞಾನಿಯಾದ ಅವನ ವಚನವು ಸತ್ಯವಾದದ್ದು " ಎಂದು ಹೇಳಿದನು.

ತ್ರಿಕಾಲಜ್ಞಸ್ಯ ತಸ್ಯಾಪಿ ವಚನಂ ತಥ್ಯಮೇವ ಹಿ ।
ಇತ್ಯುಕ್ತ್ವಾ ಮುನಿಶಾರ್ದೂಲೋ ವಸಿಷ್ಠಃ ಕರುಣಾಕರಃ ॥ ೯೯ ॥

ಆಗತಾನ್ವಿಷ್ಣುವೃದ್ಧಾದೀನಭ್ಯಂಗಸ್ನಾನಪೂರ್ವಕಂ ।
ಅನ್ನೈಶ್ಚ ಷಡ್ರಸೈರ್ಯುಕ್ತೈಶ್ಶರ್ಕರಾಘೃತಪಾಯಸೈಃ ॥ ೧೦೦ ॥

ತಾಂಬೂಲೈಶ್ಚ ಸುವಸ್ತ್ರೈಶ್ಚ ಸಂತೋಷ್ಯ ಮುನಿಪುಂಗವಾನ್ ।
ಪ್ರತೀಕ್ಷ್ಯ ತತ್ಪುಣ್ಯಕಾಲಮಾಸ್ತೇ ಸರ್ವೈರ್ಮುನೀಶ್ವರೈಃ ॥ ೧೦೧ ॥

ಅಥಾಗತೇ ಪುಣ್ಯಕಾಲೇ ಸಕಲಾಶ್ಚ ಮುನೀಶ್ವರಾಃ ।
ವಸಿಷ್ಠವಿಷ್ಣುವೃದ್ಧಾದ್ಯಾಸ್ಸಂಪ್ರಾಪ್ಯ ಮಣಿಕರ್ಣಿಕಾಂ ॥ ೧೦೨ ॥

ಅಘಮರ್ಷಣಮಂತ್ರೈಸ್ತು ಶಿವಂ ಧ್ಯಾತ್ವಾ ಶಿವಾಮಪಿ ।
ನಿರ್ವರ್ತ್ಯ ವಿಧಿನಾ ಸ್ನಾನಂ ನಿತ್ಯಕೃತ್ಯಂ ವಿಧಾಯ ಚ ॥ ೧೦೩ ॥

ಶ್ರೀಮತೋ ವಿಶ್ವನಾಥಸ್ಯ ಸನ್ನಿಧಿಂ ಪ್ರಾಪ್ಯ ಭಕ್ತಿತಃ ।
ನ್ಯಾಯೇನ ಶಾಸ್ತ್ರೇಣೋಕ್ತೇನ ಪಂಚಶುದ್ಧಿಮಕುರ್ವತ ॥ ೧೦೪ ॥

೯೯–೧೦೧. ದಯಾಶಾಲಿಯಾದ ವಸಿಷ್ಠಋಷಿಯು ಹೀಗೆಂದು ಹೇಳಿ ಅಲ್ಲಿಗೆ ಬಂದಿರುವ ವಿಷ್ಣುವೃದ್ಧನೇ ಮೊದಲಾದವರಿಗೆ ಅಭ್ಯಂಗಸ್ನಾನವನ್ನು ಮಾಡಿಸಿ, ಷಡ್ರಸಗಳಿಂದ ರುಚಿಕರವಾಗಿರುವಂತೆ ಭೋಜನವನ್ನು ಮಾಡಿಸಿದನು. ಅವರಿಗೆ ವಸ್ತ್ರ, ತಾಂಬೂಲಾದಿಗಳನ್ನು ಕೊಟ್ಟು ಸಂತೋಷಪಡಿಸಿದನು. ಅನಂತರದಲ್ಲಿ ಋಷಿಗಳು ಎಲ್ಲರೂ ಪುಣ್ಯಕಾಲವನ್ನು ನಿರೀಕ್ಷಿಸುತ್ತಿದ್ದರು.

೧೦೨–೧೦೪. ಪುಣ್ಯಕಾಲವು ಪ್ರಾಪ್ತವಾದಕೂಡಲೆ ವಸಿಷ್ಠ, ವಿಷ್ಣುವೃದ್ಧನೇ ಮೊದಲಾದ ಮುನೀಶ್ವರರು ಮಣಿಕರ್ಣಿಕಾ ತೀರಕ್ಕೆ ಬಂದು ಅಘಮರ್ಷಣ ಸೂಕ್ತಗಳನ್ನು ಹೇಳುತ್ತಾ, ಶಿವನನ್ನೂ, ಪಾರ್ವತಿಯನ್ನೂ ಧ್ಯಾನಮಾಡುತ್ತಾ ಶಾಸ್ತ್ರಕ್ರಮದಿಂದ ಆ ತೀರ್ಥದಲ್ಲಿ ಸ್ನಾನವನ್ನು ಮಾಡಿದರು. ಪ್ರತಿದಿನವೂ ಆಚರಿಸಬೇಕಾದ ಕರ್ಮಗಳೆಲ್ಲವನ್ನೂ ನೆರವೇರಿಸಿದನಂತರ, ಅವರು ಶಾಸ್ತ್ರದಲ್ಲಿ ಹೇಳಿದ ಕ್ರಮದಿಂದ ಪಂಚಭೂತ ಶುದ್ಧಿಯನ್ನು ಮಾಡಿಕೊಂಡರು.

**ಜ್ಯೋತಿರ್ಮಯಂ ಮಹಾಲಿಂಗಂ ಪಂಚಗವ್ಯಪುರಃಸರೈಃ**
**ಪಂಚಾಮೃತೈಶ್ಚ ರತ್ನೋದೈಃ ಪುಷ್ಪೋದೈರ್ಗಂಧತೋಯದೈಃ ॥ ೧೦೫ ॥**

**ಧೂಪಿತೈಸ್ಸ್ವರ್ಣಕಲಶೈಸ್ಸ್ವರ್ಧುನೀಜಲಪೂರಿತೈಃ**
**ಅಷ್ಟೋತ್ತರಸಹಸ್ರೈಶ್ಚ ಕೂರ್ಚವಸ್ತ್ರಾದಿಸಂಯುತೈಃ ॥ ೧೦೬ ॥**

**ಸ್ನಪನೋಕ್ತವಿಧಾನೇನ ಕ್ಷೀರಾದಿದ್ರವ್ಯಸಂಯುತೈಃ ।**
**ಅಭಿಷಿಚ್ಯ ದಶೈಕಂ ಚ ವಾರಂ ಪೂಜಾಂತರಾಂತರಂ ॥ ೧೦೭ ॥**

**ಸಮ್ಮೃಜ್ಯ ಶುಭ್ರವಸ್ತ್ರೇಣ ಮಹಾಲಿಂಗಂ ಸಪೀಠಕಂ ।**
**ದಿವ್ಯಗಂಧೇನ ಚಾಲಿಪ್ಯ ಪುಷ್ಪೈರ್ನೀಲೋತ್ಪಲಾದಿಭಿಃ ॥ ೧೦೮ ॥**

**ಧೂಪೈರ್ದೀಪೈರನೇಕೈಶ್ಚ ನೈವೇದ್ಯೈಶ್ಚ ಮಹತ್ತರೈಃ ।**
**ನೀರಾಜನೈರ್ವಿಚಿತ್ರೈಶ್ಚ ಸಂಪೂಜ್ಯ ಪರಮೇಶ್ವರಂ ॥ ೧೦೯ ॥**

**ವಿಭಜ್ಯ ಪಂಚವಕ್ತ್ರೈಶ್ಚ ಪೂಜಯಿತ್ವಾ ಪಿನಾಕಿನಂ ।**
**ಶ್ರೀಮತ್ಪಂಚಾಕ್ಷರಂ ಮಂತ್ರಂ ಸತಾರಂ ಸರ್ವಸಿದ್ಧಿದಂ ॥ ೧೧೦ ॥**

---

೧೦೫-೧೦೮. ಆ ವಸಿಷ್ಠನೇ ಮೊದಲಾದ ಋಷಿಗಳು ಪಂಚಾಮೃತ, ರತ್ನೋದಕ, ಪುಷ್ಪೋದಕ, ಗಂಧೋದಕ ಇವುಗಳಿಂದಲೂ, ಗಂಗಾಜಲದಿಂದ ಪರಿಪೂರ್ಣವಾದ, ಪರಿಮಳದಿಂದ ಕೂಡಿರುವ, ಕೂರ್ಚವಸ್ತ್ರಾದಿಗಳಿಂದ ಅಲಂಕೃತವಾದ ಸಾವಿರದೆಂಟು ಚಿನ್ನದ ಕಲಶಗಳಿಂದಲೂ, ವಿಶ್ವನಾಥನಿಗೆ ಏಕಾದಶವಾರ ಅಭಿಷೇಕವನ್ನು ಮಾಡಿ, ಪೀಠದಿಂದಕೂಡಿರುವ ಆ ದಿವ್ಯಲಿಂಗವನ್ನು ಮಧ್ಯದಕಾಲದಲ್ಲಿ ಶುಭ್ರವಾದ ವಸ್ತ್ರದಿಂದ ಚೆನ್ನಾಗಿ ಒರಸಿ, ಉತ್ತಮವಾದ ಗಂಧವನ್ನು ಲೇಪಿಸಿ, ನೀಲೋತ್ಪಲವೇ ಮೊದಲಾದ ಹೂವುಗಳಿಂದ ಪೂಜಿಸಿದರು.

೧೦೯-೧೧೦. ಆ ಋಷಿಗಳು ವಿಶ್ವನಾಥನಿಗೆ ಧೂಪ, ದೀಪ, ಅನೇಕ ವಿಧವಾದ ನೀರಾಜನಗಳು ಇವುಗಳನ್ನು ಸಮರ್ಪಿಸಿದರು. ಪರಮೇಶ್ವರನ ಐದು ಮುಖಗಳನ್ನೂ ಪ್ರತ್ಯೇಕ ಪ್ರತ್ಯೇಕವಾಗಿ ಪೂಜಿಸಿದರು. ಅನಂತರದಲ್ಲಿ ಪ್ರಣವದಿಂದ ಕೂಡಿರುವ, ಸಂಪದ್ಯುಕ್ತವಾದ, ಎಲ್ಲಾ ವಿಧವಾದ ಸಿದ್ಧಿಯನ್ನೂ ಉಂಟುಮಾಡುವ, ಶತರುದ್ರೀಯದ ಮಧ್ಯದಲ್ಲಿರುವ, ಮಂತ್ರಗಳೆಲ್ಲಕ್ಕೂ ಉತ್ತಮವಾದ, ಶೀಘ್ರವಾಗಿ ಪಾಪಗಳನ್ನು ನಾಶಮಾಡುವ, ಭೋಗಾಪೇಕ್ಷಿಗಳಿಗೆ ಭೋಗವನ್ನೂ, ಮೋಕ್ಷಾರ್ಥಿಗಳಿಗೆ ಮೋಕ್ಷವನ್ನೂ ಉಂಟುಮಾಡುವ ಪಂಚಾಕ್ಷರ ಮಂತ್ರವನ್ನು ಸಾವಿರ ಸಂಖ್ಯಾಕವಾಗಿ ಜಪಮಾಡಿದರು.

ಸರ್ವಮಂತ್ರವರಂ ನಿತ್ಯಂ ಶತರುದ್ರೀಯಮಧ್ಯಗಂ ।
ಅಚಿರಾತ್ಸರ್ವಪಾಪಘ್ನಂ ಭೋಗದಂ ಭೋಗಕಾಮಿನಾಂ ॥ ೧೧೧ ॥

ಮುಮುಕ್ಷೂಣಾಂ ಮುಕ್ತಿದಂ ಚ ಜಪಿತ್ವಾ ತು ಸಹಸ್ರಕಂ ।
ಸಾಂತಂ ಯಾಂತಂ ತ್ರಿರುಚ್ಚಾರ್ಯ ಪ್ರಣವೇನ ಷಡಕ್ಷರಂ ॥ ೧೧೨ ॥

ಜಪಿತ್ವಾ ಸಕಲೀಕೃತ್ಯ ಸಾಂಬಂ ಧ್ಯಾತ್ವಾ ಸದಾಶಿವಂ ।
ತಾರಂ ಮಹಾಮನುಯುತಂ ವಿಯತ್ಪಂಚಾಕ್ಷರಾಣ್ಯಪಿ ॥ ೧೧೩ ॥

ಉಚ್ಚರಂತಸ್ಸದಾ ಸರ್ವೇ ವಸಿಷ್ಠಾದ್ಯಾ ಮುನೀಶ್ವರಾಃ ।
ಅಥಾವಿರಾಸೀದ್ವಿಶ್ವೇಶೋ ಮನೋವಾಚಾಮಗೋಚರಃ ॥ ೧೧೪ ॥

ಸರ್ವಜ್ಞಃ ಸರ್ವಗ ಸ್ಸರ್ವ ಸ್ಸರ್ವಭೂತಹಿತೇ ರತಃ ।
ಅನಾದಿ ಸ್ಸಚ್ಚಿದಾನಂದಲಕ್ಷಣಸ್ಸಾಂಬ ಈಶ್ವರಃ ॥ ೧೧೫ ॥

ತಂ ದೃಷ್ಟ್ವಾ ವಿಸ್ಮಿತಾಃ ಸರ್ವೇ ವಸಿಷ್ಠಾದ್ಯಾ ಮುನಿಶ್ವರಾಃ ।
ಜಯಘೋಷಂ ಪುರಸ್ಕೃತ್ಯ ಪ್ರಣಿಪತ್ಯ ಪುನಃ ಪುನಃ ॥ ೧೧೬ ॥
ಸ್ತೋತು ಮಾರೇಭಿರೇ ಸರ್ವೇ ಭಕ್ತ್ಯಾವನತಕಂಧರಾಃ ।

---

೧೧೧–೧೧೪ ವಸಿಷ್ಠನೇ ಮೊದಲಾದ ಋಷೀಶ್ವರರು, ಶಿವನ ಷಡಕ್ಷರ ಮಂತ್ರವನ್ನೂ, ಪ್ರಣವದಿಂದ ಕೂಡಿರುವ ಶ್ರೀಮತ್ಪಂಚಾಕ್ಷರ ಮಂತ್ರವನ್ನೂ, ಉಚ್ಚರಿಸುತ್ತಾ ಇದ್ದರು. ಹೀಗೆ ಇರುವಾಗ ಮನಸ್ಸು, ವಾಕ್, ಇವುಗಳಿಗೆ ಗೋಚರನಾಗದೆ ಇರುವ, ಸರ್ವಜ್ಞನಾಗಿಯೂ, ಆದಿರಹಿತನಾಗಿಯೂ, ಸಚ್ಚಿದಾನಂದ ಲಕ್ಷಣವುಳ್ಳವನಾಗಿಯೂ ಇರುವ, ವಿಶ್ವೇಶ್ವರನು ದೇವಿಯಾದ ಪಾರ್ವತಿಯೊಡನೆ ಆ ಪ್ರದೇಶದಲ್ಲಿ ಪ್ರತ್ಯಕ್ಷನಾದನು.

೧೧೫–೧೧೬ ಆಗ ಋಷಿಗಳೆಲ್ಲರೂ ದೇವದೇವನಾದ ಪರಮೇಶ್ವರನನ್ನು ನೋಡಿ ಆಶ್ಚರ್ಯವುಳ್ಳವರಾಗಿ ಜಯಘೋಷವನ್ನು ಮಾಡಿದರು. ಪದೇ ಪದೇ ನಮಸ್ಕಾರ ಮಾಡಿದರು. ನಮ್ರಶಿರರಾಗಿ ಪರಮೇಶ್ವರನನ್ನು ಭಕ್ತಿಯಿಂದ ಸ್ತೋತ್ರ ಮಾಡಲು ಪ್ರಾರಂಭಿಸಿದರು.

॥ ಮುನಯ ಊಚುಃ ॥

ನಮಸ್ತೇ ದೇವದೇವೇಶ ನಮಸ್ತೇ ಜಗತಾಂ ಪತೇ ।
ನಮಸ್ತೇ ಚಂದ್ರಚೂಡಾಯ ನಮಸ್ತೇ ಶೂಲಧಾರಿಣೇ ॥ ೧೧೭ ॥

ನಮಸ್ತೇ ಕಾಲಕಾಲಾಯ ನಮಸ್ತ್ರೈಲೋಕ್ಯಧಾರಿಣೇ ।
ನಮಸ್ತೇ ವೇದವೇದ್ಯಾಯ ನಮಸ್ತೇ ಪುಣ್ಯಮೂರ್ತಯೇ ॥ ೧೧೮ ॥

ನಮಸ್ತೇ ಬ್ರಹ್ಮರೂಪಾಯ ನಮಸ್ತೇ ವಿಷ್ಣುರೂಪಿಣೇ ।
ನಮಸ್ತೇ ರುದ್ರರೂಪಾಯ ನಮ ಈಶ್ವರರೂಪಿಣೇ ॥ ೧೧೯ ॥

ನಮಸ್ಸದಾಶಿವಾಯಾಸ್ತು ನಮಃ ಪರಶಿವಾಯ ತೇ ।
ನಮೋ ದೇವಾಯ ಮಹತೇ ಮಂಗಳಾಯ ಮಹಾತ್ಮನೇ ॥ ೧೨೦ ॥

ನಮಃ ಪರ್ವತರಾಜೇಂದ್ರಕನ್ಯಕಾಪತಯೇ ನಮಃ ।
ಯೋಗಾನಂದಾಯ ಯೋಗಾಯ ಯೋಗಿನಾಂ ಪತಯೇ ನಮಃ ॥ ೧೨೧॥

ಪ್ರಾಣಾಯಾಮರತಾನಾಂ ತು ಪ್ರತ್ಯಕ್ಷಾಯ ನಮೋನಮಃ ।
ವಿಶ್ವಾಯ ವಿಶ್ವನಾಥಾಯ ವಿಶ್ವಾಧಾರಾಯ ತೇ ನಮಃ ॥ ೧೨೨ ॥

---

೧೧೭-೧೨೧ ಮುನಿಗಳು ಹೇಳಿದರು:-ಎಲೈ ದೇವದೇವನೆ, ಜಗತ್ಪತಿಯೇ, ಚಂದ್ರನನ್ನು ಧರಿಸಿರುವ ತ್ರಿಶೂಲಧಾರಿಯಾದ ನಿನಗೆ ನಮಸ್ಕಾರವು. ಯಮನಿಗೂ ಯಮನಾಗಿರುವ, ಮೂರು ಲೋಕಗಳನ್ನೂ ಏಕಾಧಿಪತ್ಯದಲ್ಲಿರಿಸಿಕೊಂಡಿರುವ ನಿನಗೆ ನಮಸ್ಕಾರವು. ಮಹತ್ತಾದ ಪುಣ್ಯವನ್ನು ಉಂಟುಮಾಡುವ ವೇದಗಳಿಂದ ತಿಳಿಯ ಬಹುದಾದ ಆಕಾರವನ್ನು ಧರಿಸಿರುವ ನಿನಗೆ ನಮಸ್ಕಾರವು. ಬ್ರಹ್ಮ, ವಿಷ್ಣು, ಮತ್ತು ರುದ್ರರೆಂಬ ಮೂರು ರೂಪಗಳಿಂದ ಇರುವ ನಿನಗೆ ನಮಸ್ಕಾರವು. ಎಲ್ಲಕ್ಕೂ ಅಧಿಪತಿ ಯಾಗಿ, ಯಾವಾಗಲೂ ಮಂಗಳವನ್ನು ಕೊಡುವ ಮಹಾಮಹಿಮನಾದ ನಿನಗೆ ನಮ ಸ್ಕಾರವು. ಪರ್ವತರಾಜನ ಮಗಳಾದ ಪಾರ್ವತಿಗೆ ಪತಿಯಾದ ನಿನಗೆ ನಮಸ್ಕಾರವು. ಯೋಗದ ಆನಂದವನ್ನು ಅನುಭವಿಸುತ್ತಿರುವ, ಯೋಗರೂಪದಿಂದ ಇರುವ, ಯೋಗಿ ಗಳೆಲ್ಲರಿಗೂ ಅಧಿಪನಾದ ನಿನಗೆ ನಮಸ್ಕಾರವು. ಪ್ರಾಣಾಯಾಮವನ್ನು ಮಾಡುವುದ ರಲ್ಲಿ ಆಸಕ್ತರಾದವರಿಗೆ ಪ್ರತ್ಯಕ್ಷವಾಗಿರುವ ನಿನಗೆ ನಮಸ್ಕಾರವು.

೧೨೨-೧೨೪ ಪ್ರಪಂಚದ ರೂಪವಾಗಿಯೂ, ಪ್ರಪಂಚಕ್ಕೆ ಅಧಿಪತಿಯಾಗಿ ಯೂ, ಪ್ರಪಂಚಕ್ಕೆ ಆಧಾರನಾಗಿಯೂ ಇರುವ ನಿನಗೆ ನಮಸ್ಕಾರವು. ಭಕ್ತರ ಭಯ

ನಮೋ ಭಕ್ತಭಯಚ್ಛೇದಕಾರಣಾಯಾ ಮಲಾಯ ತೇ ।
ನಮಸ್ತೇ ರುದ್ರ ಭಗನ್ನೃನ್ಯನೇ ಚೇಷವೇ ನಮಃ ॥ ೧೨೩ ॥

ನಮಸ್ತೇ ಧನ್ವಿನೇ ತುಭ್ಯಂ ಬಾಹುಭ್ಯಾಮುತ ತೇ ನಮಃ ।
ನಮಸ್ತೇ ಹರಿಕೇಶಾಯ ಪತ್ತೀನಾಂ ಪತಯೇ ನಮಃ ॥ ೧೨೪ ॥

ಪುಷ್ಟಾನಾಂ ಪತಯೇ ತುಭ್ಯಂ ನಮಸ್ತೇ ಪರಮಾತ್ಮನೇ ।

ನಮಃ ಶಿವಾಯ ತ್ರಿದಶಾರ್ಚಿತಾಯ ।
ವಿನಷ್ಟದೋಷಾಯ ಗುಣಾರ್ಣವಾಯ ॥
ವಿಮುಕ್ತಿಮಾರ್ಗಪ್ರತಿಬೋಧನಾಯ ।
ದೇವಾಧಿದೇವಾಯ ನಮಃ ಶಿವಾಯ ॥ ೧೨೫ ॥

ಇತಿ ಸ್ತುತ್ವಾ ವಿಶ್ವನಾಥಂ ವಸಿಷ್ಠಾದ್ಯಾಸ್ತಪೋಧನಾಃ ।
ಪ್ರಣೇಮು ರ್ದಂಡವ ದ್ಭೂಮೌ ಭಕ್ತ್ಯಾ ಪರಮಯಾ ಯುತಾಃ ॥೧೨೬ ॥

---

ವನ್ನು ನಾಶಮಾಡುವ ಪವಿತ್ರಸಂಪನ್ನನಾದ ನಿನ್ನ ಕೋಶಕ್ಕೂ, ನಿನ್ನ ಬಾಣಗಳಿಗೂ ನಿನ್ನ ತೋಳುಗಳಿಗೂ ನಮಸ್ಕಾರವು. ಧನುರ್ಧಾರಿಯಾದ ನಿನಗೆ ನಮಸ್ಕಾರವು. ಕಪಿಲವರ್ಣದಿಂದ ಇರುವ, ಕೇಶಗಳಿಂದ ಪ್ರಕಾಶಮಾನವಾದ ( ಯೋಧ ) ಸೈನಿಕರೆಲ್ಲರಿಗೂ ಅಧಿಪನಾದ ನಿನಗೆ ನಮಸ್ಕಾರವು.

೧೨೫–೧೨೬ ನೀನು ಯಾವಾಗಲೂ ಹೆಸರು ಮತ್ತು ಕೆಲಸ ಇವುಗಳಿಂದ ಮಂಗಳಕರನಾಗಿರುತ್ತೀಯೆ. ದೇವತೆಗಳೆಲ್ಲರೂ ನಿನ್ನನ್ನು ಪೂಜಿಸುತ್ತಿರುವರು. ಯಾವ ವಿಧವಾದ ದೋಷದಿಂದಲೂ ಕೂಡಿಕೊಂಡಿರದೆ, ಬಹಳ ಉತ್ತಮೋತ್ತಮವಾದ ಒಳ್ಳೆಯ ಗುಣಗಳಿಂದ ಕೂಡಿರುತ್ತೀಯೆ. ನಿನ್ನನ್ನು ಆಶ್ರಯಿಸಿದವರಿಗೆ ಮುಕ್ತಿಯ ಮಾರ್ಗವನ್ನು ತೋರಿಸುವವನಾಗಿರುತ್ತೀಯೆ ದೇವತೆಗಳೆಲ್ಲರಿಗೂ ಪೂಜ್ಯನಾದ ದೇವತೆಯಾಗಿರುವ,ಶಿವನಾದ ನಿನಗೆ ನಮಸ್ಕಾರವು. ವಸಿಷ್ಠನೇ ಮೊದಲಾದ ಋಷಿಗಳೆಲ್ಲರೂ ವಿಶ್ವನಾಥನನ್ನು ಈಪ್ರಕಾರದಿಂದ ಸ್ತೋತ್ರ ಮಾಡಿ ಬಹಳವಾದ ಭಕ್ತಿಯಿಂದ ದಂಡಾಕಾರವಾಗಿ ನಮಸ್ಕಾರವನ್ನು ಮಾಡಿದರು.

ಅಥ ವಿಶ್ವೇಶ್ವರೋ ದೇವಸ್ತಾನ್ವಿಲೋಕ್ಯ ಮುನೀಶ್ವರಾನ್ ।
ಪ್ರಾಹ ಗಂಭೀರಯಾ ವಾಚಾ ಭಗವಾನ್ಕರುಣಾನಿಧಿಃ ॥ ೧೨೭ ॥

ಪ್ರಸನ್ನೋಽಸ್ಮಿ ಮುನಿಶ್ರೇಷ್ಠಾಃ ಭಕ್ತ್ಯಾ ಸ್ತೋತ್ರೇಣ ಸುವ್ರತಾಃ ।
ಪರಂ ವೇದಾಂತವಿಜ್ಞಾನಂ ಕೈವಲ್ಯಪ್ರಾಪ್ತಿಸಾಧನಂ ॥ ೧೨೮ ॥

ಭವತಾಂ ಭವತು ಪ್ರಾಜ್ಞಾಃ ಜನ್ಮದುಃಖನಿವರ್ತಯೇ ।
ಪಠತಿ ಶ್ರದ್ಧಯಾ ಯಸ್ತು ನಿತ್ಯಂ ಸ್ತೋತ್ರಂ ಭವತ್ಕೃತಂ ॥ ೧೨೯ ॥

ತಸ್ಮೈ ಧರ್ಮಾರ್ಥಕಾಮಾಂಶ್ಚ ಮುಕ್ತಿಂ ದಾಸ್ಯಾಮ್ಯಹಂ ಧ್ರುವಂ ।
ಇತಿ ಲಬ್ಧವರಾಃ ಸಂತಃ ಪ್ರಾಹುರಿತ್ಥಂ ಮುನೀಶ್ವರಾಃ ॥ ೧೩೦ ॥

ಭಗವನ್ ಪಾರ್ವತೀನಾಥ ಸರ್ವಾಭೀಷ್ಟಪ್ರದಾಯಕ ।
ಇದಮೇಕಂ ಪ್ರಾರ್ಥಿತಂ ನೋ ವರಂ ತ್ವತ್ಪದಪಂಕಜೇ ॥ ೧೩೧ ॥

ನಿಶ್ಚಲಾ ಪರಮಾ ಭಕ್ತಿಃ ಸತತಂ ಭವತು ಪ್ರಭೋ ।
ಇತ್ಯುಕ್ತೋ ಮುನಿಸಂಘೈಶ್ಚ ವಸಿಷ್ಠಪ್ರಮುಖೈರ್ಹರಃ ॥ ೧೩೨ ॥

---

೧೨೭–೧೨೯ ವಿಶ್ವನಾಥನು, ಆ ಮುನೀಶ್ವರರೆಲ್ಲರನ್ನೂ ನೋಡಿ, ದಯೆಯುಳ್ಳವನಾಗಿ ಗಂಭೀರವಾದ ಧ್ವನಿಯಿಂದ ಮಾತನಾಡಿದನು. “ ಎಲೈ ಮುನಿಶ್ರೇಷ್ಠರೇ ನೀವುಗಳು ಭಕ್ತಿಯಿಂದ ನನ್ನನ್ನು ಸ್ತೋತ್ರಮಾಡಿದಿರಿ. ಇದರಿಂದ ನಾನು ನಿಮ್ಮಲ್ಲಿ ಅನುಗ್ರಹವುಳ್ಳವನಾಗಿರುವೆನು. ಮುಕ್ತಿಯನ್ನು ಹೊಂದಲು ಮುಖ್ಯಸಾಧನವಾದ ವೇದಾಂತ ಜ್ಞಾನವು ಚೆನ್ನಾಗಿ ನಿಮಗೆ ಸಿದ್ಧಿಯನ್ನು ಉಂಟುಮಾಡಲಿ. ಇದರಿಂದ ನೀವು ಜನ್ಮ ಮರಣದುಃಖವನ್ನು ನಾಶಮಾಡಿಕೊಳ್ಳಿರಿ. ನೀವು ಈಗ ಹೇಳಿರುವ ಸ್ತೋತ್ರವನ್ನು ಭಕ್ತಿಯಿಂದ ಪ್ರತಿದಿನವೂ ಪಠನಮಾಡುವವನಿಗೆ ನಾನು ಚತುರ್ವಿಧ ಪುರುಷಾರ್ಥಗಳನ್ನೂ ಕೊಡುವೆನು. ಇದರಲ್ಲಿ ಸಂಶಯವಿಲ್ಲ. ”

೧೩೦–೧೩೨ ಋಷಿಗಳು ಈ ಪ್ರಕಾರವಾಗಿ ವಿಶ್ವನಾಥನಿಂದ ವರವನ್ನು ಹೊಂದಿದವರಾಗಿ “ ಎಲೈ ಪ್ರಭುವೆ ಭಕ್ತರ ಇಷ್ಟಗಳೆಲ್ಲವನ್ನೂ ನಡೆಸಿಕೊಡುವ ನಿನ್ನ ಪಾದಪದ್ಮಗಳಲ್ಲಿ ಯಾವಾಗಲೂ ದೃಢವಾದ ಭಕ್ತಿಯು ನಮಗೆ ಉಂಟಾಗಲಿ ಎಂದು ಪ್ರಾರ್ಥನೆಮಾಡಿಕೊಳ್ಳುವೆವು.” ಎಂದು ಹೇಳಿದರು. ಆಗ ವಾರಾಣಸೀಪತಿಯಾದ ವಿಶ್ವನಾಥನು ಹಾಗೇ ಆಗಲಿ ಎಂದು ಅವರ ಇಷ್ಟಕ್ಕೆ ಒಪ್ಪಿಕೊಂಡು ವಚನವನ್ನು ಕೊಟ್ಟು ಆ ಶಿವಲಿಂಗದ ಮಧ್ಯದಲ್ಲಿ ಅಂತರ್ಧಾನವನ್ನು ಹೊಂದಿದನು.

**ತಥಾ ಭವತು ಚೇತ್ಯುಕ್ತ್ವಾ ಲಿಂಗಮಧ್ಯೇತಿರೋಧದೇ ।**
**ಅಥ ಸರ್ವೇ ವಸಿಷ್ಠಾದ್ಯಾ ಮೇರುಪಾರ್ಶ್ವಾತ್ಸಮಾಗತೈಃ ॥ ೧೩೩ ॥**

**ಮುನಿವೃಂದೈಸ್ತು ಸಂತುಷ್ಟಾ ವಿಶ್ವೇಶಂ ಲಿಂಗರೂಪಿಣಂ ।**
**ಪ್ರಣಿಪತ್ಯ ವಿಶೇಷೇಣ ಸ್ತೋತ್ರೈಃ ಸ್ತುತ್ವಾ ಶ್ರುತೀರಿತೈಃ ॥ ೧೩೪ ॥**

**ಮುಕ್ತಿಮಂಟಪಮಾಸಾದ್ಯ ತತ್ರಸ್ಥಾನ್ದೇವತಾನ್ಗಣಾನ್ ।**
**ಪ್ರಣಮ್ಯ ಚ ಯಥಾ ನ್ಯಾಯಂ ಕುಕ್ಕುಟಾನಾಂ ಚತುಷ್ಟಯಂ ॥ ೧೩೫ ॥**

**ದೃಷ್ಟ್ವಾಥ ದಕ್ಷಿಣಾಮೂರ್ತೇರುಪವಿಶ್ಯ ಚ ಸನ್ನಿಧೌ ।**
**ವಿವಿಧೈರ್ವೇದವಾಕ್ಯೈಶ್ಚ ಸೇತಿಹಾಸಪುರಾಣಕೈಃ ॥ ೧೩೬ ॥**

**ಶಾಸ್ತ್ರೈಶ್ಚ ವಿವಿಧೈರನ್ಯೈಸ್ಸುರ್ವೋಪನಿಷದಾಂ ಗಣೈಃ ।**
**ಪರಸ್ಪರಂ ಸಲ್ಲಪಂತಃ ಶಂಭೋಶ್ಚಕ್ರುಃ ಪರಾಂ ಮುದಂ ॥ ೧೩೭ ॥**

---

೧೩೩ ಅನಂತರದಲ್ಲಿ ಮೇರುಪಾರ್ಶ್ವದಿಂದ ಬಂದಿರುವ ಋಷಿಗಳೂ, ವಸಿಷ್ಠನೇ ಮೊದಲಾದ ಋಷಿಗಳೂ, ಇವರೆಲ್ಲರೂ ಲಿಂಗರೂಪದಿಂದ ಇರುವ ವಿಶ್ವೇಶ್ವರನಿಗೆ ಸಂತೋಷದಿಂದ ನಮಸ್ಕಾರವನ್ನು ಮಾಡಿ ವೇದೋಕ್ತ ಮಂತ್ರಗಳಿಂದ ಸ್ತೋತ್ರ ವನ್ನು ಮಾಡಿದರು.

೧೩೪–೧೩೭ ಅನಂತರದಲ್ಲಿ ಅವರೆಲ್ಲರೂ ಮುಕ್ತಿಮಂಡಪದ ಹತ್ತಿರಕ್ಕೆ ಬಂದರು. ಅಲ್ಲಿರುವ ದೇವತಾಸಮೂಹವನ್ನು ವಂದಿಸಿದರು. ಅಲ್ಲಿರುವ ನಾಲ್ಕು ಕೋಳಿಗಳ ದರ್ಶನವನ್ನು ಮಾಡಿದರು. ದಕ್ಷಿಣಾಮೂರ್ತಿದೇವನ ಸಮೀಪದಲ್ಲಿ ಕೂತುಕೊಂಡು ಇತಿಹಾಸ,ಪುರಾಣ,ಶಾಸ್ತ್ರಗಳು, ಉಪನಿಷತ್ತುಗಳು ಇವುಗಳ ವಿಷಯ ವಾಗಿ ಅನ್ಯೋನ್ಯವಾಗಿ ಮಾತನಾಡುತ್ತಾ (ಶಿವನಿಗೆ) ವಿಶ್ವನಾಥನಿಗೆ ಬಹಳ ಸಂತೋಷ ವನ್ನು ಉಂಟುಮಾಡಿದರು.

**ತತೋ ಮುನೀಶ್ವರಾಃ ಸರ್ವೇ ನಾರದಂ ಮುನಿಪುಂಗವಂ ।**
**ಕೌತೂಹಲಸಮಾಯುಕ್ತಾಃ ಪಪ್ರಚ್ಛುಃ ಬ್ರಹ್ಮಣಸ್ಸುತಂ　　॥ ೧೩೮ ॥**

**ತಪಸ್ವಿನ್ಶೃಣು ದೇವರ್ಷೇ ತಪಸಾ ಧೂತಕಲ್ಮಷ ।**
**ಭುವನೇಷು ಚ ಸರ್ವೇಷು ಬ್ರಹ್ಮಾಂಡಾಂತರ್ಗತೇಷು ಚ　　॥ ೧೩೯ ॥**

**ಬಹಿಷ್ಠೇಷು ಚ ಸರ್ವೇಷು ಚರತಸ್ತಪಸೋ ಬಲಾತ್ ।**
**ವಿರೋಧೋ ನಾಸ್ತಿ ಭವತಸ್ಸರ್ವಂ ತ್ವಂ ವೇತ್ಸಿ ತತ್ತ್ವತಃ　　॥ ೧೪೦ ॥**

**ತೇಷು ಸರ್ವೇಷು ಲೋಕೇಷು ಯಾನಿ ಕ್ಷೇತ್ರಾಣಿ ಸಂತಿ ತು ।**
**ತೇಷಾಂ ಮಧ್ಯೇ ವಿಶಿಷ್ಟಂ ಯತ್ ಕ್ಷೇತ್ರಂ ಶಂಭೋಶ್ಚಿರಂತನಂ　　॥೧೪೧ ॥**

**ವಯಂ ತಚ್ಛ್ರೋತುಮಿಚ್ಛಾಮಸ್ತಸ್ಮಾತ್ತ್ವಂ ವಕ್ತುಮರ್ಹಸಿ　　॥ ೧೪೨ ॥**

**॥ ಶ್ರೀ ನಾರದ ಉವಾಚ ॥**

**ಪುರಾ ಸನತ್ಕುಮಾರೇಣ ಸರ್ವಜ್ಞೇನ ಮಹಾತ್ಮನಾ ।**
**ಕಥಿತಂ ಕ್ಷೇತ್ರಮಾಹಾತ್ಮ್ಯಂ ವೇದವ್ಯಾಸಾಯ ಧೀಮತೇ　　॥ ೧೪೩ ॥**

---

೧೩೮–೧೪೨ ಆಮೇಲೆ ಮುನೀಶ್ವರರು ಎಲ್ಲರೂ ಸೇರಿ ಬ್ರಹ್ಮನ ಮಗನಾದ ನಾರದನನ್ನು ಬಹಳ ಕುತೂಹಲದಿಂದ ಪ್ರಶ್ನೆ ಮಾಡಿದರು, "ಎಲೈ, ದೇವರ್ಷಿಯೇ ನೀನುತಪಸ್ಸಿನಿಂದ ಕಲ್ಮಷಗಳೆಲ್ಲವನ್ನೂ ನಾಶಪಡಿಸಿಕೊಂಡಿರುತ್ತೀಯೆ. ಬ್ರಹ್ಮಾಂಡದ ಒಳಗೆ ಇರುವ ಹದಿನಾಲ್ಕು ಲೋಕಗಳಲ್ಲಿಯೂ, ಬ್ರಹ್ಮಾಂಡದ ಹೊರಗೆ ಇರುವ ಪ್ರದೇಶದಲ್ಲಿಯೂ, ಇರುವ ಎಲ್ಲವನ್ನೂ ನೀನು ನಿನ್ನ ತಪಸ್ಸಿನ ಬಲದಿಂದ ತಿಳಿದಿರುತ್ತೀಯೆ. ಆದ್ದರಿಂದ ನೀನು ಹೇಳುವುದಕ್ಕೆ ವಿರುದ್ಧವಾಗಿ ಯಾವುದೂ ಇರುವುದಿಲ್ಲ. ಎಲ್ಲಾ ಲೋಕಗಳಲ್ಲಿಯೂ (ಶಿವನ ಕ್ಷೇತ್ರ) ಶಿವನ ಮಹಿಮೆಯನ್ನು ಪ್ರಕಟಿಸುವ ಕ್ಷೇತ್ರಗಳಿರುವುವು. ಅವುಗಳೆಲ್ಲದರಲ್ಲಿಯೂ ಪುರಾತನವಾದ ಹೆಚ್ಚಾದ ಮಹಿಮೆಯುಳ್ಳ ಕ್ಷೇತ್ರವು ಯಾವದಿರುವುದೊ ಅದನ್ನು ನಮಗೆ ತಿಳಿಸು. ನಾವು ನಿನ್ನಿಂದ ಇದನ್ನು ಕೇಳಲು ಇಚ್ಛೆಯುಳ್ಳವರಾಗಿರುವೆವು."

೧೪೩–೧೪೪ "ಪೂರ್ವಕಾಲದಲ್ಲಿ ಸರ್ವಜ್ಞನೂ ಮಹಾಮಹಿಮನೂ ಆದ ಸನತ್ಕುಮಾರನು ಜ್ಞಾನಿಯಾದ ವೇದವ್ಯಾಸಋಷಿಗೆ ಕ್ಷೇತ್ರಮಹಾತ್ಮ್ಯವನ್ನು ಹೇಳಿ

ಸ ಏವ ಸರ್ವಂ ಯುಷ್ಮಾಕಂ ವಕ್ತುಮರ್ಹತಿ ಸತ್ತಮಾಃ ।
ಇತ್ಯುಕ್ತೇ ನಾರದೇನಾಥ ಮುದಾ ಸರ್ವೇ ಮುನೀಶ್ವರಾಃ ॥ ೧೪೪ ॥

ಸಮೀಪಸ್ಥಂ ಮಹಾಭಾಗಂ ಪ್ರಾಹು ಸ್ಸತ್ಯವತೀಸುತಂ ।

॥ ಮುನಯ ಊಚುಃ ॥

ಭಗವನ್ಸರ್ವಧರ್ಮಜ್ಞ ವೇದವ್ಯಾಸ ಮಹಾಮುನೇ ।
ವಿದುಷಾಂ ಶಂಭುಭಕ್ತಾನಾಮಗ್ರಗಣ್ಯಸ್ತ್ವಮೇವ ಹಿ ॥ ೧೪೫ ॥

ಪುರಾಣಾನಿ ಚ ಸರ್ವಾಣಿ ವೇದಾಸ್ಸಾಂಗಾನ್ಮಹಾಮತೇ ।
ಇತಿಹಾಸಾನ್ಭಾರತಾದೀನ್ಕಾವ್ಯಾನಿ ವಿವಿಧಾನಿ ಚ ॥ ೧೪೬ ॥

ಅಲಂಕಾರಾಂಶ್ಚ ವಿವಿಧಾನ್ನಾಟ್ಯಕಾನ್ಸದ್ಭುತಾನಿ ಚ ॥
ಪ್ರಹೇಳಿಕಾಶ್ಚ ವಿವಿಧಾಸ್ಸವ್ಯಂಗ್ಯಾಸ್ಸರಸಾಸ್ತಥಾ ॥ ೧೪೭ ॥

ಜ್ಞಾತುಂ ವಕ್ತುಂ ಬೋಧಯಿತುಂ ತ್ವತ್ಸಮೋ ನಾಸ್ತಿ ಭೂತಲೇ
ತಸ್ಮಾತ್ಕ್ಷೇತ್ರೇಷು ಸರ್ವೇಷು ಚಿರಂತನ ಮನುತ್ತಮಂ ॥ ೧೪೮ ॥

---

ದನು. ಆದ್ದರಿಂದ ವ್ಯಾಸನು ನಿಮಗೆ ಎಲ್ಲವನ್ನೂ ವಿಸ್ತಾರವಾಗಿ ಹೇಳುವನು''— ಎಂದು ನಾರದನು ಹೇಳಿದ್ದನ್ನು ಕೇಳಿ ಅವರು ಹತ್ತಿರದಲ್ಲಿರುವ ಸತ್ಯವತೀ ಪುತ್ರನಾದ ವ್ಯಾಸನನ್ನು ಪ್ರಶ್ನೆ ಮಾಡಿದರು.

೧೪೫–೧೪೮ ಮುನಿಗಳು ಹೇಳಿದರು:–ಷಡ್ಗುಣೈಶ್ವರ್ಯ ಸಂಪನ್ನನಾದ, ಎಲೈ, ವ್ಯಾಸಮಹರ್ಷಿಯೇ ! ನೀನು ಎಲ್ಲಾ ಧರ್ಮಗಳನ್ನೂ ತಿಳಿದಿರುತ್ತೀಯೆ. ಜ್ಞಾನಿಗಳಿಗೂ ಶಿವಭಕ್ತರಿಗೂ ಮುಖ್ಯನಾಗಿರುತ್ತೀಯೆ. ಎಲ್ಲಾ ಪುರಾಣಗಳೂ, ಅಂಗಗಳಿಂದ ಕೂಡಿರುವ ವೇದಗಳೂ, ಭಾರತವೇ ಮೊದಲಾದ ಇತಿಹಾಸಗಳೂ, ಅನೇಕ ಕಾವ್ಯಗಳೂ, ಅಲಂಕಾರಗಳೂ, ಆಶ್ಚರ್ಯಕರವಾದ ನಾಟಕಗಳೂ, ರಸಭರಿತವಾದ ಮತ್ತು ನೀರಸವಾದ ಪ್ರಹೇಳಿಕಾ ಗ್ರಂಥಗಳೂ, ಇವೆಲ್ಲವನ್ನೂ ತಿಳಿಯುವುದರಲ್ಲಿಯೂ ಹೊಸದಾಗಿ ನಿರ್ಮಿಸಿ ಹೇಳುವುದರಲ್ಲಿಯೂ, ಭೂಮಿಯಲ್ಲಿ ನಿನಗೆ ಸಮನಾದವರು ಯಾರೂ ಇರುವುದಿಲ್ಲ. ಆದುದರಿಂದ ಭೂಮಿಯಲ್ಲಿರುವ ಕ್ಷೇತ್ರಗಳಲ್ಲಿ ಎಲ್ಲಕ್ಕಿಂತಲೂ ಉತ್ತಮವಾದ, ಪುರಾತನವಾದ ಕ್ಷೇತ್ರವು ಯಾವುದು. ಎಂಬುದನ್ನು ಭಕ್ತರಾದ ನಮಗೋಸ್ಕರ ದಯೆಯಿಂದ ಹೇಳು. ”

ವಕ್ತುಮರ್ಹಸಿ ತತ್ಕ್ಷೇತ್ರಂ ಭಕ್ತಾನಾಮನುಕಂಪಯಾ ।
ಇತಿ ಶ್ರುತ್ವಾ ವಚಸ್ತೇಷಾಂ ವೇದವ್ಯಾಸೋ ಮಹಾಮುನಿಃ ॥ ೧೪೯ ॥
ಮುದಾ ಪರಮಯಾ ಯುಕ್ತಃ ಪ್ರಾಹ ಸರ್ವಾನ್ಮುನೀಶ್ವರಾನ್ ।

॥ ಶ್ರೀವೇದವ್ಯಾಸ ಉವಾಚ ॥

ಶೃಣುಧ್ವಮೃಷಯಸ್ಸರ್ವೇ ಯುಷ್ಮಾಕಂ ಹಿತಮುತ್ತಮಂ ।
ಅಗಸ್ತ್ಯಶ್ಶಂಭುಭಕ್ತಾನಾಮಗ್ರಗಣ್ಯಃ ಪುರಾತನಃ ॥ ೧೫೦ ॥

ಸರ್ವಜ್ಞಸೂನೋಃ ಷಡ್ವಕ್ತ್ರಾತ್ಸರ್ವಜ್ಞಾದಾತ್ತಚೇತನಃ ।
ಪುರಾ ಕೈಲಾಸಶಿಖರೇ ಶಂಭುಂ ನಂತುಂ ಸಮಾಗತಾಃ ॥ ೧೫೧ ॥

ಇಂದ್ರಾದಯೋ ಲೋಕಪಾಲಾಃ ಬ್ರಹ್ಮವಿಷ್ಣುಸಮನ್ವಿತಾಃ ।
ತದಾ ಭಾರೇಣ ಮಹತಾ ಭೂಮಿಶ್ಚ ವಿನತೋತ್ತರಾ ॥ ೧೫೨ ॥

ದಕ್ಷಿಣಾ ಚೋನ್ನತಿಂ ಪ್ರಾಪ್ತಾ ಸರ್ವಲೋಕಭಯಾವಹಾ ।
ತಥಾವಿಧಾಂ ಧರಿತ್ರೀಂ ಚ ಸಮನ್ವೀಕ್ಷ್ಯ ಮಹೇಶ್ವರಃ ॥ ೧೫೩ ॥

---

೧೪೯–೧೫೧ ವೇದವ್ಯಾಸಮಹರ್ಷಿಯು ಈ ಮಾತನ್ನು ಕೇಳಿ ಬಹಳ ಸಂತೋಷವುಳ್ಳವನಾಗಿ ಆ ಋಷಿಗಳ ಸಂಗಡ ಮಾತನಾಡಿದನು. ವೇದವ್ಯಾಸ ಋಷಿಯು ಹೇಳಿದನು:–ಋಷಿಗಳೆಲ್ಲರೂ ಕೇಳಿರಿ. ನಾನು ನಿಮಗೆ ಬಹಳ ಹಿತಕರ ವಾದ ಮಾತನ್ನು ಹೇಳುವೆನು. ಅಗಸ್ತ್ಯನು ಬಹಳ ಹಿಂದಿನಕಾಲದಿಂದಲೂ ಇರುವನು. ಶಿವಭಕ್ತರಲ್ಲಿ ಉತ್ತಮನಾದವನು. ಸರ್ವಜ್ಞನಾದ ಶಿವನ ಪುತ್ರನಾದ ಕುಮಾರಸ್ವಾಮಿಯಿಂದ ಉಪದೇಶವನ್ನು ಹೊಂದಿ ಜ್ಞಾನನಿಷ್ಠೆಯನ್ನು ಹೊಂದಿರು ವನು. ಇಂದ್ರನೇ ಮೊದಲಾದ ಲೋಕಪಾಲಕರು ಕೈಲಾಸಶಿಖರಕ್ಕೆ ಹೋಗಿ ಬ್ರಹ್ಮ, ವಿಷ್ಣು, ಮಹೇಶ್ವರರ ಸಂಗಡ ಶಿವನನ್ನು ಸೇವಿಸುವುದಕ್ಕಾಗಿ ಸಿದ್ಧರಾಗಿದ್ದರು. ಆಗ ಭೂಮಿಯು ಬಹಳ ಭಾರವಿದ್ದು ಉತ್ತರಭಾಗದಲ್ಲಿ ಹಳ್ಳವಾಗಿದ್ದಿತು.

೧೫೨–೧೫೩ ಭೂಮಿಯು ದಕ್ಷಿಣಭಾಗವು ಎತ್ತರವಾಗಿ ಎಲ್ಲರಿಗೂ ಭಯವನ್ನು ಉಂಟುಮಾಡುವುದಾಗಿ ಇದ್ದಿತು. ಆಗ ಮಹೇಶ್ವರನು ಭೂಮಿಯು ಹೀಗೆ ಇರುವು ದನ್ನು ನೋಡಿ ತನ್ನ ಭಕ್ತರಲ್ಲಿ ತಪಸ್ಸು ಮತ್ತು ಯೋಗಗಳಲ್ಲಿ ನಿಪುಣನಾಗಿ ಶ್ರೇಷ್ಠ

ಸ್ವಭಕ್ತಾನಾಮಗ್ರಗಣ್ಯಂ ತಪೋಯೋಗಸಮನ್ವಿತಂ ।
ಅಗಸ್ತ್ಯಂ ಚೋದಯಾಮಾಸ ಸ್ಥಾತುಂ ಮಲಯಪರ್ವತೇ ॥ ೧೫೪ ॥

ಶಿವಾಜ್ಞಾಂ ಶಿರಸಾ ಧೃತ್ವಾ ಕುಂಭಯೋನಿಸ್ತಥಾಕರೋತ್ ।
ತದಾ ಪ್ರಭೃತಿ ಭೂಮಿಶ್ಚ ಸುಸಮಾ ಸಮವಸ್ಥಿತಾ ॥ ೧೫೫ ॥

ತಸ್ಮಾತ್ಸ ಏವ ಮುಖ್ಯಶ್ಚ ಭಕ್ತಾನಾಂ ವಿದುಷಾಮಪಿ ।
ಯುಷ್ಮಾಕಮತುಲಪ್ರಶ್ನಂ ಶ್ರದ್ಧಯಾ ವಕ್ಷ್ಯತಿ ದ್ವಿಜಾಃ ॥ ೧೫೬ ॥

ಇತಿ ವ್ಯಾಸವಚಶ್ಶ್ರುತ್ವಾ ಮುನೀಂದ್ರಾಃ ಪ್ರೀತಿಸಂಯುತಾಃ ।
ಪುರೋಗಸ್ತ್ಯಂ ಸಮಾಲೋಕ್ಯ ಜಟಾಬಂಧವಿರಾಜಿತಂ ॥ ೧೫೭ ॥

ಶಿವಧ್ಯಾನರತಂ ಶಾಂತಂ ವೇದಶಾಸ್ತ್ರಮಹಾನಿಧಿಂ ।
ರುದ್ರಾಕ್ಷಮಾಲಾಭರಣಂ ಭಸ್ಮೋದ್ಧೂಳಿತವಿಗ್ರಹಂ ॥ ೧೫೮ ॥

---

ನಾದ ಅಗಸ್ತ್ಯನನ್ನು ಮಲಯಪರ್ವತದಲ್ಲಿ ವಾಸಮಾಡುವಂತೆ ಅಪ್ಪಣೆಮಾಡಿದನು. ಅಗಸ್ತ್ಯಋಷಿಯು ಶಿವನ ಅಪ್ಪಣೆಯನ್ನು ಶಿರಸಾವಹಿಸಿ ಅದೇಪ್ರಕಾರವಾಗಿ ನಡೆದು ಕೊಂಡನು. ಆಗಿನಿಂದಲೂ ಭೂಮಿಯು ಒಂದೇ ಸಮನಾದ ಮಟ್ಟಕ್ಕೆ ಬಂದಿತು.

೧೫೬–೧೫೮ ಆ ಅಗಸ್ತ್ಯಋಷಿಯೇ ಶಿವಭಕ್ತರಿಗೂ, ಜ್ಞಾನಿಗಳಿಗೂ ಮುಖ್ಯ ನಾಗಿರುವ ಕಾರಣ ಅವನೇ ನಿಮ್ಮ ಪ್ರಶ್ನೆಗೆ ಆದರದಿಂದ ಉತ್ತರವನ್ನು ಹೇಳುವನು. ವ್ಯಾಸಋಷಿಯ ಈ ಮಾತನ್ನು ಕೇಳಿದ ಕೂಡಲೆ ಋಷಿಗಳೆಲ್ಲರೂ ತಮ್ಮ ಎದುರಿಗೆ ಇರುವ ಅಗಸ್ತ್ಯಋಷಿಯನ್ನು ಬಹಳ ಸಂತೋಷದಿಂದ ಈಕ್ಷಿಸಿದರು. ಅಗಸ್ತ್ಯ ಋಷಿಯು ಜಟೆಯಿಂದ ಪ್ರಕಾಶಿಸುತ್ತಿದ್ದನು. ಇವನು ಶಿವನ ಧ್ಯಾನದಲ್ಲಿ ಆಸಕ್ತನಾಗಿ ರುತ್ತಿದ್ದನು. ಉಪಶಾಂತನಾಗಿ, ವೇದಶಾಸ್ತ್ರಗಳನ್ನು ತಿಳಿದುಕೊಂಡು ರುದ್ರಾಕ್ಷ ಮಾಲೆಯನ್ನು ಆಭರಣವಾಗಿ ಧರಿಸಿಕೊಂಡು, ಶರೀರಕ್ಕೆಲ್ಲಕ್ಕೂ ಭಸ್ಮವನ್ನು ಉದ್ಧೂ ಳನಮಾಡಿಕೊಂಡಿದ್ದನು.

**ಸುಪ್ರಸನ್ನಮುಖಾಂಭೋಜಂ ಸ್ವಭಾಸಾಭಾನುಸನ್ನಿಭಂ ।**
**ಪ್ರಣಮ್ಯ ಮುನಯಸ್ಸರ್ವೇ ತುಷ್ಟುವುಃ ಪರಯಾ ಮುದಾ ॥ ೧೫೯ ॥**

**ಜಯ ತ್ವಂ ಭಗವನ್ ಸ್ಕಂದಚರಣಾಸಕ್ತಮಾನಸ ।**
**ಜಯ ತ್ವಂ ಸ್ಕಂದಭಕ್ತಾನಾಮಗ್ರಗಣ್ಯ ಪುರಾತನ ॥ ೧೬೦ ॥**

**ಜಯ ತ್ವಂ ಸರ್ವವೇದಾಂತಪದ್ಮಾಕರದಿವಾಕರ ।**
**ಸ್ಕಂದವಿಜ್ಞಾನದೀಪಸ್ಯ ವರ್ತಿರ್ಭೂತ ಜಯ ಪ್ರಭೋ ॥ ೧೬೧ ॥**

**ಏವಂ ಸ್ತುತ್ವಾ ಮಹಾತ್ಮಾನಂ ಪುನಃ ಪ್ರಾಹುಶ್ಚ ತಂ ಮುನಿಂ ।**
**ಮಹರ್ಷೇ ಕುಂಭಯೋನೇ ತ್ವಂ ಸತ್ಯಮೀಶ್ವರಸನ್ನಿಭಃ ॥ ೧೬೨ ॥**

**ಸುಸಮಾನೀಕೃತಾ ಪೃಥ್ವೀ ತ್ವಯಾ ಮಲಯವಾಸಿನಾ ।**
**ಆಚಮ್ಯ ಚತುರಃ ಸಿಂಧೂನ್ಯಥಾ ಸ್ಥಾನಂ ವಿಮುಕ್ತವಾನ್ ॥ ೧೬೩ ॥**

**ವಿಂಧ್ಯಸ್ಯ ಸಂಸ್ತಂಭಯಿತಾ ಚಂದ್ರಾದಿತ್ಯನಿರೋಧಿನಃ ।**
**ಸಮಸ್ತಲೋಕಭಯದವಾತಾಪೀಲ್ವಲಭಕ್ಷಕ ॥ ೧೬೪ ॥**

---

೧೫೯–೧೬೦ ಪ್ರಸನ್ನವಾದ ಮುಖದಿಂದಕೂಡಿ, ಸೂರ್ಯನಂತೆ ತೇಜಶ್ಶಾಲಿಯಾಗಿ ಇರುವ ಅಗಸ್ತ್ಯನಿಗೆ ಋಷಿಗಳೆಲ್ಲರೂ ನಮಸ್ಕಾರಮಾಡಿ ಅವನನ್ನು ಸ್ತುತಿಮಾಡಿದರು. ಷಡ್ಗುಣೈಶ್ವರ್ಯಸಂಪನ್ನನಾದ ಎಲೈ, ಅಗಸ್ತ್ಯಮುನಿಯೆ ! ನೀನು ಕುಮಾರಸ್ವಾಮಿಯ ಚರಣಾರವಿಂದಗಳಲ್ಲಿ ಯಾವಾಗಲೂ ಲೀನವಾದ ಮನಸ್ಸುಳ್ಳವನಾಗಿಯೂ ವೇದಾಂತ ಶಾಸ್ತ್ರ ಜ್ಞಾನಪಾರಂಗತನಾಗಿಯೂ, ಇರುತ್ತಾ ಸರ್ವೋತ್ಕೃಷ್ಟನಾಗಿ ಜಯಶೀಲನಾಗಿ ಇರುವವನಾಗು '' ಹೀಗೆಂದು ಹೇಳಿ ಮಹಾಮಹಿಮನಾದ ಅವನ ಗುಣಗಳನ್ನು ಶ್ಲಾಘಿಸಿದರು.

೧೬೧–೧೬೪ " ಎಲೈ ಮಹರ್ಷಿಯೆ ! ನೀನು ಕುಂಭದಿಂದ ಹುಟ್ಟಿರುತ್ತೀಯೆ. ಶಿವನಿಗೆ ಸಮನಾದ ನೀನು ಮಲಯಪರ್ವತದಲ್ಲಿ ವಾಸಮಾಡುವುದರಿಂದ ಭೂಮಿಯು ಒಂದುಸಮನಾಗಿ ಇರುವಂತೆ ಮಾಡಿರುತ್ತೀಯೆ. ದೇವಕಾರ್ಯಕ್ಕಾಗಿ ನೀನು ನಾಲ್ಕು ಸಮುದ್ರಗಳನ್ನೂ ಪೂರ್ತಿಯಾಗಿ ಪಾನಮಾಡಿ, ಆ ಕಾರ್ಯವು ನೆರವೇರಿದನಂತರ ಅವುಗಳನ್ನು ಮೊದಲಿನಂತೆಯೇ ಹೊರಕ್ಕೆ ಬಿಟ್ಟಿರುತ್ತೀಯೆ. ಸೂರ್ಯಚಂದ್ರರಿಬ್ಬರನ್ನೂ ತಡೆದುಕೊಂಡು ಬೆಳೆದಿದ್ದ ವಿಂಧ್ಯಪರ್ವತವನ್ನು ಪುನಃ ವೃದ್ಧಿಯಾಗದಂತೆ ನಿಲ್ಲಿಸಿರುತ್ತೀಯೆ. ಲೋಕಗಳೆಲ್ಲಕ್ಕೂ ಭಯವನ್ನು ಉಂಟುಮಾಡುತ್ತಾ ಎಲ್ಲರನ್ನೂ ನಾಶಮಾಡುತ್ತಿದ್ದ ವಾತಾಪಿ ಮತ್ತು ಇಲ್ವಲ ಎಂಬ ದೈತ್ಯರನ್ನು ನಾಶಮಾಡಿರುತ್ತೀಯೆ.

ತಾಮ್ರಪರ್ಣೀಜಲೆ ನಿತ್ಯಂ ವಿಧಾಯ ಸ್ನಾನ ಮುತ್ತಮಂ ।
ಭಸ್ಮಸ್ನಾನಂ ತತಃ ಕೃತ್ವಾ ನಿತ್ಯಕೃತ್ಯಂ ಸಮಾಪ್ಯ ಚ ॥ ೧೬೫ ॥

ತ್ರಿಕಾಲಂ ನಿಯಮೇನೈವ ಕರೋಷೀಶ್ವರಪೂಜನಂ ।
ಮಹೇಶ್ವರಾನ್ಮೂಲಸೂತ್ರಮಧಿಗಮ್ಯ ತ್ವಯಾ ಪುರಾ ॥ ೧೬೬ ॥

ಅಂಗೀಕೃತ್ಯ ಚ ತನ್ಮೂಲಂ ತದ್ಗತೇನೈವ ವರ್ತ್ಮನಾ ।
ಭಾಷಾಂ ದ್ರಾವಿಡಜಾತೀನಾಂ ನಾದೋತ್ಪತ್ತಿಂ ತತಃ ಪರಂ ॥ ೧೬೭ ॥

ವರ್ಣೋತ್ಪತ್ತಿಂ ತತಃ ಪಶ್ಚಾತ್ತಸ್ಯಾರ್ಥವಿವೃತಿಂ ತತಃ ।
ಅಲಂಕಾರರಸೈರ್ಯುಕ್ತಂ ವೃತ್ತಾನಾಂ ಲಕ್ಷಣಂ ಪರಂ ॥ ೧೬೮ ॥

ಏತತ್ಸರ್ವಂ ಭವಾನೇವ ಚಕ್ರೇ ಲೋಕೋಪಕಾರತಃ ।
ತಸ್ಮಾತ್ತ್ವಮೇವ ಮುಖ್ಯಶ್ಚ ಸರ್ವೇಷಾಂ ತು ಮಹಾತ್ಮನಾಂ ॥ ೧೬೯ ॥

ಶಿವಕ್ಷೇತ್ರಾಣಿ ಸರ್ವಾಣಿ ತೀರ್ಥಾನಿ ಸಕಲಾನ್ಯಪಿ ।
ಸ್ವಾಯಂಭುವಾದಿಲಿಂಗಾನಿ ವಿವಿಧಾನಿ ಮಹಾಂತ್ಯಪಿ । ॥ ೧೭೦ ॥

---

೧೬೫–೧೬೯ ನೀನು ತಾಮ್ರಪರ್ಣೀ ಎಂಬ ನದಿಯ ನೀರಿನಲ್ಲಿ ದಿನಂ ಪ್ರತಿಯೂ ಸ್ನಾನಮಾಡಿ ನಿನ್ನ ನಿತ್ಯಕರ್ಮಗಳನ್ನು ನೆರವೇರಿಸಿಕೊಂಡು ಪ್ರಾತಃಕಾಲ ಮೊದಲುಗೊಂಡು ಮೂರು ಕಾಲಗಳಲ್ಲಿಯೂ ಶಿವನನ್ನು ಆರಾಧಿಸುತ್ತಾ ಇರುತ್ತೀಯೆ. ದೇವದೇವನಾದ ಶಿವನಿಂದ ದ್ರಾವಿಡಭಾಷೆಗೆ ಮೂಲಸೂತ್ರಗಳನ್ನು ಹೊಂದಿ ಆ ಭಾಷೆಯ ವ್ಯಾಕರಣವನ್ನು ರಚಿಸಿರುತ್ತೀಯೆ. ಈ ವ್ಯಾಕರಣಶಾಸ್ತ್ರದ ಗ್ರಂಥದಲ್ಲಿ ನಾದೋತ್ಪತ್ತಿಕ್ರಮ, ವರ್ಣಗಳ ಉತ್ಪತ್ತಿಕ್ರಮ, ವರ್ಣಗಳಿಗೆ ಅರ್ಥವಿವರಣೆ, ಅಲಂಕಾರ, ರಸ ಇವುಗಳಿಂದ ಕೂಡಿರುವ ಲಕ್ಷಣಗಳು, ಛಂದಸ್ಸಿನ ಲಕ್ಷಣ; ಇವುಗಳನ್ನು ವಿಸ್ತಾರವಾಗಿ ನಿರೂಪಿಸಿರುತ್ತೀಯೆ. ಇವೆಲ್ಲವೂ ನೀನು ಲೋಕೋಪಕಾರಕ್ಕಾಗಿ ಮಾಡಿರುವ ಮಹತ್ಕಾರ್ಯಗಳಾಗಿರುತ್ತವೆ. ಆದ್ದರಿಂದ ಮಹಾತ್ಮರಾದವರಲ್ಲಿ ಮೊದ್ಲವನಾಗಿರುತ್ತೀಯೆ.

೧೭೦–೧೭೧ ನೀನು ಶಿವನಿಗೆ ಸಂಬಂಧಪಟ್ಟ ಕ್ಷೇತ್ರಗಳೆಲ್ಲವನ್ನೂ ತಿಳಿದಿರುವಂತೆಯೇ ಶಿವನ ಅನುಗ್ರಹದಿಂದ ಶಿವತೀರ್ಥಗಳು, ಸ್ವಯಂಭುಲಿಂಗವೇ ಮೊದಲಾದ ನಾನಾವಿಧವಾದ ಮಹಿಮೆಯುಳ್ಳ ಶಿವಲಿಂಗಗಳು ಇವುಗಳನ್ನು ತಿಳಿದು ಇರುತ್ತೀಯೆ. ಅವುಗಳಲ್ಲಿ ಭುಕ್ತಿಯನ್ನೂ, ಮುಕ್ತಿಯನ್ನೂ ಉಂಟುಮಾಡುವ ಉತ್ತಮವಾದ ಶಿವ

ವೇತ್ಸಿ ಶಂಭೋಃ ಪ್ರಸಾದೇನ ತೇಷಾಂ ಮಧ್ಯೇ ಮಹತ್ತರಂ ।
ಕ್ಷೇತ್ರಂ ತೀರ್ಥಂ ಲಿಂಗವರಂ ಭುಕ್ತಿಮುಕ್ತಿಪ್ರದಾಯಕಂ ॥ ೧೭೧ ॥

ವಕ್ತುಮರ್ಹಸಿ ಸರ್ವಜ್ಞ ಮಹತ್ಕೌತೂಹಲಂ ಹಿ ನಃ ।
ಇತಿ ತೇಷಾಂ ವಚಃ ಶ್ರುತ್ವಾ ಕುಂಭಯೋನಿರ್ಮಹಾತಪಾಃ ॥ ೧೭೨ ॥

ಅಂಗೇಷ್ವಶೇಷೇಷ್ವಧಿಕಸಂಪ್ರಾಪ್ತ ಪುಲಕಾಂಕುರಃ ।
ಸ್ಯಂದತ್ಸಲಿಲಯಾ ದೃಷ್ಟ್ಯಾ ಮಂದಸ್ಮೇರಮನೋಹರಃ ॥ ೧೭೩ ॥

ಹರ್ಷಗದ್ಗದಯಾ ವಾಚಾ ಪ್ರೋವಾಚ ಮುನಿಸತ್ತಮಾನ್ ।
ಯುಕ್ತಂ ಯುಷ್ಮಾಭಿರಧುನಾ ಪ್ರಶ್ನಃ ಪೃಷ್ಟೋ ಮಹತ್ತರಃ ॥ ೧೭೪ ॥

ಅಹಂ ವಕ್ಷ್ಯಾಮಿ ತತ್ಸರ್ವಂ ಶೃಣುಧ್ವಮವಧಾನತಃ ।
ಇತ್ಯುಕ್ತ್ವಾ ಕುಂಭಸಂಭೂತಸ್ಸಮಾಹಿತಮನಾ ಮುದಾ ॥ ೧೭೫ ॥

ಧ್ಯಾತ್ವಾ ವಿಘ್ನೇಶ್ವರಂ ದೇವಂ ಸ್ವಗುರುಂ ಚ ಷಡಾನನಂ ।
ಶ್ರೀಹಾಲಾಸ್ಯೇಶ್ವರಂ ಲಿಂಗಂ ಮನೋಜ್ಞಾಂ ಶಫರೇಕ್ಷಣಾಂ ॥ ೧೭೬ ॥

---

ಕ್ಷೇತ್ರ, ತೀರ್ಥ ಮತ್ತು ಶಿವಲಿಂಗ ಇವುಗಳನ್ನು ತಿಳಿಯಲು ನಾವುಗಳು ಕುತೂಹಲವುಳ್ಳವರಾಗಿ ಇರುವೆವು. ಅದನ್ನು ದಯೆಯಿಂದ ಸರ್ವಜ್ಞನಾದ ನೀನು ನಮಗೆ ತಿಳಿಸು. ಎಂದು ಮುನಿಗಳು ಅಗಸ್ತ್ಯಋಷಿಯನ್ನು ಪ್ರಾರ್ಥಿಸಿದರು.

೧೭೨-೧೭೫. ಆಗ ಅಗಸ್ತ್ಯಋಷಿಯು, ಅವರ ಮಾತನ್ನು ಕೇಳಿದ ನಂತರ ತನ್ನ ಬಹಳ ಹೆಚ್ಚಾದ ತಪಸ್ಸಿನ ಮಹಿಮೆಯಿಂದ, ಶಿವನ ಸ್ಮರಣೆಯಿಂದ ರೋಮಾಂಚಿತ ಶರೀರವುಳ್ಳವನಾಗಿ, ಆನಂದಭಾಷ್ಪಗಳಿಂದಕೂಡಿದ ದೃಷ್ಟಿಯಿಂದ ಈ ಋಷಿಗಳನ್ನು ನೋಡುತ್ತಾ ಸಂತೋಷದಿಂದ ಉಂಟಾದ ವಿಕಾರ ಧ್ವನಿಯಿಂದ ಈ ಮುನಿಗಳ ಸಂಗಡ ಮಾತನಾಡಿದನು. ಆ ಮುನಿಯು, "ಈಗ ನೀವು ಕೇಳಿರುವ ಪ್ರಶ್ನೆಯು ಬಹಳ ಮಹತ್ತರವಾದದ್ದು. ನಾನು ಅದೆಲ್ಲವನ್ನೂ ನಿಮಗೆ ವಿಸ್ತಾರವಾಗಿ ಹೇಳುವೆನು. ನೀವುಗಳು ಜಾಗರೂಕರಾಗಿ ಕೇಳಿ ತಿಳಿದುಕೊಳ್ಳಿರಿ" ಎಂದು ಹೇಳಿ ಸಂತೋಷದಿಂದ, ಏಕಾಗ್ರತೆಯನ್ನು ಹೊಂದಿದ ಮನಸ್ಸುಳ್ಳವನಾದನು.

೧೭೬-೧೭೯, ಆಗ ಅಗಸ್ತ್ಯಋಷಿಯು, ವಿಘ್ನೇಶ್ವರನನ್ನು ಧ್ಯಾನಮಾಡಿ, ತನಗೆ ಗುರುವಾದ ಷಣ್ಮುಖನಿಗೂ, ಹಾಲಾಸ್ಯೇಶ್ವರನೆಂಬ ಲಿಂಗಕ್ಕೂ, ಮನೋಹರಳಾದ ಮೀನಾಕ್ಷೀದೇವಿಗೂ, ಭಕ್ತಿಯಿಂದ ನಮಸ್ಕಾರ ಮಾಡಿದನು. ಮೂಲ ಮಂತ್ರವಾದ ಷಡಕ್ಷರ ಮಂತ್ರವನ್ನು ಜಪಮಾಡಿಕೊಂಡನು. ದಿವ್ಯದೃಷ್ಟಿಯನ್ನು

ಭಕ್ತ್ಯಾ ಪ್ರಣಮ್ಯ ಸಂಪ್ರಾರ್ಥ್ಯ ಮಂತ್ರಮಾದ್ಯಂ ಷಡಕ್ಷರಂ ।
ಜಪ್ತ್ವಾ ಚ ದಿವ್ಯದೃಷ್ಟ್ಯಾ ತು ನಿರೀಕ್ಷ್ಯ ಮುನಿಪುಂಗವಾನ್ ॥ ೧೭೭ ॥

ಕೃತಪ್ರಣಾಮೋ ಮುನಿಭಿಃ ಕುಂಭಯೋನಿರ್ಮುನೀಶ್ವರಃ ।
ವಕ್ತುಮಾರಭತೇ ಸರ್ವಂ ಸರ್ವಲೋಕಹಿತಾವಹಂ ॥೧೭೮ ॥

ಪ್ರಶ್ನಾಧ್ಯಾಯಮಿದಂ ಪುಣ್ಯಂ ಶೃಣುಯಾದ್ಯಸ್ಸಮಾಹಿತಃ ।
ಗಂಗಾಸ್ನಾನಫಲಂ ಲಬ್ಧ್ವಾ ಸರ್ವಪಾಪೈಃ ಪ್ರಮುಚ್ಯತೇ ॥ ೧೭೯ ॥

ಇತಿ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ ಮಾಹಾತ್ಮ್ಯೇ ಪ್ರಶ್ನವಿಧಿರ್ನಾಮ ಪ್ರಥಮೋಽಧ್ಯಾಯಃ.

---

ಹೊಂದಿ ಋಷಿಗಳೆಲ್ಲರನ್ನೂ ನೋಡಿದನು. ಆಗ ಋಷಿಗಳೆಲ್ಲರೂ ಇವನಿಗೆ ನಮಸ್ಕಾರ ಮಾಡಿದರು. ಅನಂತರದಲ್ಲಿ ಅಗಸ್ತ್ಯಮುನೀಶ್ವರನು ಲೋಕಗಳಹಿತಕ್ಕಾಗಿ ಎಲ್ಲವನ್ನೂ ಹೇಳಲು ಉಪಕ್ರಮ ಮಾಡಿದನು. ಪುಣ್ಯಕರವಾದ ಈ ಪ್ರಶ್ನಾಧ್ಯಾಯವನ್ನು ಭಕ್ತಿಯಿಂದ ಕೇಳಿದವನು ಗಂಗಾಸ್ನಾನದ ಫಲವನ್ನು ಹೊಂದಿ ತನ್ನ ಪಾಪಗಳೆಲ್ಲವನ್ನೂ ಕಳೆದುಕೊಳ್ಳುವನು.

ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯೆಯಲ್ಲಿ
ಪ್ರಶ್ನವಿಧಿ ಎಂದು ಹೆಸರುಳ್ಳ ಮೊದಲನೆಯ
ಅಧ್ಯಾಯವು ಮುಗಿದುದು



|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ

## ದ್ವಿತೀಯೋಽಧ್ಯಾಯಃ

|| ಅಗಸ್ತ್ಯ ಉವಾಚ ||

**ಶೃಣುಧ್ವಮೃಷಯಸ್ಸರ್ವೇ ಭಾಗ್ಯವಂತಃ ಸಮಾಹಿತಾಃ ।**
**ಶ್ರವಣಾತ್ಸರ್ವಪಾಪಘ್ನಂ ಕ್ಷೇತ್ರತೀರ್ಥೇಶವೈಭವಂ || ೧ ||**

**ಏತತ್ಸರ್ವಂ ಭಗವತಾ ದೇವ್ಯಾ ಪೃಷ್ಟೇನ ಶಂಭುನಾ ।**
**ಸರ್ವಜ್ಞೇನ ಪುರಾ ಪ್ರೋಕ್ತಂ ದೇವ್ಯಾಶ್ಚಾಂಕೇ ತದಾ ಸ್ಥಿತಃ || ೨ ||**

---

### ಎರಡನೆಯ ಅಧ್ಯಾಯವು.

೧-೨ ಅಗಸ್ತ್ಯ ಋಷಿಯು ಹೇಳಿದನು :—ಎಲೈ ಋಷಿಗಳಿರಾ ನೀವುಗಳು ಬಹಳ ಅದೃಷ್ಟಶಾಲಿಗಳಾಗಿರುತ್ತೀರಿ. ಕೇಳಿದ ಮಾತ್ರದಿಂದಲೇ ಎಲ್ಲಾ ವಿಧವಾದ ಪಾಪಗಳನ್ನೂ ನಾಶಮಾಡುವ ಕ್ಷೇತ್ರವನ್ನೂ, ಉತ್ತಮವಾದ ತೀರ್ಥದ ಮಹಿಮೆಯನ್ನೂ ಹೇಳುವೆನು. ನೀವು ಸಮಾಧಾನವಾದ ಮನಸ್ಸಿನಿಂದ ಕೇಳಿರಿ. ಪೂರ್ವದಲ್ಲಿ ದೇವಿಯಾದ ಪಾರ್ವತಿಯು ಶಿವನನ್ನು ಕುರಿತು ಇದೇ ಪ್ರಶ್ನೆಯನ್ನು ಕೇಳಿದಳು. ಆಗ ಪೂಜ್ಯನಾದ, ಸರ್ವಜ್ಞನಾದ ಶಿವನು ಹೇಳಿದ್ದೆಲ್ಲವನ್ನೂ ದೇವಿಯ ಉತ್ಸಂಗದಲ್ಲಿ

ಕುಮಾರಶ್ಶ್ರುತವಾನ್ಸರ್ವಂ ಧಿಯಾ ವಿಮಲಯಾ ಯುತಃ ।
ಸ್ವಭಕ್ತೇನ ಮಯಾ ಪೃಷ್ಟಸ್ಸರ್ವಜ್ಞಶ್ಶಿಖಿವಾಹನಃ ॥ ೩ ॥

ಕಥಯಾಮಾಸ ಸಂಪ್ರೀತ್ಯಾ ಭಗವಾನ್ಭಕ್ತವತ್ಸಲಃ ।
ತತ್ಸರ್ವಂ ಕಥಯಾಮ್ಯದ್ಯ ಯುಷ್ಮಾಕಂ ಮುನಿಪುಂಗವಾಃ ॥ ೪ ॥

ಕ್ಷೇತ್ರಂ ಹಾಲಾಸ್ಯಸದೃಶಂ ತೀರ್ಥಂ ಹೇಮಾಬ್ಜಿನೀಸಮಂ ।
ಲಿಂಗಂ ಶ್ರೀಸುಂದರೇಶೇನ ತುಲ್ಯಂ ನಾಸ್ತಿ ಜಗತ್ತ್ರಯೇ ॥ ೫ ॥

ಅಥ ಕ್ಷೇತ್ರಸ್ಯ ಮಾಹಾತ್ಮ್ಯಂ ಸಂಗ್ರಹೇಣ ವದಾಮ್ಯಹಂ ।
ಭುವನೇಷು ಚ ಸರ್ವೇಷು ಪುಣ್ಯಕ್ಷೇತ್ರಂ ವಿಶಿಷ್ಯತೇ ॥ ೬ ॥

ಪುಣ್ಯಕ್ಷೇತ್ರೇಷು ಸರ್ವೇಷು ಶಿವಕ್ಷೇತ್ರಂ ಪರಂ ವಿದುಃ ।
ಅಷ್ಟಷಷ್ಟಿಮಹಾಕ್ಷೇತ್ರಂ ತೇಷಾಂ ಮಧ್ಯೇ ಮಹತ್ತರಂ ॥ ೭ ॥

ಕುಳಿತುಕೊಂಡಿದ್ದ ಕುಮಾರಸ್ವಾಮಿಯು ಕೇಳಿ ಚೆನ್ನಾಗಿ ತಿಳಿದುಕೊಂಡನು. ನಾನು ಅವನನ್ನು ಈ ವಿಷಯವನ್ನು ಪ್ರಶ್ನೆ ಮಾಡಿದೆನು. ಸರ್ವಜ್ಞನಾದ, ಮಯೂರ ವಾಹನನಾದ ಷಣ್ಮುಖನು ತನ್ನ ಭಕ್ತರಲ್ಲಿ ಬಹಳ ಪ್ರೀತಿಯುಳ್ಳವನಾದ್ದರಿಂದ, ಭಕ್ತ ನಾದ ನನಗೆ ಇದೆಲ್ಲವನ್ನೂ ಪ್ರೀತಿಯಿಂದ ಹೇಳಿರುವನು.

೪–೭ ಈಗ ನಾನು ನಿಮಗೋಸ್ಕರವಾಗಿ ಅದೆಲ್ಲವನ್ನೂ ಹೇಳುವೆನು. ಹಾಲಾಸ್ಯಕ್ಷೇತ್ರಕ್ಕೆ ಸಮನಾದ ಕ್ಷೇತ್ರವೂ, ಹೇಮಾಬ್ಜಿನೀ ತೀರ್ಥಕ್ಕೆ ಸಮನಾದ ತೀರ್ಥವೂ, ಸುಂದರೇಶ್ವರನಿಗೆ ಸಮನಾದ ಶಿವಲಿಂಗವೂ, ಮೂರು ಲೋಕಗಳಲ್ಲಿಯೂ ಇಲ್ಲವು. ಇನ್ನು ಮುಂದೆ ಈ ಕ್ಷೇತ್ರದ ಮಹಿಮೆಯನ್ನು (ವಿವರಿಸುವೆನು) ಸಂಕ್ಷೇಪವಾಗಿ ಹೇಳುವೆನು. ಈ ಭೂಮಿಯಲ್ಲಿ ಪ್ರಾಯಿಕವಾಗಿ ಪುಣ್ಯಕ್ಷೇತ್ರಗಳಿಗೆ ಮಹಿಮೆಯು ಹೆಚ್ಚಾಗಿರುವುದು. ಪುಣ್ಯಕ್ಷೇತ್ರಗಳೆಲ್ಲದರಲ್ಲಿಯೂ, ಶಿವಕ್ಷೇತ್ರಗಳು ಉತ್ತಮವಾದವುಗಳು. ಈ ಪ್ರಕಾರದಿಂದ ಇರುವ ಶಿವಕ್ಷೇತ್ರಗಳು ಅರುವತ್ತೆಂಟು ಇರುವವು.

**ತೇಷು ಷೋಡಶ ಮುಖ್ಯಾನಿ ಕೈಲಾಸಪ್ರಮುಖಾನಿ ಚ ।**
**ತೇಷು ಚತ್ವಾರಿ ಮುಖ್ಯಾನಿ ಕ್ಷೇತ್ರಾಣಿ ಮುನಿಪುಂಗವಾಃ ॥ ೮ ॥**

**ತಾನಿ ಕ್ರಮೇಣ ವಕ್ಷ್ಯಾಮಿ ಕಾಶೀಕ್ಷೇತ್ರಾದಿಕಾನಿ ಚ ।**
**ಶ್ರೀಮದ್ವಾರಾಣಸೀ ಪುಣ್ಯಾ ದೇಹಾಂತೇ ಮುಕ್ತಿದಾಯಿನೀ ॥ ೯ ॥**

**ವಿಶ್ವೇಶ್ವರಮಹಾಲಿಂಗಸಾನ್ನಿಧ್ಯಾತ್ಸರ್ವಸಿದ್ಧಿದಾ ।**
**ಶ್ರೀಮದ್ದಕ್ಷಿಣಕೈಲಾಸೋ ಭಕ್ತಾನಾಂ ಭುಕ್ತಿಮುಕ್ತಿದಃ ॥ ೧೦ ॥**

**ಕಾಳಹಸ್ತೀಶ್ವರಂ ಲಿಂಗಂ ತತ್ರಾಸ್ತಿ ಸುರಸೇವಿತಂ ।**
**ಪುಂಡರೀಕಪುರಂ ರಮ್ಯಂ ದರ್ಶನಾದ್ಭುಕ್ತಿಮುಕ್ತಿದಂ ॥ ೧೧ ॥**

**ಅನಂದತಾಂಡವಂ ಕೃತ್ವಾ ತತ್ರಾಸ್ತೇ ಭಗವಾನ್ ಶಿವಃ ।**
**ಶ್ರೀಹಾಲಾಸ್ಯಂ ಶಿವಕ್ಷೇತ್ರಂ ಶ್ರವಣಾತ್ಸರ್ವಸಿದ್ಧಿದಂ ॥ ೧೨ ॥**

---

೮-೯ ಅವುಗಳಲ್ಲಿ ಕೈಲಾಸಪರ್ವತವೇ ಮೊದಲಾದ ಹದಿನಾರು ಕ್ಷೇತ್ರಗಳು ಮುಖ್ಯವಾದುವು. ಅವುಗಳಲ್ಲಿಯೂ ನಾಲ್ಕು ಕ್ಷೇತ್ರಗಳು ಬಹಳ ಮುಖ್ಯವಾದುವುಗಳು. ಈ ಪ್ರಕಾರದಿಂದ ಇರುವ ಕಾಶೀಕ್ಷೇತ್ರವೇ ಮೊದಲಾದ ನಾಲ್ಕು ಕ್ಷೇತ್ರಗಳನ್ನೂ ಕ್ರಮವಾಗಿ ವಿವರಿಸಿ ಹೇಳುವೆನು. ಮೊದಲನೆಯದಾದ ವಾರಾಣಸೀ ಕ್ಷೇತ್ರದಲ್ಲಿ ವಿಶ್ವೇಶ್ವರನೆಂದು ಹೆಸರುಳ್ಳ ಮಹಾಲಿಂಗದಸಾನ್ನಿಧ್ಯವು ಇರುವುದರಿಂದ ಆ ಕ್ಷೇತ್ರವು ಇಷ್ಟಸಿದ್ಧಿಯನ್ನು ಉಂಟುಮಾಡುವುದಲ್ಲದೆ, ದೇಹಾಂತದಲ್ಲಿ ಮುಕ್ತಿಯನ್ನು ಉಂಟುಮಾಡುವುದು.

೧೦-೧೧ ಎರಡನೆಯದಾದ ದಕ್ಷಿಣ ಕೈಲಾಸ ಕ್ಷೇತ್ರದಲ್ಲಿ ದೇವಪೂಜಿತವಾದ ಕಾಳಹಸ್ತೀಶ್ವರಲಿಂಗವು ಇರುವುದು. ಇದರ ಮಹಿಮೆಯಿಂದ ಭಕ್ತರಿಗೆಲ್ಲರಿಗೂ ಭುಕ್ತಿ, ಮತ್ತು ಮುಕ್ತಿಗಳು ದೊರೆಯುವುವು. ಪುಂಡರೀಕಪುರವೆಂಬ ಕ್ಷೇತ್ರವು ಇರುವುದು. ಅಲ್ಲಿ ಷಡ್ಗುಣೈಶ್ವರ್ಯ ಸಂಪನ್ನನಾದ ಶಿವನು ಆನಂದದಿಂದ ತಾಂಡವ ನೃತ್ಯವನ್ನು ಮಾಡುತ್ತಿರುವನು. ಈ ಕ್ಷೇತ್ರವೂ ಬಹಳ ಮನೋಹರವಾಗಿ ದರ್ಶನ ಮಾತ್ರದಿಂದಲೇ ಭುಕ್ತಿಮುಕ್ತಿ ಪ್ರದವಾಗಿರುವುದು.

೧೨-೧೩ ಸಂಪದ್ಯುಕ್ತವಾದ ಹಾಲಾಸ್ಯವೆಂದು ಹೆಸರಿನಿಂದ ಪ್ರಸಿದ್ಧವಾದ ಕ್ಷೇತ್ರವು (ಶ್ರವಣ ಮಾತ್ರದಿಂದ) ಕ್ಷೇತ್ರದ ಹೆಸರನ್ನು ಕೇಳಿದ ಮಾತ್ರದಿಂದಲೇ ಎಲ್ಲಾ ವಿಧವಾದ ಸಿದ್ಧಿಯನ್ನೂ ಉಂಟುಮಾಡುವುದು. ಈ ಕ್ಷೇತ್ರದಲ್ಲಿ ಸ್ವಯ

**ತತ್ರ ಸ್ವಾಯಂಭುವಂ ಲಿಂಗಂ ಸೋಮಸುಂದರಸಂಜ್ಞಿತಂ ।**
**ಬ್ರಹ್ಮವಿಷ್ಣುಮಹೇಂದ್ರಾದ್ಯೈಃ ಪೂಜಿತಂ ಸರ್ವಸಿದ್ಧಿದಂ ॥ ೧೩ ॥**

**ಏತೇಷಾಂ ಚ ಪ್ರಸಿದ್ಧಾನಾಂ ಸ್ಥಾನಾನಾಂ ತು ಚಿರಂತನಂ ।**
**ವಿಶಿಷ್ಟಂ ತತ್ಪುನಃ ಕ್ಷೇತ್ರಂ ಶ್ರೀಮದ್ಧಾಲಾಸ್ಯಸಂಜ್ಞಿತಂ ॥ ೧೪ ॥**

**ಹೇಮಪದ್ಮಾಕರಂ ತೀರ್ಥಂ ಪಾಪೇಂಧನಧನಂಜಯಂ ।**
**ತತ್ರಾಸ್ತಿ ಸರ್ವತೀರ್ಥಾನಾಮಧಿಕಂ ಪರಮಾದ್ಭುತಂ ॥ ೧೫ ॥**

**ಸ್ವಾಯಂಭುವಸ್ಯ ಲಿಂಗಸ್ಯ ವೈಶಿಷ್ಟ್ಯಾತ್ತೀರ್ಥವೈಭವಾತ್ ।**
**ತಸ್ಯ ಕ್ಷೇತ್ರಸ್ಯ ಮಹಾತ್ಮ್ಯಾತ್ಸಾಂಬಃ ಪರತರಃ ಶಿವಃ ॥ ೧೬ ॥**

**ಸಾನ್ನಿಧ್ಯಂ ಕುರುತೇ ತತ್ರ ತಸ್ಮಾತ್ಕ್ಷೇತ್ರಂ ಪರಾತ್ಪರಂ ।**
**ಇತ್ಯುಕ್ತಾಃ ಕುಂಭಜೇನಾಥ ತೇ ಸರ್ವೇ ಮುನಿಪುಂಗವಾಃ ॥ ೧೭ ॥**

---

ಮುದ್ಭವವಾದ ಸೋಮಸುಂದರನೆಂದು ಹೆಸರುಳ್ಳ ಶಿವಲಿಂಗವು ಇರುವುದು. ಈ ಶಿವಲಿಂಗವನ್ನು ಬ್ರಹ್ಮ, ವಿಷ್ಣು, ಮಹೇಂದ್ರನೇ ಮೊದಲಾದ ದೇವತೆಗಳೂ ಪೂಜಿಸುವರು. ಈ ಶಿವಲಿಂಗವು ಭಕ್ತರಿಗೆ ಎಲ್ಲಾ ವಿಧವಾದ ಸಿದ್ಧಿಯನ್ನೂ ಉಂಟು ಮಾಡುವದು.

೧೪-೧೫ ಶಿವಕ್ಷೇತ್ರಗಳಾದ ವಾರಣಾಸೀ, ದಕ್ಷಿಣಕೈಲಾಸ, ಪುಂಡರೀಕಪುರ, ಹಾಲಾಸ್ಯ ನಗರವೆಂಬ ಈ ನಾಲ್ಕರಲ್ಲಿಯೂ, ಈ ಹಾಲಾಸ್ಯಕ್ಷೇತ್ರವು ಮಿಕ್ಕವುಗಳಿಗಿಂತ ಹೆಚ್ಚು ಮಹಿಮೆಯುಳ್ಳದ್ದಾಗಿ, ಪುರಾತನವಾಗಿರುವುದು. ಹೇಮಪದ್ಮಾಕರವೆಂಬ ತೀರ್ಥವು ಅಗ್ನಿಯು ಕಟ್ಟಿಗೆಯನ್ನು ಭಸ್ಮಮಾಡುವ ಹಾಗೆ ಪಾತಕಗಳೆಲ್ಲವನ್ನೂ ನಾಶಮಾಡುವುದು. ಆ ತೀರ್ಥದಲ್ಲಿ ಎಲ್ಲಾ ತೀರ್ಥಗಳೂ ಸೇರಿ ಇರುವುವು. ಇದರಿಂದ ಈ ತೀರ್ಥವು ಆಶ್ಚರ್ಯಕರವಾಗಿಯೂ, ಎಲ್ಲಕ್ಕಿಂತಲೂ ಅಧಿಕವಾದದ್ದಾಗಿಯೂ ಇರುವುದು.

೧೬-೧೭ ಸ್ವಯಂ ಉದ್ಭವವಾಗಿರುವ ಶಿವಲಿಂಗವೂ, ಎಲ್ಲಾ ತೀರ್ಥಗಳಿಂದಲೂ ಕೂಡಿರುವ ತೀರ್ಥವೂ, ಮತ್ತು ಈ ಕ್ಷೇತ್ರವೂ ಕೂಡಿರುವುದರಿಂದ ಈ ಮೂರರ ಮಹಿಮೆಯನ್ನು ಸರ್ವೋತ್ಕೃಷ್ಟನಾದ ಶಿವನು ತಿಳಿದುಕೊಂಡು ಈ ಹಾಲಾಸ್ಯಕ್ಷೇತ್ರದಲ್ಲಿ ತಾನೂ ನೆಲಸಿರುವನು. ಆದ್ದರಿಂದ ಈ ಕ್ಷೇತ್ರದ ಮಹಿಮೆಯು ಮಿಕ್ಕ ಕ್ಷೇತ್ರಗಳಿಗಿಂತ ಅತಿಶಯವಾಗಿ ಇರುವುದು." ಈ ಪ್ರಕಾರವಾಗಿ ಹೇಳುತ್ತಿರುವ ಮುನೀಶ್ವರನಾದ ಅಗಸ್ತ್ಯಋಷಿಯ ಮಾತನ್ನು ಕೇಳಿ ಆ ಋಷಿಗಳೆಲ್ಲರೂ ತಮ್ಮ ಸಂದೇಹವನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿ ಪ್ರಶ್ನೆ ಮಾಡಿದರು.

**ಪುನರ್ವಿಜ್ಞಾಪಯಾಮಾಸುಸ್ಸಂದೇಹವಿನಿವೃತ್ತಯೇ ।**

**॥ ಋಷಯ ಊಚುಃ ॥**

**ಭಗವನ್ ಕ್ಷೇತ್ರತತ್ತ್ವಜ್ಞ ಕುಂಭಯೋನೇ ಮುನೀಶ್ವರ ।**
**ಕಥಂ ಭಗವತಾ ಪ್ರೋಕ್ತಂ ಶ್ರೀಮದ್ಧಾಲಾಸ್ಯಸಂಜ್ಞಿತಂ　　॥ ೧೮ ॥**

**ಕಾಶ್ಯಾದಿಸರ್ವಕ್ಷೇತ್ರಾಣಾಮಧಿಕಂ ಚೋತ್ತಮೋತ್ತಮಂ ।**
**ಇತಿ ಪೃಷ್ಟೋ ಮುನಿವರೈಸ್ತದಾ ವಕ್ತುಂ ಪ್ರಚಕ್ರಮೇ　　॥ ೧೯ ॥**

**॥ ಅಗಸ್ತ್ಯ ಉವಾಚ ॥**

**ಸಾಧು ಪೃಷ್ಟಂ ಹಿ ಯುಷ್ಮಾಭಿರ್ವಿಶೇಷಜ್ಞೈರ್ಬಹುಶ್ರುತೈಃ ।**
**ಕಥಯಾಮಿ ವಿಶೇಷೇಣ ಯಥಾ ಸ್ಕಂದೇನ ಭಾಷಿತಂ　　॥ ೨೦ ॥**

**ಬ್ರಹ್ಮಣೋ ದ್ವಾದಶಾಂ ತತ್ವಾದ್ಭೂಲೋಕಶಿವಲೋಕತಃ**
**ಶಂಭೋಸ್ತು ಲೀಲಾಸ್ಥಾನತ್ವಾತ್ ಕ್ಷೇತ್ರಮೇತತ್ಪರಾತ್ಪರಂ　　॥ ೨೧ ॥**

---

೧೮–೧೯　ಮುನಿಗಳು ಹೇಳಿದರು :– "ಕ್ಷೇತ್ರಗಳ ತತ್ತ್ವವನ್ನು ತಿಳಿದಿರುವ ಪೂಜ್ಯನಾದ ಅಗಸ್ತ್ಯಮುನೀಶ್ವರನೇ, ಈ ಹಾಲಾಸ್ಯ ಕ್ಷೇತ್ರವು ಕಾಶಿಯೇ ಮುಂತಾದ ಎಲ್ಲಾ ಶಿವಕ್ಷೇತ್ರಗಳಿಗಿಂತಲೂ ಹೆಚ್ಚಾದದ್ದೆಂದು ನೀನು ಹೇಳಿರುತ್ತೀಯೆ. ಇದು ಹೇಗೆ ಎಂಬುದನ್ನು ತಿಳಿಸು." ಆಗ ಅಗಸ್ತ್ಯ ಋಷಿಯು ಮಿಕ್ಕ ಋಷಿಗಳ ಮಾತನ್ನು ಕೇಳಿ, ಅವರಿಗೆ ಉತ್ತರವನ್ನು ಹೇಳಲು ಪ್ರಾರಂಭಮಾಡಿದನು.

೨೦–೨೧　ಅಗಸ್ತ್ಯಋಷಿಯು ಹೇಳಿದನು :—" ಬಹಳ ಜ್ಞಾನಿಗಳಾದ ನೀವು ಕೇಳಿರುವ ಪ್ರಶ್ನೆಯು ಬಹಳ ಉತ್ತಮವಾಗಿರುವುದು. ಕುಮಾರಸ್ವಾಮಿಯು ನನಗೆ ಉಪದೇಶಮಾಡಿರುವ ಕ್ರಮವನ್ನು ಅನುಸರಿಸಿ ವಿವರವಾಗಿ ಹೇಳುವೆನು. ಬ್ರಹ್ಮನು ವಾಸಮಾಡುವ ಸತ್ಯಲೋಕಕ್ಕೆ ಇದು ಹನ್ನೆರಡನೆಯದಾಗಿದೆ. ಭೂಲೋಕದಲ್ಲಿ ಶಿವನ ವಾಸಸ್ಥಾನವಾಗಿಯೂ, ಶಿವನು ತಾನೇ ತನ್ನ ಲೀಲೆಗಳನ್ನು ಈ ಕ್ಷೇತ್ರದಲ್ಲಿ ಎಲ್ಲರಿಗೂ ತಿಳಿಯಪಡಿಸಿರುವುದರಿಂದಲೂ, ಎಲ್ಲಾ ಶಿವಕ್ಷೇತ್ರಗಳಿಗಿಂತಲೂ ಇದು ಉತ್ತಮವಾಯಿತು.

ಯದಾ ನ ಸಂತಿ ಕ್ಷೇತ್ರಾಣಿ ಪುಣ್ಯಾನಿ ಭುವನೇಷು ಚ ।
ಶ್ರೀಹಾಲಾಸ್ಯಂ ಶಿವೇನೈವ ವಿಹರ್ತುಂ ನಿರ್ಮಿತಂ ತದಾ ॥ ೨೨ ॥

ತಸ್ಮಾತ್ತತ್ಕ್ಷೇತ್ರಮಾಹಾತ್ಮ್ಯಂ ಜಾನಾತ್ಯೇವ ಮಹೇಶ್ವರಃ ।
ಶ್ರವಣಾದ್ಧರ್ಮಜಂ ಪುಂಸಾಂ ಸ್ಮರಣಾದರ್ಥಸಿದ್ಧಿದಂ ॥ ೨೩ ॥

ದರ್ಶನಾತ್ಸರ್ವಕಾಮಾಂಶ್ಚ ದದಾತಿ ಕ್ಷೇತ್ರಮುತ್ತಮಂ ।
ನಿರಂತರನಿವಾಸೇನ ಶಿವಸಾಯುಜ್ಯದಂ ವರಂ ॥ ೨೪ ॥

ಕಾಶ್ಯಾದಿಪುಣ್ಯಕ್ಷೇತ್ರೇಷು ದೇಹಾಂತೇ ಮುಕ್ತಿರುಚ್ಯತೇ ।
ಶ್ರೀಹಾಲಾಸ್ಯೇ ಶಿವಕ್ಷೇತ್ರೇ ಜೀವನ್ಮುಕ್ತಿಸ್ಸದಾ ನೃಣಾಂ ॥ ೨೫ ॥

ತಸ್ಮಾದ್ಧಾಲಾಸ್ಯಸದೃಶಂ ನಾಸ್ತಿ ಕ್ಷೇತ್ರಂ ಜಗತ್ತ್ರಯೇ ।
ಬ್ರಹ್ಮಹತ್ಯಾಭಿಭೂತಶ್ಚ ವೃತ್ರಾರಿರಮರೈಸ್ಸಹ ॥ ೨೬ ॥

---

೨೨–೨೪ ಲೋಕಗಳಲ್ಲಿ ಪುಣ್ಯಕರವಾದ ಕ್ಷೇತ್ರಗಳು ಇಲ್ಲದಕಾರಣ ಶಿವನು ತನ್ನ ವಿಹಾರಕ್ಕಾಗಿಯೇ ಈ ಕ್ಷೇತ್ರವನ್ನು ನಿರ್ಮಿಸಿದನು. ಆದ್ದರಿಂದ ಈ ಹಾಲಾಸ್ಯ ಕ್ಷೇತ್ರದ ಮಹಿಮೆಯನ್ನು ಶಿವನೊಬ್ಬನೇ ಚೆನ್ನಾಗಿ ತಿಳಿದಿರುವನು. ಈ ಕ್ಷೇತ್ರದ ಹೆಸರನ್ನು ಕೇಳಿದಕೂಡಲೆ ಮನುಷ್ಯರಿಗೆ ಧರ್ಮಬುದ್ಧಿಯು ಹುಟ್ಟುವುದು. ಸ್ಮರಣ ಮಾತ್ರದಿಂದ ಅರ್ಥಸಿದ್ಧಿಯಾಗುವುದು. ಈ ಕ್ಷೇತ್ರದ ದರ್ಶನದಿಂದ ಎಲ್ಲಾ ವಿಧವಾದ ಕಾಮಗಳೂ ಕೈಗೂಡುವುವು. ಆದ್ದರಿಂದ ಈ ಕ್ಷೇತ್ರವು ಎಲ್ಲಕ್ಕಿಂತಲೂ ಶ್ರೇಷ್ಠವಾದದ್ದು. ಮತ್ತು ಶಿವನು ಯಾವಾಗಲೂ ಇಲ್ಲಿ ವಾಸಮಾಡುವುದರಿಂದ ಇಲ್ಲಿ ವಾಸ ಮಾಡುವವರಿಗೆ ಶಿವಸಾಯುಜ್ಯವು ಲಭಿಸುವುದು.

೨೫–೨೬ ಕಾಶಿಯೇ ಮುಂತಾದ ಇತರ ಪುಣ್ಯಕ್ಷೇತ್ರಗಳಲ್ಲಿ ದೇಹವನ್ನು ಬಿಟ್ಟನಂತರ ಮುಕ್ತಿಯು ಉಂಟಾಗುವುದು. ಈ ಹಾಲಾಸ್ಯಕ್ಷೇತ್ರದಲ್ಲಿರುವವರಿಗೆ ಜೀವನ್ಮುಕ್ತಿಯು ಯಾವಾಗಲೂ ಉಂಟಾಗಿರುವುದು. ಆದ್ದರಿಂದ ಮೂರು ಲೋಕಗಳಲ್ಲಿಯೂ ಈ ಹಾಲಾಸ್ಯಕ್ಷೇತ್ರಕ್ಕೆ ಸಮನಾದ ಕ್ಷೇತ್ರವು ಇನ್ನೊಂದಿಲ್ಲ. ಇಂದ್ರನು ದೇವತೆಗಳೊಡನೆ ಬೇಟೆಯಾಡಲು ಈ ಕ್ಷೇತ್ರಕ್ಕೆ ಬಂದು, ತನಗೆ ಉಂಟಾಗಿದ್ದ ಬ್ರಹ್ಮ

ಹಾಲಾಸ್ಯಂ ಪ್ರಾಪ್ಯ ಮೃಗಯಾವ್ಯಾಜತೋ ನಿರಘೋ ಭವತ್ ।
ಮಹಾಪಾತಕತೂಲಾನಾಂ ಕ್ಷೇತ್ರಂ ಜ್ವಲನಸನ್ನಿಭಂ ॥ ೨೭ ॥

ತಸ್ಮಾತ್ಸರ್ವಾಘಶಾಂತ್ಯೈ ಚ ಪ್ರಾಪ್ಯಂ ಸರ್ವಜನ್ಯೈರಪಿ ।
ಅಜ್ಞಾನಾದಥ ವಾ ಮೋಹಾತ್ ದೈವಗತ್ಯಾ ಮುನೀಶ್ವರಾಃ ॥ ೨೮ ॥

ಪ್ರವಿಷ್ಟೋ ಮನುಜಸ್ಸದ್ಯಸ್ಸರ್ವಪಾಪೈಃ ಪ್ರಮುಚ್ಯತೇ ।
ಪುರಾ ಕಶ್ಚಿದ್ದ್ವಿಜೋ ಗತ್ವಾ ಜನನೀಂ ಕಾಮಮೋಹಿತಃ ॥ ೨೯ ॥

ಪಿತರಂ ಚ ನಿಹತ್ಯಾಥ ಖನಿತ್ರೇಣಾತಿದುರ್ಮತಿಃ ।
ಛಾಯಾರೂಪೇಣ ಘೋರೇಣ ಪಿತ್ರಾ ಮುಸಲಪಾಣಿನಾ ॥ ೩೦ ॥

ಅನುದ್ರುತಸ್ತದಾ ಭೀತ್ಯಾ ಸ್ಥಾನಾನಿ ಸುಬಹೂನ್ಯಪಿ ।
ಗತ್ವಾ ಗತ್ವಾ ದೈವಗತ್ಯಾ ಶ್ರೀಹಾಲಾಸ್ಯಮಥಾವಿಶತ್ ॥ ೩೧ ॥

---

ಹತ್ಯಾಪಾತಕವನ್ನು ನಾಶಪಡಿಸಿಕೊಂಡನು. ಇಂದ್ರನು ಯಾವುದೋ ಕಾರಣದಿಂದ ಬಂದರೂಕೂಡ ಪಾಪವನ್ನು ನಾಶಮಾಡಿದ ಪ್ರಯುಕ್ತ ಈ ಕ್ಷೇತ್ರವು ಮಹಾಪಾತಕಗಳನ್ನೂ, ದೋಷವನ್ನೂ ನಾಶಪಡಿಸುವುದರಲ್ಲಿ ಸಮರ್ಥವಾದದ್ದು.

೨೮–೨೯ ಎಲ್ಲಾ ಜನರೂ ತಮ್ಮ ತಮ್ಮ ಪಾತಕಗಳನ್ನು ಹೋಗಲಾಡಿಸಿಕೊಳ್ಳುವುದಕ್ಕಾಗಿ ಈ ಕ್ಷೇತ್ರದಲ್ಲಿ ಸೇವೆಯನ್ನು ಮಾಡಬೇಕು. ಮನುಷ್ಯನು ತಿಳಿದಾಗಲೀ, ಅಜ್ಞಾನದಿಂದಲಾಗಲೀ ಅಥವಾ ದೈವಗತಿಯಿಂದಲಾಗಲೀ ಈ ಕ್ಷೇತ್ರವನ್ನು ಪ್ರವೇಶಿಸಿದ ಮಾತ್ರದಿಂದ ತನ್ನ ಪಾಪಗಳನ್ನು ನಾಶಮಾಡಿಕೊಂಡು ಪವಿತ್ರನಾಗುವನು.

೩೦–೩೧ ಪೂರ್ವಕಾಲದಲ್ಲಿ ಒಬ್ಬನು ತನ್ನ ತಾಯಿಯನ್ನು ಭೋಗಿಸಿ, ತಂದೆಯನ್ನು ಗುದ್ದಲಿಯಿಂದ ಕೊಂದುಹಾಕಿದನು. ಆಗ ಮೃತನಾದ ಅವನ ತಂದೆಯು ಛಾಯಾರೂಪದಿಂದ ಒನಕೆಯನ್ನು ಧರಿಸಿಕೊಂಡು ಇವನನ್ನು ಹೊಡೆಯಲು ಹಿಂಬಾಲಿಸುತ್ತಿದ್ದನು. ಇದರಿಂದ ಹೆದರಿದವನಾಗಿ ಅವನು ಅನೇಕಕಡೆ ಓಡಿದಾಗ್ಯೂ ತೊಂದರೆಯು ತಪ್ಪಲಿಲ್ಲವಾದ್ದರಿಂದ ಹಾಗೆಯೇ ಓಡಿಬರುತ್ತಾ ಈ ಹಾಲಾಸ್ಯಕ್ಷೇತ್ರವನ್ನು ತಲಪಿದನು. ಈ ಕ್ಷೇತ್ರವನ್ನು ಪ್ರವೇಶಿಸಿದ ಮಾತ್ರದಿಂದ ಅವನಿಗೆ ಬ್ರಹ್ಮಹತ್ಯೆಯ ಬಾಧಕವು ತಪ್ಪಿಹೋಯಿತು. ಅನಂತರ ಅವನು ಮುಕ್ತಿಯನ್ನು ಹೊಂದಿದನು.

ಬ್ರಹ್ಮಹತ್ಯಾ ವಿನಿರ್ಮುಕ್ತಾ ತತ್ರೈವ ನ ವಿಮುಚ್ಯತೇ ।
ದ್ರವ್ಯಜಾತಂ ಲಯಂ ಯಾತಿ ಯಥಾ ಲೋಹೇಽಗ್ನಿದೀಪಿತೇ ॥ ೩೨ ॥

ತಥಾ ಸರ್ವಾಣಿ ಪಾಪಾನಿ ಲಯಂ ತತ್ರೈವ ಯಾಂತಿ ಚ ।
ಪಿಪೀಲಿಕಾದಿಹಸ್ತ್ಯಂತಂ ತತ್ರ ಮುಕ್ತಿಂ ಪ್ರಯಾತಿ ಚ ॥ ೩೩ ॥

ಕಶ್ಚಿದತ್ರ ವಿಶೇಷೋಽಸ್ತಿ ದೇವದೇವಸ್ಯ ಧೂರ್ಜಟೇಃ ।
ಜಟಾಬದ್ಧೇಂದುಶಕಲಾದುತ್ಪನ್ನಾಮೃತಧಾರಯಾ ॥ ೩೪ ॥

ಸಿಕ್ತಾ ವಿಶ್ವಂಭರಾ ನಾಮ್ನಾ ತದಾಸೀನ್ಮಧುರಾ ಪುರೀ ।
ಚಿದಂಬರೇ ಮಹಾಕ್ಷೇತ್ರೇ ನೃತ್ತಮೇಕಂ ತು ದೃಶ್ಯತೇ ॥ ೩೫ ॥

ರಾಜಿತೇ ತು ಸಭಾಮಧ್ಯೇ ನೃತ್ಯಸ್ತಮಧಿಕಂ ಪರಂ ।
ಸಂತಿ ಸ್ಥಾನಾನ್ಯನೇಕಾನಿ ಶಿಷ್ಟಾನಿ ಭುವನೇಷು ಚ ॥ ೩೬ ॥
ಶ್ರೀಹಾಲಾಸ್ಯಸಮಂ ಸ್ಥಾನಂ ಕುತ್ರಚಿನ್ನೈವ ವಿದ್ಯತೇ ।
ಹಾಲಾಸ್ಯಾಖ್ಯಂ ಮಹಾಸ್ಥಾನಂ ತತ್ತ್ಯಕ್ತ್ವಾ ಗಚ್ಛತಿ ಯೋ ನರಃ ॥ ೩೭ ॥

---

೩೨ (ಸಾಣ್ಯ) ಘನರೂಪವನ್ನು ಹೊಂದಿರುವ ಲೋಹವು ಅಗ್ನಿಯಿಂದ ನಾಶವನ್ನು ಹೊಂದುವಹಾಗೆ ಎಲ್ಲಾ ವಿಧವಾದ ಪಾಪಗಳೂ ಈ ಕ್ಷೇತ್ರದ ಮಹಿಮೆಯಿಂದ ನಾಶವಾಗುವುವು. ಇದು ಮಾತ್ರವಲ್ಲದೆ, ಇರುವೆಯಿಂದ ಆನೆಯವರಿವಿಗೂ ಇರುವ ಪ್ರಾಣಿಗಳೆಲ್ಲವೂ ಈ ಕ್ಷೇತ್ರದ ಸಂಬಂಧದಿಂದ ಮುಕ್ತಿಯನ್ನು ಹೊಂದುವುವು.

೩೩–೩೫ ಈ ಪ್ರದೇಶದಲ್ಲಿ ಒಂದು ವಿಶೇಷವಿರುವುದು. ಮಹೇಶ್ವರನು ತನ್ನ ಜಟೆಯಲ್ಲಿ ಚಂದ್ರನನ್ನು ಧರಿಸಿರುವನು. ಈ ಚಂದ್ರನ ಅಮೃತಧಾರೆಯಿಂದ ಈ ಪ್ರದೇಶದ ಭೂಮಿಯು ನೆನೆದಿರುವುದರಿಂದ ಮಧುರಾನಗರವೆಂದು ಹೆಸರನ್ನು ಹೊಂದಿರುವುದು. ಮಧುವನ್ನೂ, ಅಮೃತವನ್ನೂ ಅಂಗೀಕರಿಸಿದ ನಿಮಿತ್ತ ಈ ಹೆಸರು ಬಂದಿತು. ಮಹಾಕ್ಷೇತ್ರವಾದ ಚಿದಂಬರದಲ್ಲಿ ಬೆಳ್ಳಿಯ ಸಭೆಯ ಮಧ್ಯದಲ್ಲಿ ಪರಮೇಶ್ವರನ ನೃತ್ಯವನ್ನು ಮಾತ್ರ ನೋಡಬಹುದು.

೩೬–೩೭ ಕಾಡುಗಳಲ್ಲಿ ಆಯಾಯ ಪ್ರದೇಶಗಳಲ್ಲಿ ಶಿವನ ಮಹಿಮೆಯು ಅಧಿಕವಾಗಿರುವ ಪ್ರದೇಶಗಳು ಇರುತ್ತವೆ. ಆದಾಗ್ಯೂ ಈ ಹಾಲಾಸ್ಯಕ್ಷೇತ್ರಕ್ಕೆ ಸಮನಾಗಿರುವ ಕ್ಷೇತ್ರವು ಎಲ್ಲಿಯೂ ಇಲ್ಲವು. ಇಷ್ಟುಮಟ್ಟಿನ ಮಹಿಮೆಯನ್ನು ಹೊಂದಿರುವ ಈ ಹಾಲಾಸ್ಯಕ್ಷೇತ್ರವನ್ನು ಬಿಟ್ಟು ಬೇರೆಯಕಡೆಗೆ ಹೋಗುವವನು ತನ್ನ ಕೈಯಿಗೆ

**ಕರಸ್ಥಂ ಪಾಯಸಂ ತ್ಯಕ್ತ್ವಾ ಕೂರ್ಪರಂ ಲೇಢಿಚಾತ್ಮನಃ ।**
**ಸರ್ವೇಷಾಂ ಭುಕ್ತಿಮುಕ್ತ್ಯರ್ಥಂ ಶಂಭುನಾ ನಿರ್ಮಿತಂ ತು ತತ್ ॥ ೩೮ ॥**

**ಬ್ರಹ್ಮವಿಷ್ಣುಮಹೇಂದ್ರಾದ್ಯೈಸ್ಸೇವಿತಂ ಸರ್ವಸಿದ್ಧಯೇ ।**
**ಸ್ಮೃತಮಾತ್ರೇಣ ತತ್ಕ್ಷೇತ್ರಂ ಮಹಾಪಾಪಂ ವ್ಯಪೋಹತಿ ॥ ೩೯ ॥**

**ದದಾತಿ ಭುಕ್ತಿಂ ಮುಕ್ತಿಂ ಚ ಶಾಶ್ವತೀಂ ಮುನಿಪುಂಗವಾಃ ।**
**ತತ್ರ ನಿತ್ಯಂ ನಿವಸತಾಂ ಸರ್ವೇಷಾಂ ಪ್ರಾಣಿನಾಂ ಧ್ರುವಂ ॥ ೪೦ ॥**

**ನ ಪುನರ್ಭವಜಾ ಭೀತಿರ್ನಾತ್ರ ಕಾರ್ಯಾವಿಚಾರಣಾ ।**
**ತತ್ರ ನಿತ್ಯಂ ನಿವಸತಿ ಯಃ ಕಶ್ಚಿತ್ಪ್ರಾಕೃತೋ ಜನಃ ॥ ೪೧ ॥**

**ಪುತ್ರಪೌತ್ರಾದಿಸಂಯುಕ್ತೋ ನಿತ್ಯಂ ಚ ಸುಖಮೇಧತೇ ।**
**ಅಶ್ವಮೇಧೈರ್ಮಹಾಯಜ್ಞೈರಗ್ನಿಷ್ಟೋಮೈರ್ಮಹಾಫಲೈಃ ॥ ೪೨ ॥**

**ಅತ್ಯಗ್ನಿಷ್ಟೋಮಯಜ್ಞೈಶ್ಚ ಬೃಹಸ್ಪತಿಸವೈಃ ಶುಭೈಃ ।**
**ಅತಿರಾತ್ರೈರ್ಮಹಾಯಜ್ಞೈಸ್ಸೋಮಯಾಗೈಶ್ಚ ವಿಶ್ರುತೈಃ ॥ ೪೩ ॥**

---

ಬಂದಿರುವ ಪಾಯಸವನ್ನು ಬಿಟ್ಟು, ತನ್ನ ಮೊಣಕೈಯನ್ನು ನೆಕ್ಕುವವನಾಗುವನು. ಪರಮೇಶ್ವರನು ಎಲ್ಲಾ ಪ್ರಾಣಿಗಳ ಭುಕ್ತಿ ಮತ್ತು ಮುಕ್ತಿಗಾಗಿಯೇ ಈ ಕ್ಷೇತ್ರವನ್ನು ನಿರ್ಮಿಸಿರುವನು. ಇದನ್ನು ಬ್ರಹ್ಮ, ವಿಷ್ಣು, ಮಹೇಂದ್ರನೇ ಮೊದಲಾದ ದೇವತೆಗಳು ಸೇವಿಸುತ್ತಿರುವರು. ಮತ್ತು ಅದರಿಂದ ಸಿದ್ಧಿಯನ್ನೂ ಹೊಂದುತ್ತಿರುವರು. ಈ ಕ್ಷೇತ್ರವು ಸ್ಮರಣಮಾಡಿದ ಮಾತ್ರದಿಂದಲೇ ಎಲ್ಲಾ ಪಾಪಗಳನ್ನೂ ನಾಶಪಡಿಸುವುದು.

೪೦–೪೨ ಈ ಕ್ಷೇತ್ರದಲ್ಲಿ ಪ್ರತಿದಿನವೂ ವಾಸಮಾಡುತ್ತಿರುವ ಪ್ರಾಣಿಗಳಿಗೆ ಎಲ್ಲರಿಗೂ ನಿತ್ಯವಾದ ಭುಕ್ತಿಯನ್ನೂ, ಮತ್ತು ಮುಕ್ತಿಯನ್ನೂ ಉಂಟುಮಾಡುವುದರಲ್ಲಿ ಕೊಂಚವೂ ಸಂಶಯಪಡಬೇಕಾದ್ದಿಲ್ಲವು. ಈ ಪ್ರದೇಶದಲ್ಲಿ ವಾಸಮಾಡುವ, ಏನನ್ನೂ ತಿಳಿಯದೆ ಇರುವ ದಡ್ಡನೂ ಕೂಡ ಮಕ್ಕಳು, ಮೊಮ್ಮಕ್ಕಳೊಡನೆ ಸುಖವಾಗಿರುವ ಸ್ಥಿತಿಯನ್ನು ಹೊಂದುವನು.

೪೩–೪೪ ಕೆಲವರು ಅಶ್ವಮೇಧಯಾಗವನ್ನು ಮಾಡುವರು. ಇನ್ನು ಕೆಲವರು ಬಹಳ ಫಲವನ್ನು ಕೊಡುವ ಅಗ್ನಿಷ್ಟೋಮವೆಂಬ ಯಜ್ಞವನ್ನು ಮಾಡುವರು. ಮತ್ತೆ ಕೆಲವರು ಅತ್ಯಗ್ನಿಷ್ಟೋಮ, ಬೃಹಸ್ಪತಿಸವ, ಅತಿರಾತ್ರ, ಇನ್ನೂ ಕೆಲವು ಸೋಮ

ದರ್ಶೈಶ್ಚ ಪೂರ್ಣಮಾಸ್ಯೈಶ್ಚ ದ್ವಾದಶಾಹೈಸ್ತಥಾ ಪರೈಃ ।
ಷೋಡಶಾಹೈರ್ವಾಜಪೇಯೈಃ ರಾಜಸೂಯೈಃ ಕ್ರತೂತ್ತಮೈಃ ॥ ೪೪ ॥

ವಿಶ್ವಜಿತ್ಸರ್ವಜಿದ್ಭ್ಯಾಂ ಚ ತಥಾ ಖಿಲಮುಖೈಃ ಪರೈಃ ।
ಏವಮಾದ್ಯೈರ್ವಿಶಿಷ್ಟೈಶ್ಚ ತಥಾ ಸರ್ವಸ್ವದಕ್ಷಿಣೈಃ ॥ ೪೫ ॥

ಯತ್ಫಲಂ ಲಭತೇ ಯಜ್ವಾ ತದ್ವಾಸೀ ತತ್ಸಮಶ್ನುತೇ ।
ತಿಲೈರ್ದತ್ತೈರ್ಘೃತೈಶ್ಚಿತ್ರೈರ್ವಸ್ತ್ರೈರಾಭರಣೈರಪಿ ॥ ೪೬ ॥

ಗೋಭಿಶ್ಚ ಕಪಿಲಾದ್ಯಾಭಿಃ ಕೇದಾರೈಸ್ಸಸ್ಯಮಾಲಿಭಿಃ ।
ರತ್ನೈಃ ಸುವರ್ಣರಜತೈರ್ವಿವಿಧೈರ್ಧಾನ್ಯರಾಶಿಭಿಃ ॥ ೪೭ ॥

ದಾಸೀದಾಸಗಜಾಶ್ವಾದ್ಯೈರ್ಭವನೈಶ್ಚ ಮನೋಹರೈಃ ।
ರಥೈಶ್ಚ ಕನ್ಯಕಾಭಿಶ್ಚ ವಿಶೇಷಾದನ್ನಪಾನಕೈಃ ॥ ೪೮ ॥

ಅನರ್ಘ್ಯೈಃ ಕೇಚಿದಪ್ಯನ್ಯೈರ್ದಾನೈರ್ವಿವಿಧಲಕ್ಷಣೈಃ ।
ಯತ್ಫಲಂ ಲಭತೇ ತತ್ರ ವಾಸೀ ತತ್ಫಲಮಶ್ನುತೇ ॥ ೪೯ ॥

ಯಾಗಗಳು, ದರ್ಶಪೂರ್ಣಮಾಸ ಯಾಗಗಳು. ಇವುಗಳನ್ನು ಮಾಡುವರು. ಇನ್ನೂ ಕೆಲವರು ದ್ವಾದಶಾಹ, ಷೋಡಶಾಹ, ವಾಜಪೇಯ, ಉತ್ತಮವಾದ ರಾಜಸೂಯ ಎಂಬ ಯಜ್ಞಗಳನ್ನು ಮಾಡುವರು.

೪೫-೪೯ ಇನ್ನೂ ಕೆಲವರು ವಿಶ್ವಜಿತ್ ಯಾಗ, ಸರ್ವಜಿದ್ಯಾಗ ಎಂಬ ಯಜ್ಞಗಳನ್ನು ಮಾಡುವರು. ಕೆಲವರು ಈ ಯಜ್ಞಗಳೆಲ್ಲವನ್ನೂ ಮಾಡುವರು. ಇವುಗಳಲ್ಲಿ ಪ್ರತಿಯೊಂದು ಯಜ್ಞಕ್ಕೂ ದ್ರವ್ಯವು ಬಹಳವಷ್ಟಿಗೆ ದಾನ, ಧರ್ಮರೂಪ ದಲ್ಲಿ ವ್ಯಯವಾಗಿ ಅದರಿಂದ ಉಂಟಾಗುವ ಪುಣ್ಯವು ಬೇರೆ ಬೇರೆ ವಿಧವಾಗಿ ಬಹಳ ವಾಗಿ ಇರುವುದು. (ಯಾಗ) ಈ ಯಜ್ಞಗಳನ್ನು ಮಾಡುವವರೆಲ್ಲರೂ ಹೊಂದುವ ಪುಣ್ಯವೆಲ್ಲವನ್ನೂ ಈ ಕ್ಷೇತ್ರದಲ್ಲಿ ಪ್ರತಿದಿನವೂ ವಾಸಮಾಡುವವನು ಹೊಂದುವನು. ತಿಲ, ಘೃತ, ವಸ್ತ್ರ, ಆಭರಣ, ಗೋವು, ಕಪಿಲಾಗೋವು, ಬೆಳೆಯುವ ಬೆಳೆಯು ಳ್ಳ ಉತ್ತಮಭೂಮಿ, ರತ್ನ, ಚಿನ್ನ, ಬೆಳ್ಳಿ, ಧಾನ್ಯದ ರಾಶಿಗಳು, ದಾಸಿಯರು, ಊಳಿಗ ದವರು, ಆನೆ, ಕುದುರೆ ಮುಂತಾದ ಪ್ರಾಣಿಗಳು, ಮನೋಹರವಾದ ಮನೆಗಳು, ರಥಗಳು, ಕನ್ಯೆಯರು, ಹೆಚ್ಚು ದಕ್ಷಿಣೆಯುಳ್ಳ ಇತರ ವಿಧವಾದ ದಾನಗಳು, ಇವು ಗಳನ್ನು ದಾನಮಾಡುವುದರಿಂದ ಉಂಟಾಗುವ ಪುಣ್ಯವೆಲ್ಲವೂ ಈ ಕ್ಷೇತ್ರದಲ್ಲಿ ವಾಸ ಮಾಡುವವರಿಗೆ ವಾಸ ಮಾತ್ರದಿಂದ ಉಂಟಾಗುವುದು.

ಕಾಶ್ಯಾದಿಸರ್ವಕ್ಷೇತ್ರೇಷು ನಿರಂತರನಿವಾಸಿನಃ ।
ಯತ್ಫಲಂ ನಿವಸಂಸ್ತತ್ರ ತತ್ಫಲಂ ಸರ್ವಮಾಪ್ನುಯಾತ್ ॥ ೫೦ ॥

ಸುರಾಪೋ ಬ್ರಹ್ಮಹಾ ಚೈವ ಭ್ರೂಣಹಾ ಗುರುಹಾ ತಥಾ ।
ಸ್ತ್ರೀಘ್ನೋ ಭ್ರಾತೃಹನಶ್ಚಾಪಿ ಮಾತೃಹಾ ಗುರುತಲ್ಪಗಃ ॥ ೫೧ ॥

ಸ್ತೇಯೀ ಚಾನ್ಯೇ ಚ ಬಹವೋ ಮನುಜಾಃ ಪಾಪಕಾರಿಣಃ ।
ಶ್ರೀಹಾಲಾಸ್ಯಮುಷಿತ್ವಾ ತೇ ಮುಚ್ಯಂತೇ ಸರ್ವಕಿಲ್ಬಿಷೈಃ ॥ ೫೨ ॥

ಗಂಗಾ ಚ ಯಮುನಾ ಚೈವ ನರ್ಮದಾ ಚ ಸರಸ್ವತೀ ।
ಗೋದಾವರೀ ಗೋಮತೀ ಚ ತುಂಗಭದ್ರಾ ಚ ಪಾಪಹಾ ॥ ೫೩ ॥

ಸರಯೂ ತಮಸಾ ಕೃಷ್ಣಾ ಕಾವೇರೀ ಚ ಸರಿದ್ವರಾ ।
ವೇಗವತೀ ವೇತ್ರವತೀ ತಾಮ್ರಪರ್ಣೀ ಸರಿದ್ವರಾ ॥ ೫೪ ॥

ಆಸಾಂ ನದೀನಾಂ ತೀರ್ಥೇಷು ಪಾವನೇಷು ವಿಶೇಷತಃ ।
ಸ್ನಾನಂ ಚ ಕುರ್ವತಾಂ ಪುಂಸಾಂ ಯದ್ಯದಸ್ತಿ ಫಲಂ ಮಹತ್ ॥ ೫೫ ॥

---

೫೦-೫೨ ಮದ್ಯಪಾನ ಮಾಡಿದವನು, ಬ್ರಹ್ಮಹತ್ಯೆ ಮಾಡಿದವನು, ಭ್ರೂಣಹತ್ಯಾ ಮಾಡಿದವನು, ಗುರುವನ್ನು ಕೊಂದವನು, ಸ್ತ್ರೀಯನ್ನು ಕೊಂದವನು ಸೋದರರನ್ನು ಕೊಂದವನು, ತಾಯಿಯನ್ನು ಕೊಂದವನು, ಗುರುವಿನ ಸಂಬಂಧಿ ಸ್ತ್ರೀ ಭೋಗವನ್ನು ಅನುಭವಿಸಿದವನು, ಪದಾರ್ಥಗಳನ್ನು ಕದಿಯುವವನು, ಇನ್ನೂ ಇತರ ಪಾಪಕೆಲಸಗಳನ್ನು ಮಾಡುತ್ತಿರುವವನು ಇವರುಗಳು ಯಾರೇ ಆದಾಗ್ಯೂ ಅವರೆಲ್ಲರೂ ಈ ಹಾಲಾಸ್ಯಕ್ಷೇತ್ರದಲ್ಲಿ ವಾಸಮಾಡುವ ಮಾತ್ರದಿಂದಲೇ ಅವರವರ ಪಾಪಗಳನ್ನು ನಾಶಪಡಿಸಿಕೊಂಡು ಪುಣ್ಯವಂತರಾಗುವರು.

೫೩-೫೫ ಗಂಗಾ, ಯಮುನಾ, ನರ್ಮದಾ, ಸರಸ್ವತೀ, ಗೋದಾವರೀ, ಗೋಮತೀ, ತುಂಗಭದ್ರಾ, ಸರಯೂ, ತಮಸಾ, ಕೃಷ್ಣಾ, ಕಾವೇರೀ, ವೇಗವತೀ, ವೇತ್ರವತೀ, ತಾಮ್ರಪರ್ಣೀ ಇವೇ ಮುಂತಾದ ಪಾಪನಾಶಕಗಳಾದ ಉತ್ತಮನದಿಗಳ ಬಹಳ ಪವಿತ್ರವಾದ ನೀರಿನಲ್ಲಿ ಪ್ರತಿದಿನವೂ ಸ್ನಾನವನ್ನು ಮಾಡುತ್ತಿರುವವರಿಗೆ ಉಂಟಾಗುವ ಪರಿಶುದ್ಧತೆಯು ಎಲ್ಲವೂ ಈ ಕ್ಷೇತ್ರದಲ್ಲಿ ವಾಸಮಾಡುವ ಮಹಾತ್ಮನಿಗೆ ಉಂಟಾಗುವುದು.

**ತತ್ತತ್ಸರ್ವಮವಾಪ್ನೋತಿ ತತ್ರ ವಾಸೀ ನರೋತ್ತಮಃ ।**
**ಮಾಸಿ ಮಾಸಿ ಯದಾಪ್ನೋತಿ ತತ್ಕೃತ್ವಾ ಚಾಂದ್ರಾಯಣಾತ್ಫಲಂ ॥ ೫೬ ॥**

**ತತ್ಫಲಂ ಲಭತೇ ಮರ್ತ್ಯೋ ಹಾಲಾಸ್ಯೇ ನಕ್ತಭೋಜನಾತ್ ।**
**ಮಾಸೋಪವಾಸಾದನ್ಯತ್ರ ಯತ್ಫಲಂ ಲಭತೇ ನರಃ ॥ ೫೭ ॥**

**ಶ್ರದ್ಧಯೈಕೋಪವಾಸೇನ ಹಾಲಾಸ್ಯೇ ತತ್ಸಮಶ್ನುತೇ ।**
**ಚಾತುರ್ಮಾಸ್ಯವ್ರತಪ್ರೋಕ್ತಂ ಯದನ್ಯತ್ರ ಫಲಂ ಮಹತ್ ॥ ೫೮ ॥**

**ಅಷ್ಟಮ್ಯಾಮುಪವಾಸೇನ ಹಾಲಾಸ್ಯೇ ತತ್ಸಮಶ್ನುತೇ ।**
**ಷಾಣ್ಮಾಸಾನ್ನಪರಿತ್ಯಾಗಾದ್ಯದನ್ಯತ್ರಫಲಂ ಲಭೇತ್ ॥ ೫೯ ॥**

**ಸೋಮವಾರೋಪವಾಸೇನ ಹಾಲಾಸ್ಯೇ ತನ್ನಸಂಶಯಃ ।**
**ಸಂವತ್ಸರೋಪವಾಸೇನ ಲಭೇದನ್ಯತ್ರ ಯದ್ವ್ರತೀ ॥ ೬೦ ॥**

---

೫೬ ಈ ಹಾಲಾಸ್ಯ ಕ್ಷೇತ್ರದಲ್ಲಿ ನಕ್ತಭೋಜನದಿಂದ ವಾಸಮಾಡುವವನು ಪ್ರತಿ ತಿಂಗಳಿನಲ್ಲಿಯೂ ಆಚರಿಸುವ ಚಾಂದ್ರಾಯಣ ವ್ರತದ ಫಲವನ್ನು ಹೊಂದುವನು.

೫೭–೫೮ ಮನುಷ್ಯನು ತನ್ನ ಪಾಪವನ್ನು ನಾಶಮಾಡಿಕೊಳ್ಳುವುದಕ್ಕಾಗಿ ಬೇರೆಯ ಪ್ರದೇಶದಲ್ಲಿ ವಾಸಮಾಡುತ್ತಾ ಮಾಸೋಪವಾಸ ವ್ರತವನ್ನು ಆಚರಿಸುವನು. ಇದರ ಫಲವು ಈ ಕ್ಷೇತ್ರದಲ್ಲಿ ಒಂದು ದಿನ ಉಪವಾಸ ಮಾಡಿದ್ದರಿಂದ ಬರುವುದು. ಬೇರೆಯ ಕಡೆಯಲ್ಲಿ ಚಾತುರ್ಮಾಸ ವ್ರತವನ್ನು ಆಚರಿಸಿದ ಪುಣ್ಯವು ಈ ಕ್ಷೇತ್ರದಲ್ಲಿ ಅಷ್ಟಮಿಯ ದಿನ ಉಪವಾಸ ಮಾಡಿದ ಮಾತ್ರದಿಂದಲೇ ಉಂಟಾಗುವುದು.

೫೯–೬೧ ಬೇರೆಯ ಕಡೆಯಲ್ಲಿ ಆರು ತಿಂಗಳಕಾಲ ನಿರಶನವ್ರತವನ್ನು ಆಚರಿಸಿದ ಫಲವು ಈ ಕ್ಷೇತ್ರದಲ್ಲಿ ಒಂದು ಸೋಮವಾರ ಉಪವಾಸ ಮಾಡುವುದರಿಂದ ಉಂಟಾಗುವುದು. ಸಂವತ್ಸರ ಪರ್ಯಂತವೂ ನಿರಶನ ವ್ರತ (ಒಂದು ವರ್ಷವೂ ಉಪವಾಸ ಮಾಡುವುದು) ವನ್ನು ಬೇರೆಯ ಕಡೆಯಲ್ಲಿ ಆಚರಿಸುವವನ ಪುಣ್ಯವು ಈ ಕ್ಷೇತ್ರದಲ್ಲಿ ಶಿವರಾತ್ರಿಯ ದಿವಸ ಉಪವಾಸ (ಮಾಡಿದ್ದರಿಂದ) ಮಾಡುವುದರಿಂದ ಉಂಟಾಗುವುದು. ಈ ಕ್ಷೇತ್ರದ ಮಹಿಮೆಯು ಹೀಗೆ ಇರುವುದರಿಂದ ಇದರ ಮಹಿಮೆಯನ್ನು ಇಷ್ಟೇ ಇರುವುದೆಂದು ಹೇಳಲು ಸಾಧ್ಯವಿಲ್ಲವು.

**ಶಿವರಾತ್ರ್ಯುಪವಾಸೇನ ಹಾಲಾಸ್ಯೇ ತತ್ಫಲಂ ಲಭೇತ್ ।**
**ಅನಂತೋ ಮಹಿಮಾ ತಸ್ಯ ಹಾಲಾಸ್ಯಸ್ಯ ದ್ವಿಜೋತ್ತಮಾಃ ॥ ೬೧ ॥**

**ಕಸ್ತಂ ವರ್ಣಯಿತುಂ ಶಕ್ತಶ್ಶಿವಕ್ಷೇತ್ರೋತ್ತಮಸ್ಯ ಚ ।**
**ಯಸ್ತತ್ರ ನಿವಸೇನ್ಮರ್ತ್ಯಸ್ಸಂಯತಾತ್ಮಾ ಸಮಾಹಿತಃ ॥ ೬೨ ॥**

**ತ್ರಿಕಾಲಮಪಿ ಭುಂಜಾನೋ ವಾಯುಭಕ್ಷಸಮೋ ಹಿ ನಃ ।**
**ಮುಷ್ಟಿಮಾತ್ರಪ್ರದಾನೇನ ಮಹಾದಾನಫಲಪ್ರದಂ ॥ ೬೩ ॥**

**ಸರ್ವಂ ತಪಃ ಫಲಂ ಮುಖ್ಯಂ ಸರ್ವದಾನಫಲಂ ಮಹತ್ ।**
**ಸರ್ವತೀರ್ಥಫಲಂ ಚೈವ ಸರ್ವಯಜ್ಞಫಲಂ ತಥಾ ॥ ೬೪ ॥**

**ಸರ್ವಮಂತ್ರಫಲಂ ಪೂರ್ಣಂ ಯೋಗಜ್ಞಾನಫಲಂ ತಥಾ ।**
**ತಸ್ಮಾತ್ತತ್ರ ವಸೇದ್ಧೀಮಾನಾಕಾಂಕ್ಷೀ ಹಿತಮಾತ್ಮನಃ ॥ ೬೫ ॥**

---

೬೧–೬೨ ಶಿವಕ್ಷೇತ್ರಗಳಲ್ಲಿ ಉತ್ತಮವಾಗಿರುವ ಈ ಕ್ಷೇತ್ರ ಮಹಿಮೆಯನ್ನು ಹೇಳಿ ಮುಗಿಸುವವರು ಯಾರು ತಾನೇ ಇರುವರು. ಈ ಕ್ಷೇತ್ರದಲ್ಲಿ ಸರಿಯಾದ ಆಚಾರಸಂಪನ್ನನಾಗಿರುವವನು, ಮೂರು ವೇಳೆ ಊಟಮಾಡುತ್ತಿದ್ದರೂ ವಾಯು ಭಕ್ಷಣೆಗೆ ಸಮನಾದ ಪುಣ್ಯವನ್ನು ಹೊಂದುವನು. ಒಂದು ಮುಷ್ಟಿಯನ್ನಾದರೂ ಇಲ್ಲಿ ದಾನಮಾಡಿದರೆ ಅದರ ಪುಣ್ಯವು ಮಹಾದಾನಮಾಡಿದ ಪುಣ್ಯದಷ್ಟಿರುವುದು.

೬೩–೬೫ ಎಲ್ಲಾ ವಿಧವಾದ ತಪಸ್ಸಿನಲ್ಲಿಯೂ ಫಲವೇ ಮುಖ್ಯವಾದದ್ದು ಎಲ್ಲಾ ದಾನಗಳ ಫಲವು ಹೆಚ್ಚಾಗಿರುವುದು. ಈ ಕ್ಷೇತ್ರದಲ್ಲಿ ಎಲ್ಲಾ ತೀರ್ಥ ಯಾತ್ರೆಯ ಫಲವೂ, ಎಲ್ಲಾ ಯಜ್ಞಗಳ ಫಲವೂ, ಎಲ್ಲಾ ಮಂತ್ರಗಳ ಫಲವೂ ಪೂರ್ಣವಾಗಿರುವವು. ಯೋಗ ಮತ್ತು ಜ್ಞಾನ ಇವುಗಳ ಫಲವೂ ಅನಂತವಾಗಿ ರುವುದು. ಆದ್ದರಿಂದ ಮನುಷ್ಯನು ತನಗೆ ಹಿತವನ್ನು ಸಾಧಿಸುವ ಉದ್ದೇಶದಿಂದ ಈ ಪ್ರಕಾರವಾದ ಪುಣ್ಯವನ್ನುಂಟುಮಾಡುವ ಕ್ಷೇತ್ರದಲ್ಲಿ ವಾಸಮಾಡಿಕೊಂಡು ತನ್ನ ಶ್ರೇಯಸ್ಸನ್ನು ಸಾಧಿಸುವುದು ಉತ್ತಮವು.

ಬಹುನಾತ್ರ ಕಿಮುಕ್ತೇನ ಶ್ರೀಹಾಲಾಸ್ಯಂ ಪರಾತ್ಪರಂ ।
ಸರ್ವಸ್ನಾನಫಲಂ ಪೂರ್ಣಂ ಸರ್ವಪೂಜಾಫಲಪ್ರದಂ ॥ ೬೬ ॥

ದದಾತಿ ನಿತ್ಯಂ ಹಾಲಾಸ್ಯಂ ನಿರಂತರನಿವಾಸಿನಾಂ ।
ತಸ್ಮಾದ್ಧಾಲಾಸ್ಯಸದೃಶಂ ನಾಸ್ತಿ ಕ್ಷೇತ್ರಂ ಪುರಾತನಂ ॥ ೬೭ ॥

ಪವಿತ್ರಂ ಚ ವಿಶಿಷ್ಟಂ ಚ ಸದ್ಯಸ್ಸರ್ವಫಲಪ್ರದಂ ।
ಶಿವಕ್ಷೇತ್ರೋತ್ತಮಮಿತಿ ಶ್ರೀಮದ್ಧಾಲಾಸ್ಯಮಿತ್ಯಪಿ ॥ ೬೮ ॥

ಶ್ರೀಮತ್ಕದಂಬವಿಪಿನಂ ಕನ್ಯಕಾನಗರೀತಿ ಚ ।
ಸಮಷ್ಟಿವಿದ್ಯಾನಗರೀ ಮಧುರಾಪುರಮಿತ್ಯಪಿ ॥ ೬೯ ॥

ಭೂಲೋಕಶಿವಲೋಕಂ ಚ ಜೀವನ್ಮುಕ್ತಿಪುರಂ ತಥಾ ।
ಚತುಷ್ಕೂಟಪುರಂ ಚೇತಿ ದ್ವಾದಶಾಂತಂ ಶಿವಾಸ್ಪದಂ ॥ ೭೦ ॥

---

೬೬–೬೭ ಬಹಳ ಹೇಳಿದ್ದರಿಂದ ಫಲವೇನು? ಈ ಹಾಲಾಸ್ಯ ಕ್ಷೇತ್ರವು ಸರ್ವೋತ್ತಮವಾದದ್ದು. ಇಲ್ಲಿ ಎಲ್ಲಾ ತೀರ್ಥಗಳ ಸ್ನಾನದ ಪೂರ್ಣಫಲವು ಉಂಟಾಗುವುದು. ಎಲ್ಲಾ ದೇವತೆಗಳನ್ನೂ ಪೂಜಿಸಿದ ಫಲವು ಸಂಪೂರ್ಣವಾಗಿ ಬರುವುದು. ಇವೆಲ್ಲವೂ ಇಲ್ಲಿ ವಾಸಮಾಡುವವರಿಗೆ ಉಂಟಾಗುವುದು. ಆದ್ದರಿಂದ ಈ ಹಾಲಾಸ್ಯ ಕ್ಷೇತ್ರಕ್ಕೆ ಸಮನಾದ, ಪುರಾತನವಾದ ಕ್ಷೇತ್ರವು ಇನ್ನೊಂದು ಇಲ್ಲವು.

೬೮–೬೯ ಈ ಕ್ಷೇತ್ರವು ಪವಿತ್ರವಾದದ್ದು. ಎಲ್ಲಕ್ಕಿಂತಲೂ ಹೆಚ್ಚಾದದ್ದು. ಆ ಕ್ಷಣದಲ್ಲಿಯೇ ಎಲ್ಲಾ ವಿಧವಾದ ಪುಣ್ಯವನ್ನು ಉಂಟುಮಾಡತಕ್ಕದ್ದು. ಆದ್ದರಿಂದ ಶಿವಕ್ಷೇತ್ರಗಳಲ್ಲಿ ಉತ್ತಮವಾದ ಇದನ್ನು ಹಾಲಾಸ್ಯಕ್ಷೇತ್ರ, ಕದಂಬವಿಪಿನ, ಕನ್ಯಕಾನಗರೀ, ಸಮಷ್ಟಿವಿದ್ಯಾನಗರ, ಮಧುರಾಪುರ, ಭೂಲೋಕ ಶಿವಲೋಕ, ಜೀವನ್ಮುಕ್ತಿಪುರ, ಚತುಷ್ಕೂಟಪುರ, ದ್ವಾದಶಾಂತ, ಶಿವವಾಸಸ್ಥಾನ, ಎಂದು ಹೆಸರಿನಿಂದ ಕರೆಯುವರು.

೭೦–೭೪ ಈ ಕ್ಷೇತ್ರದ ಮಹಿಮೆಯು ಈ ಪ್ರಕಾರವಾಗಿ ಬಹಳ ಉತ್ತಮವಾಗಿರುವುದು. ಎಲ್ಲಾ ಕ್ಷೇತ್ರಗಳಿಗೂ ಉತ್ತಮವಾದ, ಬಹಳ ನಾಮಧೇಯಗಳಿಂದ ಪ್ರಸಿದ್ಧವಾದ, ಈ ಹಾಲಾಸ್ಯಕ್ಷೇತ್ರದ ಮಹಿಮೆಯನ್ನು ಹೇಳಿರುವೆನು. ಇದರಲ್ಲಿ ಸಂಶಯವಿಲ್ಲವು." ಆಗ ಋಷಿಗಳೆಲ್ಲರೂ ಆ ಕ್ಷೇತ್ರದ ಮಹಿಮೆಯನ್ನು ಕೇಳಿ,

ಇತಿ ನಾಮಾನ್ಯನೇಕಾನಿ ಸಂತಿ ಕ್ಷೇತ್ರಸ್ಯ ತಸ್ಯ ತು ।
ಏವಂ ಕ್ಷೇತ್ರಸ್ಯ ಮಾಹಾತ್ಮ್ಯಂ ಸರ್ವಕ್ಷೇತ್ರೋತ್ತಮೋತ್ತಮಂ ॥ ೭೧ ॥

ಶ್ರೀಹಾಲಾಸ್ಯಂ ಸಮಾಖ್ಯಾತಂ ಮುನೀಂದ್ರಾಸ್ತನ್ನ ಸಂಶಯಃ ।
ಇತಿ ಶ್ರುತ್ವಾ ಮುನಿಶ್ರೇಷ್ಠಾ ಹಾಲಾಸ್ಯಕ್ಷೇತ್ರವೈಭವಂ ॥ ೭೨ ॥

ಸರ್ವೇ ವಿಸ್ಮಯಸಂಯುಕ್ತಾಃ ಪ್ರತ್ಯೂಚುಃ ಕುಂಭಸಂಭವಂ ।
ಸತ್ಯಮುಕ್ತಂ ಭಗವತಾ ಕ್ಷೇತ್ರಮಾಹಾತ್ಮ್ಯವೇದಿನಾ ॥ ೭೩ ॥

ಸರ್ವೇ ವಯಂ ಕೃತಾರ್ಥಾಸ್ಮ ಶ್ರುತ್ವಾ ತತ್ ಕ್ಷೇತ್ರವೈಭವಂ ।
ಅಥ ಹೇಮಾಬ್ಜಿನೀ ತೀರ್ಥಮಾಹಾತ್ಮ್ಯಂ ವಕ್ತುಮರ್ಹಸಿ ॥ ೭೪ ॥

ಇತಿ ತೇಷಾಂ ವಚಃ ಶ್ರುತ್ವಾ ಸರ್ವಜ್ಞಃ ಕುಂಭಸಂಭವಃ ।
ಪ್ರಭಾವಂ ಹೇಮಪದ್ಮಿನ್ಯಾ ವದತಿ ಶ್ರದ್ಧಯಾ ಸಹ ॥ ೭೫ ॥

॥ ಅಗಸ್ತ್ಯ ಉವಾಚ ॥

ವಕ್ಷ್ಯೇ ಹಿರಣ್ಯಪದ್ಮಿನ್ಯಾಸ್ಸಮುತ್ಪತ್ತಿಪುರಸ್ಸರಂ ।
ಮಾಹಾತ್ಮ್ಯಂ ಶ್ರುತಮಾತ್ರೇಣ ಮಹಾಪಾಪಹರಂ ಪರಂ ॥ ೭೬ ॥

ಜೀವನ್ಮುಕ್ತಿಪುರೇಶಸ್ಯ ಕೋಽಯಪ್ಯೇಮುರ್ಕ್ತಿದಾಯಿನಃ ।
ಅಜ್ಞಯಾ ತತ್ರ ತೀರ್ಥೇಷು ನ ಸಂತಿ ಜಲಜಂತವಃ ॥ ೭೭ ॥

---

ಆಶ್ಚರ್ಯಪಟ್ಟು "ಎಲೈ ಮಹರ್ಷಿಯೇ, ಕ್ಷೇತ್ರದ ಮಹಿಮೆಯನ್ನು ತಿಳಿದಿರುವ ನೀನು ನಿಜವನ್ನು ಹೇಳಿರುತ್ತೀಯೆ. ನಾವೆಲ್ಲರೂ ಇದನ್ನು ಕೇಳಿ ಕೃತಾರ್ಥರಾದೆವು. ಇನ್ನು ಮುಂದೆ ಹೇಮಾಬ್ಜಿನೀತೀರ್ಥದ ಮಹಿಮೆಯನ್ನು ನಮಗೆ ತಿಳಿಸು" ಎಂದು ಪ್ರಶ್ನೆ ಮಾಡಿದರು.

೭೫ ಅಗಸ್ತ್ಯಋಷಿಯು ಇವರ ಮಾತನ್ನು ಕೇಳಿ ಹೇಮಪದ್ಮಾಕರ ತೀರ್ಥದ ಮಹಿಮೆಯನ್ನು ಆದರದಿಂದ ಹೇಳಲು ಆರಂಭಿಸಿದನು.

೭೬-೭೭ ಅಗಸ್ತ್ಯನು ಹೇಳಿದನು:- "ಹೇಮಪದ್ಮಾಕರತೀರ್ಥವು ಹುಟ್ಟಿದ್ದು ಮೊದಲುಗೊಂಡು ಪಾಪನಾಶಕವಾದ ಅದರ ಮಹಿಮೆಯನ್ನು ಹೇಳುವೆನು. ಜೀವನ್ಮುಕ್ತಿಪುರಕ್ಕೆ ಅಧಿಪನಾಗಿರುವ, ಮುಕ್ತಿಯನ್ನು ಕೊಡುವ ಪರಮೇಶ್ವರನ ಆಜ್ಞೆಯಿಂದ ಆ ತೀರ್ಥದಲ್ಲಿ ಜಲಚರಪ್ರಾಣಿಗಳು ಯಾವುದೂ ವಾಸಮಾಡುವುದಿಲ್ಲ.

ನ ವಿದ್ಯಂತೇ ಯದಾ ಮೇಘಾ ಗಂಗಾದ್ಯಾಶ್ಚ ಸರಿದ್ವರಾಃ ।
ಸಮುದ್ರಾಶ್ಚಾನ್ಯತೀರ್ಥಾನಿ ಪುಣ್ಯಕ್ಷೇತ್ರಗತಾನಿ ಚ ॥ ೭೮ ॥

ತದಾ ಹಾಲಾಸ್ಯನಾಥೇನ ಪ್ರಾರ್ಥಿತೇನ ಗಣೇಶ್ವರೈಃ ।
ಮೂಲಲಿಂಗಾಭಿಷೇಕಾಯ ನಿರ್ಮಿತಂ ಶೂಲಪಾಣಿನಾ ॥ ೭೯ ॥

ಪುರಾ ಕದಂಬಕಾಂತಾರನಾಯಕಃ ಕರುಣಾನಿಧಿಃ ।
ಲೀಲಯಾ ಸಕಲೋ ಭೂತ್ವಾ ಸ್ವಭಾಸಾ ಭಾಸಯನ್ದಿಶಃ ॥ ೮೦ ॥

ಚಂದ್ರಮೌಳಿಸ್ತ್ರಿನೇತ್ರಶ್ಚ ನಾಗಯಜ್ಞೋಪವೀತವಾನ್ ।
ತ್ರಿಶೂಲೇನ ಕಪಾಲೇನ ವಿರಾಜಿತಭುಜದ್ವಯಃ ॥ ೮೧ ॥

ವಾಮಾಂಗಾಸಕ್ತಯಾ ದೇವ್ಯಾ ಸಹಿತೋ ವೃಷವಾಹನಃ ।
ನಂದ್ಯಾದಿಗಣನಾಥೈಶ್ಚ ಚಚಾರ ಭುವನತ್ರಯಂ ॥ ೮೨॥

೭೮-೭೯ ಈ ಪ್ರದೇಶದಲ್ಲಿ ಮಳೆಯು ಬರದೆ, ಗಂಗೆಯೇ ಮೊದಲಾದ ಪವಿತ್ರ ತೀರ್ಥಗಳು ಯಾವುದೂ ಇಲ್ಲದೆ ಇರುವಾಗ, ಶಿವನ ಗಣೇಶ್ವರರೆಲ್ಲರೂ ಮೂಲ ಲಿಂಗವನ್ನು ಅಭಿಷೇಕಮಾಡುವುದಕ್ಕಾಗಿ ಶಿವನನ್ನು ಪ್ರಾರ್ಥಿಸಿಕೊಂಡರು. ಆಗ ಪರಮೇಶ್ವರನು ಈ ತೀರ್ಥವನ್ನು ನಿರ್ಮಿಸಿದನು.

೮೦-೮೧ ಪೂರ್ವಕಾಲದಲ್ಲಿ ನಿರಾಕಾರನಾದ ಪರಮೇಶ್ವರನು ತಾನು ಸ್ವಭಾವ ದಿಂದ ಬಹಳಮಟ್ಟಿನ ದಯೆಯುಳ್ಳವನಾದ ಕಾರಣ, ಭೂಲೋಕವನ್ನು ಅನುಗ್ರಹಿಸು ವುದಕ್ಕಾಗಿ ಆಕಾರವನ್ನು ಹೊಂದಿದನು. ಸಕಲನಾದ ಪರಮೇಶ್ವರನ ಆಕಾರವು, ಶಿರಸ್ಸಿನಲ್ಲಿ ಚಂದ್ರನೂ, ಮೂರು ಕಣ್ಣುಗಳೂ, ಸರ್ಪದ ಯಜ್ಞೋಪವೀತವೂ, ಒಂದು ಕೈಯ್ಯಿನಲ್ಲಿ ಕಪಾಲವೂ, ಇನ್ನೊಂದು ಕೈಯ್ಯಿನಲ್ಲಿ ತ್ರಿಶೂಲವೂ ಉಳ್ಳದ್ದಾಗಿ, ತನ್ನ ತೇಜಸ್ಸಿನಿಂದ ದಿಕ್ಕುಗಳೆಲ್ಲವನ್ನೂ ಪ್ರಕಾಶಮಾಡುತ್ತಿದ್ದಿತು.

೮೨ ಪರಮೇಶ್ವರನು ಈ ರೀತಿಯಾದ ಆಕಾರವುಳ್ಳವನಾಗಿ ತನ್ನ ವಾಹನವಾದ ವೃಷಭದಮೇಲೆ ಕುಳಿತುಕೊಂಡು, ತನ್ನ ವಾಮಭಾಗದಲ್ಲಿ ದೇವಿಯಾದ ಪಾರ್ವತಿಯೊಡನೆಯೂ, ತನ್ನ ಸುತ್ತಲೂ ನಂದಿಯೇ ಮೊದಲಾದ ಗಣನಾತರಿಂದಲೂ ಕೂಡಿದವನಾಗಿ, ಮೂರು ಲೋಕಗಳನ್ನೂ ಸಂಚರಿಸುತ್ತಿದ್ದನು.

ತದಾನೀಂ ಬ್ರಹ್ಮವಿಷ್ಣ್ವಿಂದ್ರಪ್ರಮುಖಾ ದೇವತಾಗಣಾಃ
ಸ್ತುವಂತಿ ಚ ಮಹಾಭಕ್ತ್ಯಾ ಹಾಲಾಸ್ಯೇಶಂ ಪರಾತ್ಪರಂ ॥ ೮೩ ॥

ಅನುಗೃಹ್ಯ ತತೋ ದೇವಾನ್ ಚಿಂತಿತಾರ್ಥಪ್ರದಾನತಃ ।
ಪುನಃ ಕದಂಬವಿಪಿನಂ ಸ್ವಸ್ಥಾನಂ ಪ್ರಾಪ್ಯ ಶಂಕರಃ ॥ ೮೪ ॥

ಕೃಪಾದೃಷ್ಟ್ಯಾ ವಿಲೋಕ್ಯಾಥ ನಂದ್ಯಾದಿಗಣನಾಯಕಾನ್ ।
ಅಂತರ್ಧಾನಂ ಮಹಾಲಿಂಗೇ ಕರ್ತುಂ ದೇವಃ ಸಮುದ್ಯತಃ ॥ ೮೫ ॥

ತದಾನೀಂ ಗಣನಾಥಾಶ್ಚ ಪ್ರಾರ್ಥಯಂತಿ ಸ್ಮ ಶಂಕರಂ ।
ಜೀವನ್ಮುಕ್ತಿ ಪುರೇಶಾನ ಭಗವನ್ ಭಕ್ತವತ್ಸಲ ॥ ೮೬ ॥

ಪಶ್ಯ ಪಶ್ಯ ಮಹಾಲಿಂಗಮಭಿಷೇಕವಿವರ್ಜಿತಂ ।
ಅಸ್ಮಾಕಮಿಚ್ಛಾ ಮಹತೀ ಸಂಜಾತಾ ಸ್ನಾನಕರ್ಮಣಿ ॥ ೮೭ ॥

ಮಹಾಲಿಂಗಾಭಿಷೇಕಾಯ ಸ್ನಾನಾಯ ಚ ಶರೀರಿಣಾಂ ।
ಕುರು ಸದ್ಯಃ ಪುಣ್ಯತಮಂ ತೀರ್ಥಂ ಭೋಗಾಪವರ್ಗದಂ ॥ ೮೮ ॥

---

೮೩–೮೪ ಆಗ ಬ್ರಹ್ಮ, ವಿಷ್ಣು, ಮಹೇಂದ್ರರೇ ಮೊದಲಾದ ದೇವತೆಗಳೆಲ್ಲರೂ ಸರ್ವೋತ್ಕೃಷ್ಟನಾದ, ಹಾಲಾಸ್ಯಪತಿಯಾದ ಪರಮೇಶ್ವರನನ್ನು ಬಹಳ ಭಕ್ತಿಯಿಂದ ಸ್ತುತಿಮಾಡುತ್ತಿದ್ದರು. ಭಕ್ತರ ಇಷ್ಟಾರ್ಥಗಳನ್ನು ಕೊಡುವ ಪರಮೇಶ್ವರನು ತನ್ನನ್ನು ಸ್ತುತಿಮಾಡುವ ದೇವತೆಗಳ ಇಷ್ಟಾರ್ಥಗಳನ್ನು ಅನುಗ್ರಹಿಸಿ, ತನ್ನ ಸ್ವಸ್ಥಾನವಾದ ಕದಂಬವಿಪಿನಕ್ಕೆ ಬಂದನು.

೮೫–೮೮ ಆಗ ಪರಮೇಶ್ವರನು ಹಾಲಾಸ್ಯಕ್ಷೇತ್ರದಲ್ಲಿರುವ ತನ್ನ ರೂಪಾಂತರವಾದ ಸ್ವಯಂಭುಲಿಂಗದಲ್ಲಿ ತಾನು ಅಂತರ್ಧಾನವನ್ನು ಹೊಂದುವ ಇಚ್ಛೆಯುಳ್ಳವನಾಗಿ ತನ್ನ ಸುತ್ತಲೂ ಇರುವ ಗಣನಾಥರನ್ನು ಕೃಪಾದೃಷ್ಟಿಯಿಂದ ನೋಡಿದನು. ಅವರೆಲ್ಲರೂ " ಎಲೈ ಷಡ್ಗುಣೈಶ್ವರ್ಯ ಸಂಪನ್ನನಾದ, ಭಕ್ತವತ್ಸಲನಾದ ಜೀವನ್ಮುಕ್ತಪುರಾಧಿಪನಾದ ಶಂಕರನೇ ! ನೀನು ಅಭಿಷೇಕವೂ ಇಲ್ಲದಿರುವ ಈ ಮಹಾಲಿಂಗವನ್ನು ನೋಡು. ನಾವೆಲ್ಲರೂ ಸ್ನಾನಮಾಡಬೇಕೆಂಬ ಇಚ್ಛೆಯುಳ್ಳವರಾಗಿ ಇರುವೆವು. ಈ ಮಹಾಲಿಂಗದ ಅಭಿಷೇಕಕ್ಕಾಗಿಯೂ, ಪ್ರಾಣಿಗಳ ಸ್ನಾನಪಾನಗಳಿಗೂ, ಅನುಕೂಲವಾಗಿರುವಂತೆಯೂ, ಭೋಗಾಪವರ್ಗಗಳನ್ನು ಉಂಟುಮಾಡುವಂತೆಯೂ ಇರುವ, ಪವಿತ್ರಕರವಾದ ತೀರ್ಥವು ಈ ಪ್ರದೇಶದಲ್ಲಿ ಉಂಟಾಗುವ ಹಾಗೆ ಈಗ ಅನುಗ್ರಹವನ್ನು ಮಾಡಬೇಕು " ಎಂದು ಪ್ರಾರ್ಥನೆ ಮಾಡಿದರು.

ಗಣೈರೇವಂ ಪ್ರಾರ್ಥಿತಸ್ಸನ್ ಜೀವನ್ಮುಕ್ತಿಪುರೀಶ್ವರಃ ।
ಜಘಾನ ಚ ತ್ರಿಶೂಲೇನ ಲಿಂಗಸ್ಯಾಗ್ನೇಯದೇಶತಃ ॥ ೮೯ ॥

ಭಿನತ್ತಿ ಶೂಲಮೂಲೇನ ಬ್ರಹ್ಮಾಂಡಾಧಃಕಟಾಹಕಂ ।
ಬ್ರಹ್ಮಾಂಡಾನಾಂ ತಥಾ ಧಾರಾ ನಿರ್ಮಲಾಶ್ಚಾತಿಪಾವನಾಃ ॥ ೯೦ ॥

ಆಪಃ ಸಮುದ್ಗತಾಸ್ತತ್ರ ತಟಾಕೇ ಶೂಲಖಾತಿತೇ ।
ಪುನರುಚ್ಚೈರುದ್ಗತಾಶ್ಚ ಪ್ರವಾಹಾಶ್ಚ ಜಲಸ್ಯ ಚ ॥ ೯೧ ॥

ಸ್ತಂಭಿತಾ ದೇವದೇವೇನ ತ್ರೈಲೋಕ್ಯಾಭಯದಾಯಿನಾ ।
ಉತ್ತಮಾಂಗಧೃತಂ ಗಾಂಗಂ ವಾರಿ ಗಂಗಾಧರಃ ಪುನಃ ॥ ೯೨ ॥

ಸಂಯೋಜ್ಯ ತತ್ರ ತೀರ್ಥೇ ಚ ಸರ್ವಾನಾಹ ಗಣೇಶ್ವರಾನ್ ।

॥ ಈಶ್ವರ ಉವಾಚ ॥

ಗಣಾಃ ಶೃಣ್ವಂತು ಮದ್ವಾಕ್ಯಮಿದಂ ತೀರ್ಥಂ ಮಯಾ ಕೃತಂ ।
ಶಿವತೀರ್ಥಮಿತಿ ಪ್ರೋಕ್ತಂ ಶಿವದತ್ವಾತ್ಸ್ವಭಾವತಃ ॥ ೯೩ ॥

---

೮೯–೯೦ ಜೀವನ್ಮುಕ್ತಿ ಪುರೀಶ್ವರನಾದ ಶಂಕರನು ತನ್ನ ಗಣಗಳ ಪ್ರಾರ್ಥನೆಗೆ ಅನುಸಾರವಾಗಿ, ಆ ಮಹಾಲಿಂಗವಿರುವ ಪ್ರದೇಶದ ಆಗ್ನೇಯಭಾಗದಲ್ಲಿ ತನ್ನ ತ್ರಿಶೂಲಾಯುಧದಿಂದ ಬ್ರಹ್ಮಾಂಡ ಕಟಾಹದ ಮೂಲಭಾಗದವರಿವಿಗೂ ಭೇದಿಸಿದನು. ಆಗ ಬ್ರಹ್ಮಾಂಡದ ಮೂಲಭಾಗದಿಂದ ನಿರ್ಮಲವಾದ, ಪವಿತ್ರಕರಗಳಾದ ನೀರಿನಧಾರೆಗಳು ಬಹಳವಾಗಿ ಆ ಸರೋವರಕ್ಕೆ ಬಂದುವು. ನೀರಿನ ಧಾರೆಗಳು ಬಹಳವಾಗಿ ನೀರನ್ನು ಮೇಲಕ್ಕೆ ಎರಚುತ್ತಿರುವುದನ್ನೂ, ಕೊಳವು ತುಂಬಿದ್ದನ್ನೂ ನೋಡಿದ ಪರಮೇಶ್ವರನು, ಮೂರು ಲೋಕಕ್ಕೂ ಅಭಯವನ್ನು ಕೊಡುವವನಾಗಿ ಆ ಕ್ಷಣದಲ್ಲಿಯೇ ಆ ನೀರಿನ ಧಾರೆಗಳನ್ನು ನಿಲ್ಲಿಸಿದನು.

೯೧–೯೩ ಅನಂತರದಲ್ಲಿ ಶಂಕರನು ತಾನು ಗಂಗೆಯನ್ನು ತನ್ನ ಶಿರಸ್ಸಿನಲ್ಲಿ ಧರಿಸಿರುವುದರಿಂದ ಆ ಗಂಗಾಜಲವನ್ನು ಆ ಕೊಳದ ನೀರಿಗೆ ಸೇರಿಸಿ ತನ್ನ ಗಣನಾಥರ ಸಂಗಡ ಮಾತನಾಡಿದನು, ಈಶ್ವರನು ಹೇಳಿದನು:-ಎಲೈ ಗಣಗಳಿರಾ ನನ್ನ ಮಾತನ್ನು ನೀವೆಲ್ಲರೂ ಕೇಳಿರಿ. ಈತೀರ್ಥವನ್ನು ನಾನು ನಿರ್ಮಿಸಿರುವೆನು. ಇದು ಸ್ವಭಾವದಿಂದಲೂ ಮಂಗಳವನ್ನುಂಟುಮಾಡುವ ಕಾರಣದಿಂದಲೇ ಶಿವತೀರ್ಥವೆಂಬ ಹೆಸರನ್ನು ಹೊಂದಿರುವುದು.

ತ್ರೈಲೋಕ್ಯೇ ಯಾನಿ ತೀರ್ಥಾನಿ ಭವಿಷ್ಯಂತಿ ಗಣೇಶ್ವರಾಃ ।
ತೇಭ್ಯೋಽಖಿಲೇಭ್ಯಸ್ತೀರ್ಥೇಭ್ಯಃ ಪರತ್ವಾತ್ಪರತೀರ್ಥಕಂ ॥ ೯೪ ॥

ತೀರ್ಥಾನಾಮಾದಿಭೂತತ್ವಾದಾದಿತೀರ್ಥಮಿತೀರಿತಂ ।
ಮಹತ್ವಾಚ್ಚ ಮಹಾತೀರ್ಥಂ ತೀರ್ಥಾನಾಂ ಮಹತಾಮಪಿ ॥ ೯೫ ॥

ದೃಷ್ಟಮಾತ್ರೇಣ ಸರ್ವೇಷಾಂ ಸರ್ವಪಾಪಹರಂ ಯತಃ ।
ಪಾಪನಾಶನಮಿತ್ಯುಕ್ತಂ ತತ್ತು ತೀರ್ಥಂ ಸುಪಾವನಂ ॥ ೯೬ ॥

ಅಸ್ಯ ತೀರ್ಥಸ್ಯ ಸಂಸ್ಪರ್ಶಾದಶ್ವಮೇಧಫಲಂ ಯತಃ ।
ಮಹಾಪುಣ್ಯಪ್ರದಮಿತಿ ಪ್ರೋಕ್ತಂ ತೀರ್ಥವರಂ ತತಃ ॥ ೯೭ ॥

ಜ್ಞಾನತೀರ್ಥಂ ಮುಕ್ತಿತೀರ್ಥಂ ಕಾರಣತ್ವಾತ್ತಯೋರಿದಂ ।
ಮದ್ಗಂಗಾಸಂಗತಸ್ತ್ವೇತಚ್ಛಿವಗಂಗೇತಿ ಕೀರ್ತಿತಂ ॥ ೯೮ ॥

---

೯೪–೯೫ ಮೂರು ಲೋಕಗಳಲ್ಲಿಯೂ ಉಂಟಾಗುವ ತೀರ್ಥಗಳೆಲ್ಲಕ್ಕಿಂತಲೂ ಈ ತೀರ್ಥವು ಉತ್ತಮವಾದ ಕಾರಣ ಇದು ಅತ್ಯಂತ ಉತ್ತಮವಾದ ತೀರ್ಥವು. ತೀರ್ಥಗಳೆಲ್ಲಕ್ಕೂ ಈ ತೀರ್ಥವು ಮೊದಲನೆಯದಾದ ಕಾರಣ ಆದಿ ತೀರ್ಥವೆಂದು ಇದು ಪ್ರಸಿದ್ಧವಾಗುವುದು. ಪವಿತ್ರವಾದ ದೊಡ್ಡ ದೊಡ್ಡ ತೀರ್ಥಗಳಿಗಿಂತ ಹೆಚ್ಚು ಮಹಿಮೆಯುಳ್ಳ ಕಾರಣ ಮಹಾ ತೀರ್ಥವೆನಿಸಿಕೊಳ್ಳುವುದು.

೯೬ ಈ ತೀರ್ಥವನ್ನು ನೋಡಿದ ಮಾತ್ರದಿಂದಲೇ ಪವಿತ್ರತೆಯು ಉಂಟಾಗುವುದರಿಂದಲೂ, ಪಾಪಗಳೆಲ್ಲವು ನಾಶವಾಗುವುದರಿಂದಲೂ ಇದಕ್ಕೆ ಪಾಪನಾಶನವೆಂದು ಹೆಸರು ಉಂಟಾಗಿರುವುದು.

೯೭–೯೮ ಈ ತೀರ್ಥವನ್ನು ಸ್ಪರ್ಶಮಾಡಿದ್ದರಿಂದ ಅಶ್ವಮೇಧಯಾಗವನ್ನು ಮಾಡಿದ ಪುಣ್ಯವು ಉಂಟಾಗುವ ಕಾರಣ, ಶ್ರೇಷ್ಠವಾದ ಈ ತೀರ್ಥವು ಮಹಾಪುಣ್ಯಪ್ರದವೆನಿಸುವುದು. ಜ್ಞಾನವನ್ನೂ, ಮುಕ್ತಿಯನ್ನೂ ಇದನ್ನು ಸೇವಿಸುವವರಿಗೆ ಉಂಟುಮಾಡುವ ಕಾರಣ ಇದಕ್ಕೆ ಜ್ಞಾನತೀರ್ಥವೆಂತಲೂ, ಮುಕ್ತಿತೀರ್ಥವೆಂತಲೂ ಹೆಸರು ಉಂಟಾಗಿರುವುದು. ನನ್ನ ಶಿರಸ್ಸಿನಲ್ಲಿರುವ ಗಂಗೆಯ ಸಂಬಂಧವಿರುವ ಕಾರಣ ಈ ತೀರ್ಥಕ್ಕೆ ಶಿವಗಂಗಾ ಎಂದು ಹೆಸರು ಬಂದಿರುವುದು.

ಉತ್ತಮುತ್ತ್ವಾಚ್ಚ ತೀರ್ಥಾನಾಮಿದಂ ತೀರ್ಥೋತ್ತಮೋತ್ತಮಂ ।
ವೃತ್ರಹತ್ಯಾಂ ಚ ವೃತ್ರಾರೇರ್ಹರಿಷ್ಯಾಮಿ ಯದಾ ತದಾ ॥ ೯೯ ॥

ಹೇಮಪದ್ಮಾಕರಮಿತಿ ನಾಮಚಾಸ್ಯ ಭವಿಷ್ಯತಿ ।
ಸರ್ವಧರ್ಮಪ್ರದಮಿತಿ ಸರ್ವಾರ್ಥಪ್ರದಮಿತ್ಯಪಿ ॥ ೧೧೦ ॥

ಸರ್ವಕಾಮಪ್ರದಮಿತಿ ದೀರ್ಘಾಯುಷ್ಕರಮಿತ್ಯಪಿ ।
ದೇವಖಾತಂ ಶೂಲಖಾತಂ ಮಹಾಮಾಯಾರ್ಣವಾವೃತಂ ॥ ೧೦೧ ॥

ಯಶಸ್ಕರಂ ಪುಷ್ಟಿಕರಂ ಶ್ರೀಕರಂ ಚ ಶಿವಪ್ರದಂ ।
ಭಯಾಪಹಂ ತೀರ್ಥರಾಜಂ ಸರ್ವತೀರ್ಥಫಲಪ್ರದಂ ॥ ೧೦೨ ॥

ಸರ್ವಶತ್ರುಹರಂ ಚೇತಿ ಸಮಸ್ತಸುಖಕಾರಣಂ ।
ಏವಮಾದೀನ್ಯನೇಕಾನಿ ನಾಮಾನಿ ಪ್ರಥಿತಾನಿ ಚ ॥ ೧೦೩ ॥

ಸಂತಿ ಸಾರ್ಥಾನಿ ಸತ್ಯಾನಿ ಮತ್ತೀರ್ಥಸ್ಯಾಸ್ಯ ಮದ್ಗಣಾಃ ।
ಅಸ್ಮಿಂಸ್ತೀರ್ಥೇತು ಯಸ್ಸ್ನಾತ್ವಾ ದೇವಾದೀನ್ಪರಿತರ್ಪ್ಯ ಚ ॥ ೧೦೪ ॥

---

೯೯–೧೦೨ ತೀರ್ಥಗಳಲ್ಲಿ ಇದು ಉತ್ತಮವಾದ ಕಾರಣ ಅತ್ಯಂತ ಶ್ರೇಷ್ಠವಾದ ತೀರ್ಥವಾಗಿರುವುದು. ಇಂದ್ರನ ಬ್ರಹ್ಮಹತ್ಯೆಯನ್ನು ನಾನು ನಾಶಪಡಿಸುವಾಗ ಈ ತೀರ್ಥಕ್ಕೆ ಹೇಮಪದ್ಮಾಕರವೆಂದು ಹೆಸರು ಬರುವುದು. ಈ ತೀರ್ಥವು ಎಲ್ಲಾ ಧರ್ಮ ಫಲಕೊಡುವ ಮಹಿಮೆಯುಳ್ಳದ್ದಾಗಿರುವುದು. ಈ ತೀರ್ಥಕ್ಕೆ ಸರ್ವಧರ್ಮಪ್ರದತೀರ್ಥ, ಸರ್ವಾರ್ಥಪ್ರದತೀರ್ಥ, ಸರ್ವಕಾಮಪ್ರದತೀರ್ಥ, ಧೀರ್ಘಾಯುಷ್ಕರತೀರ್ಥ, ದೇವ ಖಾತತೀರ್ಥ, ಶೂಲಖಾತತೀರ್ಥ, ಮಾಯಾಮಹಾರ್ಣವಾವೃತತೀರ್ಥ, ಯಶಸ್ಕರ ತೀರ್ಥ, ಪುಷ್ಟಿಕರತೀರ್ಥ, ಶ್ರೀಕರತೀರ್ಥ, ಶಿವಪ್ರದತೀರ್ಥ, ಸರ್ವಶತ್ರುಹರತೀರ್ಥ, ಸಮಸ್ತಸುಖಕಾರಣತೀರ್ಥ, ಎಂಬ ಹೆಸರು ಬಂದಿರುವುದು. ಇದೂ ಅಲ್ಲದೆ ಇನ್ನೂ ಅನೇಕವಾದ ಹೆಸರುಗಳು ಈ ತೀರ್ಥಕ್ಕೆ ಇರುವುವು.

೧೦೩–೧೦೫ ಈ ತೀರ್ಥಕ್ಕೆ ಬರುವ ಹೆಸರುಗಳೆಲ್ಲವೂ ಅರ್ಥಕ್ಕೆ ಅನುಸಾರ ವಾಗಿರುವವು. ಆ ಹೆಸರುಗಳು ಆಯಾಯ ಗುಣಗಳು ಈ ತೀರ್ಥದಲ್ಲಿ ಕಂಡುಬರು ವುದರಿಂದ ಸಾರ್ಥಕವಾದುವುಗಳು. ಈ ತೀರ್ಥದಲ್ಲಿ ಸ್ನಾನವನ್ನು ಮಾಡಿ ದೇವತೆಗಳೇ ಮೊದಲಾದವರನ್ನು ಕುರಿತು ತರ್ಪಣವನ್ನು ಮಾಡಿ, ತನ್ನ ಶಕ್ತ್ಯಾನು

**ದತ್ವಾ ದಾನಂ ಯಥಾಶಕ್ತಿ ಜಪ್ತ್ವಾ ಪಂಚಾಕ್ಷರಂ ಪರಂ ।**
**ಪ್ರದಕ್ಷಿಣನಮಸ್ಕಾರಸ್ತೋತ್ರೈಸ್ಸಂತೋಷ್ಯ ಮಾಮಪಿ ॥ ೧೦೫ ॥**

**ಕೃತಕೃತ್ಯೋಭವೇಜ್ಜಂತುಸ್ಸತ್ಯಂ ಸರ್ವಗಣಾಧಿಪಾಃ ।**
**ಏತತ್ತೀರ್ಥಜಲೈರ್ಲಿಂಗಂ ಸಕೃತ್ಸಂಸ್ನಾಪ್ಯ ಭಕ್ತಿತಃ ॥ ೧೦೬ ॥**

**ಸರ್ವತೀರ್ಥಾಭಿಷೇಕೇನ ಯತ್ಫಲಂ ತದವಾಪ್ನುಯಾತ್ ।**
**ಭವಂತಃ ಶ್ರದ್ಧಯಾ ಸಾರ್ಧಂ ಪವಿತ್ರೇ ತೀರ್ಥವಾರಿಣಿ ॥ ೧೦೭ ॥**

**ಸ್ನಾತ್ವಾಭಿಷೇಕಂ ಕುರ್ವಂತು ನಿತ್ಯಂ ಲಿಂಗಾತ್ಮನೋ ಮಮ ।**
**ಇತ್ಯುಕ್ತ್ವಾದೇವದೇವೋಪಿ ಸದ್ಯಸ್ಸಾರ್ಧಂ ಗಣೇಶ್ವರೈಃ ॥ ೧೦೮ ॥**

**ಅವತೀರ್ಯ ಮಹಾತೀರ್ಥೇ ಸ್ನಾತ್ವಾ ಹಾಲಾಸ್ಯಸುಂದರಃ ।**
**ದತ್ವಾನುಜ್ಞಾಂ ಗಣಾದೀನಾಂ ಸ್ನಾನಾಯ ಪರಯಾ ಮುದಾ ॥ ೧೦೯ ॥**

---

ಸಾರವಾಗಿ ದಾನಮಾಡಿ, ಉತ್ತಮವಾದ ಪಂಚಾಕ್ಷರ ಮಂತ್ರವನ್ನು ಜಪಮಾಡಬೇಕು. ಅನಂತರದಲ್ಲಿ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಸ್ತೋತ್ರಗಳಿಂದ ನನ್ನನ್ನು ಸಂತೋಷಪಡಿಸುವ ಪ್ರಾಣಿಯು ಕೃತಕೃತ್ಯನಾಗುವನು. ಇದು ನಿಜವಾದದ್ದು.

೧೦೬-೧೦೮ ಎಲೈ, ಗಣೇಶ್ವರರೇ ಕೇಳಿರಿ. ಈ ತೀರ್ಥದ ನೀರಿನಿಂದ ಸ್ವಯಂಭು ಲಿಂಗವನ್ನು ಒಂದುಸಾರಿ ಭಕ್ತಿಯಿಂದ ಅಭಿಷೇಕವನ್ನು ಮಾಡಿದವನು, ಎಲ್ಲಾ ತೀರ್ಥಗಳಿಂದಲೂ ಅಭಿಷೇಕಮಾಡಿದ ಪುಣ್ಯವನ್ನು ಹೊಂದುವನು. ಆದ್ದರಿಂದ ನೀವೆಲ್ಲರೂ ಭಕ್ತಿಯಿಂದ ಪವಿತ್ರವಾದ ಈ ತೀರ್ಥದ ನೀರಿನಲ್ಲಿ ಸ್ನಾನಮಾಡಿ, ಲಿಂಗ ರೂಪದಿಂದ ಇರುವ ನನ್ನನ್ನು ಪ್ರತಿದಿನವೂ ಪೂಜೆಮಾಡಿರಿ. " ಪರಮೇಶ್ವರನು ತನ್ನ ಗಣಾಧಿಪರಿಗೆ ಈ ರೀತಿಯಾಗಿ ಅಪ್ಪಣೆಯನ್ನು ಮಾಡಿ, ತಾನು ದೇವ ದೇವನಾಗಿ ದ್ದಾಗ್ಯೂ ಅವರೊಡನೆ ತಾನೂ ಆ ತೀರ್ಥದಲ್ಲಿ ಸ್ನಾನವನ್ನು ಮಾಡಿದನು. ಅನಂತರ ದಲ್ಲಿ ಹಾಲಾಸ್ಯಪತಿಯಾದ, ಪರಶಿವನಾದ, ಸುಂದರೇಶ್ವರನು ತನ್ನ ಗಣಗಳಿಗೆ ಅನು ಜ್ಞೆಯನ್ನು ಕೊಟ್ಟು ಬಹಳ ಸಂತೋಷದಿಂದ ಆ ಮಹಾಲಿಂಗದಲ್ಲಿ ಅಂತರ್ಧಾನವನ್ನು ಹೊಂದಿದನು.

೧೦೯-೧೧೦ ಆಗ ಗಣೇಶ್ವರರು ಶಿವನ ವಾಕ್ಯವನ್ನು ಅನುಸರಿಸಿ ಆ ತೀರ್ಥದಲ್ಲಿ ಸ್ನಾನವನ್ನು ಮಾಡಿದರು. ಅನಂತರ ಆ ಸ್ವಯಂಲಿಂಗಕ್ಕೆ ಆ ತೀರ್ಥದಿಂದ ಅಭಿಷೇಕ

ತತ್ರ ಸ್ವಾಯಂಭುವೇ ಲಿಂಗೇ ತಿರೋಧತ್ತಪರಃ ಶಿವಃ ।
ತದಾನೀಂ ಶಿವವಾಕ್ಯಾತ್ತು ಸ್ನಾತ್ವಾ ಲಿಂಗಂ ಗಣೇಶ್ವರಾಃ ॥ ೧೧೦ ॥

ಅಭಿಷಿಚ್ಯ ವಿಧಾನೇನ ಸರ್ವಾನ್ ಕಾಮಾನವಾಪ್ನುಯುಃ ।
ಏವಂ ಸುವರ್ಣಪದ್ಮಿನ್ಯಾ ಉತ್ಪತ್ತಿಃ ಕಥಿತಾ ಮಯಾ ॥ ೧೧೧ ॥

ವಕ್ಷ್ಯಾಮಿ ತಸ್ಯಾ ಮಾಹಾತ್ಮ್ಯಂ ಸಂಗ್ರಹೇಣ ಮುನೀಶ್ವರಾಃ ।
ತಸ್ಯಾ ದರ್ಶನಮಾತ್ರೇಣ ಸರ್ವೈರಂಹೋಭಿರುಜ್ಝಿತಃ ॥ ೧೧೨ ॥

ಸಂಸ್ನಾಯ ಹೇಮಪದ್ಮಿನ್ಯಾಂ ಶ್ರೇಯಃ ಪ್ರಾಪ್ನೋತಿ ಪುಷ್ಕಲಂ ।
ಸರ್ವತೀರ್ಥೇಷು ಸಂಸ್ನಾಯ ಯತ್ಪುಣ್ಯಂ ಸಮವಾಪ್ಯತೇ ॥ ೧೧೩ ॥

ತತ್ಪುಣ್ಯಂ ಪ್ರಾಪ್ಯತೇ ಸ್ವರ್ಣಪದ್ಮಿನ್ಯಾಮೇಕಮಜ್ಜನಾತ್ ।
ಶುದ್ಧಾಭಿರ್ಮೃತ್ತಿಕಾಭಿಶ್ಚ ಮಹಾತೀರ್ಥೇ ವಿಧಾನತಃ ॥ ೧೧೪ ॥

ಸಂಸ್ನಾಯ ವಾರುಣೈಸ್ಸೂಕ್ತೈಶ್ಶ್ರದ್ಧಯಾ ಪರಯಾ ಸಹ ।
ಸರ್ವ ತೀರ್ಥೇಷು ಯತ್ಪುಣ್ಯಂ ತತ್ಫಲಂ ಸ್ನಾನಮಾತ್ರತಃ ॥ ೧೧೫ ॥

---

ವನ್ನು ಮಾಡಿ, ತಮತಮಗೆ ಬೇಕಾದ ಇಷ್ಟಾರ್ಥಗಳೆಲ್ಲವನ್ನೂ ಹೊಂದಿದರು. ಹೇಮಾಬ್ಜಿನೀತೀರ್ಥದ ಉತ್ಪತ್ತಿ ಪ್ರಕಾರವನ್ನು ಈ ರೀತಿಯಾಗಿ ನಾನು ಹೇಳಿದೆನು

೧೧೧-೧೧೨. ಎಲೈ ಮುನೀಶ್ವರರೇ ಕೇಳಿರಿ. ಸಂಕ್ಷೇಪವಾಗಿ ಆ ತೀರ್ಥದ ಮಹಿಮೆಯನ್ನು ಹೇಳುವೆನು. ಆ ತೀರ್ಥದ ದರ್ಶನಮಾತ್ರದಿಂದ ಪ್ರಾಣಿಯು ಪಾಪಗಳನ್ನು ಕಳೆದುಕೊಳ್ಳುವುದು. ಸ್ನಾನವನ್ನು ಮಾಡಿ ಬಹಳವಾದ ಶ್ರೇಯಸ್ಸನ್ನು ಹೊಂದುವುದು. ಎಲ್ಲಾ ತೀರ್ಥಗಳಲ್ಲಿಯೂ ಸ್ನಾನವನ್ನು ಮಾಡುವುದರ ಪುಣ್ಯವು ಈ ಹೇಮಾಬ್ಜಿನೀತೀರ್ಥದಲ್ಲಿ ಒಂದುಸಾರಿ ಸ್ನಾನಮಾತ್ರದಿಂದಲೇ ಉಂಟಾಗುವುದು.

೧೧೩-೧೧೫. ಪರಿಶುದ್ಧವಾದ ಮೃತ್ತಿಕೆಗಳಿಂದ ಶಾಸ್ತ್ರಕ್ಕನುಸಾರವಾಗಿ ಶೌಚ ಮಾಡಿಕೊಂಡು, ವಾರುಣಸೂಕ್ತಗಳನ್ನು ಹೇಳಿಕೊಂಡು, ಈ ಸ್ವರ್ಣಪದ್ಮಾಕರದಲ್ಲಿ ಸ್ನಾನಮಾಡಿದವನು ಬಹಳ ಸಂತೋಷವುಳ್ಳವನಾಗಿ ಎಲ್ಲಾ ತೀರ್ಥಗಳಲ್ಲಿಯೂ ಸ್ನಾನ ಮಾಡಿದ ಪುಣ್ಯಫಲವನ್ನು ಹೊಂದುವನು. ಇದು ಸತ್ಯವಾದದ್ದು.

ತತ್ಸರ್ವಂ ಪುಣ್ಯಮಾಪ್ನೋತಿ ಸತ್ಯಮುಕ್ತಂ ಮುನೀಶ್ವರಾಃ ।
ಅನಿಚ್ಛಯಾಪಿ ಸಂಸ್ಪೃಷ್ಟೋ ಜಾತವೇದಾ ಯಥಾ ದಹೇತ್ ॥ ೧೧೬ ॥

ಅನಿಚ್ಛಯಾಪಿ ಸಂಸ್ಪೃಷ್ಟಂ ಶಿವತೀರ್ಥಂ ದಹೇದಘಂ ।
ಹೇಮಪದ್ಮಾಕರೇ ಸ್ನಾತಿ ಯೋ ವಾ ಕೋ ವಾ ದಿನೇ ದಿನೇ ॥ ೧೧೭ ॥

ಜೀವನ್ಮುಕ್ತಸ್ಸವಿಜ್ಞೇಯಃ ಕೃತಕೃತ್ಯೋ ನ ಸಂಶಯಃ ।
ವಾರುಣಾದಪಿ ಚಾಗ್ನೇಯಾನ್ಮಾಹೇಂದ್ರಾನ್ಮಾರುತಾತ್ಮನಃ ॥ ೧೧೮ ॥

ಮಂತ್ರಸ್ನಾನಾದಪಿ ವರಂ ಹೇಮಾಬ್ಜಿನ್ಯಾಂ ತು ಮಜ್ಜನಂ ।
ಯಸ್ಸ್ನಾತ್ವಾ ಶಿವಗಂಗಾಯಾಂ ಸೋಮಸುಂದರದರ್ಶನಂ ॥ ೧೧೯ ॥

ಕರೋತಿ ಶ್ರದ್ಧಯಾ ತಸ್ಯ ಶ್ರೇಯಸಾಂ ಶೋ ನ ವಿದ್ಯತೇ ।
ಯಾನಿ ಕಾನಿ ಪವಿತ್ರಾಣಿ ಶಾಸ್ತ್ರೋಕ್ತಾನಿ ಮುನೀಶ್ವರಾಃ ॥ ೧೨೦ ॥

---

೧೧೬–೧೧೮ ಬೆಂಕಿಯು ಸುಡುವ ಸ್ವಭಾವವನ್ನು ಹೊಂದಿರುವ ಹಾಗೆ ಈ ತೀರ್ಥವು ಸುಮ್ಮನೆ ಸ್ಪರ್ಶಮಾಡಿದಾಗ್ಯೂ ಪಾಪರಾಶಿಗಳನ್ನು ಪರಿಹರಿಸುವ ಮಹಿಮೆಯುಳ್ಳದ್ದಾಗಿರುವುದು. ಈ ಹೇಮಪದ್ಮಾಕರದಲ್ಲಿ ಪ್ರತಿದಿನವೂ ಸ್ನಾನಮಾಡುವವನು ಜೀವನ್ಮುಕ್ತನಾಗಿರುವುದರಲ್ಲಿ ಸಂಶಯವಿಲ್ಲ. ವಾರುಣಸ್ನಾನ, ಆಗ್ನೇಯಸ್ನಾನ, ಮಾಹೇಂದ್ರಸ್ನಾನ, ಮಾರುತಸ್ನಾನ, ಮಂತ್ರಸ್ನಾನಮಾಡುವವರಿಗೆ ಉಂಟಾಗುವ ಫಲಕ್ಕಿಂತಲೂ, ಈ ತೀರ್ಥದಲ್ಲಿ ಸ್ನಾನಮಾಡುವುದು ಹೆಚ್ಚು ಫಲವನ್ನು ಕೊಡುವುದು.

೧೧೯–೧೨೩ ಈ ಶಿವಗಂಗಾ ತೀರ್ಥದಲ್ಲಿ ಸ್ನಾನಮಾಡಿದವನು ಸೋಮಸುಂದರೇಶ್ವರನ ದರ್ಶನವನ್ನು ಮಾಡಿದಲ್ಲಿ,ಅವನಿಗೆ ಉಂಟಾಗುವ ಶ್ರೇಯಸ್ಸಿನ ಪಾರವೇ ಇರುವುದಿಲ್ಲ. ಶಾಸ್ತ್ರದಲ್ಲಿ ಪವಿತ್ರಕರಗಳೆಂದು ಹೇಳಿರುವ ಎಲ್ಲಾ ತೀರ್ಥಗಳಿಗಿಂತಲೂ ಈ ಹೇಮಪದ್ಮಾಕರತೀರ್ಥ ಜಲವು ಹೆಚ್ಚು ಪವಿತ್ರವಾದದ್ದು. ಭಕ್ತಿಯಿಲ್ಲದೆ ಉದಾಸೀನಭಾವದಿಂದಲಾದರೂ ಈ ತೀರ್ಥದಲ್ಲಿ ಸ್ನಾನಮಾಡಿದವನೂ ಕೂಡ ಈ ತೀರ್ಥದ ಮಹಿಮೆಯಿಂದ ಸ್ವರ್ಗವನ್ನು ಹೊಂದುವನು. ಹೀಗಿರುವಲ್ಲಿ ಭಕ್ತಿಯಿಂದ

ತೇಭ್ಯಃ ಪವಿತ್ರಮತುಲಂ ಹೇಮಪದ್ಮಾಕರಾಂಬು ಚ ।
ಅಶ್ರದ್ಧಯಾಪಿ ಯಸ್ಸ್ನಾತೋ ಮಮ ತೀರ್ಥೇ ತು ಮಾನವಃ ॥ ೧೨೧ ॥

ಸೋऽಪಿ ಸ್ವರ್ಗಮವಾಪ್ನೋತಿ ತಸ್ಯ ತೀರ್ಥಸ್ಯ ವೈಭವಾತ್ ।
ಶ್ರದ್ಧಯಾ ವಿಧಿನಾ ಸ್ನಾತ್ವಾ ದೇವಾದೀನಾಂ ತು ತರ್ಪಣಂ ॥ ೧೨೨ ॥

ಕುಶಾಕ್ಷತತಿಲೈಃ ಕೃತ್ವಾ ಸರ್ವಯಜ್ಞಫಲಂ ಲಭೇತ್ ।
ಸ್ನಾತ್ವಾ ಹಿರಣ್ಯಪದ್ಮಿನ್ಯಾಂ ತತ್ತೀರೇ ಕಾಂಚನಾದಿಕಂ ॥ ೧೨೩ ॥

ಯಃ ಪ್ರದದ್ಯಾದ್ಯಥಾಶಕ್ತಿ ಮಹಾದಾನಫಲಂ ಲಭೇತ್ ।
ಸ್ನಾನಂ ವ್ರತಂ ಜಪೋ ದಾನಂ ತಪೋ ನಾನ್ಯತ್ರ ಯತ್ಕೃತಂ ॥ ೧೨೪ ॥

ತತ್ಸರ್ವಂ ಕೋಟಿಗುಣಿತಂ ಭವೇದ್ದೇವಾಬ್ಜಿನೀತಟೇ ।
ಜನ್ಮರ್ಕ್ಷೇ ತು ಕೃತಸ್ನಾನೋ ಹೇಮಾಬ್ಜಿನ್ಯಾಂ ನರೋತ್ತಮಃ ॥ ೧೨೫ ॥

ಜನ್ಮಜನ್ಮಾಂತರಕೃತೈ ಸ್ಸರ್ವಪಾಪೈಃ ಪ್ರಮುಚ್ಯತೇ ।
ಚೈತ್ರೇ ಮಾಸೇ ಕಾರ್ತಿಕೇ ಚ ದುರ್ಲಭಾ ಹೇಮಪದ್ಮಿನೀ ॥ ೧೨೬ ॥

---

ಶಾಸ್ತ್ರಕ್ರಮವಾಗಿ ಈ ತೀರ್ಥದಲ್ಲಿ ಸ್ನಾನವನ್ನು ಮಾಡಿ ದೇವಪಿತ್ರಾದಿಗಳಿಗೆ ಆಯಾಯ ದ್ರವ್ಯದಾನ ಪುರಸ್ಸರವಾಗಿ ತರ್ಪಣವನ್ನು ಮಾಡಿದವನಿಗೆ ಎಲ್ಲಾ ವಿಧವಾದ ಯಜ್ಞಗಳ ಫಲವು ಉಂಟಾಗುವುದು.

೧೨೩–೧೨೬ ಈ ಹಿರಣ್ಯಪದ್ಮಿನೀ ತೀರ್ಥದಲ್ಲಿ ಸ್ನಾನವನ್ನು ಮಾಡಿ ಅದರ ದಡದಲ್ಲಿ ಚಿನ್ನವೇ ಮೊದಲಾದುವುಗಳನ್ನು ತನ್ನ ಶಕ್ತ್ಯನುಸಾರವಾಗಿ ದಾನಮಾಡಿದವನು ಮಹಾದಾನಗಳನ್ನು ಮಾಡಿದ ಫಲವನ್ನು ಹೊಂದುವನು. ಇತರ ತೀರ್ಥಗಳಲ್ಲಿ ಆಚರಿಸಿದ ಸ್ನಾನ, ವ್ರತ, ತಪಸ್ಸು, ಜಪ, ದಾನ, ಇವೆಲ್ಲವೂ, ಈ ತೀರ್ಥದಲ್ಲಿ ಅವುಗಳಿಗಿಂತ ಕೋಟಿ ಸಂಖ್ಯೆಯಷ್ಟು ಹೆಚ್ಚು ಫಲವನ್ನು ಉಂಟುಮಾಡುವುವು. ಜನ್ಮ ನಕ್ಷತ್ರದ ದಿನ ಈ ತೀರ್ಥದಲ್ಲಿ ಸ್ನಾನಮಾಡಿದವನ ಜನ್ಮ ಜನ್ಮಾಂತರಗಳ ಪಾಪಗಳೆಲ್ಲವೂ ನಾಶವಾಗುವುವು. ಚೈತ್ರಮಾಸ, ಕಾರ್ತಿಕಮಾಸಗಳಲ್ಲಿ ಈ ಹೇಮಪದ್ಮಿನೀ ತೀರ್ಥವನ್ನು ಹೊಂದಲಸಾಧ್ಯವು.

ದರ್ಶೇ ಪುಣ್ಯಂ ಶತಗುಣಂ ಸಂಕ್ರಾಂತೌ ತತ್ಸಹಸ್ರಕಂ ।
ಉಪರಾಗೇ ತು ತಲ್ಲಕ್ಷಂ ವ್ಯತೀಪಾತೇ ತ್ವನಂತಕಂ ॥ ೧೨೭ ॥

ಅಯುತಂ ವಿಷುವೇ ಪುಣ್ಯಂ ನಿಯುತಂ ತ್ವಯನೇ ದ್ವಯೋಃ ।
ಸೋಮವಾರೇ ತ್ವಮಾವಾಸ್ಯಾ ಯದಾಭವತಿ ಸುವ್ರತಾಃ ॥ ೧೨೮ ॥

ತದಾ ಸ್ನಾನಂ ಜಪೋ ದಾನಂ ಸ್ವರ್ಣಪದ್ಮಾಕರೇ ಕೃತಂ ।
ತದನಂತಫಲಂ ಪ್ರೋಕ್ತಂ ಪುಣ್ಯವಿದ್ಭಿಃ ಪುರಾತನೈಃ ॥ ೧೨೯ ॥

ಶ್ರದ್ಧಯಾ ಸ್ವರ್ಣಪದ್ಮಿನ್ಯಾಂ ಸ್ನಾನಂ ಕೃತ್ವಾ ವಿಧಾನತಃ ।
ಬ್ರಹ್ಮಹಾಪಿ ವಿಶುದ್ಧ್ಯೇತ ಕಿಂಪುನಸ್ತ್ವನ್ಯಪಾತಕೀ ॥ ೧೩೦ ॥

ಹೇಮಪದ್ಮಾಕರಂ ಪ್ರಾಪ್ಯ ಸಕೃತ್ಪಿಂಡಾನ್ದದಾತಿ ಯಃ ।
ಉದ್ಧೃತಾಃ ಪಿತರಸ್ತೇನ ಭವಾಂಭೋಧೇಸ್ತಿಲೋದಕೈಃ ॥ ೧೩೧ ॥

---

೧೨೭-೧೨೯. ದರ್ಶಕಾಲಗಳಲ್ಲಿ (ಸ್ನಾನಮಾಡಿದ್ದರಿಂದ) ಆಚರಿಸಿದ ಸ್ನಾನ, ದಾನಾದಿಗಳಿಂದ ಉಂಟಾಗುವ ಪುಣ್ಯವು ಇತರ ತೀರ್ಥಗಳಿಗಿಂತಲೂ ನೂರರಷ್ಟು ಹೆಚ್ಚಾಗಿರುವುದು. ಗ್ರಹಣಕಾಲದಲ್ಲಿ ಲಕ್ಷಪಾಲು ಹೆಚ್ಚಾಗಿರುವುದು. ವ್ಯತೀಪಾತದಲ್ಲಿ ಉಟಾಂಗುವ ಪುಣ್ಯಕ್ಕೆ ಎಣಿಕೆಯಿಲ್ಲವು. ವಿಷುವಕಾಲದಲ್ಲಿ (ಅಯುತ) ಹತ್ತುಸಾವಿರದಷ್ಟು ಪುಣ್ಯವು ಹೆಚ್ಚಾಗಿರುವುದು. ಉತ್ತರಾಯಣ, ದಕ್ಷಿಣಾಯನಗಳಲ್ಲಿ ನಿಯುತಸಂಖ್ಯಾಕವಾದಷ್ಟು ಅಧಿಕಪುಣ್ಯವನ್ನುಂಟುಮಾಡುವುದು ಸೋಮವಾರದಿಂದ ಕೂಡಿರುವ ಅಮಾವಾಸ್ಯಾ ದಿನದಲ್ಲಿ ಆಚರಿಸಿದ ಸ್ನಾನ, ದಾನಾದಿಗಳಿಂದ ಉಂಟಾಗುವ ಪುಣ್ಯವು ಲೆಖ್ಖವಿಲ್ಲದಷ್ಟು ಇರುವುದು, ಎಂದು ಮಹಾತ್ಮರಾದ ಪೂರ್ವೀಕರು ಹೇಳಿರುವರು.

೧೩೦-೧೩೨. ಬಹ್ಮಹತ್ಯೆಯನ್ನು ಮಾಡಿದವನೂ ಕೂಡ ಭಕ್ತಿಯಿಂದ ಈ ತೀರ್ಥದಲ್ಲಿ ಸ್ನಾನಮಾಡಿ ತನ್ನ ಪಾಪವನ್ನು ಕಳೆದುಕೊಳ್ಳುವಾಗ, ಬೇರೆಯಾದ ಪಾತಕವುಳ್ಳವನು ತನ್ನ ಪಾಪವನ್ನು ಈ ತೀರ್ಥದಲ್ಲಿ ಸ್ನಾನಮಾಡುವುದರಿಂದ ಕಳೆದುಕೊಳ್ಳುವುದರಲ್ಲಿ ಸಂಶಯವಿಲ್ಲವು. ಈ ಹೇಮಪದ್ಮಾಕರ ತೀರ್ಥದ

**ಯಾವಂತಶ್ಚ ತಿಲಾ ಮರ್ತ್ಯೈರ್ಗೃಹೀತಾಃ ಪಿತೃಕರ್ಮಣಿ ।**
**ತಾವದಬ್ದಸಹಸ್ರಾಣಿ ಪಿತರಸ್ಸ್ವರ್ಗವಾಸಿನಃ ॥ ೧೩೨ ॥**

**ಕಾಮ್ಯಪ್ರದಾನಿ ತೀರ್ಥಾನಿ ತ್ರೈಲೋಕ್ಯೇ ಯಾನಿ ಕಾನಿಚಿತ್ ।**
**ತಾನಿ ಸರ್ವಾಣಿ ಸೇವಂತೇ ಪವಿತ್ರಾಂ ಹೇಮಪದ್ಮಿನೀಂ ॥ ೧೩೩ ॥**

**ಶಿವಲಿಂಗಾರ್ಚನಾತ್ಸರ್ವ ದೇವತಾರ್ಚಾಫಲಂ ಯಥಾ ।**
**ಸ್ನಾನೇನ ಸ್ವರ್ಣಪದ್ಮಿನ್ಯಾಂ ಸರ್ವತೀರ್ಥಫಲಂ ಲಭೇತ್ ॥ ೧೩೪ ॥**

**ತಸ್ಮಿಕ್ತೀರ್ಥೇ ನರಸ್ಸ್ನಾತ್ವಾ ಯೋ ಲಿಂಗಂ ನಿತ್ಯಮರ್ಚಯೇತ್ ।**
**ಏಕೇನ ಜನ್ಮನಾ ಮುಕ್ತಿಂ ಪರಾಂ ಪ್ರಾಪ್ನೋತಿ ಸ ಧ್ರುವಂ ॥ ೧೩೫ ॥**

**ಅಗ್ನಿಹೋತ್ರಾಶ್ಚ ವೇದಾಶ್ಚ ವ್ರತದಾನತಪಾಂಸಿ ಚ ।**
**ಶತ್ತೀರೇ ಲಿಂಗಪೂಜಾಯಾಃ ಕೋಟ್ಯಂಶೇನಾಪಿ ನೋ ಸಮಾಃ ॥ ೧೩೬ ॥**

---

ದಡದಲ್ಲಿ ಒಂದು ಸಾರಿಯಾದರೂ ಪಿತೃಗಳ ಉದ್ದೇಶದಿಂದ ತಿಲೋದಕ ಪಿಂಡ ಪ್ರದಾನಮಾಡಿದ್ದರಿಂದ ಪಿತೃಗಳಿಗೆ ತೃಪ್ತಿಯುಂಟಾಗಿ, ಅವರು ಭವಬಂಧದಿಂದ ಬಿಡುಗಡೆಯನ್ನು ಹೊಂದುವರು. ತರ್ಪಣಕಾಲದಲ್ಲಿ ತರ್ಪಣಮಾಡುವವನು ಉಪಯೋಗಿಸುವ ಎಳ್ಳಿನ ಕಾಳುಗಳ ಸಂಖ್ಯೆಯಷ್ಟು ಸಾವಿರ ವರ್ಷಗಳು ಅವನ ಪಿತೃಗಳು ಸ್ವರ್ಗದಲ್ಲಿ ವಾಸಮಾಡುವರು. ಮೂರು ಲೋಕದಲ್ಲಿಯೂ ಇರುವ ಕಾಮ್ಯ ಫಲಗಳನ್ನು ಕೊಡುವ ಶಕ್ತಿಯುಳ್ಳ ತೀರ್ಥಗಳು ಪವಿತ್ರಕರವಾದ ಈ ತೀರ್ಥವನ್ನು ಸೇವಿಸುತ್ತಿರುವುವು.

೧೩೨–೧೩೩. ಶಿವಲಿಂಗದ ಪೂಜೆಯಿಂದ ಸಮಸ್ತ ದೇವತೆಗಳ ಪೂಜೆಯೂ ಆಗುವಂತೆ, ಈ ತೀರ್ಥದಲ್ಲಿ ಸ್ನಾನಮಾಡುವುದರಿಂದ ಎಲ್ಲಾ ತೀರ್ಥಗಳಲ್ಲಿಯೂ ಸ್ನಾನ ಮಾಡಿದ ಫಲವು ಬರುವುದು. (ಆ ತೀರ್ಥದ) ಈ ತೀರ್ಥದಲ್ಲಿ ಸ್ನಾನವನ್ನು ಮಾಡಿ ಶಿವಲಿಂಗವನ್ನು ಪ್ರತಿದಿನವೂ ಪೂಜ್ಯೆಯನ್ನು ಮಾಡುವವನು ಒಂದೇ ಜನ್ಮದಿಂದ ಉತ್ತಮವಾದ ಮುಕ್ತಿಯನ್ನು ಹೊಂದುವನು. ಅಗ್ನಿಹೋತ್ರಮಾಡುವುದು, ವೇದಾಧ್ಯಯನಮಾಡುವುದು, ವ್ರತ, ದಾನ, ತಪಸ್ಸುಗಳನ್ನು ಆಚರಿಸುವುದು, ಇವುಗಳು, ಈ ತೀರ್ಥದ ತೀರದಲ್ಲಿ ಆಚರಿಸುವ ಶಿವಲಿಂಗದ ಪೂಜೆಯ ಕೋಟಿಯ ಅಂಶದಲ್ಲಿ ಒಂದು ಭಾಗಕ್ಕೂ ಸಮನಾಗುವುದಿಲ್ಲವು.

ಜನ್ಮಾಂತರಕೃತೈರ್ದಾನೈಸ್ತಪೋಭಿರ್ನಿಯಮೈರ್ವ್ರತೈಃ ।
ಹೇಮಪದ್ಮಾಕರಸ್ನಾನಂ ಲಭ್ಯತೇ ಚ ದಿನೇ ದಿನೇ ॥ ೧೩೭ ॥

ಯೋಷ್ಟಮೂರ್ತಿರ್ಮಹಾದೇವಶ್ಯಾಸ್ತ್ರೇಷು ಪರಿಪಠ್ಯತೇ ।
ತಸ್ಯೈಷಾಂಭೋಮಯೀ ಮೂರ್ತಿಃ ಜ್ಞಾನದಾ ಹೇಮಪದ್ಮಿನೀ ॥ ೧೩೮ ॥

ಮಾಘಮಾಸೇ ಪ್ರಯಾಗೇ ತು ನಿತ್ಯಂ ಸ್ನಾನಸ್ಯ ಯತ್ಫಲಂ ।
ತತ್ಫಲಂ ಸ್ವರ್ಣಪದ್ಮಿನ್ಯಾಮೇಕೇನ ದಿವಸೇನ ಚ ॥ ೧೩೯ ॥

ವಂಧ್ಯಾ ವತ್ಸರಪರ್ಯಂತಂ ಸ್ನಾತ್ವಾ ಹೇಮಾಬ್ಜಿನೀಜಲೇ ।
ಪ್ರಣಮ್ಯ ದೇವೀಂ ದೇವಂ ಚ ಲಭತೇ ಸದ್ಗುಣಂ ಸುತಂ ॥ ೧೪೦ ॥

ಸಂತಿ ತೀರ್ಥಾನ್ಯನೇಕಾನಿ ಪ್ರಸಿದ್ಧಾನಿ ಮಹಾಂತ್ಯಪಿ ।
ಹೇಮಪದ್ಮಾಕರಾಖ್ಯಸ್ಯ ಕೋಟ್ಯಂಶೇನ ಸಮಾನಿ ನ ॥ ೧೪೧ ॥

ದರ್ಶನಾದ್ಧರ್ಮದಂ ಪುಂಸಾಂ ಸ್ಪರ್ಶನಾದರ್ಥಸಿದ್ಧಿದಂ ।
ಸರ್ವಕಾಮಪ್ರದಂ ಪಾನಾತ್ ಸ್ನಾನಾತ್ ಕೈವಲ್ಯದಂ ಚ ತತ್ ॥ ೧೪೨ ॥

---

೧೩೭–೧೩೮. ಜನ್ಮಾಂತರದಲ್ಲಿ ತಪಸ್ಸನ್ನು ಮಾಡಿ, ದಾನಮಾಡಿ, ವ್ರತವನ್ನು ಆಚರಿಸಿ, ಮಂತ್ರಾದಿಗಳನ್ನು ನಿಯಮದಿಂದ ಜಪ ಮಾಡಿದವನಿಗೆ, ಹೇಮಪದ್ಮಾಕರದಲ್ಲಿ ಪ್ರತಿದಿನವೂ ಸ್ನಾನಮಾಡುವ ಯೋಗ್ಯತೆಯು ಉಂಟಾಗುವುದು. ಪರಮೇಶ್ವರನ ಎಂಟು ವಿಧವಾಗಿರುವ ಆಕಾರಗಳಲ್ಲಿ ಜಲರೂಪದಿಂದ ಇರುವ ಮೂರ್ತಿಯೇ ಜ್ಞಾನವನ್ನುಂಟುಮಾಡುವ ಹೇಮಪದ್ಮಿನಿಯ ಆಕಾರವನ್ನು ಹೊಂದಿ ಇರುವುದು ಪ್ರಯಾಗ ಕ್ಷೇತ್ರದಲ್ಲಿ ಮಾಘಮಾಸದಲ್ಲಿ ಪ್ರತಿದಿನವೂ ಸ್ನಾನಮಾಡಿದ ಫಲವು ಈ ಸುವರ್ಣ ಪದ್ಮಿನಿಯಲ್ಲಿ ಒಂದು ದಿನ ಸ್ನಾನಮಾಡಿದ್ದರಿಂದ ಉಂಟಾಗುವುದು.

೧೩೯. ಅಪುತ್ರವತಿಯಾದ ಸ್ತ್ರೀಯು ಈ ಹೇಮಪದ್ಮಾಕರ ತೀರ್ಥದಲ್ಲಿ ಒಂದು ವರ್ಷದವರಿಗೂ ಸ್ನಾನಮಾಡಿ ಸುಂದರೇಶ್ವರನನ್ನೂ, ಮೀನಾಕ್ಷೀದೇವಿಯನ್ನೂ ಪೂಜಿಸಿ ನಮಸ್ಕರಿಸಿದಲ್ಲಿ ಗುಣವಂತನಾದ ಮಗನನ್ನು ಪಡೆಯುವಳು.

೧೪೦–೧೪೨. ಭೂಮಿಯಲ್ಲಿ ಬಹಳ ಪ್ರಸಿದ್ಧವಾದ ತೀರ್ಥಗಳಿದ್ದರೂ ಅವುಗಳು ಈ ಹೇಮಪದ್ಮಾಕರ ತೀರ್ಥಕ್ಕೆ ಕೋಟಿಯಲ್ಲಿ ಒಂದು ಅಂಶಕ್ಕೂ ಸಮನಾಗಿರುವುದಿಲ್ಲ. ಈ ತೀರ್ಥವು ದರ್ಶನದಿಂದ ಧರ್ಮವನ್ನೂ, ಸ್ಪರ್ಶದಿಂದ ಅರ್ಥವನ್ನೂ, ಪಾನದಿಂದ ಸಕಲೇಷ್ಟ ಸಿದ್ಧಿಯನ್ನೂ, ಸ್ನಾನದಿಂದ ಕೈವಲ್ಯವನ್ನೂ ಉಂಟುಮಾಡುವುದು.

ತೀರ್ಥಾನಾಮಾದಿಭೂತಸ್ಯ ತೀರ್ಥೈಸ್ಸಂಸೇವಿತಸ್ಯ ಚ ।
ಪಾತಕೇಂಧನಕಾಲಾಗ್ನೇಃ ಪುಣ್ಯಸಸ್ಯಪಯೋಮುಚಃ ॥ ೧೪೩ ॥

ಭೋಗಾಪವರ್ಗಹೇತೋಶ್ಚ ಹೇಮಪದ್ಮಾಕರಸ್ಯ ಚ ।
ಮಾಹಾತ್ಮ್ಯಸ್ಯೈಕದೇಶೋಽಯಂ ಕಥಿತಂ ಕಲುಷಾಪಹಃ ॥ ೧೪೪ ॥

ಹಾಲಾಸ್ಯಕ್ಷೇತ್ರಮಾಹಾತ್ಮ್ಯಂ ತೀರ್ಥಮಾಹಾತ್ಮ್ಯಸಂಯುತಂ ।
ಸಕೃಚ್ಛ್ರವಣ ತಃ ಪುಂಸಾಂ ಭುಕ್ತೇರ್ಮುಕ್ತೇಶ್ಚ ಕಾರಣಂ ॥ ೧೪೫ ॥

ಇತಿ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ
ಹಾಲಾಸ್ಯ ಮಾಹಾತ್ಮ್ಯೇ ತೀರ್ಥಕ್ಷೇತ್ರಮಹಿಮಾನು
ವರ್ಣನಂ ನಾಮ ದ್ವಿತೀಯೋಽಧ್ಯಾಯಃ

---

೧೪೩–೧೪೪. ಈ ತೀರ್ಥವು ಎಲ್ಲಾ ಇತರ ತೀರ್ಥಗಳಿಗಿಂತಲೂ ಮೊದಲು ನಿರ್ಮಿತವಾದದ್ದು. ಇತರ ತೀರ್ಥಗಳಿಂದ ಸೇವಿತವಾದದ್ದು. ಪಾಪರಾಶಿಗಳಿಗೆ ಕಾಲಾಗ್ನಿಯಾಗಿ ಇರುವುದು. ಪವಿತ್ರಕರವಾದ ಜಲವನ್ನು ಸಸ್ಯಗಳಿಗೆ ಒದಗಿಸಿ ಕೊಡುವುದು. ಭುಕ್ತಿ, ಮುಕ್ತಿ, ಪ್ರದವಾದ ಈ ಹೇಮಪದ್ಮಾಕರ ತೀರ್ಥದ ಪಾಪ ನಾಶಮಾಡುವ ಮಹಿಮೆಯಲ್ಲಿ ಈಗ ನಾನು ಕೊಂಚ ಭಾಗವನ್ನು ಮಾತ್ರ ಹೇಳಿರುವೆನು.

೧೪೫. ತೀರ್ಥಮಾಹಾತ್ಮ್ಯದಿಂದ ಕೂಡಿರುವ ಈ ಹಾಲಾಸ್ಯಕ್ಷೇತ್ರದ ಮಾಹಾತ್ಮ್ಯವನ್ನು ಒಂದುಸಾರಿ ಕೇಳಿದ ಮಾತ್ರದಿಂದಲೇ ಭುಕ್ತಿ ಮತ್ತು ಮುಕ್ತಿಗಳು ಉಂಟಾಗುವುವು.

ಸಂಪದ್ಯುಕ್ತವಾದ ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯ
ಮಾಹಾತ್ಮ್ಯದಲ್ಲಿ ಕ್ಷೇತ್ರತೀರ್ಥಮಹಿಮಾವರ್ಣನವೆಂದು
ಹೆಸರುಳ್ಳ ಎರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ

## ತೃತೀಯೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ಹಾಲಾಸ್ಯೇಶ್ವರಲಿಂಗಸ್ಯ ಮಾಹಾತ್ಮ್ಯಂ ಪರಮಾದ್ಭುತಂ ।
ವಕ್ಷ್ಯಾಮಿ ಸಂಗ್ರಹೇಣಾಥ ಶೃಣ್ವಂತು ಮುನಿಪುಂಗವಾಃ ॥ ೧ ॥

ಮೇರುಮಂದರಕೈಲಾಸಕಾಶೀಶ್ರೀಪರ್ವತಾದಿಷು ।
ಶಿವಕ್ಷೇತ್ರೇಷ್ವನಂತೇಷು ಮಹಾಸಿದ್ಧಿಪ್ರದೇಷು ಚ ॥ ೨ ॥

ಸ್ವಾಯಂಭುವಾನಿ ಲಿಂಗಾನಿ ನ ಭವಂತಿ ಯದಾ ಪುರಾ ।
ತಥಾವಿರಾಸೀತ್ತಲ್ಲಿಂಗಂ ಕದಂಬವನಮಧ್ಯಮೇ ॥ ೩ ॥

---

### ಮೂರನೆಯ ಅಧ್ಯಾಯವು.

೧–೩ ಅಗಸ್ತ್ಯಋಷಿಯು ಹೇಳಿದನು :—ನಾನು ಇನ್ನು ಮುಂದೆ ಬಹಳ ಆಶ್ಚರ್ಯಕರವಾದ ಹಾಲಾಸ್ಯೇಶ್ವರಲಿಂಗದ ಮಾಹಾತ್ಮೆಯನ್ನು ಸಂಕ್ಷೇಪವಾಗಿ ಹೇಳುವೆನು. ನೀವೆಲ್ಲರೂ ಕೇಳಿರಿ. ಮೇರುಪರ್ವತ, ಮಂದರಪರ್ವತ, ಕೈಲಾಸ, ಕಾಶೀ, ಶ್ರೀಪರ್ವತ ಇವೇ ಮೊದಲಾದ ಬಹಳ ಸಿದ್ಧಿಯನ್ನು ಉಂಟುಮಾಡುವ ಶಿವಕ್ಷೇತ್ರಗಳು ಭೂಮಿಯಲ್ಲಿ ಎಣಿಕೆಯಿಲ್ಲದಷ್ಟು ಇದ್ದಾಗ್ಯೂ ಸ್ವಯಂಭು ಲಿಂಗಗಳು ಇಲ್ಲದಿರುವಾಗ ಪೂರ್ವಕಾಲದಲ್ಲಿ ಕದಂಬವನದ ಮಧ್ಯದಲ್ಲಿ ಈ ಸ್ವಯಂಭು ಲಿಂಗವು ಆವಿರ್ಭವಿಸಿತು. ಆದ್ದರಿಂದ ಇದಕ್ಕೆ ಸಮನಾದ ಪುರಾತನವಾದ ಶಿವಲಿಂಗವು ಬೇರೆ ಯಾವುದೂ ಇಲ್ಲವು. ಶೃತಿ, ಸ್ಮೃತಿ ಪುರಾಣಗಳಲ್ಲಿಯೂ ಈ ಪ್ರಕಾರವಾದ ಶಿವಲಿಂಗವು ಬೇರೆ ಯಾವುದೂ ಇಲ್ಲವೆಂಮೂ ದೃಢವಾಗಿ ಹೇಳಿರುವುದು.

**ತಸ್ಮಾದನೇನ ಸದೃಶಂ ಲಿಂಗಮನ್ಯತ್ಪುರಾತನಂ ।**
**ಶೃತಿಸ್ಮೃತಿಪುರಾಣೇಷು ನಾಸ್ತಿ ನಾಸ್ತಿ ಮುನೀಶ್ವರಾಃ ॥ ೪ ॥**

**ಉಮಯಾ ನಿತ್ಯಯೋಗಾಚ್ಚ ಸುಂದರತ್ವಾತ್ಸ್ವಭಾವತಃ ।**
**ಸೋಮಸುಂದರಸಂಜ್ಞಾಂ ತು ಪುರಾ ಚಕ್ರುರ್ದಿವೌಕಸಃ ॥ ೫ ॥**

**ಲಿಂಗಾನಾಂ ಮೂಲಭೂತತ್ವಾನ್ಮೂಲಲಿಂಗಮಿತಿ ಸ್ಮೃತಂ ।**
**ಸ್ವಾಯಂಭುವಂ ತು ತಲ್ಲಿಂಗಂ ವಿಶ್ವಂ ವ್ಯಾಪ್ಯ ವ್ಯವಸ್ಥಿತಮ್ ॥ ೬ ॥**

**ತಸ್ಮಾದ್ವೇತ್ರಪ್ರಹಾರಸ್ತು ಸರ್ವತ್ರಪರಿದೃಶ್ಯತೇ ।**
**ಲಿಂಗಾನಾಂ ವ್ಯಷ್ಟಿಭೂತಾನಾಂ ಸಮಷ್ಟ್ಯಾ ಸೋಮಸುಂದರೇ ॥ ೭ ॥**

**ಸೇವಿತೇ ಶ್ರದ್ಧಯಾ ಸಾರ್ಧಂ ಸರ್ವಕ್ಷೇತ್ರಗತಾನಿ ಚ ।**
**ಲಿಂಗಾನಿ ಸೇವಿತಾನಿ ಸ್ಯುರ್ನಾತ್ರಕಾರ್ಯಾ ವಿಚಾರಣಾ ॥ ೮ ॥**

**ವೃಕ್ಷಸ್ಯ ಮೂಲಸೇಕೇನ ಶಾಖಾಃ ಪುಷ್ಟಿಂ ಯಥಾ ಯಯುಃ ।**
**ಮೂಲಲಿಂಗೇ ಪೂಜಿತೇ ತು ಪೂಜಿತಾನ್ಯಖಿಲಾನಿ ಚ ॥ ೯ ॥**

---

೪–೫ ದೇವಿಯಾದ ಪಾರ್ವತಿಯ ಸಂಬಂಧವು ಯಾವಾಗಲೂ ಈ ಶಿವಲಿಂಗಕ್ಕೆ ಇರುವುದರಿಂದಲೂ, ಸ್ವಭಾವವಾಗಿ ಈ ಶಿವಲಿಂಗವು ರಮ್ಯವಾಗಿರುವುದರಿಂದಲೂ, ದೇವತೆಗಳು ಈ ಶಿವಲಿಂಗವನ್ನು ಸೋಮಸುಂದರನೆಂದು ಕರೆಯುವರು. ಶಿವಲಿಂಗಗಳೆಲ್ಲಕ್ಕೂ ಮೊದಲನೆಯದಾದ ಕಾರಣ ಇದು ಮೂಲಲಿಂಗವೆನಿಸಿರುವುದು. (ಸ್ವಯಂಭು) ತಾನಾಗಿ ಆವಿರ್ಭವಿಸಿರುವ ಕಾರಣ ಇದು ಪ್ರಪಂಚವೆಲ್ಲವನ್ನೂ ವ್ಯಾಪಿಸಿಕೊಂಡಿರುವುದು.

೬–೮ ಸ್ವಯಂ ವ್ಯಕ್ತವಾಗಿರುವ ಕಾರಣದಿಂದಲೇ ಈ ಶಿವಲಿಂಗದ ಸುತ್ತಲೂ ಬಳ್ಳಿಗಳು ಸುತ್ತಿ ಉಜ್ಜಿದ ಗುರುತು ಕಾಣಿಸುತ್ತಿರುವುದು. ಬೇರೆಬೇರೆಯಾಗಿರುವ ಶಿವಲಿಂಗಗಳೆಲ್ಲಕ್ಕೂ ಇದು ಸಮಷ್ಟಿರೂಪದಿಂದ ಇರುವ ಕಾರಣ ಈ ಸೋಮಸುಂದರ ಲಿಂಗವನ್ನು ಸೇವಿಸಿದಲ್ಲಿ ಎಲ್ಲಾ ಕ್ಷೇತ್ರಗಳಲ್ಲಿಯೂ ಇರುವ ಶಿವಲಿಂಗಗಳನ್ನು ಭಕ್ತಿಯಿಂದ ಸೇವಿಸಿದಂತಾಗುವುದು. ಮರದ ಬುಡಕ್ಕೆ ನೀರನ್ನು ಹಾಕಿದರೆ ಕೊಂಬೆಗಳೆಲ್ಲಕ್ಕೂ ಪುಷ್ಟಿಯುಂಟಾಗುವಂತೆ ಮೂಲ ಲಿಂಗವಾದ ಈ ಸೋಮಸುಂದರ ಲಿಂಗದ ಪೂಜೆಯಿಂದ ಇತರ ಶಿವಲಿಂಗಗಳನ್ನು ಪೂಜಿಸಿದ್ದಾಗುವುದರಲ್ಲಿ ಸಂಶಯವಿಲ್ಲವು.

ಚತುಃಷಷ್ಟಿವಿಧಾ ಲೀಲಾ ಯೇನಾಕಾರಿ ದಯಾಳುನಾ ।
ತೇನೈವ ಸದೃಶೋ ದೇವೋ ನ ಭೂತೋ ನ ಭವಿಷ್ಯತಿ ॥ ೧೦ ॥

ಮೃತ್ಯುಂಜಯೋಪದೇಶೇನ ಭಾರದ್ವಾಜಸ್ಯ ಪಕ್ಷಿಣಃ ।
ಸರ್ವೇಭ್ಯಃ ಪಕ್ಷಿಜಾತಿಭ್ಯಃ ಶ್ರೇಷ್ಠತ್ವಂ ಯಃ ಪ್ರಯಚ್ಛತಿ ॥ ೧೧ ॥

ತೇನೈವ ಸದೃಶೋ ದೇವೋ ನ ಭೂತೋ ನ ಭವಿಷ್ಯತಿ ।
ಕೋಲಯುಷ್ಟಯೋಽಪಿ ನಿರ್ವಾಣಂ ಪ್ರದತ್ತಂ ಯೇನ ಶಂಭುನಾ ।
ತೇನೈವ ಸದೃಶೋ ದೇವೋ ನ ಭೂತೋ ನ ಭವಿಷ್ಯತಿ ॥ ೧೨ ॥

ಮಹ್ಯಂ ಚ ದ್ರಾವಿಡಂ ಸೂತ್ರಮುಪದಿಷ್ಟಂ ಸಲಕ್ಷಣಂ ।
ತೇನೈವ ಸದೃಶೋ ದೇವೋ ನ ಭೂತೋ ನ ಭವಿಷ್ಯತಿ ॥ ೧೩ ॥

ಪಿಷ್ಟಾರ್ಥಮುತ್ತಮಾಂಗೇನ ಮೃದ್ಭಾರಂ ಯೋ ದಧಾರ ಚ ।
ತೇನೈವ ಸದೃಶೋ ದೇವೋ ನ ಭೂತೋ ನ ಭವಿಷ್ಯತಿ ॥ ೧೪ ॥

ಸೃಗಾಲಾನಾಮಶ್ವರೂಪಂ ಪರಿಕಲ್ಪ್ಯ ಸ್ವಮಾಯಯಾ ।
ವಿಕ್ರೀಣಾತಿ ಚ ತಾನಶ್ವಾನ್ಪಾಂಡ್ಯಭೂಪಾಯ ಯಶ್ಶಿವಃ ।
ತೇನೈವ ಸದೃಶೋ ದೇವೋ ನ ಭೂತೋ ನ ಭವಿಷ್ಯತಿ ॥ ೧೫ ॥

೧೦–೧೫ ಅರುವತ್ತುನಾಲ್ಕು ಲೀಲೆಗಳನ್ನೂ ಪ್ರಪಂಚದಲ್ಲಿ ತೋರಿಸಿರುವ ದಯಾಶಾಲಿಯಾದ ಈ ಸೋಮಸುಂದರನಿಗೆ ಸಮನಾದ ದೇವನು ಹಿಂದೆಯೂ ಇರಲಿಲ್ಲ. ಮುಂದೆಯೂ ಉಂಟಾಗುವುದಿಲ್ಲ. ಭಾರದ್ವಾಜ ಪಕ್ಷಿಗೆ ಮೃತ್ಯುಂಜಯ ಮಂತ್ರವನ್ನು ಉಪದೇಶಮಾಡಿ ಎಲ್ಲಾ ಪಕ್ಕಿಗಳಿಗಿಂತಲೂ ಅದನ್ನು ಬಲಶಾಲಿಯಾಗಿರುವಂತೆ ಮಾಡಿರುವ ಈ ದೇವನಿಗೆ ಸಮನಾದ ದೇವನು ಹಿಂದೆ ಇರಲಿಲ್ಲ, ಮುಂದೆ ಹುಟ್ಟುವುದಿಲ್ಲ. ಟಿಟ್ಟಿಭವೆಂಬ ಪಕ್ಷಿಗೂ ಮುಕ್ತಿಯನ್ನು ಕೊಟ್ಟಿರುವ ದೇವನಿಗೆ ಸಮನಾದ ದೇವನು ಹಿಂದಿನ ಕಾಲದಲ್ಲಿ ಇರಲಿಲ್ಲ. ಮುಂದೆ ಉಂಟಾಗುವುದಿಲ್ಲ. ನನಗೆ ದ್ರಾವಿಡಭಾಷೆಯ ಸೂತ್ರಗಳನ್ನು ಅದರ ಲಕ್ಷಣದೊಡನೆ ಉಪದೇಶ ಮಾಡಿದ ದೇವನಿಗೂ, ನರಿಗಳನ್ನು ತನ್ನ ಮಾಯೆಯಿಂದ ಕುದುರೆಯನ್ನಾಗಿ ಮಾಡಿ ಪಾಂಡ್ಯರಾಜನಿಗೆ ಅವುಗಳನ್ನು ಮಾರಿದ ದೇವನಿಗೂ, ಸಮನಾದ ದೇವನು ಹಿಂದೆಯೂ ಇರಲಿಲ್ಲ, ಮುಂದೆ ಉಂಟಾಗುವುದಿಲ್ಲ.

ಶೂಲೇಷ್ವಾರೋಪಿತಾ ಯೇನ ಕ್ಷಪಣಾ ವೇದನಿಂದಕಾಃ ।
ತೇನೈವ ಸದೃಶೋ ದೇವೋ ನ ಭೂತೋ ನ ಭವಿಷ್ಯತಿ ॥ ೧೬ ॥

ಯೋ ವರಾಹಶಿಶೂನಾಂ ಚ ಸ್ತನ್ಯಂ ದತ್ವಾ ಚ ರಕ್ಷತಿ ।
ತೇನೈವ ಸದೃಶೋ ದೇವೋ ನ ಭೂತೋ ನ ಭವಿಷ್ಯತಿ ॥ ೧೭ ॥

ಅತಸ್ಸರ್ವೈಶ್ಚ ಸಂಸೇವ್ಯಂ ಸರ್ವಲಿಂಗಮಯಂ ಪರಂ ।
ಧರ್ಮಾರ್ಥಕಾಮಮೋಕ್ಷಾಣಾಮಾಲಯಂ ಪರಮಾರ್ಥತಃ ॥ ೧೮ ॥

ಯಜ್ಞಾನಾಮಶ್ವಮೇಧಶ್ಚ ಪರ್ವತಾನಾಂ ಹಿಮಾಲಯಃ
ವ್ರತಾನಾಂ ಸೋಮವಾರಶ್ಚ ಮಂತ್ರಾಣಾಂ ಚ ಷಡಕ್ಷರೀ ॥ ೧೯ ॥

ದಾನಾನಾಮನ್ನದಾನಂ ಚ ವರ್ಣಾನಾಂ ಬ್ರಾಹ್ಮಣೋ ಯಥಾ ।
ಪಾತ್ರಾಣಾಂ ಶಿವಭಕ್ತಶ್ಚ ಧರ್ಮಾಣಾಂ ಶಿವಧರ್ಮವಿತ್ ॥ ೨೦ ॥

ದೇವತಾನಾಂ ಮಹಾದೇವೋ ವೃಕ್ಷಾಣಾಂ ತು ಸುರದ್ರುಮಃ ।
ಧೇನೂನಾಂ ಕಾಮಧೇನುಶ್ಚ ತೀರ್ಥಾನಾಂ ಹೇಮಪದ್ಮಿನೀ ॥ ೨೧ ॥

---

೧೬–೧೮ ವೇದಗಳನ್ನು (ನಿಂದೆ) ದೂಷಿಸುತ್ತಿರುವ ಬೌದ್ಧರನ್ನು ಶೂಲಕ್ಕೆ ಹಾಕಿಸಿದ, ಹಂದಿಯ ಮರಿಗಳಿಗೆ ಸ್ತನ್ಯವನ್ನು ಕೊಟ್ಟು ರಕ್ಷಿಸಿದ ದೇವದೇವನಾದ ಶಿವನಿಗೆ ಸಮನಾದ ದೇವನು ಹಿಂದೆಯೂ ಇರಲಿಲ್ಲ. ಮುಂದೆ ಉಂಟಾಗುವುದಿಲ್ಲ. ಈ ಕಾರಣಗಳಿಂದ ಎಲ್ಲಾ ಲಿಂಗಗಳ ರೂಪದಿಂದ ಇದ್ದುಕೊಂಡು, ಧರ್ಮ, ಅರ್ಥ, ಕಾಮ, ಮೋಕ್ಷಗಳೆಂಬ ನಾಲ್ಕು ವಿಧವಾದ ಪುರುಷಾರ್ಥಗಳನ್ನು ಕೊಡುವ ಶಿವನನ್ನು ಎಲ್ಲರೂ ಸೇವಿಸತಕ್ಕದ್ದು.

೧೯–೨೦ ಯಜ್ಞಗಳೆಲ್ಲಕ್ಕೂ ಅಶ್ವಮೇಧಯಜ್ಞವು ಮುಖ್ಯವು. ಪರ್ವತಗಳಲ್ಲಿ ಹಿಮಾಲಯವೂ, ವ್ರತಗಳಲ್ಲಿ ಸೋಮವಾರ ವ್ರತವೂ, ಮಂತ್ರಗಳಲ್ಲಿ ಷಡಕ್ಷರ ಮಂತ್ರವೂ, ದಾನಗಳಲ್ಲಿ ಅನ್ನದಾನವೂ, ವರ್ಣಗಳಲ್ಲಿ ಬ್ರಾಹ್ಮಣರೂ, ದಾನವನ್ನು ಸ್ವೀಕರಿಸುವುದರಲ್ಲಿ ಶಿವಭಕ್ತನೂ, ಧರ್ಮಗಳನ್ನು ತಿಳಿದವರಲ್ಲಿ ಶಿವನ ಧರ್ಮಗಳನ್ನು ತಿಳಿದವರೂ, ಮುಖ್ಯರಾಗಿರುವರು.

೨೧–೨೩ ದೇವತೆಗಳಲ್ಲಿ ಮಹಾದೇವನೂ, ವೃಕ್ಷಗಳಲ್ಲಿ ಕಲ್ಪವೃಕ್ಷವೂ, ಧೇನುಗಳಲ್ಲಿ ಕಾಮಧೇನುವೂ, ತೀರ್ಥಗಳಲ್ಲಿ ಹೇಮಪದ್ಮಾಕರ ತೀರ್ಥವೂ, ರತ್ನಗಳಲ್ಲಿ ಚಿಂತಾಮಣಿ ರತ್ನವೂ ಮುಖ್ಯವಾಗಿರುವಂತೆ, ಎಲ್ಲಾ ಶಿವಲಿಂಗಗಳಲ್ಲಿ ಸ್ವಯಂವ್ಯಕ್ತ

**ಚಿಂತಾಮಣಿಸ್ತು ರತ್ನಾನಾಂ ಯಥಾ ಮುಖ್ಯಃ ಪ್ರಕೀರ್ತಿತಃ ।**
**ತಥಾ ಸರ್ವೇಷು ಲಿಂಗೇಷು ಲಿಂಗಂ ಸ್ವಾಯಂಭುವಂ ಮಹತ್ ॥ ೨೨ ॥**

**ಸ್ವಾಯಂಭುವೇಷು ಲಿಂಗೇಷು ಸೋಮಸುಂದರ ಸಂಜ್ಞಿತಂ ।**
**ಭೂಲೋಕಶಿವಲೋಕೇಶಂ ಪ್ರೋಕ್ತಂ ಮುಖ್ಯತಮಂತ್ವಿತಿ ॥ ೨೩ ॥**

**ತಲ್ಲಿಂಗಂ ತು ಪರಂಜ್ಯೋತಿಸ್ತಲ್ಲಿಂಗಂ ತು ಪರಾತ್ಪರಂ ॥ ೨೪ ॥**

**ತಲ್ಲಿಂಗಂ ಜಗತಾಂ ಮೂಲಂ ತಲ್ಲಿಂಗಂ ಸರ್ವಸಿದ್ಧಿದಂ ।**
**ಅನುಗ್ರಹಾಯ ಲೋಕಾನಾಂ ನಿಷ್ಕಳಃ ಪರಮಃ ಶಿವಃ ॥ ೨೫ ॥**

**ಶ್ರೀ ಹಾಲಾಸ್ಯೇ ಲಿಂಗರೂಪೀ ಸಾನ್ನಿಧ್ಯಂ ಕುರುತೇ ಸದಾ ।**
**ಸ್ವಾಯಂಭುವಾನಿ ಚಾನ್ಯಾನಿ ಯಾನಿ ಲಿಂಗಾನಿ ಸರ್ವದಾ ॥ ೨೬ ॥**

**ತಾನಿ ಸರ್ವಾಣಿ ಚಾಯಾಂತಿ ದ್ರಷ್ಟುಂ ಹಾಲಾಸ್ಯಸುಂದರಂ ।**
**ಯೇನ ದೃಷ್ಟಂ ಮಹಾಲಿಂಗಂ ಭಕ್ತ್ಯಾ ವಿಮಲಯಾ ದೃಶಾ ॥ ೨೭ ॥**

---

ವಾದ ಶಿವಲಿಂಗವು ಉತ್ತಮವು. ಈ ಪ್ರಕಾರವಾದ ಸ್ವಯಂಭುಲಿಂಗಗಳಲ್ಲಿ ಭೂಲೋಕಶಿವಲೋಕಕ್ಕೆ ಅಧಿಪತಿಯಾದ ಸೋಮಸುಂದರ ಲಿಂಗವು ಬಹಳ ಮುಖ್ಯವಾಗಿರುವುದು.

೨೪–೨೫ ಈ ಸೋಮಸುಂದರ ಲಿಂಗವು ಪರಜ್ಯೋತಿ ರೂಪದಿಂದ ಇರುವುದು. ಶ್ರೇಷ್ಠವಾದ ಎಲ್ಲಾ ಲಿಂಗಗಳಿಗಿಂತಲೂ ಉತ್ತಮವಾದದ್ದು. ಇದು ಜಗತ್ತಿಗೆ ಮೂಲ ಲಿಂಗವಾಗಿರುವುದು. ಇದು ಎಲ್ಲಾ ವಿಧವಾದ ಸಿದ್ಧಿಯನ್ನೂ ಉಂಟುಮಾಡುವುದು. ಎಲ್ಲಕ್ಕಿಂತಲೂ ಶ್ರೇಷ್ಠನಾದ ನಿಷ್ಕಳನಾದ ಶಿವನು ಲೋಕದ ಅನುಗ್ರಹಕ್ಕಾಗಿ ಈ ಹಾಲಾಸ್ಯ ಲಿಂಗದ ರೂಪದಿಂದ ತಾನೇ ಇದ್ದುಕೊಂಡು, ಯಾವಾಗಲೂ ತನ್ನ ಸಾನ್ನಿಧ ವನ್ನು ಈ ಶಿವಲಿಂಗದಲ್ಲಿ ಉಂಟುಮಾಡುತ್ತಿರುವನು.

೨೬–೨೭ ಪ್ರಪಂಚದಲ್ಲಿರುವ ಇತರ ಸ್ವಯಂಭುಲಿಂಗಗಳು ಎಲ್ಲವೂ ಈ ಹಾಲಾಸ್ಯಕ್ಷೇತ್ರದಲ್ಲಿರುವ ಸೋಮಸುಂದರ ಲಿಂಗವನ್ನು ಬಹಳ ಭಕ್ತಿಯಿಂದಲೂ ಏಕಾಗ್ರತೆಯಿಂದಲೂ ದರ್ಶನ ಮಾಡುವುದಕ್ಕಾಗಿ ಬರುವುವು. ಈ ಶಿವಲಿಂಗದ ದರ್ಶನ ವನ್ನು ಮಾಡಿದ್ದರಿಂದ ಶಿವನನ್ನು ಸಾಕ್ಷಾತ್ತಾಗಿ ದರ್ಶನ ಮಾಡಿದಂತೆಯೇ ಆಗುವುದು. ಸೂರ್ಯೋದಯದಿಂದ ಕತ್ತಲೆಯು ನಾಶವಾಗುವಂತೆ, ಸಿಂಹದ ಎದುರಿಗೆ ಆನೆಗಳು ನಿಲ್ಲಲಾರದೆ ಇರುವಂತೆ, ಗರುಡನನ್ನು ನೋಡಿದ ಕೂಡಲೆ ಓಡುವ ಹಾವುಗಳಂತೆ ಶಿವನ ಜ್ಞಾನದಿಂದ ಅಜ್ಞಾನಗಳು ನಾಶವಾಗುವುವು.

ಸಾಕ್ಷಾತ್ಕಾರೇಣ ಗಿರಿಶೋ ದ್ರಷ್ಟ ಏವ ನ ಸಂಶಯಃ ।
ಭಾನೂದಯೇ ತಮಾಂಸೀವ ಸಿಂಹಾಗ್ರೇ ತು ಯಥಾ ಗಜಾಃ ॥ ೨೮ ॥

ಅಜ್ಞಾನಾನಿ ಶಿವಜ್ಞಾನಾನ್ನಾಗಾಸ್ತಾರ್ಕ್ಷ್ಯನಿರೀಕ್ಷಣೇ
ಮಹಾವಾತಹತಾ ಮೇಘಾ ಶೈಲಾ ವಜ್ರಹತಾ ಯಥಾ ॥ ೨೯ ॥

ತಥಾ ನಶ್ಯಂತಿ ಪಾಪಾನಿ ಹಾಲಾಸ್ಯೇಶ್ವರದರ್ಶನಾತ್ ।
ಕಾಮೇನ ಚ ಯಥಾ ಬುದ್ಧಿಃ ಕೋಪೇನ ಚ ಯಥಾ ತಪಃ ॥ ೩೦ ॥

ಗರ್ವೇಣ ಚ ಯಥಾ ವಿದ್ಯಾ ರೋಗೋ ದಿವ್ಯೌಷಧೇನ ಚ ।
ಲೋಭೇನ ಸದ್ಗುಣೋ ಯದ್ವತ್ತೂಲಶೈಲಸ್ಸ್ಫುಲಿಂಗತಃ ॥ ೩೧ ॥

ಪ್ರಣಶ್ಯತಿ ತಥಾ ದೋಷಸ್ಸೋಮಸುಂದರದರ್ಶನಾತ್ ।
ಹಾಲಾಸ್ಯೇಶಂ ಮಹಾಲಿಂಗಂ ದೃಷ್ಟ್ವಾ ಪ್ರಾತಸ್ಸಕೃನ್ನರಃ ॥ ೩೨ ॥

ಚತುಃಸಮುದ್ರಪರ್ಯಂತಂ ಭೂಮಿದಾನಫಲಂ ಲಭೇತ್ ।
ಮಧ್ಯಾಹ್ನೇ ತು ಸಕೃದ್ದೃಷ್ಟ್ವಾ ಜೀವನ್ಮುಕ್ತಿಪುರೇಶ್ವರಂ ॥ ೩೩ ॥

ಸಹಸ್ರಕಪಿಲಾದಾನಫಲಂ ಪ್ರಾಪ್ನೋತಿ ಮಾನವಃ ।
ಸಾಯಂತನೇ ಸಕೃದ್ದೃಷ್ಟ್ವಾ ಕದಂಬವನನಾಯಕಂ ॥ ೩೪ ॥

---

೨೮–೩೧ ಬಿರುಗಾಳಿಯಿಂದ ಮೇಘಗಳು ಚದರುವಂತೆಯೂ, ವಜ್ರಾಯುಧದ ಏಟಿನಿಂದ ಬೆಟ್ಟಗಳು ನಾಶವಾಗುವಂತೆಯೂ, ಪಾತಕಗಳು ಈ ಹಾಲಾಸ್ಯಕ್ಷೇತ್ರದಲ್ಲಿರುವ ಸೋಮಸುಂದರೇಶ್ವರನ ದರ್ಶನದಿಂದ ನಾಶವಾಗುವುವು. ಕಾಮದಿಂದ ಬುದ್ಧಿಯು ಕೆಡುವಂತೆಯೂ, ತಪಸ್ಸು ಕೋಪದಿಂದ ನಾಶವಾಗುವಂತೆಯೂ, ವಿದ್ಯೆಯು ಅಹಂಕಾರದಿಂದ ಹಾಳಾಗುವಂತೆಯೂ, ಉತ್ತಮವಾದ ಔಷಧಿಯಿಂದ ರೋಗವು ನಾಶವಾಗುವಂತೆಯೂ, ಒಳ್ಳೆಯ ಗುಣವು ಲೋಭದಿಂದ ಹೋಗುವ ಹಾಗೆಯೂ, ಹತ್ತಿಯ ರಾಶಿಯು ಕಿಡಿ ಬೆಂಕಿಯಿಂದ ನಾಶವಾಗುವ ಹಾಗೆಯೂ, ಈ ಸೋಮಸುಂದರೇಶ್ವರನ ದರ್ಶನದಿಂದ ದೋಷಗಳು ನಾಶವಾಗುವವು.

೩೨–೩೪ ಮನುಷ್ಯನು ಪ್ರಾತಃಕಾಲದಲ್ಲಿ ಒಂದುಸಾರಿ ಈ ಹಾಲಾಸ್ಯೇಶ್ವರ ಲಿಂಗವನ್ನು ದರ್ಶನ ಮಾಡಿದವನು,ನಾಲ್ಕು ಸಮುದ್ರಗಳಿಂದ ಕೂಡಿದ ಭೂಮಿಯನ್ನು ದಾನಮಾಡಿದ ಫಲವನ್ನು ಹೊಂದುವನು. ಮಧ್ಯಾಹ್ನಕಾಲದಲ್ಲಿ ಒಂದುಸಾರಿ ಕಪಿಲಾ ಗೋದಾನಮಾಡಿದ ಫಲವನ್ನೇ ಹೊಂದುವನು. ಸಾಯಂಕಾಲದಲ್ಲಿ, ಈ ಕದಂಬವನಾಧಿಪತಿಯಾದ ಶಿವನನ್ನು ಒಂದುಸಾರಿ ದರ್ಶನ ಮಾಡಿದ್ದರಿಂದ ಕೋಟಿ ಗೋದಾನದ ಫಲವು ಬರುವುದು.

ಗವಾಂ ಕೋಟಿಪ್ರದಾನಸ್ಯ ಫಲಂ ಮರ್ತ್ಯಸ್ಸಮಶ್ನುತೇ ।
ಅರ್ಧಯಾಮೇ ಸಕೃದ್ದೃಷ್ಟ್ವಾ ಚತುಷ್ಕೂಟಪುರೇಶ್ವರಂ ॥ ೩೫ ॥

ಅಶ್ವಮೇಧಾದಿಯಜ್ಞಾನಾಂ ಫಲಂ ಪ್ರಾಪ್ನೋತಿ ಮಾನವಃ ।
ಏವಂ ವಿಚಾರ್ಯ ಮತಿಮಾನ್ಪುಣ್ಯಾಧಿಕ್ಯಂ ದಿನೇ ದಿನೇ ॥ ೩೬ ॥

ಸಮಷ್ಟಿವಿದ್ಯಾನಗರೀನಾಥಂ ವೇಲಾಸು ತಾಸು ಚ ।
ಪ್ರದಕ್ಷಿಣನಮಸ್ಕಾರಸ್ತೋತ್ರಾದ್ಯೈಸ್ಸೇವತೇ ಚ ಯಃ ॥ ೩೭ ॥

ಸರ್ವಪಾಪವಿನಿರ್ಮುಕ್ತಸ್ಸರ್ವೈಶ್ವರ್ಯಸಮನ್ವಿತಃ ।
ಇಹ ಭುಕ್ತ್ವಾ ಮಹಾಭೋಗಾನ್ಸಾಯುಜ್ಯಂ ಲಭತೇ ತತಃ ॥ ೩೮ ॥

ಶ್ರವಣಾತ್ತಸ್ಯ ಲಿಂಗಸ್ಯ ದಶಜನ್ಮಾರ್ಜಿತಂ ತ್ವಘಂ ।
ಅವಶ್ಯಂ ವಿಲಯಂ ಯಾತಿ ವಹ್ನಿನಾ ತೂಲರಾಶಿವತ್ ॥ ೩೯ ॥

ಸ್ಮರಣಾನ್ಮೂಲಲಿಂಗಸ್ಯ ಪಾತಕಂ ಶತಜನ್ಮಜಂ ।
ಆವಶ್ಯಂ ನಶ್ಯತಿ ಕ್ಷಿಪ್ರಂ ತಮಸ್ಸೂರ್ಯೋದಯೇ ಯಥಾ ॥ ೪೦ ॥

---

೩೫–೩೮ ಯಾಮದ ಅರ್ಧದಲ್ಲಿ ಚತುಷ್ಕೂಟ ಪುರೇಶ್ವರನನ್ನು ಒಂದುಸಾರಿ ದರ್ಶನ ಮಾಡಿದವನು, ಅಶ್ವಮೇಧವೇ ಮೊದಲಾದ ಯಜ್ಞಗಳ ಫಲವನ್ನು ಹೊಂದುವನು. ಬುದ್ಧಿವಂತನಾದವನು, ( ದಿನದ ) ಆಯಾಯ ದಿನಗಳಲ್ಲಿ ದರ್ಶನ ಮಾಡುವುದರಿಂದ ಪುಣ್ಯವು ಅಧಿಕವಾಗಿ ಇರುವುದೆಂದು ತಿಳಿದುಕೊಂಡು ಸಮಷ್ಟಿ ವಿದ್ಯಾನಗರೀ ನಾಥನಾದ ಸೋಮಸುಂದರೇಶ್ವರನನ್ನು ಆಯಾಯ ಕಾಲಗಳಲ್ಲಿ ಪ್ರದಕ್ಷಿಣ ನಮಸ್ಕಾರಾದಿಗಳಿಂದ ಸೇವೆ ಮಾಡುತ್ತಿರುವವನು, ಎಲ್ಲಾ ವಿಧವಾದ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದಿ ಈ ಲೋಕದಲ್ಲಿ ಎಲ್ಲಾ ವಿಧವಾದ ಐಶ್ವರ್ಯಗಳಿಂದ ಬೇಕಾದ ಭೋಗಗಳನ್ನು ಅನುಭವಿಸಿ ಅನಂತರದಲ್ಲಿ ಶಿವನಲ್ಲಿ ಐಕ್ಯವಾಗುವನು.

೩೯–೪೦ ಈ ಸೋಮಸುಂದರೇಶ್ವರ ಲಿಂಗದ ಕಥೆಯನ್ನು ಕೇಳಿದ ಮಾತ್ರದಿಂದ ಹತ್ತು ಜನ್ಮಗಳಲ್ಲಿಯೂ ಕೂಡಿಹಾಕಿರುವ ಪಾಪಗಳೆಲ್ಲವೂ, “ ಅಗ್ನಿಯಿಂದ ಹತ್ತಿಯರಾಶಿಯು ನಾಶವಾಗುವ ಹಾಗೆ ” ನಾಶವಾಗುವುವು. ಈ ಲಿಂಗದ ಸ್ಮರಣ ಮಾತ್ರದಿಂದ ಒಂದುನೂರು ಜನ್ಮಗಳ ಪಾತಕವೂ “ ಸೂರ್ಯೋದಯವಾದ ಕಾಲದಲ್ಲಿ ಕತ್ತಲೆಯು ನಾಶವಾಗುವ ಹಾಗೆ ” ನಿರ್ಮೂಲವಾಗುವುದು.

**ಹಾಲಾಸ್ಯೇಶ್ವರಸೇವಾರ್ಥಂ ಗೃಹಾನ್ನಿಷ್ಕ್ರಮಣೇ ಕೃತೇ ।**
**ಸಹಸ್ರಜನ್ಮಜನಿತಂ ಪಾತಕಂ ತು ವಿನಶ್ಯತಿ ॥ ೪೧ ॥**

**ಕದಂಬವನನಾಥಸ್ಯ ದರ್ಶನಾಲ್ಲಿಂಗರೂಪಿಣಃ ।**
**ಅಶ್ವಮೇಧಸಹಸ್ರಸ್ಯ ಸುಕೃತಂ ಲಭತೇ ಜನಃ ॥ ೪೨ ॥**

**ಸ್ತೋತ್ರೈರ್ವಾ ರುದ್ರಸೂಕ್ತೈರ್ವಾ ಸ್ತುತೇ ಹಾಲಾಸ್ಯಸುಂದರೇ ।**
**ರಾಜಸೂಯಸಹಸ್ರಸ್ಯ ಫಲಂ ಲಭತಿ ಸರ್ವದಾ ॥ ೪೩ ॥**

**ಚುಳುಕೋದಕಮಾತ್ರೇಣ ತಲ್ಲಿಂಗಂ ಸ್ನಾಪಯೇತ್ತು ಯಃ ।**
**ಅನ್ಯತ್ರ ಹೇಮಕಲಶಮಹಾಸ್ನಾನಫಲಂ ಲಭೇತ್ ॥ ೪೪ ॥**

**ವಿಧಾಯ ಮಹತೀಂ ಪೂಜಾಂ ಪಂಚಗವ್ಯಪುರಸ್ಸರೈಃ ।**
**ಪಂಚಾಮೃತೈಶ್ಚ ಶುದ್ಧೋದೈರ್ಗಂಧಾದ್ಯೈರ್ಭಕ್ತಿಮಾನ್ನರಃ ॥ ೪೫ ॥**

---

೪೧–೪೩ ಹಾಲಾಸ್ಯೇಶ್ವರನನ್ನು ಸೇವಿಸಬೇಕೆಂದು ಉದ್ದೇಶದಿಂದ ಮನೆಯಿಂದ ಹೊರಟಕೂಡಲೆ ಸಾವಿರ ಜನ್ಮಗಳ ಪಾಪಗಳೂ ನಾಶವಾಗುವುವು. ಈ ಕದಂಬವನನಾಥನಾದ ಈ ಸೋಮಸುಂದರೇಶ್ವರನ ದರ್ಶನ ಮಾತ್ರದಿಂದ ಸಾವಿರ ಅಶ್ವಮೇಧಯಾಗಗಳ ಪುಣ್ಯವು ಬರುವುದು. ಸ್ತೋತ್ರಗಳಿಂದಲಾಗಲಿ, ರುದ್ರಸೂಕ್ತಗಳಿಂದಲಾಗಲಿ, ಈ ಹಾಲಾಸ್ಯ ಸುಂದರೇಶ್ವರನನ್ನು ಸ್ತೋತ್ರಮಾಡಿದವನಿಗೆ ಸಾವಿರ ರಾಜಸೂಯಯಾಗಗಳ ಫಲವು ಉಂಟಾಗುವುದು.

೪೪–೪೫ ಈ ಹಾಲಾಸ್ಯ ಸುಂದರೇಶ್ವರನಿಗೆ ಒಂದು ಬೊಗಸೆಯಲ್ಲಿ ಅರ್ಘ ನೀರನ್ನು ಅಭಿಷೇಕ ಮಾಡಿದ್ದರಿಂದ ಬೇರೆಯ ಶಿವಲಿಂಗಕ್ಕೆ ಚಿನ್ನದ ಕಲಶದಿಂದ ಅಭಿಷೇಕ ಮಾಡಿದ ಫಲವು ಉಂಟಾಗುವುದು. ಭಕ್ತಿಯಿಂದ ಪಂಚಗವ್ಯ ದ್ರವ್ಯಗಳಿಂದ ಪ್ರಾರಂಭಿಸಿಕೊಂಡು ಪಂಚಾಮೃತ, ಶುದ್ಧವಾದ ತೀರ್ಥ, ಗಂಧ, ಹೂವು, ಇವೇ ಮೊದಲಾದುವುಗಳಿಂದ ಈ ಹಾಲಾಸ್ಯೇಶ್ವರ ಪೂಜೆಯನ್ನು ಮಾಡಿದವನು ನಾಲ್ಕು ವಿಧವಾದ ಪುರುಷಾರ್ಥಗಳನ್ನೂ ಹೊಂದುವನು.

ಹಾಲಾಸ್ಯೇಶಸ್ಯ ಲಭತೇ ಪುರುಷಾರ್ಥಚತುಷ್ಟಯಂ ।
ವಸ್ತ್ರಪೂತೈರ್ಜಲೈಸ್ಸ್ನಾಪ್ಯ ತಲ್ಲಿಂಗಂ ಭಕ್ತಿತಸ್ಸಕೃತ್ ॥ ೪೬ ॥

ಲಕ್ಷಾಶ್ವಮೇಧಜನಿತಂ ಪುಣ್ಯಂ ಪ್ರಾಪ್ನೋತಿ ಮಾನವಃ ।
ಚಂದ್ರಚಂದನಕಸ್ತೂರೀಕುಂಕುಮೈರ್ವಾ ಮೃಗೋದ್ಭವೈಃ ॥ ೪೭ ॥

ಸುಗಂಧೈರ್ವಾ ಸಮಾಲಿಪ್ಯ ಸಕೃತ್ಕರ್ಪೂರಸುಂದರಂ ।
ಆಲಿಪ್ಯತೇ ದಿವ್ಯಗಂಧೈಸ್ಸುವಸ್ತ್ರೈಶ್ಚ ಮಹಾದರಾತ್ ॥ ೪೮ ॥

ಏಕಪುಷ್ಪಪ್ರದಾನೇನ ಮೂಲಲಿಂಗೇ ಮುನೀಶ್ವರಾಃ ।
ಅನ್ಯತ್ರ ಶತಸೌವರ್ಣಪುಷ್ಪಪೂಜಾಫಲಂ ಲಭೇತ್ ॥ ೪೯ ॥

ಸಕೃದ್ಧೂಪಪ್ರದಾನೇನ ಕ್ಷಮತೇ ಸೋಮಸುಂದರಃ ।
ಸಹಸ್ರಮಪರಾಧಾನಾಂ ದಯಾಳುತ್ವಾತ್ಸ್ವಭಾವತಃ ॥ ೫೦ ॥

ಕರ್ಪೂರವರ್ತಿದೀಪೇನ ಸಕೃದ್ದತ್ತೇನ ಭಕ್ತಿತಃ ।
ಕರ್ಪೂರನಿರ್ಮಲತನುಃ ಭವೇತ್ಫಾಲವಿಲೋಚನಃ ॥ ೫೧ ॥

೪೬–೪೯ ನೀರನ್ನು ಬಟ್ಟೆಯಿಂದ ಶೋಧಿಸಿ ಆ ನೀರಿನಿಂದ ಈ ಶಿವಲಿಂಗವನ್ನು ಭಕ್ತಿಯಿಂದ ಒಂದು ಸಾರಿಯಾದರೂ ಅಭಿಷೇಕ ಮಾಡಿದವನಿಗೆ ಒಂದುಲಕ್ಷ ಅಶ್ವಮೇಧಯಾಗವನ್ನು ಮಾಡಿದ ಪುಣ್ಯವು ಉಂಟಾಗುವುದು. ಬಿಳಿಯದಾದ ಗಂಧ, ಕಸ್ತೂರಿ, ಕುಂಕುಮ ಕೇಸರಿ, ಪುನಗು ಇವೇ ಮೊದಲಾದ ಸುವಾಸನೆಯ ದ್ರವ್ಯಗಳಿಂದ ಈ ಸೋಮಸುಂದರೇಶ್ವರನನ್ನು ಲೇಪಿಸಿ, ಉತ್ತಮವಾದ ಗಂಧ, ವಸ್ತ್ರ ಇವುಗಳನ್ನೂ, ಒಂದು ಹೂವನ್ನಾದರೂ ಮೂಲ ಲಿಂಗಕ್ಕೆ ಪೂಜಿಸುವುದರಿಂದ ಇತರ ಕಡೆಯಲ್ಲಿ ಚಿನ್ನದ ನೂರು ಹೂವನ್ನು ಪೂಜಿಸಿದ ಫಲವು ಉಂಟಾಗುವುದು.

೫೦–೫೧ ಈ ಸುಂದರೇಶ್ವರನು ಸ್ವಭಾವದಿಂದಲೂ, ದಯಾಶಾಲಿಯಾಗಿರುವ ಕಾರಣ ಒಂದು ಸಾರಿಯಾದರೂ ಧೂಪವನ್ನು ಒಪ್ಪಿಸಿದರೆ ಅದರಿಂದ ಸಾವಿರ ಅಪರಾಧಗಳನ್ನು ಮನ್ನಿಸುವನು. ಕರ್ಪೂರ, ಬತ್ತಿ, ಇವುಗಳ ದೀಪವನ್ನು ಒಂದು ಸಾರಿಯಾದರೂ ಒಪ್ಪಿಸಿ, ಪೂಜಿಸಿದವನ ಶರೀರವು, ಶಿವನ ಶರೀರದ ಹಾಗೆಯೇ ಕರ್ಪೂರ ಬಣ್ಣವುಳ್ಳದ್ದಾಗಿಯೂ, ಹಣೆಗಣ್ಣಿರುವುದಾಗಿಯೂ ಆಗುವುದು.

ದತ್ವಾ ನೈವೇದ್ಯಮಾತ್ರಂ ತು ಸಿಕ್ಥೇ ಸಿಕ್ಥೇ ಯುಗಂ ಯುಗಂ ।
ಶಿವಲೋಕೇ ವಸೇದ್ಧೀಮಾನ್ಮಹಾಭೋಗಸಮನ್ವಿತಃ ॥ ೫೨ ॥

ಹಾಲಾಸ್ಯೇಶಾಯ ತಾಂಬೂಲಂ ಯೋ ದದ್ಯಾಲ್ಲಿಂಗಮೂರ್ತಯೇ ।
ವರ್ಷಕೋಟಿಶತಂ ದಿವ್ಯಂ ಶಿವಲೋಕೇ ಮಹೀಯತೇ ॥ ೫೩ ॥

ಸೋಮಸುಂದರಪೂಜಾಯೈ ಯೋ ದದ್ಯಾದ್ಭಕ್ತಿಯೋಗತಃ ।
ಘಂಟಾಭಿಷೇಕಕಲಶಧೂಪದೀಪಾದಿಪಾತ್ರಕಂ ॥ ೫೪ ॥

ಸಮುಕ್ತಸ್ಸರ್ವಪಾಪೈಶ್ಚ ಸರ್ವಾನ್ಕಾಮಾನವಾಪ್ನುಯಾತ್ ।
ನೃತ್ತಂ ಗೀತಂ ಚ ವಾದ್ಯಂ ಚ ತಲ್ಲಿಂಗಪ್ರೀತಯೇಽವ್ಯಧಾತ್ ॥ ೫೫ ॥

ತಸ್ಯಾಗ್ರತಃ ಸದಾ ಕಾಲಂ ಭವೇತ್ತೌರ್ಯತ್ರಿಕಂ ಮಹತ್ ।
ಹಾಲಾಸ್ಯೇಶಂ ಸಕೃನ್ನತ್ವಾ ದಂಡವತ್ಪೃಥಿವೀತಲೇ ॥ ೫೬ ॥

ತ್ರೈಲೋಕ್ಯವಂದಿತಪದೋ ಜಾಯತೇ ವಸುಧಾಧಿಪಃ ।
ಜಪೋ ಹೋಮಸ್ತಪೋ ದಾನಂ ಹಾಲಾಸ್ಯೇಶ್ವರಸನ್ನಿಧೌ ॥ ೫೭ ॥

---

೫೨–೫೫ ಲಿಂಗ ಮೂರ್ತಿಯಾದ ಹಾಲಾಸ್ಯೇಶ್ವರನಿಗೆ ತಾಂಬೂಲವನ್ನು ಒಪ್ಪಿಸುವವನು ದೇವಮಾನದಲ್ಲಿ ಒಂದುನೂರು ಕೋಟಿ ವರ್ಷಗಳು ಶಿವಲೋಕದಲ್ಲಿ ಮರ್ಯಾದೆಯನ್ನು ಅನುಭವಿಸುತ್ತಾ ಇರುವನು. ಈ ಸೋಮಸುಂದರೇಶ್ವರನ ಪೂಜೆಗಾಗಿ ಘಂಟೆ, ಅಭಿಷೇಕದ ಕಲಶ, ಧೂಪ, ದೀಪ, ಇವೇ ಮೊದಲಾದ ಪಾತ್ರೆಗಳನ್ನು ಭಕ್ತಿಯಿಂದ ಒಪ್ಪಿಸುವವನು ಪಾಪಗಳೆಲ್ಲದರಿಂದಲೂ ಬಿಡುಗಡೆಯನ್ನು ಹೊಂದಿ ತನ್ನ ಇಷ್ಟಸಿದ್ಧಿಯನ್ನು ಪಡೆಯುವನು. ಈ ಹಾಲಾಸ್ಯೇಶ್ವರನ ಮುಂಭಾಗದಲ್ಲಿ ನೃತ್ಯ, ಗೀತ, ವಾದ್ಯಾದಿಗಳು ಯಾವಾಗಲೂ ನಡೆಯುತ್ತಿರುವುವು. ಇವುಗಳು ಸರ್ವದಾ ನಡೆಯುವಂತೆ ಮಾಡುತ್ತಿರಬೇಕು.

೫೬. ಹಾಲಾಸ್ಯೇಶ್ವರನಿಗೆ ಒಂದು ಸಾರಿ ನಮಸ್ಕರಿಸಿದವನು ಮೂರು ಲೋಕದವರೂ ನಮಸ್ಕರಿಸಲರ್ಹನಾಗುವ ರಾಜನಾಗುವನು.

೫೭–೫೮. ಹಾಲಾಸ್ಯೇಶ್ವರನ ಸನ್ನಿಧಿಯಲ್ಲಿ ನೆರವೇರಿಸಿದ ಜಪ, ಹೋಮ, ತಪಸ್ಸು, ದಾನ ಇವುಗಳು ಕೊಂಚವೇ ಆದಾಗ್ಯೂ ಬಹಳ ಪುಣ್ಯಫಲವನ್ನು

**ಕೃತಮಲ್ಪಂ ಮಹಾಪುಣ್ಯಫಲದಂ ಸ್ಯಾನ್ನ ಸಂಶಯಃ ।**
**ಸಮಷ್ಟಿವಿದ್ಯಾನಗರೀನಾಯಕಸ್ಯ ಮಹಾಪ್ರಭೋಃ ॥ ೫೮ ॥**

**ಶಂಭೋರ್ಮಾಹಾತ್ಮ್ಯಮಖಿಲಂ ಕೋ ವಾ ವಕ್ತುಂ ವಿಚಕ್ಷಣಃ ।**
**ಕದಂಬಕಾಂತಾರಸಮಂ ತಪೋವನಂ ।**
**ಹಿರಣ್ಯಪದ್ಮಾಕರತುಲ್ಯತೀರ್ಥಕಂ ।**
**ಸಮಷ್ಟಿವಿದ್ಯಾನಗರೀಮಹೇಶಿತುಃ ।**
**ಲಿಂಗೇನ ಸಾಮ್ಯಂ ನ ಹಿ ಲಿಂಗಮನ್ಯತ್ ॥ ೫೯ ॥**

**ಮೂಲಭೂತಂ ಮಹಾಲಿಂಗಂ ಶ್ರೀಮದ್ಧಾಲಾಸ್ಯಸುಂದರಂ ।**
**ಕರ್ಪೂರಸುಂದರಂ ಚೇತಿ ಕದಂಬವನಸುಂದರಂ ॥ ೬೦ ॥**

**ಕಲ್ಯಾಣಸುಂದರಂ ಚಾಭಿಷೇಕಸುಂದರಮಿತ್ಯಪಿ ।**
**ಸುಂದರೇಶಂ ಮೃಗಮದಸುಂದರಂ ಸೋಮಸುಂದರಂ ॥ ೬೧ ॥**

---

ಉಂಟುಮಾಡುವುದರಲ್ಲಿ ಸಂಶಯವಿಲ್ಲವು. ಸಮಷ್ಟಿವಿದ್ಯಾನಗರಕ್ಕೆ ಅಧಿಪತಿಯಾದ ಮಹಾಪ್ರಭುವಾದ ಸುಂದರೇಶ್ವರನ ಮಹಿಮೆಯೆಲ್ಲವನ್ನೂ ಹೇಳಲು ಯಾರಿಗೂ ಸಾಮರ್ಥ್ಯವಿಲ್ಲವು.

೫೯. ಕದಂಬವನಕ್ಕೆ ಸಮನಾದ ತಪೋವನವೂ, ಹೇಮಪದ್ಮಾಕರಕ್ಕೆ ಸಮನಾದ ತೀರ್ಥವೂ, ಸಮಷ್ಟಿ ವಿದ್ಯಾನಗರಕ್ಕೆ ಅಧಿಪನಾದ, ಸೋಮಸುಂದರೇಶ್ವರ ಲಿಂಗಕ್ಕೆ ಸಮನಾದ ಲಿಂಗವೂ ಬೇರೆ ಯಾವುದೂ ಇಲ್ಲವು.

೬೦-೬೧. ಈ ಮಹಾಲಿಂಗವು ಎಲ್ಲಾ ಶಿವಲಿಂಗಗಳಿಗೂ ಮೂಲವಾಗಿರುವುದು. ಈ ಲಿಂಗಕ್ಕೆ ಹಾಲಾಸ್ಯಸುಂದರೇಶ್ವರ, ಕರ್ಪೂರಸುಂದರೇಶ್ವರ, ಕದಂಬವನಸುಂದರೇಶ್ವರ, ಕಲ್ಯಾಣಸುಂದರೇಶ್ವರ, ಅಭಿಷೇಕಸುಂದರೇಶ್ವರ, ಸುಂದರೇಶ್ವರ, ಮೃಗಮದಸುಂದರೇಶ್ವರ, ಸೋಮಸುಂದರೇಶ್ವರ, ಸತ್ಸುಂದರೇಶ್ವರ, ಜನಪದಗೀತ ಸುಂದರೇಶ್ವರ, ಆದಿಸುಂದರೇಶ್ವರ, ಆನಂದಸುಂದರೇಶ್ವರ, ವೇದಸುಂದರೇಶ್ವರ, ಚಾಂಪೇಯಸುಂದರೇಶ್ವರ, ಪಾಂಡ್ಯಸುಂದರೇಶ್ವರ, ಎಂದು ಹೆಸರುಗಳು ಪ್ರಸಿದ್ಧವಾಗಿರುವುವು.

ಸತ್ಸುಂದರಂ ಜನಪದಾ ಗೀತಸುಂದರಮಿತ್ಯಪಿ ।
ಆದಿಸುಂದರಮಾನಂದ ಸುಂದರಂ ದೇವಸುಂದರಂ ॥ ೬೨ ॥

ಚಾಂಪೇಯಸುಂದರಂ ಚೇತಿ ಪಾಂಡ್ಯಸುಂದರಮಿತ್ಯಪಿ ।
ಸಮಷ್ಟಿವಿದ್ಯಾನಗರೀನಾಯಕಂ ಮಧುರಾಪತಿಂ ॥ ೬೩ ॥

ಕನ್ಯಕಾನಗರೀನಾಥಂ ಚತುಷ್ಕೂಟಪುರೇಶ್ವರಂ ।
ಭೂಲೋಕಶಿವಲೋಕೇಶಂ ಜೀವನ್ಮುಕ್ತಿಪುರೇಶ್ವರಂ ॥ ೬೪ ॥

ಏವಮಾದ್ಯೈರ್ನಾಮಧೇಯೈಃ ಸ್ತುವಂತಿ ಮುನಿಪುಂಗವಾಃ ।
ಕದಂಬವನ್ಯಾಂ ಶಿವರಾಜಧಾನ್ಯಾಂ ।
ಸುಧಾಮಯಂ ಯಸ್ತು ಶಿವಸ್ಯ ಲಿಂಗಂ ॥
ಆಸಪ್ತಪಾತಾಳತಳಾತ್ಸ್ವಯಂಭುಃ ।
ಸಮುದ್ಧಿತಂ ತಜ್ಜಗತಾಂ ಹಿತಾಯ ॥ ೬೫ ॥

ಲಿಂಗಸ್ಯ ಮಾಹಾತ್ಮ್ಯಮಿದಂ ಯಥೋಕ್ತಂ
ಸ್ಕಂದೇನ ಚಾಸ್ಮದ್ಗುರು ರೂಪಿಣೈವ
ತಥೈವ ಚೋಕ್ತಂ ತು ಮಯಾ ಸಮಸ್ತಂ ।
ಮುನೀಶ್ವರಾ ವೋ ಜಗತಾಂ ವಿ ಭೂತ್ಯೈ ॥ ೬೬ ॥

ಇತ್ಯುಕ್ತೇ ಕುಂಭಸಂಭೂತೇ ವಸಿಷ್ಠಾದ್ಯಾ ಮುನೀಶ್ವರಾಃ ।
ಹಾಲಾಸ್ಯೇಶಕೃತಾಂ ಲೀಲಾಂ ಶ್ರೋತುಕಾಮಾಃ ಪರಸ್ಪರಂ ॥ ೬೭ ॥

---

೬೨–೬೫. ಮಹರ್ಷಿಗಳೆಲ್ಲರೂ ಈ ಶಿವಲಿಂಗವನ್ನೂ ಸಮಷ್ಟಿವಿದಾನಗರೀ ನಾಯಕ,ಮಧುರಾಧಿಪತಿ, ಕನ್ಯಕಾನಗರೀನಾಥ, ಚತುಷ್ಕೂಟಪುರೇಶ್ವರ, ಭೂಲೋಕ ಶಿವಲೋಕೇಶ,ಜೀವನ್ಮುಕ್ತಿಪುರೀಶ್ವರ ಇವೇಮೊದಲಾದ ಹೆಸರುಗಳಿಂದ ಕರೆಯುವರು. ಶಿವನ ವಾಸಸ್ಥಾನವಾದ ಕದಂಬವನದಲ್ಲಿ ಅಮೃತಮಯವಾದ ಶಿವಲಿಂಗವು ಜಗತ್ತಿನ ಹಿತಕ್ಕಾಗಿ ಸಪ್ತಪಾತಾಳ ಲೋಕಗಳನ್ನು ವ್ಯಾಪಿಸಿಕೊಂಡು ಆವಿರ್ಭವಿಸಿರುವುದು.

೬೬–೬೮. ಪ್ರಪಂಚದ ಹಿತಕ್ಕಾಗಿ ನನ್ನ ಗುರುವಾದ ಷಣ್ಮುಖನು ನನಗೆ ಉಪದೇಶ ಮಾಡಿರುವ ಹಾಗೆ ಈ ಹಾಲಾಸ್ಯೇಶ್ವರನ ಮಾಹಾತ್ಮೆಯೆಲ್ಲವನ್ನೂ ನಿಮಗೆ ಹೇಳಿರುವೆನು"—ಅಗಸ್ತ್ಯಋಷಿಯು ಹೇಳಿದ ಮಾತನ್ನು ಕೇಳಿ, ವಸಿಷ್ಠನೇ

ವಿಚಾರ್ಯ ಶ್ರದ್ಧಯಾ ಯುಕ್ತಾಃ ಪ್ರಾರ್ಥಯಂತಿ ಘಟೋದ್ಭವಂ ॥ ೬೮ ॥

॥ ಋಷಯ ಊಚುಃ ॥

ಭಗವನ್ಸರ್ವಶಾಸ್ತ್ರಾರ್ಥಪರಿಜ್ಞಾನವತಾಂ ವರ ।
ಶ್ರುತ್ವಾ ತು ಕ್ಷೇತ್ರಮಾಹಾತ್ಮ್ಯಂ ತೀರ್ಥಶ್ರೇಷ್ಠಸ್ಯ ವೈಭವಂ ॥ ೬೯ ॥

ಮೂಲಲಿಂಗಸ್ಯ ಮಾಹಾತ್ಮ್ಯಂ ಶ್ರವಣಾತ್ಪುರುಷಾರ್ಥದಂ ।
ಅಸ್ಮಾಕಂ ಮಹತೀ ಭಕ್ತಿಸ್ಸಂಜಾತಾ ಸೋಮಸುಂದರೇ ॥ ೭೦ ॥

ಚತುಃಷಷ್ಟಿವಿಧಾ ಲೀಲಾ ಯಾಃ ಕೃತಾಃ ತೇನ ಶಂಭುನಾ ।
ಭವತಾ ಸೂಚಿತಾಸ್ಸರ್ವಾಸ್ತಾಃ ಕ್ರಮಾದಧುನಾ ವದ ॥ ೭೧ ॥

ಇತಿ ಸಂಪ್ರಾರ್ಥಿತಸ್ಸರ್ವೈರ್ಮಹಾತ್ಮಾ ಕುಂಭಸಂಭವಃ ।
ಲೀಲಾನಾಂ ಚ ಚತುಃಷಷ್ಟಿಂ ವಕ್ತುಮಾರಭತೇ ಮುದಾ ॥ ೭೨ ॥

---

ಮೊದಲಾದ ಋಷಿಗಳು ಈ ಹಾಲಾಸ್ಯೇಶ್ವರನು ನಡೆಸಿರುವ ಲೀಲೆಗಳನ್ನೆಲ್ಲವನ್ನೂ ಕೇಳಲು ಇಚ್ಛೆಯುಳ್ಳವರಾಗಿ ತಮ್ಮ ತಮ್ಮಲ್ಲಿ ವಿಚಾರಮಾಡಿಕೊಂಡು ಅಗಸ್ತ್ಯ ಋಷಿಯನ್ನು ಪ್ರಾರ್ಥಿಸಿದರು.

೬೯–೭೦. ಋಷಿಗಳು ಹೇಳಿದರು:—ಎಲ್ಲಾ ಶಾಸ್ತ್ರಜ್ಞರಿಗೂ ಶ್ರೇಷ್ಠನಾದ ಷಡ್ಗುಣೈಶ್ವರ್ಯಸಂಪನ್ನನಾದ ಅಗಸ್ತ್ಯಋಷಿಯೇ! ನಾವೆಲ್ಲರೂ, ಈ ಕ್ಷೇತ್ರದ ಮಹಿಮೆಯನ್ನು ಕೇಳಿದೆವು. ಶ್ರವಣಮಾತ್ರದಿಂದ ಪುರುಷಾರ್ಥವನ್ನು ಉಂಟು ಮಾಡುವ ಮೂಲಲಿಂಗದ ಮಹಿಮೆಯನ್ನು ಕೇಳಿದ್ದರಿಂದ ಈ ಸೋಮಸುಂದರೇಶ್ವರನಲ್ಲಿ ಬಹಳ ಭಕ್ತಿಉಂಟಾಗಿರುವುದು.

೭೧–೭೨. ಮಹಾದೇವನು ಅರುವತ್ತು ನಾಲ್ಕು ಲೀಲೆಗಳನ್ನು ಮಾಡಿರುವನೆಂದು ನೀನು ಸೂಚಿಸಿರುತ್ತೀಯೆ. ಅವೆಲ್ಲವನ್ನೂ ಕ್ರಮವಾಗಿ ನಾವು ಕೇಳಲು ಇಚ್ಛೆಯುಳ್ಳವರಾದ ಕಾರಣ ನಮಗೆ ಹೇಳು."

॥ ಅಗಸ್ತ್ಯ ಉವಾಚ ॥

ಶೃಣ್ವಂತು ಮುನಯಸ್ಸರ್ವೇ ಮಹಾಭಾಗ್ಯಸಮನ್ವಿತಾಃ ।
ಯಾಸಾಂ ಶ್ರವಣಮಾತ್ರೇಣ ಬ್ರಹ್ಮಹತ್ಯಾಪಿ ನಶ್ಯತಿ ॥ ೭೩ ॥

ಲೀಲಾಸ್ತಾಃ ಕ್ರಮಶೋ ವಕ್ಷ್ಯೇ ಸಂಗ್ರಹೇಣ ಮುನೀಶ್ವರಾಃ ।
ಹಾಲಾಸ್ಯನಾಯಕೋ ದೇವೋ ಮನೋವಾಚಾಮಗೋಚರಃ ॥ ೭೪ ॥

ಬ್ರಹ್ಮವಿಷ್ಣುಮಹೇಂದ್ರಾದ್ಯೈರ್ವಂದ್ಯಮಾನಪದಾಂಬುಜಃ ।
ದಯಾಲುಸ್ಸರ್ವಭೂತಾನಾಮನುಗ್ರಹಪರಾಯಣಃ ॥ ೭೫ ॥

ಸರ್ವಜ್ಞಸ್ಸರ್ವವೇದಾದಿಸ್ಸಚ್ಚಿದಾನಂದವಿಗ್ರಹಃ ।
ಅಣೋರಣೀಯಾನ್ಸರ್ವಾತ್ಮಾ ಮಹೀಯಾನ್ಮಹತಃ ಪ್ರಭುಃ ॥ ೭೬ ॥

ಶ್ರೀಮತ್ಕದಂಬವಿಪಿನೇ ಶಿವಕ್ಷೇತ್ರೋತ್ತಮೇ ಶುಭೇ ।
ಸದಾ ಕರೋತಿ ಸಾನ್ನಿಧ್ಯಂ ಲಿಂಗೇ ಸ್ವಾಯಂಭುವೋತ್ತಮೇ ॥ ೭೭ ॥

---

೭೩–೭೬. ಅಗಸ್ತ್ಯಋಷಿಯು ಹೇಳಿದನು:—" ಶಿವನಲೀಲೆಗಳನ್ನು ಕೇಳಿದ ಮಾತ್ರದಿಂದಲೇ ಬ್ರಹ್ಮಹತ್ಯೆಯು ನಾಶವಾಗುವುದು· ಇದನ್ನು ಕೇಳಲು ನಿಮಗೆ ಇಚ್ಛೆಯು ಇರುವುದರಿಂದ ನೀವು ಬಹಳ ಅದೃಷ್ಟಶಾಲಿಗಳಾಗಿ ಇರುತ್ತೀರಿ. ನಾನು ಆ ಲೀಲೆಗಳೆಲ್ಲವನ್ನೂ ಸಂಕ್ಷೇಪವಾಗಿ ಹೇಳುವೆನು. ದೇವದೇವನಾದ ಹಾಲಾಸ್ಯೇಶ್ವರನು ಮನಸ್ಸು, ವಾಕ್ಕು ಇವುಗಳಿಗೂ ಗೋಚರನಾಗುವವನಲ್ಲ. ಇವನ ಪಾದ ಪದ್ಮಗಳನ್ನು ಬ್ರಹ್ಮ, ವಿಷ್ಣು, ಮಹೇಂದ್ರರೂ ನಮಸ್ಕರಿಸುತ್ತಿರುವರು. ಇವನು ಬಹಳ ದಯೆಯುಳ್ಳವನು. ಪ್ರಾಣಿಗಳಿಗೆಲ್ಲರಿಗೂ ಅನುಗ್ರಹ ಮಾಡುವುದರಲ್ಲಿಯೇ ಆಸಕ್ತಿಯುಳ್ಳವನು. ಇವನು ಸರ್ವಜ್ಞನು,ಎಲ್ಲಾವೇದಗಳಿಗಿಂತಲೂ ಮೊದಲಿನಿಂದಲೂ ಇರುವವನು. ಸಚ್ಚಿದಾನಂದರೂಪನಾಗಿರುವವನು. ಇವನು ಅಣುವಿಗಿಂತಲೂ (ಅಣುವಾಗಿ) ಮಹತ್ಪದಾರ್ಥಗಳಿಗಿಂತಲೂ ಮಹತ್ವವುಳ್ಳವನಾಗಿ ಇರುವನು.

೭೭–೭೯. ಈ ಪ್ರಕಾರದಿಂದ ಇರುವ ಈ ಮಹಾಪ್ರಭುವು ಶುಭಕರವಾದ ಈ ಕದಂಬವನವೆಂಬ ಉತ್ತಮಕ್ಷೇತ್ರದಲ್ಲಿರುವ ಬಹಳ ಪವಿತ್ರವಾದ ಸ್ವಯಭು ಲಿಂಗದಲ್ಲಿ ಯಾವಾಗಲೂ ತನ್ನ ಸಾನ್ನಿಧ್ಯವನ್ನು ಉಂಟುಮಾಡಿರುವನು. ಚಂದ್ರ ವಂಶದಲ್ಲಿ ಹುಟ್ಟಿದ ರಾಜರುಗಳು ಈ ಕದಂಬವನನಾಯಕನಾದ ಶಿವನಲ್ಲಿ ಬಹಳ ಭಕ್ತಿಯಿಂದ ಇರುವರು. ಈ ರಾಜರುಗಳು ತಮ್ಮ ಮನೋವಾಕ್ಕಾಯಗಳೆಂಬ

**ಹಿಮಾಂಶುವಂಶಪ್ರಭವಾಃ ಪ್ರವರಾಃ ಪಾಂಡ್ಯಭೂಭುಜಃ ।**
**ಅತೀವ ಭಕ್ತಿಸಂಯುಕ್ತಾಃ ಕದಂಬವನನಾಯಕೇ ॥ ೭೮ ॥**

**ಸೇವಾಂ ಪ್ರತಿದಿನಂ ಚಕ್ರುಸ್ತ್ರಿವಿಧೈಃ ಕರಣೈರ್ಧನೈಃ ।**
**ಪುನರನ್ಯೇ ಮಹೇಂದ್ರಾದ್ಯಾ ಭಕ್ತಿಶ್ರದ್ಧಾಸಮನ್ವಿತಾಃ ॥ ೭೯ ॥**

**ಪೂಜಯಂತಿ ಮಹಾಲಿಂಗಂ ತ್ರಿದಶಾಸ್ಸರ್ವಸಿದ್ಧಯೇ ।**
**ತೇಷಾಂ ಪರಮಯಾ ಭಕ್ತ್ಯಾ ಪರಿತುಷ್ಟಃ ಪರಾತ್ಪರಃ ॥ ೮೦ ॥**

**ಚಕಾರ ವಿವಿಧಾ ಲೀಲಾಃ ಸ ಭಕ್ತಾನಾಂ ಹಿತಾಯ ಚ ।**
**ಕೃತೇ ಷೋಡಶ ಲೀಲಾಶ್ಚ ತ್ರೇತಾಯಾಮಪಿ ಷೋಡಶ ॥ ೮೧ ॥**

**ದ್ವಾಪರೇ ಷೋಡಶ ತಥಾ ಷೋಡಶೈವ ಕಲೌಯುಗೇ ।**
**ಲಿಂಗಾನಾಮಾದಿಭೂತಸ್ಯ ಕದಂಬವನವಾಸಿನಃ ॥ ೮೨ ॥**

**ಸೋಮಸುಂದರನಾಥಸ್ಯ ಸುಮೀನಾಕ್ಷೀಪತೇಃ ಪ್ರಭೋಃ ।**
**ವಿಚಿತ್ರಾಶ್ಚ ಪವಿತ್ರಾಶ್ಚ ಚತುಃಷಷ್ಟಿಶ್ಚ ಸಂಖ್ಯಯಾ ॥ ೮೩ ॥**

---

ತ್ರಿಕರಣಗಳಿಂದಲೂ,ದ್ರವ್ಯಗಳಿಂದಲೂ ಪ್ರತಿದಿನವೂ ಈ ಹಾಲಾಸ್ಯೇಶ್ವರನನ್ನು ಸೇವಿಸುವರು. ಮಹೇಂದ್ರನೇ ಮೊದಲಾದ ದೇವತೆಗಳೂ ಭಕ್ತಿಯುಳ್ಳವರಾಗಿ ಪ್ರತಿದಿನವೂ ಪೂಜಿಸುತ್ತಾ ತಮ್ಮ ತಮ್ಮ ಇಷ್ಟಸಿದ್ಧಿಗಳನ್ನು ಹೊಂದುತ್ತಿರುವರು.

೮೦–೮೩ (ಪರಾತ್ಪರನಾದ) ಶ್ರೇಷ್ಠರೆಲ್ಲರಿಗೂ ಶ್ರೇಷ್ಠನಾದ ಈ ಹಾಲಾಸ್ಯೇಶ್ವರನು ಅವರವರ ಭಕ್ತಿಪೂರ್ವಕವಾದ ಸೇವೆಯಿಂದ ಸಂತುಷ್ಟನಾಗಿ ಭಕ್ತರ ಹಿತಕ್ಕಾಗಿ ಆಯಾಯ ಲೀಲೆಗಳನ್ನು ಆಚರಿಸಿರುವನು. ಕೃತಯುಗದಲ್ಲಿ ಹದಿನಾರು ಲೀಲೆಗಳನ್ನು ಆಚರಿಸಿರುವನು. ತ್ರೇತಾಯುಗದಲ್ಲಿ ಹದಿನಾರು ಲೀಲೆಗಳೂ, ದ್ವಾಪರಯುಗದಲ್ಲಿ ಹದಿನಾರು ಲೀಲೆಗಳೂ, ಕಲಿಯುಗದಲ್ಲಿ ಹದಿನಾರು ಲೀಲೆಗಳೂ ನಡೆದಿರುವುವು. ಮೀನಾಕ್ಷೀದೇವಿಗೆ ಪತಿಯಾದ, ಲೋಕಪ್ರಭುವಾದ ಸೋಮಸುಂದರೇಶ್ವರನ ಪವಿತ್ರವಾದ ಮತ್ತು ಆಶ್ಚರ್ಯಕರವಾದ ಅರುವತ್ತುನಾಲ್ಕು ಲೀಲೆಗಳ ಕ್ರಮವನ್ನು ಇಲ್ಲಿ ಸಂಗ್ರಹದಿಂದಹೇಳುವೆನು.

ಯಾ ಲೀಲಾ ಲೋಕವಿಖ್ಯಾತಾಸ್ತಾಸಾಂ ಕ್ರಮಮಿಹೋಚ್ಯತೇ ।
ಪ್ರಥಮಾ ಪ್ರಥಿತಾ ಲೀಲಾ ವೃತ್ರಾರೇರ್ವೃಜಿನಾಪಹಾ ॥ ೮೪ ॥

ದ್ವಿತೀಯಾ ಸಾ ಮುನೇಶ್ಶಾಪಾನ್ಮುಕ್ತಿರೈರಾವತಸ್ಯ ಚ ।
ತೃತೀಯಾ ಸಾ ನೀಪವನ್ಯಾಮಕರೋನ್ಮಧುರಾಪುರೀಂ ॥ ೮೫ ॥

ತಟಾತಕಾಯಾ ಜನನಂ ಚತುರ್ಥೀವಿದಧಾತಿ ಸಾ ।
ಪಂಚಮ್ಯಾಂ ಪಾಂಡ್ಯದೇವೇನ ಕೃತಂ ತತ್ಪಾಣಿಪೀಡನಂ ॥ ೮೬ ॥

ಷಷ್ಠೀಶನೃತ್ತಂ ಸುವ್ಯಕ್ತಂ ಸುಮಿತ್ರಸ್ಯ ಪತಂಜಲೇಃ ।
ಸಪ್ತಮೀ ಕುಂಡಕುಕ್ಷೇರ್ಬಹ್ವನ್ನಾದನಶಕ್ತಿದಾ ॥ ೮೭ ॥

ಅನ್ನಗರ್ತಾನದೀಂ ತಸ್ಮೈ ದರ್ಶಯಾಮಾಸ ಚಾಷ್ಟಮೀ ।
ಲೀಲಾ ಸಾ ನವಮೀ ಸಪ್ತಸಾಗರಾನಯನಕ್ಷಮಾ ॥ ೮೮ ॥

---

೮೪–೮೬ ವೃತ್ರಾಸುರನನ್ನು ವಧೆಮಾಡಿರುವದರಿಂದ ಇಂದ್ರನಿಗೆ ಉಂಟಾದ ಬ್ರಹ್ಮಹತ್ಯಾದೋಷವನ್ನು ನಾಶಮಾಡಿರುವ ಲೀಲೆಯು ಮೊದಲನೆಯದಾಗಿ ಇರುವುದು. ದೂರ್ವಾಸ ಋಷಿಯು ಕೊಟ್ಟ ಶಾಪದಿಂದ ಐರಾವತವನ್ನು ಬಿಡಿಸಿರುವುದು ಎರಡನೆಯದು. ಕದಂಬವನದಲ್ಲಿ ಮಧುರಾನಗರವನ್ನು ನಿರ್ಮಿಸಿರುವುದು ಮೂರನೆಯ ಲೀಲೆಯು. ಪಾರ್ವತೀದೇವಿಯನ್ನು ತಟಾತಕಾ ಎಂಬ ಹೆಸರಿನಿಂದ ಭೂಮಿಯಲ್ಲಿ ಅವತಾರ ಮಾಡುವಂತೆ ಮಾಡಿರುವುದು ನಾಲ್ಕನೆಯ ಲೀಲೆಯು. ತಾನೇ ಪಾಂಡ್ಯದೇಶದಲ್ಲಿ ರಾಜನಾಗಿ ಆ ತಟಾತಕಾದೇವಿಯನ್ನು ಮದುವೆ ಮಾಡಿಕೊಂಡಿರುವುದು ಐದನೆಯ ಲೀಲೆಯಾಗಿರುವುದು.

೮೭–೮೮ ಪತಂಜಲಿ ಋಷಿಗೆ ಸ್ನೇಹದ ವಿಶ್ವಾಸದಿಂದ ತನ್ನ ತಾಂಡವವನ್ನು ತೋರಿಸಿರುವುದು ಆರನೆಯ ಲೀಲೆಯು. ಕುಂಡೋದರನಿಂದ ಅನ್ನದ ರಾಶಿಯನ್ನು ಭಕ್ಷಿಸುವಂತೆ ಮಾಡಿರುವುದು, ಏಳನೆಯ ಲೀಲೆಯು. ಆ ಕುಂಡೋದರನಿಗೆ ಕುಡಿಯಲು ನೀರನ್ನು ಉಂಟುಮಾಡಿಕೊಟ್ಟಿರುವುದು ಎಂಟನೆಯ ಲೀಲೆಯು. ಸಪ್ತಸಾಗರಗಳನ್ನು ಒಂದುಕಡೆಗೆ ಒಟ್ಟಾಗಿ ತರಿಸಿರುವುದು ಒಂಭತ್ತನೆಯ ಲೀಲೆಯಾಗಿರುವುದು.

**ದಶಮೀ ತ್ರಿದಿವಾದ್ಭೂಮಿಮಾನಯನ್ಮಲಯಧ್ವಜಂ ।**
**ಉಗ್ರ ಇತ್ಯುಗ್ರತನಯ ಏಕಾದಶ ತಯೋರ್ಜನಿ　　　　॥ ೮೯ ॥**

**ದ್ವಾದಶೀ ಸಾ ದದೌ ತಸ್ಮೈ ವಲಯಾದ್ಯಾಯುಧತ್ರಯಂ ।**
**ತ್ರಯೋದಶೀ ಕರೋತಿ ಸ್ಮ ಶಕ್ತ್ಯಾ ಸಾಗರತಾಡನಂ　　　　॥ ೯೦ ॥**

**ಚತುರ್ದಶೀ ವೃತ್ರಹಂತುಃ ಕಿರೀಟಮಭಿನದ್ಧೃಢಂ ।**
**ಹೇಮಾದ್ರೇರ್ಹೇಮಜಾತಂ ಯದ್ರಾಜ್ಞೀ ಪಂಚದಶೀ ದದೌ　　　　॥ ೯೧ ॥**

**ವ್ಯಕ್ತಿಂ ಕರೋತಿ ವೇದಾರ್ಥಾನ್ಮುನಿಭ್ಯಷ್ಷೋಡಶೀ ತು ಸಾ।**
**ರಾಜ್ಞೀ ಸಪ್ತದಶೀ ಲೀಲಾ ಕಿರೀಟಾರ್ಥಮದಾನ್ಮಣಿಂ　　　　॥ ೯೨ ॥**

**ಮೇಘೈಃ ಸಾಗರಪಾನಂ ಚ ಚಕಾರಾಷ್ಟಾದಶೀ ತು ಸಾ ।**
**ಮೇಘೈರೇಕೋನವಿಂಶತ್ಯಾತ್ವತಿವೃಷ್ಟಿರ್ನಿವಾರಿತಾ　　　　॥ ೯೩ ॥**

---

೮೯–೯೦ ಮಲಯಧ್ವಜರಾಜನನ್ನು ಸ್ವರ್ಗದಿಂದ ಭೂಮಿಗೆ ತಂದಿರುವುದು ಹತ್ತನೆಯ ಲೀಲೆಯಾಗಿರುವುದು. ತಟಾತಕಾದೇವಿಯಲ್ಲಿ ಉಗ್ರನೆಂಬ ಹೆಸರಿನ ಪುತ್ರನನ್ನು ಪಡದಿರುವುದು ಹನ್ನೊಂದನೆಯ ಲೀಲೆಯು. ಹನ್ನೆರಡನೆಯ ಲೀಲೆಯಲ್ಲಿ ಆ ದೇವನು ವಲಯವೇ ಮೊದಲಾದ ಮೂರು ಆಯುಧಗಳನ್ನು ಉಗ್ರನಿಗೆ ಕೊಟ್ಟಿರುವುದಾಗಿರುವುದು. ಶಕ್ತ್ಯಾಯುಧದಿಂದ ಆ ಉಗ್ರನ ಮೂಲಕ ವಾಗಿ ಸಮುದ್ರವನ್ನು ನಿಗ್ರಹ ಮಾಡಿಸಿರುವುದು ಹದಿಮೂರನೆಯ ಲೀಲೆಯಾಗಿರುವುದು.

೯೧–೯೨ ವೃತ್ರಾಸುರನಿಗೆ ಶತ್ರುವಾದ ಇಂದ್ರನ ಕಿರೀಟವನ್ನು ಬಲವಾದ ರೀತಿಯಿಂದ ಕೆಡವಿರುವುದು ಹದಿನಾಲ್ಕನೆಯ ಲೀಲೆಯು. ಮೇರುಪರ್ವತದಲ್ಲಿರುವ ಚಿನ್ನದ ರಾಶಿಯನ್ನು ರಾಜನಿಗೆ ತಂದುಕೊಟ್ಟಿರುವ ಲೀಲೆಯು ಹದಿನೈದನೆಯದಾಗಿ ಇರುವುದು. ಮುನಿಗಳಿಗೆ ವೇದಾರ್ಥಗಳನ್ನು ಉಪದೇಶಮಾಡಿರುವುದು ಹದಿನಾರನೆಯ ಲೀಲೆಯಾಗಿರುವುದು. ರಾಜನಿಗೆ ಕಿರೀಟವನ್ನು ಮಾಡಿಸಲು ರತ್ನಗಳನ್ನು ಕೊಟ್ಟಿರುವುದು ಹದಿನೇಳನೆಯ ಲೀಲೆಯು.

೯೩–೯೪ ಮೇಘಗಳಿಂದ ಸಮುದ್ರದ ನೀರೆಲ್ಲವೂ ಶೋಷಿಸುವಂತೆ ಪಾನ ಮಾಡಿರುವುದು ಹದಿನೆಂಟನೆಯ ಲೀಲೆಯಾಗಿರುವುದು. ಮೇಘಗಳಿಂದ ಉಂಟಾ

ವಿಂಶಲ್ಲೀಲಾ ತನೋತಿ ಸ್ಮ ವಿಚಿತ್ರಂ ಸಿದ್ಧವೈಭವಂ ।
ಜಗ್ರಾಹ ಗ್ರಾಹದಂತೀಕ್ಷುಮೇಕವಿಂಶತಿಲೀಲಯಾ ॥ ೯೪ ॥

ದ್ವಾವಿಂಶಲ್ಲೀಲಯಾ ನಗ್ನಮಾತಂಗೋ ಮರಣಂ ಗತಃ ।
ದ್ವಿಜಕನ್ಯಾನುಗ್ರಹೋಽಭೂತ್ತ್ರಯೋವಿಂಶತಿಲೀಲಯಾ ॥ ೯೫ ॥

ವ್ಯತ್ಯಸ್ತನೃತ್ತಮಭವಚ್ಚತುರ್ವಿಂಶತಿಲೀಲಯಾ ।
ದ್ವಿಜಸ್ಯ ಪಂಚವಿಂಶತ್ಯಾ ವಧೂವಧನಿರೂಪಣಂ ॥ ೯೬ ॥

ಮಾತೃಜಾರಂ ಪಿತೃಘ್ನಂ ತಂ ಷಡ್ವಿಂಶತಿರಪಾಲಯತ್ ।
ಭಟಾರ್ಥಂ ಸಪ್ತವಿಂಶತ್ಯಾ ತ್ವಂಕಂ ಛಿತ್ವಾಜಯಚ್ಛಿವಃ ॥ ೯೭ ॥

---

ಗಿದ್ದ ಅತಿವೃಷ್ಟಿಯನ್ನು ನಿವಾರಿಸುವುದು ಹತ್ತೊಂಭತ್ತನೆಯ ಲೀಲೆಯಾಗಿರುವುದು. ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡುವ ಸಿದ್ಧಪುರುಷನ ಮಹಿಮೆಯನ್ನು ಪ್ರದರ್ಶನ ಮಾಡುವುದು ಇಪ್ಪತ್ತನೆಯ ಲೀಲೆಯು. ಶಿಲಾರೂಪದಿಂದ ಇರುವ ಆನೆಯು, ಕಬ್ಬಿನ ಜಲ್ಲೆಯನ್ನು ತಿನ್ನುವಂತೆ ಮಾಡಿರುವುದು ಇಪ್ಪತ್ತೊಂದನೆಯ ಲೀಲೆಯಾಗಿ ಇರುವುದು.

೯೫ (ಮೋಸಕ್ಕಾಗಿ) ಮಾಯೆಯಿಂದ ನಿರ್ಮಿಸಿದ ಗಜವನ್ನು ನಿಗ್ರಹ ಮಾಡಿರುವುದು ಇಪ್ಪತ್ತೆರಡನೆಯ ಲೀಲೆಯು. ಬ್ರಾಹ್ಮಣನ ಕನ್ಯೆಗೆ ಅನುಗ್ರಹ ಮಾಡಿರುವುದು ಇಪ್ಪತ್ತಮೂರನೆಯ ಲೀಲೆಯಾಗಿ ಇರುವುದು.

೯೬–೯೭. ಇಪ್ಪತ್ತನಾಲ್ಕನೆಯ ಲೀಲೆಯಿಂದ ವ್ಯತ್ಯಸ್ತವಾದ ನೃತ್ಯಮಾಡಿರುವುದನ್ನು ತಿಳಿಸುವುದು. ಇಪ್ಪತ್ತೈದನೆಯ ಲೀಲೆಯಿಂದ ಬ್ರಾಹ್ಮಣನ ಸ್ತ್ರೀಯನ್ನು ವಧೆ ಮಾಡಿರುವುದು. ಇಪ್ಪತ್ತಾರನೆಯ ಲೀಲೆಯಿಂದ ವ್ಯಭಿಚಾರಿಯಾದವನು ತನ್ನ ತಂದೆಯನ್ನು ವಧೆಮಾಡಿದ ಪಾತಕವು ಅವನಿಗೆ ನಾಶವಾಗುವಂತೆ ಅನುಗ್ರಹಮಾಡಿರುವುದನ್ನು ತಿಳಿಸುವುದು. ಇಪ್ಪತ್ತೇಳನೆಯ ಲೀಲೆಯಿಂದ (ಭಟನನ್ನುಮಾಡುವುದಕ್ಕಾಗಿ) ಭಟನಿಗೋಸ್ಕರವಾಗಿ ಸಿದ್ಧನಾದ ಅಂಕನೆಂಬುವನನ್ನು ಛೇದಿಸಿ ಜಯಿಸಿರುವುದನ್ನು ತಿಳಿಸುವುದು.

**ಪ್ರಶಾಂತಮಷ್ಟವಿಂಶತ್ಯಾ ನಗ್ನನಾಗಭವಂ ವಿಷಂ ।**
**ಏಕೋನತ್ರಿಂಶಿಕಾ ಲೀಲಾ ನಗ್ನಧೇನುಮುಪಾತಯತ್ ॥ ೯೮ ॥**

**ತ್ರಿಂಶಿಕಾ ಪಾಂಡ್ಯಸೇನಾನ್ಯಂ ಪಾತುಂ ಸೈನ್ಯಮದರ್ಶಯತ್ ।**
**ರಾಜ್ಞೇ ಹೇಮಮಯೀಂ ನೀವೀಂ ತ್ವೇಕತ್ರಿಂಶಿಕಯಾಽಜನಿ ॥ ೯೯ ॥**

**ದ್ವಾತ್ರಿಂಶಿಕಾ ವೈಶ್ಯವೀಥ್ಯಾಂ ಕರ್ತ್ರೀ ವಲಯವಿಕ್ರಯಂ ।**
**ಯಕ್ಷಸ್ತ್ರೀಭ್ಯಸ್ತ್ರಯಸ್ತ್ರಿಂಶಲ್ಲೀಲಾ ಸಿದ್ಧ್ಯಷ್ಟಕಂ ದದೌ ॥ ೧೦೦ ॥**

**ಚೋಳೇಂದ್ರಾಯ ಚತುಸ್ತ್ರಿಂಶಲ್ಲೀಲಾ ದ್ವಾರವಿಭೇದಿನೀ ।**
**ಪಾನೀಯಂ ಪಾಂಡ್ಯಸೇನಾಯೈ ಸಾ ಪಂಚತ್ರಿಂಶಿಕಾ ತ್ವದಾತ್ ॥ ೧೦೧ ॥**

**ಷಟ್ತ್ರಿಂಶಿಕಾ ಪುಷ್ಪವನೇ ರಸವಾದಮುದರ್ಶಯತ್ ।**
**ಸಪ್ತತ್ರಿಂಶಿಕಯಾ ಚೋಳಮಶ್ವಸಾದೀ ಹರೋಽಜಯತ್ ॥ ೧೦೨ ॥**

---

೯೮-೯೯. ಕಪಟದಿಂದ ನಿರ್ಮಿಸಿದ ಸರ್ಪದ ವಿಷವನ್ನು ನಾಶಪಡಿಸಿರುವುದು ಇಪ್ಪತ್ತೆಂಟನೆಯ ಲೀಲೆಯು. ಕಪಟದಿಂದ ನಿರ್ಮಿಸಿದ ಧೇನುವನ್ನು ನಾಶಮಾಡಿರುವುದು ಇಪ್ಪತ್ತೊಂಬತ್ತನೆಯ ಲೀಲೆಯಾಗಿರುವುದು. ಪಾಂಡ್ಯಸೇನಾಪತಿಯನ್ನು ರಕ್ಷಿಸುವುದಕ್ಕಾಗಿ ಸೇನೆಯನ್ನು ತೋರಿಸಿರುವ ಲೀಲೆಯು ಮೂವತ್ತನೆಯದಾಗಿರುವುದು. ರಾಜನಿಗೆ ಹಣದಗಂಟನ್ನು ಕೊಟ್ಟಿರುವುದು ಮೂವತ್ತೊಂದನೆಯ ಲೀಲೆಯು.

೧೦೦-೧೦೨. ವೈಶ್ಯರ ಬೀದಿಯಲ್ಲಿ ಬಳೆಗಳನ್ನು ಮಾರುವುದು ಮೂವತ್ತೆರಡನೆಯ ಲೀಲೆಯು. ಯಕ್ಷರ ಸ್ತ್ರೀಯರಿಗೆ ಅಷ್ಟಸಿದ್ಧಿಗಳನ್ನು ಅನುಗ್ರಹಿಸಿರುವುದು ಮೂವತ್ತಮೂರನೆಯ ಲೀಲೆಯಾಗಿರುವುದು. ಚೋಳರಾಜನಿಗೆ ದೇವಸ್ಥಾನದ ಗರ್ಭಗೃಹದ ಬಾಗಿಲನ್ನು ತೆಗೆದುಕೊಟ್ಟಿರುವುದು ಮೂವತ್ತನಾಲ್ಕನೆಯ ಲೀಲೆಯಾಗಿರುವುದು. ಪಾಂಡ್ಯರಾಜನ ಸೇನೆಗಾಗಿ ಕುಡಿಯುವ ನೀರನ್ನು ಕೊಟ್ಟಿರುವುದು ಮೂವತ್ತೈದನೆಯ ಲೀಲೆಯು. ಪುಷ್ಪೋದ್ಯಾನದಲ್ಲಿ ರಸವಾದವನ್ನು ಪ್ರದರ್ಶನ ಮಾಡಿರುವುದು ಮೂವತ್ತಾರನೆಯ ಲೀಲೆಯಾಗಿರುವುದು. ಹಾಲಾಸ್ಯೇಶ್ವರನು ತಾನೇ ಕುದುರೆಯ ಸವಾರನಾಗಿ ಚೋಳರಾಜನನ್ನು ಗೆದ್ದಿರುವುದು ಮೂವತ್ತೇಳನೆಯ ಲೀಲೆಯಾಗಿರುವುದು.

**ಅಷ್ಟತ್ರಿಂಶಿಕಯಾ ಚಾಸೀದ್ವೃಷಳಾಯಾಕ್ಷಯಾಕ್ಷತಂ ।**
**ನ ಸಾಧಿಕಾ ತ್ರಿಂಶಿಕಾ ಸಾ ಕರೋದ್ವೈಶ್ಯವಟೋರ್ಜಯಂ ॥ ೧೦೩ ॥**

**ರಾಜ್ಞಶ್ಚತ್ವಾರಿಂಶಿಕಾ ತು ಬ್ರಹ್ಮಹತ್ಯಾರ್ತಿನಾಶಿನೀ ।**
**ಏಕಚತ್ವಾರಿಂಶಿಕಯಾ ಕಾಷ್ಠಭಾರಂ ಹರೋ ದಧೌ ॥ ೧೦೪ ॥**

**ದ್ವಿಚತ್ವಾರಿಂಶಿಕಾ ಚೇರಂ ಪ್ರತಿ ಶ್ರೀಪತ್ರಿಕಾಮದಾತ್ ।**
**ಭದ್ರಾಯ ಫಲಕಾದಾನಂ ತ್ರಿಚತ್ವಾರಿಂಶಿಕ್ಯಾಕರೋತ್ ॥ ೧೦೫ ॥**

**ಚತುಶ್ಚತ್ವಾರಿಂಶಿಕಯಾ ತತ್ಕಲತ್ರಜಯಪ್ರದಾ ।**
**ಪಂಚಚತ್ವಾರಿಂಶಿಕಾ ತು ಕೋಲಪೋತಾನಪಾಲಯತ್ ॥ ೧೦೬ ॥**

**ಷಟ್ಚತ್ವಾರಿಂಶಿಕಾ ತೇಷಾಂ ಸಚಿವತ್ವಂ ಪ್ರಯಚ್ಛತಿ ।**
**ಸಪ್ತಚತ್ವಾರಿಂಶಿಕಾಯಾಂ ಖಂಜರೀಟೋಽಜಯದ್ರಿಪೂನ್ ॥ ೧೦೭ ॥**

---

೧೦೩–೧೦೪. ಶೂದ್ರನಿಗೆ ಅಕ್ಷಯವು ಅಕ್ಷಯವಾಗುವಂತೆ ಅನುಗ್ರಹಮಾಡಿ ಕೊಟ್ಟಿರುವುದು ಮೂವತ್ತೆಂಟನೆಯ ಲೀಲೆಯಾಗಿರುವುದು. ವೈಶ್ಯವಟುವಿಗೆ ವಿವಾದದಲ್ಲಿ ಜಯವನ್ನು ಅನುಗ್ರಹಿಸಿರುವುದು ಮೂವತ್ತೊಂಭತ್ತನೆಯ ಲೀಲೆಯಾಗಿರುವುದು. ರಾಜನಿಗೆ ಪ್ರಾಪ್ತವಾದ ಬ್ರಹ್ಮಹತ್ಯೆಯನ್ನು (ತೊಲಗಿಸಿರುವುದು) ಪರಿಹಾರಮಾಡಿರುವುದು ನಲವತ್ತನೆಯ ಲೀಲೆಯಾಗಿರುವುದು. ಹಾಲಾಸ್ಯೇಶ್ವರನು ತಾನೇ ಕಟ್ಟಿಗೆಯ ಹೊರೆಯನ್ನು ಹೊತ್ತುಕೊಂಡು ತಿರುಗುವುದು ಮತ್ತು ಅದನ್ನು ವಿಕ್ರಯ ಮಾಡುವುದು ನಲವತ್ತೊಂದನೆಯ ಲೀಲೆಯಾಗಿರುವುದು.

೧೦೫. ಚೇರನೆಂಬವನಿಗೆ ಶ್ರೀಪತ್ರಿಕೆಯನ್ನು ಅನುಗ್ರಹಿಸಿರುವುದು ನಲವತ್ತೆರಡನೆಯ ಲೀಲೆಯಾಗಿರುವುದು. ಭದ್ರನೆಂಬುವನಿಗೆ ಕೂತುಕೊಳ್ಳುವುದಕ್ಕೆ ಪೀಠದ ಮಣೆಯನ್ನು ಅನುಗ್ರಹಿಸಿರುವುದು, ನಲವತ್ತಮೂರನೆಯ ಲೀಲೆಯಾಗಿರುವುದು.

೧೦೬–೧೦೭. ಭದ್ರನೆಂಬವನ ಪತ್ನಿಗೆ ಗಾನಮಾಡುವುದರಲ್ಲಿ ಜಯವನ್ನು ಉಂಟುಮಾಡುವುದು ನಲವತ್ತನಾಲ್ಕನೆಯ ಲೀಲೆಯಾಗಿರುವುದು. ನಲವತ್ತೈದನೆಯ ಲೀಲೆಯು ಹಂದಿಯ ಮರಿಗಳನ್ನು ರಕ್ಷಿಸಿರುವುದನ್ನು ತಿಳಿಸುವುದು. ನಲವತ್ತಾರನೆಯ ಲೀಲೆಯು ಅವುಗಳಿಗೆ ಮಂತ್ರಿ ಪದವಿಯನ್ನು ಕೊಟ್ಟಿರುವುದನ್ನು ತಿಳಿಸುವುದು. ಖಂಜರೀಟವೆಂಬ ಹಕ್ಕಿಯು ತನ್ನ ಶತ್ರುಗಳನ್ನು ಜಯಿಸಿರುವ ವಿಷಯವನ್ನು

ಅಷ್ಟಚತ್ವಾರಿಂಶಿಕಾ ಸ್ಯಾ ಕೋಲೇಯುಷ್ಟೇರಪಕ್ಷಿಮುಕ್ತಿದಾ ।
ಏಕೋನಪಂಚಾಶಿಕಯಾ ಪುರಸೀಮಾ ಸ್ಫುಟೀ ಕೃತಾ ॥ ೧೦೯ ೧೦೮ ॥

ಪಂಚಾಶಿಕಾ ಜಯಶ್ಚೋಳಮೀಶ ನಾಮಾಂಕಸಾಯಕೈಃ ।
ಏಕಪಂಚಾಶಿಕಾಲೀಲಾ ಸಂಘೇಭ್ಯಃ ಸ್ವಸ್ವಪೀಠದಾ ॥ ೧೧೦ ೧೦೯ ॥

ದ್ವಿಪಂಚಾಶಿಕಯಾ ಶಂಭುರ್ವಿಪ್ರಾಯ ಸ್ವಾಂ ಕೃತಿಂ ದದೌ ।
ತ್ರಿಪಂಚಾಶಿಕಯಾ ದೇವೋ ನಕ್ಕೀರಂ ರಕ್ಷತಿ ಸ್ಮ ಚ ॥ ೧೧೧ ೧೧೦ ॥

ಚತುಃಪಂಚಾಶಿಕಾ ಕತ್ರೀರ್ಕೇ ತಸ್ಯೈ ಸೂತ್ರೋಪದೇಶನಂ ।
ಪ್ರಬಂಧತಾರತಮ್ಯಂ ಚ ಪಂಚಪಂಚಾಶಿಕಾ ಕರೋತ್ ॥ ೧೧೨ ೧೧೧ ॥

ಪ್ರಾಪೋತ್ತರಶ್ರೀಹಾಲಾಸ್ಯಂ ಷಟ್ಪಂಚಾಶಿಕಯಾ ಹರಃ ।
ಸಪ್ತಪಂಚಾಶಿಕಾ ದಾಶಕನ್ಯಾ ಕಲ್ಯಾಣಕಾರಿಣೀ ॥ ೧೧೨ ॥

---

ನಲವತ್ತೇಳನೆಯ ಲೀಲೆಯು ತಿಳಿಸುವುದು. ಟಿಟ್ಟಿಭಪಕ್ಷಿಗೆ ಮುಕ್ತಿಯನ್ನು ಕೊಟ್ಟಿರುವ ಲೀಲೆಯು ನಲವತ್ತೆಂಟನೆಯದಾಗಿರುವುದು. ನಗರದ ಎಲ್ಲೆಯನ್ನು ತೋರಿಸುವುದು ನಲವತ್ತೊಂಭತ್ತನೆಯ ಲೀಲೆಯಾಗಿರುವುದು.

೧೦೯–೧೧೦. ಪರಮೇಶ್ವರನ ಹೆಸರಿನಿಂದ ಮುದ್ರಿತವಾದ ಬಾಣಗಳಿಂದ ಚೋಳರಾಜನನ್ನು ಗೆದ್ದಿರುವುದು ಐವತ್ತನೆಯ ಲೀಲೆಯಾಗಿರುವುದು. ಐವತ್ತೊಂದನೆಯ ಲೀಲೆಯು ಸಂಘಗಳಿಗೆ ಅವರ ಮರ್ಯಾದೆಗೆ ಅನುಸಾರವಾದ ಪೀಠವನ್ನು ಕೊಟ್ಟಿರುವುದನ್ನು ಬೋಧಿಸುವುದು. ಬ್ರಾಹ್ಮಣನಿಗೆ ತಾನು ಮಾಡಿದ ಕವನಗಳನ್ನು ಕೊಟ್ಟಿರುವುದು ಐವತ್ತೆರಡನೆಯ ಲೀಲೆಯಾಗಿರುವುದು. ನಕ್ಕೀರನೆಂಬುವನನ್ನು ಹಾಲಾಸ್ಯೇಶ್ವರನು ರಕ್ಷಿಸಿರುವುದು ಐವತ್ತಮೂರನೆಯ ಲೀಲೆಯಾಗಿರುವುದು.

೧೧೧–೧೧೨. ಐವತ್ತನಾಲ್ಕನೆಯಲೀಲೆಯು ನಕ್ಕೀರನಿಗೆ ಸೂತ್ರೋಪದೇಶವನ್ನು ಮಾಡಿರುವ ವಿಷಯವನ್ನು ಬೋಧಿಸುವುದು. ಪ್ರಬಂಧಗಳಲ್ಲಿ ಇರುವ ತಾರತಮ್ಯವನ್ನು ಐವತ್ತೈದನೆಯ ಲೀಲೆಯಿಂದ ತಿಳಿಸುವುದು. ಶಿವನು ಹಾಲಾಸ್ಯಕ್ಷೇತ್ರದ ಉತ್ತರಭಾಗದಲ್ಲಿ ಚೋಳರಾಜನ ಸೇನೆಯನ್ನು ನಾಶಪಡಿಸಿರುವ ಲೀಲೆಯು ಐವತ್ತಾರನೆಯದಾಗಿ ಇರುವುದು. ಬೆಸ್ತರ ಕನ್ಯೆಯನ್ನು ಮದುವೆಮಾಡಿಕೊಂಡ ಲೀಲೆಯು ಐವತ್ತೇಳನೆಯದಾಗಿ ಇರುವುದು.

ಅಷ್ಟಪಂಚಾಶಿಕಾ ದೀಕ್ಷಾಂ ಕರ್ತ್ರೀರ್ಣ ವಾತಪುರೇಶಿತುಃ ।
ಏಕೋನಷಷ್ಟ್ಯಾ ಕುರುತೇ ರಾಜ್ಞೇ ಮಾಯಾಶ್ವವಿಕ್ರಯಂ ॥ ೧೧೩ ॥

ಷಷ್ಟಿಶ್ಚ ನದ್ಯಾ ಕೃಷ್ಟಿಂ ಚಾಕರೋಚ್ಛ್ರೇರುತ್ತಮವರ್ಣಣಾಂ ।
ಏಕಷಷ್ಟ್ಯಾ ತು ಪಿಷ್ಟಾರ್ಥಂ ಮೃದ್ಭಾರಮುವಹಚ್ಛಿವಃ ॥ ೧೧೪ ॥

ದ್ವಿಷಷ್ಟಿಃ ಕುಬ್ಜಪಾಂಡ್ಯಸ್ಯ ಜ್ವರಪೀಡಾ ನಿವಾರಿಣೀ ।
ತ್ರಿಷಷ್ಟ್ಯಾ ತರುಶೂಲೈಶ್ಚ ನಗ್ನಾನ್ಸಂಹರತೀಶ್ವರಃ ॥ ೧೧೫ ॥

ಚತುಃಷಷ್ಟಿಃ ಶಮೀಕೂಪ ಶಂಕರಾನ್ಸಾಕ್ಷಿಣೋ ನಯತ್ ।
ಏವಂ ಚತುಷಷ್ಟಿವಿಧಾ ಲೀಲಾ ನೀಪಾಟವೀಪತೇಃ ॥ ೧೧೬ ॥

ಶೃಣ್ವಂತಶ್ಚ ಪಠಂತಶ್ಚ ಲಭಂತೇ ಸಕಲೇಪ್ಸಿತಂ ।
ಸಂಗ್ರಹಶ್ಲೋಕಮಾತ್ರಂ ಯೋ ಲೀಲಾನಾಂ ಕಾಲವೈರಿಣಃ ॥ ೧೧೭ ॥

ಜಪ್ತ್ವಾ ಕುರ್ವಂತಿ ಯತ್ಕಾರ್ಯಂ ತಸ್ಯ ಸಿದ್ಧಿಂ ಪ್ರಯಾಂತಿ ತೇ ।
ಇತಿ ಹಾಲಾಸ್ಯ ನಾಥಸ್ಯ ಲೀಲೋದ್ದೇಶ ಉದಾಹೃತಃ ॥ ೧೧೮ ॥

---

೧೧೩–೧೧೪. ವಾತಪುರೇಶ್ವರನಿಗೆ ದೀಕ್ಷೆಯನ್ನು ಕೊಟ್ಟಿರುವುದು ಐವತ್ತೆಂಟನೆಯ ಲೀಲೆಯಾಗಿರುವುದು. ರಾಜನಿಗೆ ಮಾಯೆಯಿಂದ ಕುದುರೆಗಳನ್ನು ಮಾರಿರುವ ಲೀಲೆಯು ಐವತ್ತೊಂಭತ್ತನೆಯದಾಗಿರುವುದು. ಕುದುರೆಗಳೆಲ್ಲವನ್ನೂ ನರಿಗಳನ್ನಾಗಿಮಾಡಿ, ನದಿಯ ಪ್ರವಾಹವನ್ನು ಬೇರೆಯಕಡೆಗೆ ತಿರಗಿಸಿರುವುದು ಅರವತ್ತನೆಯ ಲೀಲೆಯಾಗಿರುವುದು. ಹಿಟ್ಟಿಗಾಗಿ (ಕುಂಬಾರನ ಮನೆಯಲ್ಲಿ)ಮಣ್ಣನ್ನು ಹೊತ್ತಿರುವ ಲೀಲೆಯು ಅರವತ್ತೊಂದನೆಯದಾಗಿ ಇರುವುದು.

೧೧೫–೧೧೮. ಕುಬ್ಜಪಾಂಡ್ಯನಿಗೆ ಜ್ವರದ (ಪೀಡೆಯನ್ನು) ತೊಂದರೆಯನ್ನು ಪರಿಹಾರಮಾಡಿರುವ ಲೀಲೆಯು ಅರವತ್ತೆರಡನೆಯದಾಗಿರುವುದು. ವೇದ ನಿಂದಕರಾದ ಬೌದ್ಧರನ್ನು ಮರದಶೂಲಕ್ಕೇರಿಸಿ ಸಂಹರಿಸಿರುವ ಲೀಲೆಯು ಅರವತ್ತಮೂರನೆಯದಾಗಿ ಇರುವುದು. ಶಮೀವೃಕ್ಷ, ಕೂಪ, ಶಿವ, ಇವರುಗಳನ್ನು (ವ್ಯಾಜ್ಯದ) ವಿವಾದದಲ್ಲಿ ಸಾಕ್ಷಿಗಳನ್ನಾಗಿ ಮಾಡಿರುವುದು ಅರವತ್ತನಾಲ್ಕನೆಯ ಲೀಲೆಯಾಗಿರುವುದು. ಕದಂಬವನಾಧಿಪನಾದ ಹಾಲಾಸ್ಯೇಶ್ವರನ ಈ ಪ್ರಕಾರವಾದ ಅರವತ್ತುನಾಲ್ಕು ಲೀಲೆಗಳನ್ನು ಕೇಳುವವರೂ, ಓದುವವರೂ ಬೇಕಾದ ಇಷ್ಟಾರ್ಥಗಳನ್ನು ಪಡೆಯುವರು. ಕಾಲಕ್ಕೆ ಶತ್ರುವಾದ ಪರಮೇಶ್ವರನ ಲೀಲೆಗಳನ್ನು ಸಂಗ್ರಹವಾಗಿ ಹೇಳಿರುವುದನ್ನು ಪಾರಾಯಣ ಮಾಡಿದವರು ಅವರವರ ಕಾರ್ಯಸಿದ್ಧಿಯನ್ನು ಹೊಂದುವರು. ಹಾಲಾಸ್ಯನಾಥನ ಲೀಲೆಗಳನ್ನು ಉದ್ದೇಶಕ್ರಮದಿಂದ ಹೇಳಿದ್ದಾಯಿತು.

ಪುನಸ್ತಾ ಆನುಪೂರ್ವ್ಯೇಣ ಲೀಲಾ ವಕ್ಷ್ಯೇ ತ್ವನುಕ್ರಮಾತ್ ।
ಯಯಾ ತು ಲೀಲಯಾಮುಕ್ತೋ ದೇವೇಂದ್ರೋ ವೃತ್ರಹತ್ಯಯಾ ॥೧೧೯॥

ತಾಂ ಶೃಣುಧ್ವಂ ಮುನಿಶ್ರೇಷ್ಠಾಃ ಶ್ರವಣಾತ್ತು ಶಿವಪ್ರದಾಂ ।
ಇತೀದಂ ಲಿಂಗಮಾಹಾತ್ಮ್ಯಂ ಲೀಲೋದ್ದೇಶಸಮನ್ವಿತಂ ॥ ೧೨೦ ॥

ಸಕೃತ್ಸಮಾಹಿತಾಸ್ಸಂತೋ ಯೇ ಶೃಣ್ವಂತಿ ಪಠಂತಿ ವಾ ।
ಮಹಾಪಾಪವಿನಿರ್ಮುಕ್ತಾಸ್ಸರ್ವಾನ್ಕಾಮಾನವಾಪ್ಯ ಚ ॥ ೧೨೧ ॥
ಲಭಂತೇ ಶಿವಸಾಯುಜ್ಯಮಂತೇ ಶಂಭೋರನುಗ್ರಹಾತ್

ಇತಿ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ಲಿಂಗಮಹಿಮಾನುವರ್ಣನಂ ನಾಮ
ತೃತೀಯೋಽಧ್ಯಾಯಃ

---

೧೧೯-೧೨೧. ಆದರೆ ಆ ಲೀಲೆಗಳೆಲ್ಲಗಳನ್ನೂ ಕ್ರಮವಾಗಿ ಪುನಃ ಹೇಳುವೆನು. ವೃತ್ರಹತ್ಯೆಯಿಂದ ಇಂದ್ರನನ್ನು ಬಿಡುಗಡೆಮಾಡಿದ ಲೀಲೆಯನ್ನು ಕೇಳಿದವರಿಗೆ ಶಿವಭಾವವು ನಿಯತವಾಗಿ ಉಂಟಾಗುವ ಕಾರಣ ಅದನ್ನು ಮೊದಲು ಹೇಳುವೆನು. ನೀವುಗಳೆಲ್ಲರೂ ಕೇಳಿರಿ. ಈ ಅಧ್ಯಾಯವು ಲಿಂಗಮಹಾತ್ಮೆಯನ್ನು ಹೇಳುವುದಾಗಿರುವುದು. ಲೀಲೆಗಳೆಲ್ಲವನ್ನೂ ಸಂಗ್ರಹದಿಂದ ಹೇಳಿರುವ ಈ ಅಧ್ಯಾಯವನ್ನು ಒಂದು ಸಾರಿಯಾದರೂ ಕೇಳುವವರಾಗಲಿ, ಓದುವವರಾಗಲಿ, ತಾವು ಮಾಡಿದ ಬಹಳ ಪಾತಕಗಳಿಂದ ಮುಕ್ತರಾಗಿ, ಎಲ್ಲಾ ವಿಧವಾದ ಇಷ್ಟಸಿದ್ಧಿಗಳನ್ನೂ ಹೊಂದುವರು. ಅನಂತರದಲ್ಲಿ ಶಿವನ ಅನುಗ್ರಹದಿಂದ ಶಿವಸಾಯುಜ್ಯವನ್ನು ಹೊಂದುವರು

ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯಮಾಹಾತ್ಮ್ಯದಲ್ಲಿ
ಲಿಂಗಮಹಿಮಾನುವರ್ಣನವೆಂದು ಹೆಸರುಳ್ಳ ಮೂರನೆಯ
ಅಧ್ಯಾಯವು ಮುಗಿದುದು.



॥ ಶ್ರೀಃ

॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ

## ಚತುರ್ಥೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

**ಅಥಾತಃ ಪ್ರಥಮಾಂ ಲೀಲಾಂ ಪ್ರಥಿತಾಂ ಪ್ರಮಥೇಶಿತುಃ ।**
**ಪ್ರಕೃಷ್ಟಪಾಪಶಮನೀಂ ಪ್ರವಕ್ಷ್ಯೇ ಮುನಿಸತ್ತಮಾಃ ॥ ೧ ॥**

**ಪುರಾ ಕೃತಯುಗಾರಂಭೇ ಪುರುಹೂತಪುರೇ ಶುಭೇ ।**
**ತಪೋಬಲೇನ ಮಹತಾ ಕೃತಿನಾ ವಿಶ್ವಕರ್ಮಣಾ ॥ ೨ ॥**

**ನಿರ್ಮಿತಾಯಾಂ ಸುಧರ್ಮಾಯಾಂ ರತ್ನಸಿಂಹಾಸನೋಪರಿ ।**
**ಸಮಾಸೀನೋ ದೇವರಾಜೋ ದೇವಾನಾಂ ದರ್ಶನಂ ದದೌ ॥ ೩ ॥**

---

### ನಾಲ್ಕನೆಯ ಅಧ್ಯಾಯವು.

೧-೩. ಅಗಸ್ತ್ಯ ಋಷಿಯು ಹೇಳಿದನು :—ಎಲೈ ಮುನಿಶ್ರೇಷ್ಠರೇ, ಕೇಳಿರಿ. ಬಹಳವಾದ ಪಾಪಗಳನ್ನೂ ನಾಶಮಾಡುವ ಪ್ರಸಿದ್ಧವಾದ, ಪ್ರಮಥಗಣಗಳಿಗೆ ಅಧಿಪತಿ ಯಾದ ಪರಮೇಶ್ವರನ ಮೊದಲನೆಯ ಲೀಲೆಯನ್ನು ಹೇಳುವೆನು. ಪೂರ್ವಕಾಲ ದಲ್ಲಿ ಕೃತಯುಗದ ಆರಂಭದಲ್ಲಿ ಇಂದ್ರನು ತನ್ನ ಅಮರಾವತಿ ನಗರದಲ್ಲಿರುವಾಗ, ಒಂದು ದಿವಸ ತಪಸ್ಸಿನ ಮಹಿಮೆಯಿಂದ ವಿಶ್ವಕರ್ಮನು ನಿರ್ಮಿಸಿದ ಸುಧರ್ಮಾ ಎಂಬ ಸಭೆಯಲ್ಲಿ ರತ್ನಖಚಿತವಾದ ಸಿಂಹಾಸನದಲ್ಲಿ ಕುಳಿತುಕೊಂಡು ದೇವತೆಗಳಿಗೆಲ್ಲ ರಿಗೂ ದರ್ಶನವನ್ನು ಕೊಡುತ್ತಿದ್ದನು.

**ತ್ರಯಸ್ತ್ರಿಂಶತ್ಸುರಾಣಾಂ ಯಾ ಕೋಪಶ್ರುತಿಸಮೀರಿತಾ ।**
**ಸಾ ಸರ್ವಾ ಯಾತಿ ಸೇವಾಯೈ ಪ್ರತೀಕ್ಷ್ಯಾವಸರಂ ವಿಭೋಃ ॥ ೪ ॥**

**ತಥಾ ಚಾಪ್ಸರಸಸ್ಸರ್ವಾಸ್ಸಮಾಗತ್ಯ ಸಿಷೇವಿರೇ ।**
**ನಾರದಾದ್ಯಾ ಮುನಿವರಾ ಆಶೀರ್ಭಿರಭಿನಂದಿತಾಃ ॥ ೫ ॥**

**ಗಾಯಂತಿ ಪ್ರೀತಯೇ ತಸ್ಯ ಗಾನವಿದ್ಯಾವಿಶಾರದಾಃ ।**
**ನೃತ್ಯಂತ್ಯಪ್ಸರಸಸ್ಸರ್ವಾ ರಂಭಾದ್ಯಾಸ್ತಸ್ಯ ಸನ್ನಿಧೌ ॥ ೬ ॥**

**ತಿಲೋತ್ತಮಾಪ್ಸರೋಮುಖ್ಯಾ ತದಾ ಸರ್ವಾಂಗಸುಂದರೀ ।**
**ಅದ್ಭುತಂಲಾಸ್ಯಮಕರೋದ್ಗಾಯಂತೀ ಸರ್ವಮೋಹನಂ ॥ ೭ ॥**

**ದೇವರಾಜೋಽಪಿತಾಂ ವೀಕ್ಷ್ಯ ಕ್ಷಣಂ ಸಮ್ಮೋಹಿತೋಽಭವತ್ ।**
**ದೇವಾಚಾರ್ಯೋಽಪಿ ತತ್ಕಾಲೇ ದೇವೇಂದ್ರಂ ದ್ರಷ್ಟುಮಾಯಯೌ ॥ ೮ ॥**

---

೪–೬. ಮೂವತ್ತುಮೂರು ಜನ ದೇವತೆಗಳೂ, ಪ್ರಭುವಾದ (ದೇವರಾಜನಾದ) ಇಂದ್ರನ ಕೋಪಕ್ಕೆ ಹೆದರಿಕೊಂಡು, ತಮ್ಮ ತಮ್ಮ ಕಾಲಕ್ಕನುಗುಣವಾಗಿ ತಾವು ಮಾಡಬೇಕಾದ ಸೇವೆಯನ್ನು ಮಾಡುತ್ತಿದ್ದರು. ಅಪ್ಸರಸ್ತ್ರೀಯರೆಲ್ಲರೂ ಬಂದು ಇಂದ್ರನನ್ನು ಸೇವಿಸುತ್ತಿದ್ದರು. ನಾರದನೇ ಮೊದಲಾದ ಋಷಿಶ್ರೇಷ್ಠರೆಲ್ಲರೂ ಬಂದು ಇಂದ್ರನಿಗೆ ಆಶೀರ್ವಾದಮಾಡಿ ಸಂತೋಷಪಡಿಸುತ್ತಿದ್ದರು. ಸಂಗೀತ ವಿದ್ಯೆಯಲ್ಲಿ ನಿಪುಣರಾದ ರಂಭೆಯೇ ಮೊದಲಾದವರು ಇಂದ್ರನ ಸಂತೋಷಕ್ಕಾಗಿ ನರ್ತನ ಮಾಡುತ್ತಿದ್ದರು.

೭–೮. ಅಪ್ಸರಸ್ತ್ರೀಯರೆಲ್ಲರಿಗೂ ಮುಖ್ಯಳಾದ ಬಹಳ ಸುಂದರಿಯಾದ ತಿಲೋತ್ತಮೆಯು ಎಲ್ಲರಿಗೂ ಮೋಹವು ಉಂಟಾಗುವಂತೆ ಗಾನವನ್ನು ಮಾಡುತ್ತಾ ಬಹಳ ಆಶ್ಚರ್ಯಕರವಾಗಿರುವಹಾಗೆ ಅಭಿನಯವನ್ನು ಮಾಡುತ್ತಾ ಇದ್ದಳು. ಇಂದ್ರನು ತಾನು ದೇವತೆಗಳಿಗೆ ರಾಜನಾಗಿದ್ದಾಗ್ಯೂ ಈ ತಿಲೋತ್ತಮೆಯ ಗಾನವನ್ನು ಕೇಳಿ, ಲಾಸ್ಯವನ್ನು ನೋಡಿ, ಒಂದು ಕ್ಷಣದವರಿಗೆ ಮುಗ್ಧನಾಗಿದ್ದನು. ಈ ವೇಳೆಗೆ ಸರಿಯಾಗಿ ದೇವತೆಗಳ ಗುರುವಾದ ಬೃಹಸ್ಪತಿಯು ಇಂದ್ರನನ್ನು ನೋಡುವುದಕ್ಕಾಗಿ ಸಭೆಗೆ ಬಂದನು.

ಅಭ್ಯುತ್ಥಾನ ಪ್ರಣಾಮಾದ್ಯಂ ನ ಕರೋತಿ ಪುರಂದರಃ ।
ದೃಷ್ಟ್ವೋದಾಸೀನಮಿಂದ್ರೇಣ ಕೃತಂ ದೇವಪುರೋಹಿತಃ ॥ ೯ ॥

ಅದೃಶ್ಯೋ ಭವತಿ ಕ್ರೋಧಾತ್ಸುರಾಣಾಂ ಸುದೃಶಾಮಪಿ ।
ತಿಲೋತ್ತಮಾಯಾ ಲಾಸ್ಯಂ ಚ ದೃಷ್ಟ್ವಾದೇವಾಸ್ಸುವಿಸ್ಮಿತಾಃ ॥ ೧೦ ॥

ದೇವರಾಜೋ ದದೌ ತಸ್ಯೈ ದಿವ್ಯಮಾಭರಣಾದಿಕಂ ।
ಆಗತಾನ್ದೇವತಾಸಂಘಾನ್ನಾರದಾದಿಮುನೀಶ್ವರಾನ್ ॥ ೧೧ ॥

ಸತ್ಕೃತ್ಯ ಚ ಯಥಾನ್ಯಾಯಂ ದೃಶಾ ಮಧುರಯಾ ಗಿರಾ ।
ಗಂತುಮಾಯತನಂ ಸ್ವಂ ಸ್ವಂ ಪ್ರೇಷಯಾಮಾಸ ದೇವರಾಟ್ ॥ ೧೨ ॥

ಗತೇಷು ದೇವಸಂಘೇಷು ದೇವಾಚಾರ್ಯಸ್ಸಮಾಗತಃ ।
ಸ್ಫುರತೀಂದ್ರಸ್ಯ ಹೃದಯೇ ದ್ರೋಹಶ್ಚ ಸ್ವಾತ್ಮನಾ ಕೃತಃ ॥ ೧೩ ॥

---

೯–೧೦. ಆಗ ಇಂದ್ರನು ಮೇಲಕ್ಕೆ ಎದ್ದು ನಮಸ್ಕಾರಮಾಡುವುದೇ ಮೊದಲಾದ ಗುರುವಿಗೆ ಗೌರವಾರ್ಹವಾದ ಕೆಲಸಗಳನ್ನು ಮಾಡಲಿಲ್ಲ. ಇಂದ್ರನು ತನ್ನ ವಿಷಯದಲ್ಲಿ ಉದಾಸೀನನಾಗಿರುವನೆಂದು ತಿಳಿದು, ಗುರುವಾದ ಬೃಹಸ್ಪತಿಯು ಕೋಪವುಳ್ಳವನಾಗಿ ಉತ್ತಮ ದೃಷ್ಟಿಯುಳ್ಳ ದೇವತೆಗಳಿಗೂ ಕಾಣದಿರುವ ರೀತಿಯಲ್ಲಿ ಅದೃಶ್ಯನಾದನು. ದೇವತೆಗಳೆಲ್ಲರೂ ತಿಲೋತ್ತಮೆಯ ಲಾಸ್ಯವನ್ನು ನೋಡಿ ಬಹಳ ಆಶ್ಚರ್ಯಪಟ್ಟರು.

೧೧–೧೨. ಇಂದ್ರನು ಆ ತಿಲೋತ್ತಮೆಗೆ ಉತ್ತಮವಾದ ಆಭರಣಗಳನ್ನು ಪಾರಿತೋಷಕವಾಗಿ ಅನುಗ್ರಹಿಸಿದನು. ಮತ್ತು ಸಭೆಗೆ ಬಂದಿದ್ದ ದೇವತೆಗಳನ್ನೂ, ನಾರದನೇ ಮೊದಲಾದ ಋಷಿಶ್ರೇಷ್ಠರನ್ನೂ ಅವರವರ ಗೌರವಕ್ಕನುಸಾರವಾಗಿ ಮರ್ಯಾದೆಮಾಡಿ, ಮಧುರವಾದ ಮಾತುಗಳನ್ನಾಡಿ, ಅವರವರ ಮನೆಗೆ ಅವರು ಹೋಗುವಂತೆ ಅನುಜ್ಞೆಯನ್ನು ಕೊಟ್ಟನು.

೧೩. ದೇವತೆಗಳು ಎಲ್ಲರೂ ಹೊರಟುಹೋದನಂತರ ದೇವಗುರುವಾದ ಬೃಹಸ್ಪತಿಯು ಸಭೆಗೆ ಬಂದು ಇಂದ್ರನನ್ನು ಸೇವಿಸಿದನು. ಆಗ ಇಂದ್ರನ ಮನಸ್ಸಿನಲ್ಲಿ ತಾನು ಮಾಡಿದ ಗುರುವಿನ ವಿಷಯಕವಾದ ಅಪರಾಧವು ಜ್ಞಾಪಕಕ್ಕೆ ಬಂದಿತು.

ಗುರುದ್ರೋಹಭಯಾದಿಂದ್ರೋ ದೇವಾಚಾರ್ಯಸ್ಯ ಮಂದಿರಂ ।
ಪ್ರಾಪ್ತಸ್ತತ್ರ ನ ದೃಷ್ಟೋsಭೂನ್ಮಹಾಯೋಗೀ ಬೃಹಸ್ಪತಿಃ ॥ ೧೪ ॥

ಅದರ್ಶನಾದ್ಗುರೋರಿಂದ್ರೋ ದುಃಖೇನ ಮಹತಾ ಯುತಃ ।
ಪುನಸ್ಸ್ವಭವನಂ ಪ್ರಾಪ್ಯ ವಿಷಣ್ಣಸ್ತಿಷ್ಠತಿ ಸ್ವರಾಟ್ ॥ ೧೫ ॥

ಗುರುದ್ರೋಹಾತ್ತಪಾಪೇನ ಸರ್ವಪಾಪಾಧಿಕೇನ ಚ ।
ತೇಜಃ ಪರಾಕ್ರಮೋ ವಿದ್ಯಾ ಕ್ಷೀಣಾತಿ ಚ ದಿನೇ ದಿನೇ ॥ ೧೬ ॥

ಪ್ರತೀಕ್ಷ್ಯ ದಾನವಾಸ್ಸರ್ವೇ ದೇವೇಂದ್ರಸ್ಯ ಬಲಕ್ಷಯಂ ।
ಯುಯುಧುರ್ದೇವವೃಂದೈಶ್ಚ ತದಾ ದೇವಾಃ ಪರಾಜಿತಾಃ ॥ ೧೭ ॥
ತತಃ ಸವಾಸವಾ ದೇವಾಃ ಬ್ರಹ್ಮಾಣಂ ಶರಣಂ ಯಯುಃ

॥ ದೇವಾ ಊಚುಃ ॥

ನಮೋ ಹಿರಣ್ಯಗರ್ಭಾಯ ಪರಬ್ರಹ್ಮಸ್ವರೂಪಿಣೇ ।
ಅವಿಜ್ಞಾತಸ್ವರೂಪಾಯ ನಮಃ ಕೈವಲ್ಯಮೂರ್ತಯೇ ॥ ೧೮ ॥

---

೧೪–೧೫. ಈ ಅಪರಾಧದ ಭಯದಿಂದ ಇಂದ್ರನೇ ಗುರುವಾದ ಬೃಹಸ್ಪತಿಯ ಮನೆಗೆ ಬಂದನು. ಬಹಳ ದೊಡ್ಡ ಯೋಗಿಯಾದ ಬೃಹಸ್ಪತಿಯು ಅಲ್ಲಿಯೂ ಇಂದ್ರನ ಕಣ್ಣಿಗೆ ಕಾಣಿಸಲಿಲ್ಲ. ಗುರುವನ್ನು ಕಾಣದೇ ಇರುವುದರಿಂದ ತಾನು ಸ್ವರಾಜ್ಯದಲ್ಲಿರುವವನಾದರೂ ಇಂದ್ರನು ಬಹಳ ದುಃಖವುಳ್ಳವನಾಗಿ, ಪುನಃ ತನ್ನ ಮನೆಗೆ ಬಂದನು ಮತ್ತು ಅದೇ ದುಃಖದಿಂದ ಮನಸ್ಸಿನಲ್ಲಿ ಸಂಕಟವನ್ನು ಅನುಭವಿಸುತ್ತಾ ಇದ್ದನು.

೧೬–೧೭. ಇಂದ್ರನು ತನ್ನ ಗುರುವಿನ ವಿಷಯದಲ್ಲಿ ಮಾಡಿರುವ ಅಪರಾಧದಿಂದ ಉಂಟಾದ ಎಲ್ಲಕ್ಕಿಂತಲೂ ಹೆಚ್ಚಾದ ಪಾಪದಿಂದ ಅವನ ತೇಜಸ್ಸು, ಪರಾಕ್ರಮ, ಜ್ಞಾನ, ಇವುಗಳೆಲ್ಲವೂ ದಿನ ದಿನಕ್ಕೂ ಕಡಿಮೆಯಾಗುತ್ತಾ ಬಂದುವು. ದೇವೇಂದ್ರನಿಗೆ ಬಲವು ಕಡಿಮೆಯಾಗುತ್ತಿರುವುದನ್ನು ನೋಡಿ, ದಾನವರೆಲ್ಲರೂ ಒಟ್ಟಾಗಿ ದೇವತೆಗಳ ಗುಂಪಿನೊಡನೆ ಯುದ್ಧಮಾಡಿದರು. ಆಗ ದೇವತೆಗಳೆಲ್ಲರೂ ಸೋತರು.

೧೮–೨೨. ಅನಂತರದಲ್ಲಿ ದೇವತೆಗಳೆಲ್ಲರೂ ಇಂದ್ರನೊಡನೆ ಬ್ರಹ್ಮನನ್ನು ಶರಣುಹೊಂದಿದರು. ಮತ್ತು ಅವನನ್ನು ಸ್ತೋತ್ರಮಾಡಿದರು. ದೇವತೆಗಳು

ಗುಣತ್ರಯಸ್ವರೂಪಾಯ ನಮಃ ಪ್ರಕೃತಿರೂಪಿಣೇ ।
ಅಹಂಕಾರಸ್ವರೂಪಾಯ ಬುದ್ಧಿರೂಪಾಯ ತೇ ನಮಃ ॥ ೧೯ ॥

ನಮೋ ಮಹತ್ಸ್ವರೂಪಾಯ ನಮಃ ಶಬ್ದಾದಿರೂಪಿಣೇ ।
ಜ್ಞಾನೇಂದ್ರಿಯಸ್ವರೂಪಾಯ ನಮಃ ಕರ್ಮೇಂದ್ರಿಯಾತ್ಮನೇ ॥ ೨೦ ॥

ಕ್ಷಿತ್ಯಾದಿಪಂಚಭೂತಾಯ ನಮೋ ಬ್ರಹ್ಮಾಂಡರೂಪಿಣೇ ।
ಸಮಸ್ತಭಕ್ತರಕ್ಷಾರ್ಥಂ ಸ್ವೇಚ್ಛಾ ವಿಧೃತವಿಗ್ರಹ ॥ ೨೧ ॥

ನಮಸ್ತುಭ್ಯಂ ನಮಸ್ತುಭ್ಯಂ ನಮಸ್ತುಭ್ಯಂ ಪರಾತ್ಮನೇ ।
ಇತಿ ಸ್ತುತ್ವಾ ವಿಧಿಂ ದೇವಾಃ ಪ್ರಣೇಮುರ್ಭಕ್ತಿಸಂಯುತಾಃ ॥ ೨೨ ॥

---

ನಹೇಳಿದರು :—ಪರಬ್ರಹ್ಮಸ್ವರೂಪದಿಂದ ಇರುವ ಹಿರಣ್ಯಗರ್ಭನಾದ ನಿನಗೆ ನಮಸ್ಕಾರವು. ಪರಬ್ರಹ್ಮ, ಹಿರಣ್ಯಗರ್ಭ ಎಂಬ ಹೆಸರು ಮಾತ್ರ ಕೇಳಿಬರುವುದು ನಿನ್ನ ಆಕಾರವು ಮಾತ್ರ ಇಂಥದೇ ಎಂದು ತಿಳಿಯಲಶಕ್ಯವಾಗಿರುವುದು. ನೀನು ಕೈವಲ್ಯ ರೂಪದಿಂದ ಇರುತ್ತೀಯೆ. ಅನಿರ್ದೇಶ್ಯ ಸ್ವರೂಪದಿಂದ ಇರುವ ನೀನು ಸತ್ವ, ರಜಸ್ಸು, ತಮಸ್ಸು ಎಂಬ ಮೂರು ಗುಣಾತ್ಮಕವಾದ ಪ್ರಕೃತಿಯ ಆಕಾರವನ್ನೂ, ಪ್ರಕೃತಿಯ ವಿಕಾರಗಳಾದ ಅಹಂಕಾರ, ಬುದ್ಧಿ, ಮಹತ್ತತ್ವಗಳು ಇವುಗಳನ್ನು ನಿನ್ನ ರೂಪಾಂತರವಾಗಿ ನಿರ್ಮಿಸಿ ಅದರಲ್ಲಿ ನೀನು ಪ್ರವೇಶಿಸಿ ಇರುವುದರಿಂದ ಸಗುಣ ಮೂರ್ತಿಯಾಗಿರುತ್ತೀಯೆ. ಕರ್ಮೇಂದ್ರಿಯ, ಜ್ಞಾನೇಂದ್ರಿಯಗಳನ್ನು ಸ್ವೀಕರಿಸಿ, ಪಂಚತನ್ಮಾತ್ರಗಳ ಸೂಕ್ಷ್ಮಾಂಶದಿಂದ ಪೃಥಿವಿಯೇ ಮೊದಲಾದ ಪಂಚಭೂತಾತ್ಮಕವಾದ ಬ್ರಹ್ಮಾಂಡವನ್ನು ನಿರ್ಮಿಸಿರುತ್ತೀಯೆ. ನಿನ್ನನ್ನು ಭಕ್ತಿಯಿಂದ ಸೇವೆಮಾಡುವವರ ವಿಪತ್ತುಗಳನ್ನು ಪರಿಹರಿಸುವುದಕ್ಕಾಗಿ ಪ್ರಕೃತಿ, ಮತ್ತು ವಿಕೃತಿಯಾಗಿರುವ ಬೇರೆ ಬೇರೆಯಾದ ಆಕಾರಗಳನ್ನು ಹೊಂದಿರುತ್ತೀಯೆ. ಇವೆಲ್ಲವೂ ನಿನ್ನ ಲೀಲೆಯಾಗಿರುವುದು. ಆಕಾರರಹಿತನಾಗಿರುವ ನೀನು ಭಕ್ತರನ್ನು ರಕ್ಷಿಸುವುದಕ್ಕಾಗಿ ಸಾಕಾರನಾಗಿ, ಪರಬ್ರಹ್ಮಭಾವದಿಂದ ಇರುತ್ತೀಯೆ. ಈ ಪ್ರಕಾರದಿಂದ ಇರುವ ನಿನಗೆ ಅನೇಕಸಾರಿ ನಮಸ್ಕಾರಗಳನ್ನು ಮಾಡುವೆವು."—ಹೀಗೆಂದು ಹೇಳುತ್ತಾ ದೇವತೆಗಳು ಬ್ರಹ್ಮನಿಗೆ ಭಕ್ತಿಯಿಂದ ನಮಸ್ಕಾರಗಳನ್ನು ಮಾಡಿದರು.

**ಪರಿತುಷ್ಟಸ್ತದಾ ಬ್ರಹ್ಮಾ ಪ್ರತ್ಯುವಾಚ ಸುರೋತ್ತಮಾನ್ ।**
**ಉತ್ತಿಷ್ಠತ ಪ್ರಸನ್ನೋಽಸ್ಮಿ ವೃಣೀಧ್ವಂ ವರಮುತ್ತಮಂ ॥ ೨೩ ॥**

**ಇತಿ ಶ್ರುತ್ವಾ ವಿಧೇರ್ವಾಕ್ಯಂ ಮಹೇಂದ್ರಾದ್ಯಾ ದಿವೌಕಸಃ ।**
**ಸರ್ವೇ ವಿಜ್ಞಾಪಯಾಮಾಸುಃ ಬ್ರಹ್ಮಾಣಂ ಲೋಕನಾಯಕಂ ॥ ೨೪ ॥**

**ಸೇಂದ್ರ ದೇವಗಣಾಸ್ಸರ್ವೇ ದಾನವೈಶ್ಚ ಪರಾಜಿತಾಃ**
**ಕೇನೋಪಾಯೇನ ಜೇಷ್ಯಾಮೋ ದಾನವಾನ್ಬಲಗರ್ವಿತಾನ್ ॥ ೨೫ ॥**

**ಇತಿ ವಿಜ್ಞಾಪಿತೋ ದೇವೈರ್ವಿಜಯೋಪಾಯಮಬ್ರವೀತ್ ।**
**ಯೂಯಂ ಗುರುವಿಹೀನಾಶ್ಚ ತೇ ಸರ್ವೇ ಗುರುಸಂಯುತಾಃ ॥ ೨೬ ॥**

**ಗುರುಸಂಸೇವಯಾ ನಿತ್ಯಂ ಜ್ಞಾನಂ ವೀರ್ಯಂ ಯಶೋ ಮಹತ್ ।**
**ವರ್ಧತೇ ವಿಪರೀತಂ ಸ್ಯಾದ್ಗುರುದ್ರೋಹೇಣ ಕರ್ಮಣಾ ॥ ೨೭ ॥**

---

೨೩–೨೪ ದೇವತೆಗಳು ತನ್ನ ಹತ್ತಿರದಲ್ಲಿ ನಿಂತುಕೊಂಡು ಭಕ್ತಿಯಿಂದ ಈ ಪ್ರಕಾರವಾಗಿ ಸ್ತೋತ್ರಮಾಡಿ ನಮಸ್ಕರಿಸಿರುವುದನ್ನು ನೋಡಿ ಬ್ರಹ್ಮನು ಅವರ ವಿಷಯದಲ್ಲಿ ಸಂತೋಷದಿಂದ "ಎಲೈ ದೇವತೆಗಳಿರಾ ಮೇಲಕ್ಕೆ ಏಳಿರಿ. ನಾನು ನಿಮ್ಮ ವಿಷಯದಲ್ಲಿ ಸಂತೋಷದಿಂದ ಇರುವೆನು. ನಿಮಗೆ ಬೇಕಾದ ವರವನ್ನು ಕೊಡುತ್ತೇನೆ." ಎಂದು ಹೇಳಿದನು. ಇಂದ್ರನೇ ಮೊದಲಾದ ದೇವತೆಗಳು ಬ್ರಹ್ಮನ ಮಾತನ್ನು ಕೇಳಿ, ಲೋಕಗಳಿಗೆ ಅಧಿಪನಾದ ಅವನ ಸಂಗಡ ವಿಜ್ಞಾಪಿಸಿಕೊಂಡರು.

೨೫–೨೭ "ದೇವತೆಗಳಾದ ನಾವೆಲ್ಲರೂ, ಇಂದ್ರನೂ ಕೂಡ, ದಾನವರ ಸಂಗಡ ಯುದ್ಧಮಾಡಿ ಅಪಜಯವನ್ನು ಹೊಂದಿರುತ್ತೇವೆ. ಶಕ್ತಿಯಿಂದಲೂ ಹೆಮ್ಮೆಯಿಂದಲೂ ಇರುವ ರಾಕ್ಷಸರನ್ನು ಯಾವ ಉಪಾಯದಿಂದ ಜಯಿಸಬೇಕು ಎಂಬುದನ್ನು ನಮಗೆ ತಿಳಿಸು." ಎಂದು ದೇವತೆಗಳು ಬ್ರಹ್ಮನನ್ನು ಕೇಳಿದರು. ಆಗ ಬ್ರಹ್ಮನು ಇವರ ಮಾತನ್ನು ಕೇಳಿ– "ನೀವುಗಳು ಗುರುವಿಲ್ಲದವರಾಗಿ ಇದ್ದೀರಿ. ದಾನವರಿಗೆ ಗುರುವು ಇರುತ್ತಾನೆ. ಯಾವಾಗಲೂ ಗುರುವಿನ ಸೇವೆಯಿಂದ ಜ್ಞಾನ, ಶಕ್ತಿ, ಬಹಳವಾದ ಕೀರ್ತಿ, ಇವುಗಳುಂಟಾಗುವುವು. ಗುರುವಿಗೆ ಅಪರಾಧ ಮಾಡಿದರೆ ಇವೆಲ್ಲವೂ ನಶಿಸುವುವು. ನೀವು ನಿಮ್ಮ ಗುರುವಾದ ಬೃಹಸ್ಪತಿಗೆ ಅವಮಾನ ಮಾಡಿದ ಕಾರಣ ಅವನು ಅದೃಶ್ಯನಾಗಿ ಇರುವನು. ಮತ್ತು ಈಗಲೇ ಬರುವುದಿಲ್ಲ.

**ಗುರುಸ್ತ್ವದೃಶ್ಯೋ ಯುಷ್ಮಾಕಮಿದಾನೀಂ ನಾಗಮಿಷ್ಯತಿ ।**
**ತ್ವಷ್ಟುಃ ಪುತ್ರಂ ವಿಶ್ವರೂಪಂ ಸರ್ವವಿದ್ಯಾವಿಶಾರದಂ ॥ ೨೮ ॥**

**ಪೌರೋಹಿತ್ಯಾಯ ಸಂಪ್ರಾರ್ಥ್ಯ ತೇನೋಕ್ತಂ ಯಚ್ಛುಭಾವಹಂ ।**
**ಕುರ್ವಂತು ಸರ್ವಂ ತತ್ಕರ್ಮ ಯುಷ್ಮಾಕಂ ವಿಜಯಸ್ತದಾ ॥ ೨೯ ॥**

**ಭವಿಷ್ಯತಿ ನ ಸಂದೇಹೋ ದಾನವಾನಾಂ ಪರಾಜಯಃ ।**
**ಇತಿ ಬ್ರಹ್ಮಗಿರಾ ದೇವಾ ಆಹೂಯ ಸಹಸಾ ಮುದಾ ॥ ೩೦ ॥**

**ವಿಶ್ವರೂಪಂ ಮಹಾತ್ಮಾನಂ ಪೌರೋಹಿತ್ಯೇ ನಿಯೋಜ್ಯ ಚ ।**
**ತೇನೋಕ್ತಾನಿ ಚ ಕರ್ಮಾಣಿ ಚಕ್ರುಸ್ಸರ್ವಾಣಿ ಸಂತತಂ ॥ ೩೧ ॥**

**ವಿಶ್ವರೂಪಾನ್ಮಹೇಂದ್ರೋಽಪಿ ವಜ್ರಪಂಜರಸನ್ನಿಭಂ ।**
**ಶಿವಾಖ್ಯಂ ಕವಚಂ ಲಬ್ಧ್ವಾ ವಿಜಯಪ್ರದಮಾಹವೇ ॥ ೩೨ ॥**

---

ನೀವು ತ್ವಷ್ಟೃಬ್ರಹ್ಮನ ಮಗನಾದ, ಎಲ್ಲಾವಿದ್ಯೆಗಳನ್ನೂ ತಿಳಿದಿರುವ, ವಿಶ್ವರೂಪನನ್ನು ಗುರುವಿನ ಸ್ಥಾನದಲ್ಲಿ ಇರಿಸಿಕೊಂಡು ಶುಭಾಶುಭ ರೂಪಗಳಾದ ನಿಮ್ಮ ಕರ್ಮಗಳೆಲ್ಲವನ್ನೂ ಅವನ ಮೂಲಕವಾಗಿ ನೆರವೇರಿಸಿಕೊಳ್ಳಿರಿ. ಅನಂತರದಲ್ಲಿ ನಿಮಗೆ ವಿಜಯವು ಉಂಟಾಗುವುದರಲ್ಲಿ ಸಂದೇಹವಿಲ್ಲವು" ಎಂದು ಹೇಳಿದನು.

೩೦–೩೧. ಆಗ ದೇವತೆಗಳು ಬೇಗನೆ ವಿಶ್ವರೂಪನನ್ನು ಕರೆದುಕೊಂಡು ಬಂದು ಗುರುವಿನ ಸ್ಥಾನದಲ್ಲಿ ಇರಿಸಿಕೊಂಡು ಮಹಾತ್ಮನಾದ ಅವನಿಂದ ಯಾವಾಗಲೂ ತಮ್ಮಲ್ಲಿ ನಡೆಯಬೇಕಾದ ಕರ್ಮಗಳೆಲ್ಲವನ್ನೂ ಅವನು ಹೇಳಿದಂತೆ ನಡೆಸಿದರು.

೩೨–೩೫. ಇಂದ್ರನು ಆ ವಿಶ್ವರೂಪನಿಂದ ವಜ್ರಪಂಜರಕ್ಕೆ ಸಮನಾದ ಯುದ್ಧದಲ್ಲಿ ಜಯವನ್ನುಂಟುಮಾಡುವ ಶಿವಕವಚವನ್ನು ಹೊಂದಿದನು. ಅದರ ಮಹಿಮೆಯಿಂದ ದಾನವರೆಲ್ಲರನ್ನೂ ಜಯಿಸಿ, ಹಿಂದಿನಂತೆಯೇ ದೇವತೆಗಳಿಂದ ಹೊಗಳಿಸಿಕೊಳ್ಳುತ್ತಾ ಸ್ವರ್ಗದಲ್ಲಿ ಸುಖದಿಂದ ಇದ್ದನು. ತ್ವಷ್ಟೃಬ್ರಹ್ಮನ ಮಗನಾದ ವಿಶ್ವರೂಪನು ದೇವತೆಗಳಿಗೆ ತಾನು ಪುರೋಹಿತನಾಗಿದ್ದಾಗ್ಯೂ ಅಸುರರ ರಾಜನಿಗೆ

**ಜಿತ್ವಾ ಸರ್ವಾನ್ ದಾನವಾಂಶ್ಚ ಕವಚಸ್ಯ ಪ್ರಭಾವತಃ ।**
**ದೇವೈರೀಡ್ಯೋ ಯಥಾ ಪೂರ್ವಂ ಸುಖೇನಾಸ್ತೇ ತ್ರಿವಿಷ್ಟಪೇ ॥ ೩೩ ॥**

**ಅಥ ತ್ವಾಷ್ಟ್ರೋ ವಿಶ್ವರೂಪೋ ದೇವಾನಾಂ ತು ಪುರೋಹಿತಃ ।**
**ಭಾಗಿನೇಯಶ್ಚಾಸುರಾಣಾಂ ತ್ರಿಭಿಶ್ಶೀರ್ಷೈರ್ವಿರಾಜಿತಃ ॥ ೩೪ ॥**

**ದೇವೇಭ್ಯಸ್ತು ಹವಿರ್ಭಾಗಂ ಪ್ರತ್ಯಕ್ಷಮುದದಾತ್ಸ್ವನಃ ।**
**ಪರೋಕ್ಷಮಸುರೇಭ್ಯಶ್ಚ ನಿತ್ಯಮಧ್ವರಕರ್ಮಣಿ ॥ ೩೫ ॥**

**ಜ್ಞಾನದೃಷ್ಟ್ಯಾ ಪರಿಜ್ಞಾಯ ದೇವೇಂದ್ರಃ ಕ್ರೋಧಸಂಯುತಃ ।**
**ವಜ್ರಮಾದಾಯ ವೇಗೇನ ತಸ್ಯ ಶೀರ್ಷಾಣಿ ಚಾಚ್ಛಿನತ್ ॥ ೩೬ ॥**

**ಸೋಮಪಾನಕೃತಂ ವಕ್ತ್ರಂ ಆಸೀತ್ಪಕ್ಷೀ ಕಪಿಂಜಲಃ ।**
**ಸುರಾಪಾನಕೃತಂ ಯತ್ತತ್ಕಲವಿಂಕಖಗಾಯತೇ ॥ ೩೭ ॥**

**ಅನ್ನದಾನಂ ತು ಯದ್ವಕ್ತ್ರಂ ಜಾಯತೇ ತಚ್ಚ ತಿತ್ತಿರಿಃ ।**
**ಏವಂ ಶೀರ್ಷಾಣಿ ತಸ್ಯಾಶು ವಿಹಂಗಮವಪೂಂಷಿ ಚ । ॥ ೩೮ ॥**

---

ಸೋಮರಕ್ಷಯನಾಗಿ ಮೂರು ತಲೆಗಳಿಂದ ಪ್ರಕಾಶಿಸುತ್ತಿದ್ದನು. ದೇವತೆಗಳಿಗೆ ಹವಿರ್ಭಾಗವನ್ನು ಪ್ರತ್ಯಕ್ಷವಾಗಿ ಕೊಡಿಸುತ್ತಿದ್ದರೂ ರಾಕ್ಷಸರಿಗೆ ಪರೋಕ್ಷದಲ್ಲಿ ಹವಿರ್ಭಾಗವನ್ನು ಯಜ್ಞಗಳಲ್ಲಿ ಕೊಡಿಸುತ್ತಿದ್ದನು.

೩೬–೩೭. ಇಂದ್ರನು ಜ್ಞಾನದೃಷ್ಟಿಯಿಂದ ಇದನ್ನು ತಿಳಿದು ಬಹಳ ಕೋಪದಿಂದ ವಜ್ರಾಯುಧವನ್ನು ತೆಗೆದುಕೊಂಡು ಬೇಗನೆ ಅವನ ತಲೆಗಳನ್ನು ಕತ್ತರಿಸಿದನು. ಸೋಮಪಾನಮಾಡುವ ಮುಖವು ಕಪಿಂಜಲ ಪಕ್ಷಿಯಾಯಿತು. ಮದ್ಯಪಾನ ಮಾಡುವ ಮುಖವು ಕಲವಿಂಕ ಎಂದು ಹೆಸರಿನ ಹಕ್ಕಿಯಾಯಿತು. ಅನ್ನದಾನಮುಖವು ತಿತ್ತಿರಿ ಪಕ್ಷಿಯಾಯಿತು.

೩೮–೪೧ ಆ ವಿಶ್ವರೂಪನ ತಪಸ್ಸಿನ ಮಹಿಮೆಯಿಂದ ಅವನ ಮೂರು ತಲೆಗಳೂ ಬೇಗನೆ ಮೂರು ವಿಧವಾದ ಪಕ್ಕಿಯ ಆಕಾರವನ್ನು ಧರಿಸಿದವು. ಅನಂತರ ಆ ಹಕ್ಕಿಗಳು ಅಂತರಿಕ್ಷದಲ್ಲಿ ಹಕ್ಕಿಗಳೊಡನೆ ಹಾರಿಹೋದವು. ಕಪ್ಪುಬಣ್ಣದ ಆಕಾರವನ್ನು ಹೊಂದಿ, ವಿಕಾಶವಾದ ಮುಖವುಳ್ಳ, ಕೈಯ್ಯಿನಲ್ಲಿ ದೊಣ್ಣೆ, ಮಡಕೆಯ ಚೂರು, ಇವುಗಳನ್ನು ಹಿಡಿದುಕೊಂಡಿರುವ ಬ್ರಹ್ಮಹತ್ಯೆಯು ಹಗಲೂ, ರಾತ್ರಿಯೂ, ಸಹ ಇಂದ್ರನನ್ನು ಬಾಧಿಸಲುಪಕ್ರಮಿಸಿತು. ಒಂದು ವರ್ಷದವರಿಗೂ ತೊಂದರೆ

ಧೃತ್ವೋಡ್ಡೀಯು ವಿಹಂಗೈಶ್ಚ ಗಚ್ಛಂತಿ ತಪಸೋಬಲಾತ್ ।
ಬ್ರಹ್ಮಹತ್ಯಾ ತು ಸಂಭೂತಾ ಕೃಷ್ಣಾಂಗೀ ವಿಕೃತಾನನಾ ॥ ೩೯ ॥

ದಂಡಖರ್ಪರಹಸ್ತಾ ಚ ಬಾಧತೇಽಹರ್ನಿಶಂ ತದಾ ।
ತಾಂ ಬಾಧಾಮನುಭೂಯಾಥ ವತ್ಸರಾಂತೇ ದಿವಸ್ಪತಿಃ ॥ ೪೦ ॥

ಸಾಕಂ ದೇವೈಶ್ಚ ಮುನಿಭಿಶ್ಚತುರ್ಧಾ ತಾಂ ವಿಭಜ್ಯ ಚ ।
ಭೂಮ್ಯಾಂ ಜಲೇಷು ನಾರೀಷು ವೃಕ್ಷೇಷು ಚ ವ್ಯನಿಕ್ಷಿಪತ್ ॥ ೪೧॥

ಆವತ್ಸರಾದ್ಧರಿತ್ರ್ಯಾಸ್ತು ಖಾತಾನಾಂ ಪೂರಣಂ ವರಂ ।
ಛೇದನೇ ಸತಿ ವೃಕ್ಷಾಣಾಂ ಪುನರುದ್ಭವನಂ ವರಂ ॥ ೪೨ ॥

ವನಿತಾನಾಮಾಪ್ರಸವಕಾಲಾತ್ಸಂಯೋಗದಂ ವರಂ ।
ಭೂಯೋದ್ರವತ್ವಂ ತೋಯಾನಾಂ ಪ್ರದಾಯ ವರಮುತ್ತಮಂ ॥ ೪೩ ॥

ಸುಖೇನ ತಿಷ್ಠತಿ ಸ್ವರ್ಗೇ ದೇವೇಂದ್ರೋ ಪಾಪವರ್ಜಿತೇ ।
ವಿಶ್ವರೂಪಪಿತಾ ತ್ವಷ್ಟಾ ಪುತ್ರಶೋಕಾತ್ಕ್ರುಧಾ ಯುತಃ ॥ ೪೪ ॥

---

ಯುನ್ನು ಅನುಭವಿಸಿ ಇಂದ್ರನು, ದೇವತೆಗಳು, ಋಷಿಗಳು ಇವರೆಲ್ಲರನ್ನೂ ಒಂದುಕಡೆ ಸೇರಿಸಿ, ಸಭೆಯನ್ನು ಮಾಡಿ, ಆ ಬ್ರಹ್ಮಹತ್ಯೆಯುನ್ನು ನಾಲ್ಕು ಭಾಗವಾಗಿ ವಿಂಗಡಿಸಿ, ಭೂಮಿ, ನೀರು, ಹೆಂಗಸರು, ಮರಗಳು, ಇವರಿಗೆ ಹಂಚಿಬಿಟ್ಟನು. ಇದನ್ನು ಸ್ವೀಕರಿಸಿದ ನಿಮಿತ್ತ ಇವರಿಗೆ ಬೇರೆ ಬೇರೆಯಾಗಿ ವರಗಳನ್ನು ಕೊಟ್ಟನು.

೪೨–೪೩. ವರ್ಷದವಳಗಾಗಿ ಭೂಮಿಯಲ್ಲಿ ತೋಡಿದ ಹಳ್ಳವು (ಹಿಂದಿನಂತೆಯೇ ಆಗುವುದು) ಮುಚ್ಚಿಕೊಳ್ಳುವುದು—ಭೂಮಿಗೆ ವರವಾಯಿತು. ಮರಗಳ ಕೊಂಬೆಯನ್ನು ಕಡಿದರೆ ಅದು ಪುನಃ ಬೆಳೆಯುವುದು—ಭೂಮಿಗೆ ವರವಾಯಿತು. ಸ್ತ್ರೀಯರು ಗರ್ಭಿಣಿಯರಾಗಿದ್ದಾಗ್ಯೂ ಪ್ರಸವಕಾಲದವರಿಗೂ ಪುರುಷರೊಡನೆ ಭೋಗಪಡುವುದು—ಸ್ತ್ರೀಯರಿಗೆ ವರವು. ನೀರು ಕೊಂಚವೂ ಇಲ್ಲದಿರುವಾಗ ದ್ರವರೂಪದಿಂದ ಬರುವುದು—ನೀರಿಗೆ ವರವಾಯಿತು. ಈ ಪ್ರಕಾರವಾಗಿ ಬ್ರಹ್ಮಹತ್ಯೆಯನ್ನು ಹಂಚಿ ಪಾಪರಹಿತನಾದ ಇಂದ್ರನು ಸ್ವರ್ಗದಲ್ಲಿ ಸುಖದಿಂದ ಇದ್ದನು.

೪೪–೪೭. ವಿಶ್ವರೂಪನ ತಂದೆಯಾದ ತ್ವಷ್ಟೃಬ್ರಹ್ಮನು ಪುತ್ರಶೋಕವನು ತಡೆಯಲಾರದೆ ಇಂದನ್ರಮೇಲಿನ ಕೋಪದಿಂದ " ಇಂದ್ರನ ಶತ್ರುವಾಗಿರುವನು ವೃದ್ಧಿ

**ಇಂದ್ರಸ್ಯ ಶತ್ರುರ್ವರ್ಧಸ್ವ ಸ್ವಾಹೇತಿ ಮನುನಾನಲೇ ।**
**ಜುಹೋತಿ ಶ್ರದ್ಧಯಾ ಸಾರ್ಧಂ ತಿಲಾಜ್ಯಾದಿಹವೀಂಷಿ ಚ ॥ ೪೫ ॥**

**ತಸ್ಮಾತ್ಕೃಶಾನೋಸ್ಸಂಜಾತೋ ಮಹಾನ್ವೃತ್ರಾಸುರೋ ಬಲೀ ।**
**ಇಷು ಮಾತ್ರಂ ಪ್ರತಿದಿನಂ ಸಮಂತಾತ್ಪರಿವರ್ಧಯನ್ ॥ ೪೬ ॥**

**ಆವೃಣೋತ್ಸರ್ವಲೋಕಾಂಶ್ಚ ತಪಸಾ ಚ ಬಲೇನ ಚ ।**
**ತೇ ತಸ್ಯ ವಾಸವಾ ದೇವಾಃ ಯುದ್ಧಾಯ ಚ ಸಮುದ್ಯತಾಃ ॥ ೪೭ ॥**

**ವಿವಿಧಾನಿಚ ಶಸ್ತ್ರಾಣಿ ಗೃಹೀತ್ವಾ ವಾಹನಾನಿ ಚ ।**
**ಆರುಹ್ಯ ಕವಚಚ್ಛನ್ನಾಶ್ಚಕ್ರುರ್ಯುದ್ಧಂ ಮಹಾದ್ಭುತಂ ॥ ೪೮ ॥**

**ಐರಾವತಂ ಸಮಾರುಹ್ಯ ವಜ್ರಪಾಣಿಸ್ಸಮಾಯಯೌ ।**
**ಪರಸ್ಪರಮಭೂದ್ಯುದ್ಧಂ ಪಶ್ಯತಾಂ ಚ ಭಯಂಕರಂ ॥ ೪೯ ॥**

---

ಯನ್ನು ಹೊಂದಲಿ '' ಎಂದು ಅರ್ಥವನ್ನು ಕೊಡುವ ಮಂತ್ರದಿಂದ ಅಗ್ನಿಯಲ್ಲಿ ತಿಲ, ಆಜ್ಯ, ಹವಿಸ್ಸು, ಇವುಗಳನ್ನು ಭಕ್ತಿಯಿಂದ ಹೋಮಮಾಡಿದನು. ಆಗ ಅಗ್ನಿಯಿಂದ ದೊಡ್ಡ ಆಕಾರವನ್ನು ಧರಿಸಿದ ಶೂರನಾದ ವೃತ್ರಾಸುರನು ಹುಟ್ಟಿದನು. ಇವನು ಪ್ರತಿದಿನವೂ ಒಂದೊಂದು ಬಾಣದಷ್ಟು ಉದ್ದವೂ, ಅದಕ್ಕೆ ತಕ್ಕ ದಪ್ಪವೂ ಉಳ್ಳವನಾಗಿ ತನ್ನ ತಪಸ್ಸಿನ ಬಲದಿಂದ ವೃದ್ಧಿಯನ್ನು ಹೊಂದುತ್ತಾ ಪ್ರಪಂಚವೆಲ್ಲವನ್ನೂ ಆವರಿಸಿಕೊಂಡನು. ಅನಂತರದಲ್ಲಿ ಇಂದ್ರನೇ ಮೊದಲಾದ ದೇವತೆಗಳು ಇವನೊಡನೆ ಯುದ್ಧಕ್ಕೆ ಸಿದ್ಧರಾದರು.

೪೮–೪೯. ದೇವತೆಗಳು ಅನೇಕ ವಿಧವಾದ ಆಯುಧಗಳನ್ನು ಧರಿಸಿ, ವಾಹನಗಳನ್ನು ಹತ್ತಿ, ಯುದ್ಧಮಾಡಲು ತಕ್ಕ ಕವಚವನ್ನು ಧರಿಸಿಕೊಂಡು ಬಹಳ ಆಶ್ಚರ್ಯಕರವಾದ ಯುದ್ಧವನ್ನು ಮಾಡಿದರು. ಇಂದ್ರನೂ ಐರಾವತವನ್ನು ಹತ್ತಿಕೊಂಡು ಯುದ್ಧಕ್ಕಾಗಿ ಬಂದನು. ಇಂದ್ರನಿಗೂ, ವೃತ್ರಾಸುರನಿಗೂ ನಡೆದ ಯುದ್ಧವು ನೋಡುವವರಿಗೂ ಭಯವನ್ನುಂಟುಮಾಡುವ ಹಾಗೆ ನಡೆಯಿತು.

ಯಥಾಂಧಕಾಂತಕಾರ್ಯೋಶ್ಚ ವೃತ್ರವಾಸವಯೋಸ್ತಥಾ ।
ವಜ್ರಾಯುಧೇನ ದೇವೇಂದ್ರೋ ವೃತ್ರಂ ವಕ್ಷಸ್ಯತಾಡಯತ್ ॥ ೫೦ ॥

ತದಾ ವೃತ್ರೋಽಪಿ ರೋಷೇಣ ಗಜಂ ದೇವೇಂದ್ರವಾಹನಂ ।
ಮುಸಲೇನ ಪ್ರಹೃತ್ಯಾಶು ಕಾಲದಂಡೋಪಮೇನ ಚ ॥ ೫೧ ॥

ತೇನೈವ ದೇವರಾಜಸ್ಯ ಭುಜಂಚಸಮತಾಡಯತ್ ।
ದೃಢತಾಡನನಿಸ್ಸಾರಭುಜದಂಡಸಮನ್ವಿತಃ ॥ ೫೨ ॥

ತ್ಯಕ್ತ್ವಾ ವಜ್ರಾಯುಧಮಪಿ ಗಜೇನ ಸಹ ದೇವರಾಟ್ ।
ಭೀತ್ಯಾ ಧಾವತಿ ವೇಗೇನ ತದಾ ತ್ಯಕ್ತ್ವಾಯುಧಾಸ್ಸುರಾಃ ॥ ೫೩ ॥

ಧಾವಂತಿ ಪರಿತೋ ಭ್ರಾಂತಾಸ್ತತಸ್ಸಂಭೂಯ ಕುತ್ರಚಿತ್ ।
ಬ್ರಹ್ಮಾಣಂ ಶರಣಂ ಗತ್ವಾ ತೇನ ಸಾರ್ಧಂ ದಿವೌಕಸಃ ॥ ೫೪ ॥

ಪ್ರಾಪುರ್ವೈಕುಂಠಭವನಂ ಮಹಾವಿಷ್ಣೋರ್ಮಹಾದ್ಭುತಂ ।
ದೃಷ್ಟ್ವಾ ಸರ್ವೇ ತತ್ರ ವಿಷ್ಣುಂ ಶ್ಯಾಮಲಂ ಪೀತವಾಸಸಂ ॥ ೫೫ ॥

---

೫೦–೫೧. ರುದ್ರನಿಗೂ, ಯಮನಿಗೂ ನಡೆದ ಯುದ್ಧದಂತೆಯೇ, ವೃತ್ರ ವಾಸವರ ಯುದ್ಧವು ನಡೆಯುತ್ತಿತ್ತು. ಆಗ ಇಂದ್ರನು ವೃತ್ರಾಸುರನನ್ನು ವಜ್ರಾಯುಧದಿಂದ ಎದೆಗೆ ಹೊಡೆದನು. ಆಗ ವೃತ್ರಾಸುರನು ರೋಷದಿಂದ ಯಮದಂಡಕ್ಕೆ ಸಮನಾದ ತನ್ನ ಕೈಯ್ಯಲ್ಲಿದ್ದ ವನಕೆಯಿಂದ ಇಂದ್ರನ ವಾಹನವಾದ ಐರಾವತವನ್ನು ಹೊಡೆದು, ಅದರಿಂದಲೇ ಇಂದ್ರನ ತೋಳಿಗೆ ಹೊಡೆದನು.

೫೨–೫೪. ಬಲವಾದ ಏಟಿನಿಂದ ಇಂದ್ರನ ತೋಳಿಗೆ ತೊಂದರೆಯು ಬಹಳವಾದ ಕಾರಣ, ಇಂದ್ರನು ತನ್ನ ವಜ್ರಾಯುಧವನ್ನೂ, ಐರಾವತವನ್ನೂ ಬಿಟ್ಟು ವೇಗದಿಂದ ಓಡಿದನು. ಮಿಕ್ಕ ದೇವತೆಗಳೆಲ್ಲರೂ ಸುತ್ತಲೂ ಓಡಿದರು. ಅವರೆಲ್ಲರೂ ಒಂದು ಕಡೆ ಸೇರಿ ಬ್ರಹ್ಮನನ್ನು ಶರಣುಹೊಂದಿ, ಅವನನ್ನು ಕರೆದುಕೊಂಡು ವಿಷ್ಣುವಿನ ವಾಸಸ್ಥಳವಾದ ಬಹಳ ಆಶ್ಚರ್ಯಕರವಾದ ವೈಕುಂಠಕ್ಕೆ ಬಂದು ಸೇರಿದರು.

೫೫–೫೬. ಅಲ್ಲಿ ದೇವತೆಗಳು, ವಿಷ್ಣುವನ್ನು ದರ್ಶನಮಾಡಿದರು. ವಿಷ್ಣುವು ಶ್ಯಾಮಲವರ್ಣವುಳ್ಳವನಾಗಿ, ಪೀತಾಂಬರವನ್ನು ಧರಿಸಿ, ಶಂಖ, ಚಕ್ರ, ಗದಾ, ಪದ್ಮ ಇವುಗಳಿಂದ ಪ್ರಕಾಶಿಸುವ ನಾಲ್ಕು ತೋಳುಗಳುಳ್ಳವನಾಗಿ, ಕಿರೀಟ ಕೇಯೂರ,

ಶಂಖಚಕ್ರಗದಾಪದ್ಮವಿರಾಜಿತಚತುರ್ಭುಜಂ ।
ಕಿರೀಟಕೇಯೂರಧರಂ ವನಮಾಲಾವಿಭೂಷಿತಂ ॥ ೫೬ ॥

ಸಹಿತಂ ಚ ಮಹಾಲಕ್ಷ್ಮ್ಯಾ ವಾಹನೇನ ಗರುತ್ಮತಾ ।
ಸಿಂಹಾಸನೇ ನಿವಿಷ್ಟಂ ತಂ ಸ್ತೋತ್ರೈಃ ಸ್ತುತ್ವಾ ಪ್ರಣಮ್ಯ ಚ ॥ ೫೭ ॥

ಸರ್ವಂ ವಿಜ್ಞಾಪಯಾಮಾಸುರ್ವೃತ್ರಾಸುರವಿಚೇಷ್ಟಿತಂ ।
ಶ್ರುತ್ವಾ ವಾಕ್ಯಂ ವಿರಿಂಚಾದಿದೇವಾನಾಂ ಗರುಡಧ್ವಜಃ ॥ ೫೮ ॥

ವೃತ್ರಾಸುರವಧೋಪಾಯಂ ಪ್ರಾಹ ಸರ್ವದಿವೌಕಸಾಂ ।

॥ ಶ್ರೀ ವಿಷ್ಣುರುವಾಚ ॥

ವಜ್ರಂ ವಲಾಂಗಸಂಭೂತಂ ವಲಾರಾತಿಭುಜಾಚ್ಚ್ಯುತಂ ।
ಆಗ್ರಾಹ್ಯಂ ವ್ಯರ್ಥಸಾರತ್ವಾತ್ ವೃತ್ರಾಸುರನಿಷೂದನೇ ॥ ೫೯ ॥

ಪುನರ್ವಜ್ರಂ ಮಹಾಸಾರಂ ಸಂಪಾದ್ಯ ಸುರರಾಟ್ ತತಃ ।
ಜ್ಯೇತವ್ಯ ಇತಿ ನಿಶ್ಚಿತ್ಯ ಯುಷ್ಮಾಭಿರವಿಲಂಬಿತಂ ॥ ೬೦ ॥

---

ವನಮಾಲಾದಿಗಳಿಂದ ಭೂಷಿತನಾಗಿ, ಮಹಾಲಕ್ಷ್ಮಿಯೊಡನೆಯೂ, ತನ್ನ ವಾಹನವಾದ ಗರುಡನೊಡನೆಯೂ ಇದ್ದನು. ಆಗ ದೇವತೆಗಳು ಸಿಂಹಾಸನದಲ್ಲಿ ಕುಳಿತುಕೊಂಡಿರುವ ವಿಷ್ಣುವನ್ನು ಸ್ತೋತ್ರಮಾಡಿ, ನಮಸ್ಕರಿಸಿ, ವೃತ್ರಾಸುರನು ಮಾಡಿರುವ ತೊಂದರೆಗಳೆಲ್ಲವನ್ನೂ ಹೇಳಿದರು.

೫೭–೫೮. ಬ್ರಹ್ಮನೇ ಮೊದಲಾದ ದೇವತೆಗಳ ಮಾತನ್ನು ಕೇಳಿ ವಿಷ್ಣುವು ಆ ದೇವತೆಗಳೆಲ್ಲರಿಗೂ ವೃತ್ರಾಸುರನನ್ನು ವಧೆಮಾಡುವ ಉಪಾಯವನ್ನು ಹೇಳಿದನು.

೫೯–೬೦. ಶ್ರೀ ವಿಷ್ಣುವು ಹೇಳಿದನು:—ಬಲನೆಂಬ ರಾಕ್ಷಸನಿಗೆ ಶತ್ರುವಾದ ಇಂದ್ರನ ಭುಜದಿಂದ ಜಾರಿಹೋದ ವಜ್ರಾಯುಧವು, ವೃತ್ರಾಸುರನನ್ನು ವಧೆ ಮಾಡಲು ತಕ್ಕಷ್ಟು ಶಕ್ತಿಯುಳ್ಳದ್ದಾಗಿಲ್ಲ. ಆದ್ದರಿಂದ ನೀವು ಅದನ್ನು ಪುನಃ ತೆಗೆದುಕೊಳ್ಳಬೇಡಿ. ಈ ಇಂದ್ರನು ಬಹಳ ಶಕ್ತಿಯುಳ್ಳ ಬೇರೆಯ ವಜ್ರಾಯುಧವನ್ನು ಸಂಪಾದಿಸಿ ನಿಮ್ಮೊಡನೆ ಬೇಗ ಜಯಶೀಲನಾಗಬೇಕು. ಆ ವೃತ್ರಾಸುರವನ್ನು ವಧಿಸುವುದಕ್ಕಾಗಿ ಈಗ ನಾನು ಹೇಳುವ ಕೆಲಸವನ್ನು ನೀವು ಮಾಡತಕ್ಕದ್ದು.

ಮದುಕ್ತಕರ್ಮ ಕರ್ತವ್ಯಮಧುನಾ ತದ್ವಧಾಯ ಚ ।
ಯುಷ್ಮಾಭಿಸ್ತತ್ರ ಗಂತವ್ಯಂ ದಧೀಚಿರ್ಯತ್ರ ತಿಷ್ಠತಿ ॥ ೬೧ ॥

ಪುರಾ ದೇವಾಶ್ಚ ದೈತ್ಯಾಶ್ಚ ಕ್ಷೀರೋದಮಥನೋತ್ಸುಕಾಃ ।
ಸರ್ವೇ ಸರ್ವಾಣಿ ಶಸ್ತ್ರಾಣಿ ದಧೀಚೇಶ್ಚ ಸಮೀಪತಃ ॥ ೬೨ ॥

ಸಂಸ್ಥಾಪ್ಯ ರಕ್ಷ ರಕ್ಷೇತಿ ಪ್ರೋಕ್ತ್ವಾ ದೇವಾಸ್ಸವಾಸವಾಃ ।
ಕ್ಷೀರೋದಧಿಂ ಮಮಂಥುಶ್ಚ ಬಹುಕಾಲಂ ಸುರಾಸುರಾಃ । ೬೩ ॥

ತದಾ ಸರ್ವಾಣಿ ಶಸ್ತ್ರಾಣಿ ಭಕ್ಷಿತಾನಿ ದಧೀಚಿನಾ ।
ತಸ್ಯ ಪೃಷ್ಠಗತೇ ಚಾಸ್ತಿ ವಜ್ರಾಯುಧದೃಢೋನ್ನತೇ ॥ ೬೪ ॥

ನಿಪೀತಾನಿ ಚ ಶಸ್ತ್ರಾಣಿ ವಿದ್ಯಂತೇ ಸುರಸತ್ತಮಾಃ ।
ತೇನೈವ ಕೀಕಸೇನಾಶು ವಧ್ಯೋ ವೃತ್ರೋ ಮಹಾಧ್ರುವಂ ॥ ೬೫ ॥

ಯೇ ಯೇ ಸಂತಿ ತ್ಯಾಗಿನಶ್ಚ ಪ್ರಥಿತಾಶ್ಶಿಬಿಪೂರ್ವಕಾಃ ।
ತೇಷಾಂ ಮಧ್ಯೇ ಮಹಾತ್ಯಾಗೀ ದಧೀಚಿಶ್ಶಿವಭಕ್ತಿಮಾನ್ ॥ ೬೬ ॥

---

೬೧–೬೩. ಪೂರ್ವದಲ್ಲಿ ದೇವತೆಗಳೂ, ರಾಕ್ಷಸರೂ ಸೇರಿಕೊಂಡು ಕ್ಷೀರ ಸಮುದ್ರವನ್ನು ಮಥನಮಾಡುವುದಕ್ಕಾಗಿ ಉದ್ಯುಕ್ತರಾದಾಗ ದಧೀಚಿ ಋಷಿಯ ಹತ್ತಿರ ಆಯುಧಗಳೆಲ್ಲವನ್ನೂ ಇರಿಸಿ ಇವುಗಳನ್ನು ನೀನು ರಕ್ಷಿಸು ಎಂದು ಹೇಳಿ, ಕ್ಷೀರಸಮುದ್ರವನ್ನು ಮಥನಮಾಡಿದರು.

೬೪–೬೫. ಆ ದಧೀಚಿ ಋಷಿಯು ತನ್ನ ತಪೋಬಲದಿಂದ ಆಯುಧಗಳನ್ನು ನೀರಾಗಿಮಾಡಿ, ಕುಡಿದಿರುವನು. ಈಗ ಅವೆಲ್ಲವೂ ವಜ್ರಾಯುಧದಂತೆ ಗಟ್ಟಿಯಾಗಿಯೂ, ಎತ್ತರವಾಗಿಯೂ ಇರುವ ಅವನ ಬೆನ್ನಿನ ಮೂಳೆಯಲ್ಲಿ ಇರುವವು. ಆ ಮೂಳೆಯಿಂದ ವೃತ್ರಾಸುರನು ನಾಶವನ್ನು ಹೊಂದುವನು. ಇದು ಸತ್ಯವಾದದ್ದು. ಶಿಬಿಚಕ್ರವರ್ತಿಯೇ ಮೊದಲಾದ ತ್ಯಾಗಶೀಲರ ಜೊತೆಯಲ್ಲಿ ಶಿವಭಕ್ತನಾದ ಈ ದಧೀಚಿಯು ಪ್ರಸಿದ್ಧನಾಗಿರುವನು. ಬಹಳ ದಯೆಯುಳ್ಳ ಈ ದಧೀಚಿ ಋಷಿಯು, ನೀವು ಹೋಗಿ ಪ್ರಾರ್ಥನೆ ಮಾಡಿದರೆ ಏನನ್ನು ತಾನೆ ಕೊಡದೆ ಇರುವನು ?

೬೬–೬೮. ಆದ್ದರಿಂದ ನೀವು ಆ ದಧೀಚಿ ಋಷಿಯನ್ನು ವಜ್ರಾಯುಧವನ್ನು ಮಾಡುವುದಕ್ಕಾಗಿ, ಅವನ ಬೆನ್ನಿನ ಮೂಳೆಯನ್ನು ಪ್ರಾರ್ಥಿಸಿರಿ." ಕಮಲದಂತೆ

ದಧೀಚೌ ಪ್ರಾರ್ಥಿತೇ ಕಿಂ ಕಿಂ ನ ದದಾತಿ ದಯಾನಿಧಿಃ ।
ತತ್ತ್ವಂ ಪ್ರಾಪ್ಯ ಪ್ರಾರ್ಥಯತು ದಧೀಚಿಂ ಕೀಕಸಾಯ ಚ　　॥ ೬೭ ॥

ಇತ್ಯುಕ್ತ್ವಾ ಪ್ರೇಷಯಾಮಾಸ ಬ್ರಹ್ಮಾದೀನ್ಪಂಕಜೇಕ್ಷಣಃ ।
ಶ್ರುತ್ವಾ ವಾಕ್ಯಂ ಮಹಾವಿಷ್ಣೋಃ ಪ್ರಾಹ ಬ್ರಹ್ಮಾ ಪುರಂದರಂ　　॥ ೬೮ ॥

ತತ್ರ ಗತ್ವಾ ಸುರೈಸ್ಸಾರ್ಧಂ ದಧೀಚಿರ್ಯತ್ರ ತಿಷ್ಠತಿ ।
ಪ್ರಾರ್ಥಯಾಸ್ಥಿ ಮಹೇಂದ್ರ ತ್ವಮಿತ್ಯುಕ್ತ್ವಾ ಸ್ವಾಲಯಂ ಯಯೌ॥　　॥ ೬೯ ॥

ತತೋ ದೇವಾಸ್ತಪಸ್ಯಂತಂ ದಧೀಚಿಂ ಮುನಿಪುಂಗವಂ ।
ಸಂಪ್ರಾಪ್ಯ ಜಯಘೋಷೇಣ ಸಂತೋಷ್ಯ ಪ್ರಾರ್ಥಯಂತಿ ತಂ　　॥ ೭೦ ॥

ವರಂ ದೇಹಿ ಮಹಾಯೋಗಿನ್ಸರ್ವೇಷಾಂ ತ್ಯಾಗಿನಾಂ ವರ ।
ಇತ್ಯುಕ್ತೇ ದೇವಸಂಘಾತೇ ದಧೀಚಿರ್ದಯಯಾ ಯುತಃ　　॥ ೭೧ ॥

ಯುಷ್ಮಾಭಿಃ ಪ್ರಾರ್ಥಿತಂ ಯತ್ತು ತದ್ದಾಸ್ಯಾಮಿ ನ ಸಂಶಯಃ ।
ವಚಶ್ಶ್ರುತ್ವಾ ದಧೀಚೇಶ್ಚ ತದಾ ಸರ್ವೇ ದಿವೌಕಸಃ ।　　॥ ೭೨ ॥

---

ಇರುವ ಕಣ್ಣುಳ್ಳವನಾದ ವಿಷ್ಣುವು ದೇವತೆಗಳಿಗೆ ಈ ಪ್ರಕಾರದಿಂದ ಹೇಳಿ, ಬ್ರಹ್ಮನೇ ಮೊದಲಾಗಿರುವ ಅವರನ್ನು ಕಳುಹಿಸಿದನು. ವಿಷ್ಣುವಿನ ಮಾತನ್ನು ಕೇಳಿ ಬ್ರಹ್ಮನು, " ಎಲೈ ಇಂದ್ರನೇ! ನೀವೆಲ್ಲರೂ ದಧೀಚಿ ಋಷಿಯು ಇರುವ ಆಶ್ರಮಕ್ಕೆ ಹೋಗಿ ಆ ಋಷಿಯನ್ನು ಪ್ರಾರ್ಥನೆಮಾಡಿರಿ," ಎಂದು ಹೇಳಿ ತನ್ನ ಮನೆಗೆ ಹೋದನು.

೬೯–೭೦. ಅನಂತರದಲ್ಲಿ ದೇವತೆಗಳು ಋಷಿಶ್ರೇಷ್ಠನಾದ ದಧೀಚಿಯ ಆಶ್ರಮಕ್ಕೆ ಬಂದರು. ಅಲ್ಲಿ ಅವನನ್ನು ನೋಡಿ ಜಯಕಾರವನ್ನು ಮಾಡಿದರು. ಅವನನ್ನು ಸೇವೆಯಿಂದ ಸಂತೋಷಪಡಿಸಿ ಬೇಡಿಕೊಂಡರು. ದೊಡ್ಡ ಯೋಗಿಯಾದ ದಧೀಚಿಗೆ " ನೀನು ನಮಗೆ ವರವನ್ನು ಕೊಡು " ಎಂದು, ದೇವತೆಗಳೇ ಬೇಡುತ್ತಿರಲು ಅವನಿಗೆ ಅವರ ವಿಷಯದಲ್ಲಿ ಬಹಳ ಕನಿಕರವು ಹುಟ್ಟಿತು.

೭೧–೭೩. ಆಗ ಅವನು " ನೀವು ಕೇಳುವುದನ್ನು ನಾನು ನಿಜವಾಗಿಯೂ ಕೊಡುವೆನು " ಎಂದು ದೇವತೆಗಳ ಸಂಗಡ ಹೇಳಿದನು. ದಧೀಚಿಯ ಆ ಮಾತನ್ನು

ದೇಹಮಧ್ಯಗತಂ ಚಾಸ್ಥಿ ವೀಣಾದಂಡಾಖ್ಯಮದ್ಭುತಂ ।
ವೃತ್ರಾಸುರವಧಾಯ ತ್ವಂ ಪ್ರಯಚ್ಛ ಮುನಿಪುಂಗವ ॥ ೭೩ ॥

ಇತ್ಯುಕ್ತ್ವಾ ತೇ ಮುನೇರಗ್ರೇ ತಸ್ಥುರಿಂದ್ರಾದಿದೇವತಾಃ ।
ಶ್ರುತ್ವಾ ದಧೀಚಿರ್ವಚನಮಿಂದ್ರಾದೀನಾಂ ದಿವೌಕಸಾಂ ॥ ॥೭೪ ॥

ವಸ್ತು ನಿತ್ಯಮನಿತ್ಯಂ ಚ ವಿಚಾರ್ಯ ಪರಯಾ ಧಿಯಾ ।
ಸ್ಥಿರಮಾತ್ಮನಿ ನಿತ್ಯತ್ವಂ ಶರೀರಾದೌ ತ್ವನಿತ್ಯತಾಂ ॥ ೭೫ ॥

ನಿಶ್ಚಿತ್ಯ ಸರ್ವಭಾವೇನ ಕೀಕಸಂ ದಾತುಮುದ್ಯತಃ ।
ದಧೀಚಿಃ ಪ್ರೀತಿಮಾನ್ಭೂತ್ವಾ ಪ್ರಾಹ ವಾಚಾ ಪ್ರಗಲ್ಭಯಾ ॥ ೭೬ ॥

ತಥಾ ಭವತು ಗೃಹ್ಣಂತು ದಾಸ್ಯಾಮ್ಯಸ್ಥಿ ದಿವೌಕಸಃ ।
ಇತ್ಯುಕ್ತ್ವಾ ಸ್ಥೂಲದೇಹಂ ಚ ತ್ಯಕ್ತ್ವಾ ಬ್ರಹ್ಮಬಿಲೋದ್ಗತಃ ॥ ೭೭ ॥

ಲಬ್ಧ್ವಾ ಶಿವಸ್ಯ ಸಾರೂಪ್ಯಂ ಶಿವಲೋಕಾತ್ಸಮಾಗತಂ ।
ವಿಮಾನಮಧಿರುಹ್ಯಾಶು ಶಿವಲೋಕಂ ಸ ಗಚ್ಛತಿ । ॥ ೭೮ ॥

---

ಕೇಳಿ, ದೇವತೆಗಳೆಲ್ಲರೂ, ನಿನ್ನ ಶರೀರಮಧ್ಯದಲ್ಲಿ ಗಟ್ಟಿಯಾಗಿರುವ ಮತ್ತು ವೀಣೆಗೆ ದಂಡದಂತಿರುವ ಮೂಳೆಯನ್ನು ವೃತ್ರಾಸುರನ ವಧೆಗಾಗಿ ನಮಗೆ ಕೊಡು, ಎಂದು ಹೇಳುತ್ತಾ ಆ ಋಷಿಯ ಮುಂದುಗಡೆಯಲ್ಲಿ ನಿಂತುಕೊಂಡರು.

೭೪–೭೫. ಇಂದ್ರನೇ ಮೊದಲಾದ ದೇವತೆಗಳು ಹೀಗೆ ಹೇಳುತ್ತಿರುವುದನ್ನು ಕೇಳಿ, ದಧೀಚಿ ಋಷಿಯು ಕೊಂಚಮಟ್ಟಿಗೆ ಆಲೋಚಿಸಿದನು, ಆಗ ಅವನು— "ವಸ್ತುಗಳು ನಿತ್ಯ, ಅನಿತ್ಯವೆಂದು ಎರಡು ವಿಧವಾಗಿ ಇರುವುವು. ಅವುಗಳಲ್ಲಿ ಪರಮಾತ್ಮನು ನಿತ್ಯನಾದವನು. ಉಳಿದವೆಲ್ಲವೂ ಅನಿತ್ಯವಾದವು. ಆದ್ದರಿಂದ ಈ ಶರೀರವು ಅನಿತ್ಯವಾದದ್ದಾದರೂ ಈ ಪ್ರಕಾರದಿಂದ ದೇವಕಾರ್ಯಕ್ಕೆ ಉಪಯುಕ್ತವಾಗುವುದು ಉತ್ತಮವು"—ಎಂದು ತನ್ನ ಉತ್ತಮವಾದ ಬುದ್ಧಿಯಿಂದ ನಿಶ್ಚಯಿಸಿ ಆ ದೇವತೆಗಳ ಇಷ್ಟವನ್ನು ನಡಸಿಕೊಡಲು ಒಪ್ಪಿಕೊಂಡನು.

೭೬–೭೮. ಅನಂತರದಲ್ಲಿ ಅವನು ಸಂತೋಷದಿಂದ,—" ನಿಮ್ಮ ಇಷ್ಟವನ್ನು ನೆರವೇರಿಸಿಕೊಡುವೆನು." ಎಂದು ದೇವತೆಗಳ ಸಂಗಡ ಹೇಳಿ, ಸ್ಥೂಲಶರೀರವನ್ನು ಬಿಟ್ಟು ಬ್ರಹ್ಮರಂಧ್ರದ ಮೂಲಕವಾಗಿ ಶರೀರದಿಂದ ಹೊರಗೆ ಹೊರಟು, ಶಿವನ ಸಾಯುಜ್ಯವನ್ನು ಹೊಂದುವಾಗ ಶಿವಲೋಕದಿಂದ ಬಂದ ವಿಮಾನದಲ್ಲಿ ಕುಳಿತುಕೊಂಡು ಶಿವನ ಲೋಕವನ್ನು ಹೊಂದಿದನು.

ಗೃಹೀತ್ವಾ ಕೀಕಸಂ ದೇವಾಃ ವಿಶ್ವಕರ್ಮಕರೇ ದದುಃ ।
ತೇನ ವಜ್ರಾಯುಧಂ ಕೃತ್ವಾ ಸುದೃಢಂ ನಿಶಿತಂ ಮಹತ್ ॥ ೭೯ ॥

ಸಂಹರಾನೇನ ಭಗವನ್ವೃತ್ರಂ ಸುರವಧೋದ್ಯತಂ ।
ಇತ್ಯುಕ್ತ್ವಾ ಪ್ರದದೌ ಹಸ್ತೇ ವಿಶ್ವಕರ್ಮಾ ಶತಕ್ರತೋಃ ॥ ೮೦ ॥

ಅರಿಭಿರ್ದುರ್ನಿರೀಕ್ಷ್ಯಂ ತಂ ಕಾಲದಂಡಮಿವಾಪರಂ ।
ಆದಾಯ ಬಲವಾನಿಂದ್ರೋ ಗಜಮಭ್ರಮುವಲ್ಲಭಂ ॥ ೮೧ ॥

ಆರುಹ್ಯ ದೇವಬೃಂದೈಶ್ಚ ಯತ್ರ ವೃತ್ರಾಸುರೋ ಮಹಾನ್ ।
ಮಹಾವೇಗಾತ್ತತ್ರ ಗತ್ವಾ ಚಕಂಪೇ ವಜ್ರಮಾಯುಧಂ ॥ ೮೨ ॥

ಪತಂತ್ಯಶನಿಸಂಘಾಶ್ಚ ಪುರಂದರಮಹಾಯುಧಾತ್ ।
ನಿರೀಕ್ಷ್ಯ ದೇವತಾಸಂಘಂ ದೇವೇಂದ್ರಂ ವಜ್ರಧಾರಿಣಂ ॥ ೮೩ ॥

ಧಾವರ್ವೇಗೇನ ವೃತ್ರೋಽಪಿ ಗಂಭೀರೇಬ್ಧಿಜಲೇ ತದಾ ।
ನಿಮಗ್ನಸ್ಸನ್ನದೃಶ್ಯೋಽಭೂದಿಂದ್ರಾದ್ಯಾ ವಿಸ್ಮಿತಾಃ ಸುರಾಃ ॥ ೮೪ ॥

---

೭೯-೮೦. ಆಗ ದೇವತೆಗಳು ಮೂಳೆಯನ್ನು ತೆಗೆದು ವಿಶ್ವಕರ್ಮನ ಕೈಯ್ಯಿ ನಲ್ಲಿ ಕೊಟ್ಟರು. ಅವನು ಅದರಿಂದ ಹರಿತವಾದ, ಗಟ್ಟಿಯಾದ ವಜ್ರಾಯುಧವನ್ನು ನಿರ್ಮಿಸಿ, "ಎಲೈ ಪ್ರಭುವೇ! ನೀನು ಇದರಿಂದ ಶತ್ರುವಾದ ವೃತ್ರಾಸುರನನ್ನು ಸಂಹರಿಸು" ಎಂದು ಹೇಳಿ, ವಜ್ರಾಯುಧವನ್ನು ಇಂದ್ರನಿಗೆ ಒಪ್ಪಿಸಿದನು.

೮೧-೮೨. ಹೊಸದಾಗಿ ನಿರ್ಮಿಸಿದ ವಜ್ರಾಯುಧವು, ಶತ್ರುಗಳಿಗೂ ನೋಡಲು ಅಸಾಧ್ಯವಾಗಿಯೂ, ಯಮದಂಡದಂತೆ ಭಯಂಕರವಾಗಿಯೂ ಇತ್ತು. ಶಕ್ತಿವಂತನಾದ ಇಂದ್ರನು ಅದನ್ನು ತೆಗೆದುಕೊಂಡು, ಐರಾವತವನ್ನು ಹತ್ತಿ ದೇವತೆಗಳ ಸಮೂಹದಿಂದ ಸುತ್ತುವರಿದವನಾಗಿ, ಬಲಿಷ್ಠನಾದ ವೃತ್ರಾಸುರನು ಇದ್ದ ಸ್ಥಳಕ್ಕೆ ಬಂದು, ಬಹಳ ವೇಗದಿಂದ ಆ ಆಯುಧವನ್ನು ಆಡಿಸಿದನು,

೮೩-೮೪. ಇಂದ್ರನ ದೊಡ್ಡದಾದ ಆಯುಧದಿಂದ ಆಗ ಸಿಡಿಲುಗಳು ಬೀಳುತ್ತಿದ್ದವು. ದೇವತೆಗಳು ವೃತ್ರನ ವಧೆಗಾಗಿ ವಜ್ರಾಯುಧವನ್ನು ಧರಿಸಿರುವ ಇಂದ್ರನನ್ನು ನೋಡಿದರು. ಆಗ ವೃತ್ರಾಸುರನು ಇದನ್ನು ನೋಡಿ, ಬೇಗನೆ ಓಡಿಹೋಗಿ ಆಳವಾದ ಸಮುದ್ರದ ನೀರಿನಲ್ಲಿ ಮುಳುಗಿಕೊಂಡು ಯಾರಿಗೂ ಕಾಣದಂತೆ ಇದ್ದನು. ಇಂದ್ರನೇ ಮೊದಲಾದ ದೇವತೆಗಳೆಲ್ಲರೂ ವೃತ್ರಾಸುರನನ್ನು ಕಾಣದೆ ಆಶ್ಚರ್ಯಪಡುತ್ತಿದ್ದರು.

ಪುನರ್ವಿಧಿಂ ಸಮಾಸಾದ್ಯ ಪ್ರಾಹ ವೃತ್ರವಿಚೇಷ್ಟಿತಂ ।
ತೇಷಾಂ ವಚಾಂಸಿ ಚಾಕರ್ಣ್ಯ ಬ್ರಹ್ಮಾ ಪ್ರಾಹ ದಿವೌಕಸಃ ॥ ೮೫ ॥

ಸಮುದ್ರಜಲನಾಶಾಯ ಕುಂಭಯೋನಿಂ ಮಹಾಮುನಿಂ ।
ಭವಂತಃ ಪ್ರಾರ್ಥಯಂತು ದ್ರಾಗಿತಿ ತೇನ ಪ್ರಚೋದಿತಾಃ ॥ ೮೬ ॥

ಪುರುಹೂತಮುಖಾದೇವಾಸ್ತದಾ ಮಾಂ ಪ್ರಾರ್ಥಯಂತಿ ಹಿ ।
ಕಾಲಾಗ್ನಿ ಕೋಟಿಸದೃಶಂ ಧ್ಯಾತ್ವಾ ಹಾಲಾಸ್ಯನಾಯಕಂ ॥ ೮೭ ॥

ಪಾರಾವಾರಜಲಂ ಸರ್ವಂ ದಕ್ಷಪಾಣಿತಲೇನ ಚ ।
ಗೃಹೀತ್ವಾ ತು ಮಯಾ ಪೀತಂ ಸಮುದ್ರೋ ನಿರ್ಜಲೋ ಭವತ್ ॥ ೮೮ ॥

ವೃತ್ರಾಸುರಸ್ತದಾ ದೃಷ್ಟೋ ದೇವೇಂದ್ರೇಣ ಚ ದೈವತೈಃ ।
ಸಮುದ್ರಮಧ್ಯೇ ಕಸ್ಮಿಂಶ್ಚ ಪರ್ವತಾಗ್ರೇತಿವಿಸ್ತೃತೇ ॥ ೮೯ ॥

ಬದ್ಧಪದ್ಮಾಸನಸ್ಥಸ್ಸ್ವಪಾಷಾಣ ಇವ ನಿಶ್ಚಲಃ ।
ಇಂದ್ರಿಯಾಣಿ ಚ ಸಂಯೋಜ್ಯ ದೃಢಂ ಮನಸಿ ತನ್ಮನಃ ॥ ೯೦ ॥

---

೮೫–೮೮. ಅವರು ಪುನಃ ಬ್ರಹ್ಮನ ಹತ್ತಿರಕ್ಕೆ ಹೋಗಿ, ವೃತ್ರಾಸುರನು ಮಾಡಿರುವ ಕೆಲಸವನ್ನು ಹೇಳಿದರು. ಬ್ರಹ್ಮನು ದೇವತೆಗಳ ಮಾತನ್ನು ಕೇಳಿ, “ ನೀವೆಲ್ಲರೂ ಅಗಸ್ತ್ಯ ಮಹರ್ಷಿಯನ್ನು ಬೇಗ ಸಮುದ್ರದ ನೀರನ್ನು ನಾಶಮಾಡುವ ಹಾಗೆ ಪ್ರಾರ್ಥಿಸಿರಿ.” ಎಂದು ಹೇಳಿದನು. ಆಗ ಇಂದ್ರನೇ ಮೊದಲಾದ ದೇವತೆಗಳು, ನನ್ನನ್ನು ಪ್ರಾರ್ಥನೆ ಮಾಡಿದರು. ಪ್ರಳಯಕಾಲದ ಅಗ್ನಿಯ ಕೋಟಿಯಷ್ಟು ಭಾಗ ಹೆಚ್ಚಾಗಿರುವ ಈ ಹಾಲಾಸ್ಯೇಶ್ವರನನ್ನು ನಾನು ಧ್ಯಾನಮಾಡಿ ಬಲಗಡೆಯ ಕೈಯ್ಯಿನಲ್ಲಿ ಸಮುದ್ರದ ನೀರೆಲ್ಲವನ್ನೂ ಹಿಡಿದು ಕುಡಿದೆನು. ಸಮುದ್ರವು ನೀರಿಲ್ಲದ್ದಾಗಿ ಆಯಿತು.

೮೯–೯೧. ಆಗ ದೇವತೆಗಳು ವೃತ್ರಾಸುರನನ್ನು ನೋಡಿದರು. ಅವನು ಸಮುದ್ರದ ಮಧ್ಯದಲ್ಲಿನ ಒಂದು ಬೆಟ್ಟದ ಶಿಖರದಲ್ಲಿ ಅರ್ಧ ಪದ್ಮಾಸನವನ್ನು ಹಾಕಿಕೊಂಡು ಕಲ್ಲಿನಂತೆ ನಿಶ್ಚಲನಾಗಿ, ಇಂದ್ರಿಯಗಳನ್ನು ಮನಸ್ಸಿನಲ್ಲಿಯೂ, ಮನಸ್ಸನ್ನು

**ಪರಬ್ರಹ್ಮಣಿ ಸಂಯೋಜ್ಯ ಯೋಗಧ್ಯಾನಪರಾಯಣಃ ।**
**ವಜ್ರಾಯುಧೇನ ತೀಕ್ಷ್ಣೇಣ ಜಿಷ್ಣುಸ್ತಸ್ಯಾಚ್ಛಿನಚ್ಛಿರಃ ॥ ೯೧ ॥**

**ತದಾ ವೃತ್ರವಧೋದ್ಭೂತಾ ಬ್ರಹ್ಮಹತ್ಯಾತಿದಾರುಣಾ ।**
**ತರ್ಜಯಂತೀ ದೇವರಾಜಂ ದಧತೀ ಮುಸಲಾಯುಧಂ ॥ ೯೨ ॥**

**ಛಾಯಾರೂಪೇಣ ಪರಿತಸ್ಸಂಚರಂತ್ಯನಿಶಂ ಕ್ರುಧಾ ।**
**ತಾಂ ವಿಲೋಕ್ಯ ಮಹಾಭೀತ್ಯಾ ಧಾವನ್ವೇಗೇನ ದೇವರಾಟ್ ॥ ೯೩ ॥**

**ಈಶಾನ್ಯಾಂ ದಿಶಿ ಸಂಪ್ರಾಪ್ಯ ರುದ್ರಾಣಾಂ ಲೋಕಮುದ್ಭುತಂ ।**
**ಪದ್ಮನಾಳಾಂತರಗತಸೂತ್ರಲೀನಃ ಪುರಂದರಃ ॥ ೯೪ ॥**

**ಚಿರಕಾಲಮದೃಶ್ಯೋಽಭೂದ್ವೃತ್ರಹತ್ಯಾಭಯಾಕುಲಃ ।**
**ತತ್ಕಾಲೇ ನಹುಷೋ ರಾಜಾ ದೇವೇಂದ್ರಸ್ಯ ಪದಂ ಮಹತ್ ॥ ೯೫ ॥**

---

ಪರಬ್ರಹ್ಮನಲ್ಲಿಯೂ, ದೃಢವಾಗಿ ಇರಿಸಿ, ಧ್ಯಾನಮಾಡುವುದರಲ್ಲಿ ಆಸಕ್ತನಾಗಿದ್ದನು. ಇಂದ್ರನು ಅವನು ಹೀಗೆ ಇರುವುದನ್ನು ನೋಡಿ ತನ್ನ ವಜ್ರಾಯುಧದಿಂದ ಅವನ ತಲೆಯನ್ನು ಕತ್ತರಿಸಿದನು.

೯೧–೯೪. ವೃತ್ರಾಸುರನ ವಧೆಯಿಂದ ಬಹಳ ಕ್ರೂರವಾದ ಬ್ರಹ್ಮಹತ್ಯೆಯು ಹುಟ್ಟಿತು. ಅದು ಒನಕೆಯನ್ನು ಹಿಡಿದುಕೊಂಡು ಇಂದ್ರನನ್ನು ಹೆದರಿಸಲು ಪ್ರಾರಂಭಿಸಿತು. ಅದು ಯಾವಾಗಲೂ ನೆರಳಿನ ರೂಪದಿಂದ ಸರ್ವಕಾಲದಲ್ಲಿಯೂ ಕೋಪದಿಂದ ಇಂದ್ರನ ಸುತ್ತಮುತ್ತಲೂ ಸಂಚರಿಸುತ್ತಿತ್ತು. ಇಂದ್ರನು ಅದನ್ನು ನೋಡಿ ಹೆದರಿಕೊಂಡು ಓಡಿದನು. ಈಶಾನ್ಯ ದಿಕ್ಕಿನಲ್ಲಿರುವ ರುದ್ರಲೋಕಕ್ಕೆ ಬೇಗ ಹೋಗಿ ಅಲ್ಲಿ ಒಂದು ಸರೋವರದಲ್ಲಿ ಇರುವ ತಾವರೆ ದಂಟಿನ ಒಳಗಡೆಯ ದಾರದ ಒಳಭಾಗಕ್ಕೆ ಇಂದ್ರನು ಸೇರಿಕೊಂಡು ಇದ್ದನು. ವೃತ್ರಾಸುರನನ್ನು ಕೊಲೆಮಾಡಿದ ಕಾರಣ ಹೆದರಿಕೊಂಡು ಬಹಳಕಾಲದವರಿಗೂ ಯಾರಿಗೂ ಕಾಣದಂತೆ ಇಂದ್ರನು ಅಲ್ಲಿ ಹಾಗೆಯೇ ಇದ್ದನು

೯೫–೯೬. ಆಗ ದೇವತೆಗಳಲ್ಲಿ ಇಂದ್ರನ ಸಿಂಹಾಸನವನ್ನು ಹತ್ತುವರು ಯಾರೂ ಇರಲಿಲ್ಲ. ನಹುಷನೆಂಬ ರಾಜನನ್ನು ಅವರು ಇಂದ್ರನನ್ನಾಗಿ ನೇಮಿಸಿ ಕೊಂಡರು. ಅವನು ಕೆಲವು ದಿನಗಳು ಇಂದ್ರಪಟ್ಟವನ್ನು ಅನುಭವಿಸಿದನು. ಬಹಳ ಐಶ್ವರ್ಯದ ಗರ್ವದಿಂದ ಅವನು ನನಗೆ ಅವಮಾನಮಾಡಿದನು. ನಾನು ಅವನಿಗೆ.

ಪ್ರಾಪ್ತಃ ಶಪ್ತೋ ಮಯಾ ಸರ್ಪೋ ಭೂತ್ವಾ ಪತತಿ ಭೂತಲೇ ।
ಪದ್ಮಸೂತ್ರಾಂತರಗತಶ್ಶಕ್ರೋ ಧ್ಯಾತ್ವಾ ಬೃಹಸ್ಪತಿಂ ॥ ೯೬ ॥

ತುಷ್ಟಾವ ವಿವಿಧೈಃ ಸ್ತೋತ್ರೈಃ ಭಕ್ತಿಶ್ರದ್ಧಾಸಮನ್ವಿತಃ ।
ದೇವಾಚಾರ್ಯೋಽಪಿ ದಯಯಾ ವಿಹಾಯಾದೃಶ್ಯತಾಂ ತದಾ ॥ ೯೭ ॥

ಚಕ್ರೇಽಪಿ ಸದ್ಯಃ ಪ್ರತ್ಯಕ್ಷಂ ಪುರತಶ್ಚ ಶತಕ್ರತೋಃ ।
ಇಂದ್ರೋ ಬೃಹಸ್ಪತಿಂ ದೃಷ್ಟ್ವಾ ಮಹಾಪ್ರೀತ್ಯಾ ಸಮುತ್ಥಿತಃ ॥ ೯೮ ॥

ಅಪರಾಧಂ ಕ್ಷಮಸ್ವೇತಿ ಪುನಃ ಪುನರುದೀರಯನ್ ।
ಪಾದಾರವಿಂದಯೋಸ್ತಸ್ಯ ದಂಡವತ್ಪ್ರಣನಾಮ ಚ । ॥ ೯೯ ॥

ಉತ್ಥಾಪ್ಯಾಲಿಂಗ್ಯ ದೇವೇಂದ್ರಮ್ಮಾಭೈಷೀರಿತ್ಯುದೀರ್ಯ ಚ ।
ಜ್ಞಾನದೃಷ್ಟ್ಯಾ ಚ ಸಂವೀಕ್ಷ್ಯ ಪ್ರಾಯಶ್ಚಿತ್ತಂ ಮಹೈನಸಃ ॥ ೧೦೦ ॥

---

ಶಾಪವನ್ನು ಕೊಟ್ಟನು. ಅದರಿಂದ ಅವನು ಸರ್ಪದ ಜನ್ಮವನ್ನು ಅನುಭವಿಸಲು ಪುನಃ ಭೂಮಿಗೆ ಬಂದನು. ಇಂದ್ರನು ಪದ್ಮನಾಳದ ಮಧ್ಯದಲ್ಲಿ ಇರುತ್ತಾ ತನ್ನ ಗುರುವಾದ ಬೃಹಸ್ಪತಿಯನ್ನು ಧ್ಯಾನಮಾಡಲು ಉಪಕ್ರಮಿಸಿದನು. ಭಕ್ತಿ ಮತ್ತು ಆದರಗಳಿಂದ ಬಹಳ ವಿಧವಾಗಿ ಗುರುವನ್ನು ಸ್ತೋತ್ರಮಾಡಿದನು. ಗುರುವು ಅದನ್ನು ತಿಳಿದು ತನ್ನ ಅದೃಶ್ಯ ರೂಪವನ್ನು ಬಿಟ್ಟು ದಯೆಯಿಂದ ಅವನಿಗೆ ಕಾಣಿಸಿ ಕೊಂಡನು.

೯೭–೯೯. ಇಂದ್ರನು ತನ್ನ ಗುರುವನ್ನು ನೋಡಿದಕೂಡಲೆ ಬಹಳ ಪ್ರೀತಿ ಯಿಂದ ಮೇಲಕ್ಕೆ ಎದ್ದು ನಿಂತುಕೊಂಡು ಬಾರಿ ಬಾರಿಗೂ ನನ್ನ ಅಪರಾಧವನ್ನು ನೀನು ಕ್ಷಮಿಸು ಎಂದು ಹೇಳುತ್ತಾ, ಅವನ ಪಾದಗಳನ್ನು ಹಿಡಿದುಕೊಂಡು ನಮಸ್ಕಾರ ಮಾಡಿದನು.

೧೦೦–೧೦೩. ಆಗ ಬೃಹಸ್ಪತಿಯು ಇಂದ್ರನು ಮಾಡಿರುವ ಬಹಳ ಪಾಪಕರ ವಾದ ಕೆಟ್ಟ ಕೆಲಸದ ಪರಿಹಾರವು ಉಂಟಾಗುವ ಉಪಾಯವನ್ನು ಯೋಚಿಸಿದನು. ಮತ್ತು ಅದನ್ನು ಅವನಿಗೆ ತಿಳಿಯಪಡಿಸಿದನು. "ಎಲೈ ಇಂದ್ರನೇ ಮಹಾಪಾತಕ

ವೃತ್ರಹತ್ಯಾವಿನಾಶಾರ್ಥಮುಪಾಯಂ ಪ್ರಾಹ ಗೀಷ್ಪತಿಃ ।

॥ ಬೃಹಸ್ಪತಿರುವಾಚ ।

ಮಹತಾಂ ಪಾತಕಾನಾಂ ತು ಶಿವಲಿಂಗಾರ್ಚನಂ ವಿನಾ ॥ ೧೦೧ ॥

ಪ್ರಾಯಶ್ಚಿತ್ತಂ ಹಿ ಯನ್ನಾಸ್ತಿ ತಸ್ಮಾತ್ತತ್ಕುರು ಯತ್ನತಃ ।
ಚಿರಂತನೇಷು ಸ್ಥಾನೇಷು ಪರಿಪೂರ್ಣಃ ಪರಶ್ಶಿವಃ ॥ ೧೦೨ ॥

ಸಾನ್ನಿಧ್ಯಂ ಕುರುತೇ ನಿತ್ಯಂ ಸರ್ವೇಷಾಮಿಷ್ಟಸಿದ್ಧಯೇ।
ತೇಷು ಗತ್ವಾ ಮಹಾಭಕ್ತ್ಯಾ ಕೈಲಾಸಪ್ರಮುಖೇಷು ಚ ॥ ೧೦೩ ॥

ಸಂಸ್ನಾಯ ಸರ್ವತೀರ್ಥೇಷು ಸರ್ವಲಿಂಗಾನಿ ಪೂಜ್ಯ ಚ ।
ತೇಷಾಂ ಮಧ್ಯೇತಿಮುಖ್ಯೇ ತು ಸ್ಥಾನೇ ಶಾಂತಿರ್ಮಹೈನಸಃ ॥ ೧೦೪ ॥

ಭವಿಷ್ಯತಿ ನ ಸಂದೇಹಸ್ತಸ್ಮಾತ್ತ್ವಂ ಗಂತುಮರ್ಹಸಿ ।
ಬೋಧಯಿತ್ವೇತಿ ದೇವೇಂದ್ರಂ ತ್ರಿಕಾಲಜ್ಞೋ ಬೃಹಸ್ಪತಿಃ ॥ ೧೦೫ ॥

---

ಗಳು ಪ್ರಾಯಶ್ಚಿತ್ತಗಳನ್ನು ಮಾಡದಿದ್ದರೆ ಅವು ಹೋಗುವುದಿಲ್ಲ. ನೀನು ಮಾಡಿರುವ ಪಾತಕವು ಶಿವಲಿಂಗದ ಪೂಜೆಯಿಂದಲೇ ಹೋಗಬೇಕಾಗುವುದು. ಪುರಾತನವಾದ ಕ್ಷೇತ್ರಗಳಲ್ಲಿ ಶಿವನು ಪರಿಪೂರ್ಣನಾಗಿರುವನು. ಅವನು ತನ್ನನ್ನು ಸೇವಿಸಿದವರ ಇಷ್ಟಸಿದ್ಧಿಯನ್ನುಂಟುಮಾಡುವನು. ಕೈಲಾಸವೇ ಮೊದಲಾದ ಅಷ್ಟುಮಹಿಮೆಯುಳ್ಳ ಕ್ಷೇತ್ರಗಳು ಈಗಲೂ ಪ್ರಸಿದ್ಧವಾಗಿರುವುವು. ಅವುಗಳಲ್ಲಿ ಮುಖ್ಯವಾಗಿರುವ ಕ್ಷೇತ್ರಕ್ಕೆ ನೀನು ಹೋಗು. ಎಲ್ಲಾ ತೀರ್ಥಗಳಲ್ಲಿಯೂ ಸ್ನಾನಮಾಡು, ಎಲ್ಲಾ ಶಿವಲಿಂಗಗಳನ್ನೂ ಪೂಜಿಸು. ಅದರಿಂದ ನಿನ್ನ ಮಹಾಪಾಪವು ಹೋಗುವುದು. ಇದರಲ್ಲಿ ಸಂದೇಹವಿಲ್ಲ. ಈ ಕೆಲಸವನ್ನು ನೀನು ಮಾಡು. ಇದರಿಂದ ನಿನ್ನ ಪಾಪಶಾಂತಿಯುಂಟಾಗಿ ಸುಖವಾಗುವುದು, ಎಂದು ಉಪದೇಶ ಮಾಡಿದನು.

೧೦೪–೧೦೬. ಭೂತ, ವರ್ತಮಾನ, ಭವಿಷ್ಯತ್‌ಕಾಲಗಳಲ್ಲಿ ನಡೆಯುವುದನ್ನು ತಿಳಿದವನಾದ್ದರಿಂದ ಇಂದ್ರನಿಗೆ ಅವನು ಕಷ್ಟದಿಂದ ಪಾರಾಗುವ ಉಪಾಯ

**ದೃಶ್ಯೋ ಭವತ್ಸುರಾಣಾಂ ಹಿ ಸಕಲಾನಾಂ ಯಥಾ ಪುರಾ ।**
**ಇತಿ ವೃತ್ರಾಸುರವಧಂ ಶ್ರುತ್ವಾ ಭೂಪಸ್ಸಮಾಹಿತಃ ॥ ೧೦೭ ॥**
**ಯುದ್ಧೇ ಶತ್ರುಂ ನಿಹತ್ಯಾಶು ಸರ್ವತ್ರ ವಿಜಯೀ ಭವೇತ್ ।**

**ಇತಿ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ**
**ಹಾಲಾಸ್ಯಮಾಹಾತ್ಮ್ಯೇ-ವೃತ್ರಾಸುರವಧೋ ನಾಮ**
**ಚತುರ್ಥೋಽಧ್ಯಾಯಃ**

---

ಗಳೆಲ್ಲವನ್ನೂ ಹೀಗೆ ಹೇಳಿಕೊಟ್ಟನು. ದೇವತೆಗಳಿಗೆಲ್ಲರಿಗೂ ಅವನು ಪ್ರತ್ಯಕ್ಷನಾಗಿ ಅಂದುಮೊದಲ್ಗೊಂಡು ಹಿಂದಿನಂತೆಯೇ ಇದ್ದನು.

ರಾಜನು ವೃತ್ರಾಸುರನ ವಧೆಯನ್ನು ಹೇಳುವ ಈ ಅಧ್ಯಾಯವನ್ನು ಕೇಳಿದ್ದರಿಂದ ಯುದ್ಧದಲ್ಲಿ ಶತ್ರುಗಳನ್ನು ಗೆದ್ದು ಎಲ್ಲಾ ಕಡೆಯಲ್ಲಿಯೂ ಜಯಶೀಲನಾಗುವನು.

ಸಂಪದ್ಯುಕ್ತವಾದ ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ
ಹಾಲಾಸ್ಯಮಾಹಾತ್ಮ್ಯೆಯಲ್ಲಿ ವೃತ್ರಾಸುರ ವಧೆಯೆಂಬ
ಹೆಸರುಳ್ಳ ನಾಲ್ಕನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ
॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ

## ಪಂಚಮೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

**ಇತಿ ಶ್ರುತ್ವಾ ಗುರೋರ್ವಾಕ್ಯಂ ಮಹೈನಶ್ಶಾಂತಿಕಾರಣಂ ।**
**ಮಹಾಸಂತೋಷಜನಕಂ ಮಹಾಪತ್ತಾರಣಕ್ಷಮಂ** ॥ ೧ ॥

**ವೃತ್ರಹತ್ಯಾಭಯಂ ತ್ಯಕ್ತ್ವಾ ಮಹೇಂದ್ರಶ್ಶ್ರದ್ಧಯಾನ್ವಿತಃ ।**
**ಗುರುಣಾ ಸಹಿತೋ ಭೂತ್ವಾ ಸದ್ಯೋ ಗತ್ವಾಮರಾವತೀಂ** ॥ ೨ ॥

**ಆರುಹ್ಯ ಚೋಚ್ಚೈಶ್ರವಸಂ ಸರ್ವೈರ್ದೇವೈಸ್ಸಮನ್ವಿತಃ ।**
**ದೇವಾಚಾರ್ಯಂ ಪುರಸ್ಕೃತ್ಯ ಮೃಗಯಾವ್ಯಾಜತಸ್ತದಾ** ॥ ೩ ॥

### ಐದನೆಯ ಅಧ್ಯಾಯವು.

೧-೩ ಅಗಸ್ತ್ಯಋಷಿಯು ಹೇಳಿದನು:— ಇಂದ್ರನು ಗುರುವಿನ ಮಾತನ್ನು ಕೇಳಿದನು. ಮಹಾಪಾತಕವನ್ನು ನಾಶಪಡಿಸುವಶಕ್ತಿಯುಳ್ಳದ್ದಾಗಿರುವ ಗುರುವಿನ ಮಾತಿನಲ್ಲಿ ತನ್ನ ವಿಪತ್ತು ನಾಶವಾಗುವದೆಂದು ಅವನಿಗೆ ನಂಬಿಕೆಯು ಹುಟ್ಟಿತು. ಅದ್ದರಿಂದ ಸಂತೋಷವು ಉಂಟಾಯಿತು. ಕೂಡಲೇ ಅವನು ವೃತ್ರನ ಕೊಲೆಯ ಭಯವನ್ನು ತಳ್ಳಿಹಾಕಿದನು. ಶಿವನ ಸೇವೆಯ ವಿಷಯದಲ್ಲಿ ಭಕ್ತಿ ಮತ್ತು ಆದರಗಳನ್ನು ಹೊಂದಿದನು. ಗುರುವನ್ನು ತನ್ನ ಜೊತೆಯಲ್ಲಿ ಕರೆದುಕೊಂಡು ಆ ಕ್ಷಣವೇ ಅಮರಾವತಿಗೆ ಬಂದನು. ದೇವತೆಗಳೆಲ್ಲರೊಡನೆ ಅವನು ಹಿಂದಿನಂತೆ ಸೇರಿಕೊಂಡನು. ಉಚ್ಚೈಶ್ರವಸ್ಸೆಂಬ ತನ್ನ ಕುದುರೆಯನ್ನು ಹತ್ತಿ ಬೇಟೆಯಾಡಬೇಕೆಂಬ ನೆವದಿಂದ ಬಿಲ್ಲುಬಾಣಗಳನ್ನ ಕೈಯಲ್ಲಿ ಹಿಡಿದು ಹೊರಟನು. ಪರ್ವತ, ಕಾಡು ಇವುಗಳಿಂದ ಕೂಡಿರುವ ಭೂಮಿಯೆಲ್ಲವನ್ನೂ ಪ್ರದಕ್ಷಿಣೆಯನ್ನು ಮಾಡುತ್ತಾ ಸಂಚರಿಸಲು ಉಪಕ್ರಮಿಸಿದನು.

ತ್ರಿದಿವಾದವತೀರ್ಯಾಶು ಶರಚಾಪಲಸತ್ಕರಃ ।
ಸಮಂತಾತ್ಸಂಚರನ್ಭೂಮಿಂ ಪರ್ವತೇಷು ವನೇಷು ಚ ॥ ೪ ॥

ಸಿಂಹವ್ಯಾಘ್ರವರಾಹಾದಿದುಷ್ಟಾನಿ ಶ್ವಾಪದಾನಿ ಚ ।
ಸಂಹೃತ್ಯ ಮೃಗಯಾಂ ಚಕ್ರೇ ದರ್ಶಯನ್ಹಸ್ತಲಾಘವಂ ॥ ೫ ॥

ಕೈಲಾಸಾದೀನಿ ಮುಖ್ಯಾನಿ ಸ್ಥಾನಾನಿ ಪ್ರಾಪ್ಯ ದೇವರಾಟ್ ।
ಸರ್ವತೀರ್ಥೇಷು ಸಂಸ್ನಾಯ ದೃಷ್ಟ್ವಾ ಲಿಂಗಾನಿ ತಾನಿ ಚ ॥ ೬ ॥

ನಾಭೂದ್ವಿಮುಕ್ತೋ ದೇವೇಂದ್ರೋ ಮಹತ್ಯಾ ವೃತ್ರಹತ್ಯಯಾ ।
ಅಂಜನಾದ್ರಿನಿಭಾ ಘೋರಾ ವೃತ್ರಹತ್ಯಾ ಕೃತಾಂತವತ್ ॥ ೭ ॥

ಮೂರ್ತಿಃ ಮುಸಲಹಸ್ತೇನ ಸಾಮುಂಚದ್ವೃತ್ರವೈರಿಣಂ ।
ತಾಂ ವಿಲೋಕ್ಯ ಮಹೇಂದ್ರೋಽಪಿ ಮಹಾಭೀತಿಸಮನ್ವಿತಃ ॥ ೮ ॥

ವೇಗೇನ ಪ್ರಾಪ ತಂ ದೇಶಂ ಯತ್ರಾಸ್ತೇ ಸೋಮಸುಂದರಃ ।
ತತ್ರ ದುಷ್ಟಮೃಗಾನ್ಹಂತುಂ ನೇಚ್ಛಾಭೂದ್ವೃತ್ರವೈರಿಣಃ ॥ ೯ ॥

---

೪–೮. ಇಂದ್ರನು ಈ ಪ್ರಕಾರದಿಂದಲೇ ಸಂಚರಿಸುತ್ತಾ ಇರುವಾಗ ಆಯಾಯ ಪ್ರದೇಶಗಳಲ್ಲಿ ವಾಸಮಾಡುತ್ತಿರುವ ಸಿಂಹ, ಹುಲಿ ಇವೇ ಮುಂತಾದ ದುಷ್ಟಪ್ರಾಣಿಗಳನ್ನು ಸಂಹರಿಸುತ್ತಾ ಬೇಟೆಯಾಡುತ್ತಿದ್ದನು. ದೇವರಾಜನು ಕೈಲಾಸಪರ್ವತವೇ ಮೊದಲಾದ ಮುಖ್ಯಸ್ಥಾನಗಳನ್ನು ಹೊಂದಿ ಅಲ್ಲಿರುವ ತೀರ್ಥಗಳಲ್ಲಿ ಸ್ನಾನವನ್ನು ಮಾಡಿ ಆಯಾಯ ಶಿವಲಿಂಗಗಳನ್ನು ದರ್ಶನಮಾಡಿ ಪೂಜಿಸಿದನು. ಆದಾಗ್ಯೂ ಅವನು ಬ್ರಹ್ಮಹತ್ಯೆಯಿಂದ ಬಿಡುಗಡೆಯನ್ನು ಹೊಂದಲಿಲ್ಲ. ಕಪ್ಪುಬಣ್ಣದಿಂದ ಕೂಡಿದ್ದಾಗಿ ಬೆಟ್ಟದಂತಿರುವ ಆಕಾರವನ್ನು ಧರಿಸಿಕೊಂಡು, ಇರುವ ವೃತ್ರಹತ್ಯೆಯಿಂದ ಉಂಟಾದ ಬ್ರಹ್ಮಹತ್ಯೆಯು ಒನಕೆಯನ್ನು ಹಿಡಿದುಕೊಂಡು ಯಮನಂತೆ ಇಂದ್ರನನ್ನು ಹಿಂಬಾಲಿಸಿಕೊಂಡು ಬರುತ್ತಿದ್ದಿತು. ಅದನ್ನು ನೋಡಿ ಇಂದ್ರನಿಗೆ ಭಯವುಂಟಾಯಿತು

೯–೧೧. ಆಗ ಇಂದ್ರನು ಸಂಚರಿಸುತ್ತಾ ಸುಂದರೇಶ್ವರನು ಇರುವ ಪ್ರದೇಶಕ್ಕೆ ಕ್ರಮವಾಗಿ ಬೇಗನೆ ಬಂದು ಸೇರಿದನು. ಆ ಪ್ರದೇಶದಲ್ಲಿ ದುಷ್ಟಮೃಗಗಳು ಬಹಳವಾಗಿ ಇದ್ದುವು. ಅವುಗಳನ್ನು ಕೊಲ್ಲುವುದಕ್ಕೆ ಮನಸ್ಸು ಒಪ್ಪಲಿಲ್ಲ. ತನ್ನ ಮನಸ್ಸಿನ

**ತದಾ ವಿಸ್ಮಯಮಾಪನ್ನಸ್ತ್ರಿದಶಾನ್ಪ್ರಾಹದೇವರಾಟ್ ।**
**ಮೃಗಯಾಯಾಂ ಪ್ರವೃತ್ತಾಪಿ ಬುದ್ಧಿರದ್ಯ ಮಮ ಧ್ರುವಂ　　॥ ೧೦ ॥**

**ಅತ್ಯಂತ ದಯಯಾ ಯುಕ್ತಾ ನಿವೃತ್ತಾ ವಧಕರ್ಮಣಿ ।**
**ಅತ್ರ ದೇಶೇ ವಿಶೇಷೋಽಸ್ತಿ ಸತ್ಯಮೇವ ನ ಸಂಶಯಃ　　॥ ೧೧ ॥**

**ಇತ್ಯುಕ್ತ್ವಾ ಮೃಗಯಾಶ್ರದ್ಧಾಂ ತ್ಯಕ್ತ್ವಾ ವೃದ್ಧಶ್ರವಾಃ ಪುನಃ ।**
**ಶ್ರೀಹಾಲಾಸ್ಯಶಿವಕ್ಷೇತ್ರಸೀಮಾಂ ಪ್ರವಿಶತಿ ಕ್ಷಣಾತ್　　॥ ೧೨ ॥**

**ಕ್ಷೇತ್ರಪ್ರಭಾವತೋ ಭೀತ್ಯಾ ವೃತ್ರಹತ್ಯಾತಿದಾರುಣಾ ।**
**ಬಹಿಸ್ತಿಸ್ಥತಿ ನಿರ್ವೀರ್ಯಾ ಕಿಲ್ಬಿಷೈಶ್ಚ ಬಿಡೌಜಸಃ　　॥ ೧೩ ॥**

**ಯತ್ರಾತಿಷ್ಠದ್ವೃತ್ರಹತ್ಯಾ ತ್ಯಕ್ತ್ವೇಂದ್ರಂ ಕ್ಷೇತ್ರವೈಭವಾತ್ ।**
**ವೃತ್ರಹತ್ಯಾಸ್ಥಿತಂ ಸ್ಥಾನಂ ನಾಮ್ನಾ ತದ್ವಿದಿತಂ ದ್ವಿಜಾಃ　　॥ ೧೪ ॥**

---

ಸ್ಥಿತಿಯು ಹೀಗೆ ಆಗಿರುವುದರಿಂದ ಅವನಿಗೆ ಆಶ್ಚರ್ಯವು ಉಂಟಾಯಿತು. ಆದ್ದರಿಂದ ಅವನು ತನ್ನ ಜೊತೆಯಲ್ಲಿದ್ದ ದೇವತೆಗಳ ಸಂಗಡ," ನನ್ನ ಬುದ್ಧಿಯು ಬೇಟೆಯಾಡುವುದರಲ್ಲಿ ಆಸಕ್ತಿಯನ್ನು ಹೊಂದಿದ್ದರೂ, ಈ ಪ್ರದೇಶದಲ್ಲಿರುವ ಮೃಗಗಳನ್ನು ಕೊಲ್ಲಲು ಇಚ್ಛೆಪಡುವುದಿಲ್ಲ.ನನ್ನ ಮನಸ್ಸಿನಲ್ಲಿ ದಯೆಯು ಬಹಳವಾಗಿ ಹುಟ್ಟಲು ಈ ಪ್ರದೇಶದಲ್ಲಿ ಏನೋ ಮಹಿಮೆಯು ಇರಬೇಕು ಅದರಲ್ಲಿ ಸಂಶಯವಿಲ್ಲ." ಎಂದು ಹೇಳಿದನು.

೧೨-೧೪. ಇಂದ್ರನು ದೇವತೆಗಳ ಸಂಗಡ ಹೀಗೆ ಮಾತನಾಡುತ್ತಾ ಹಾಲಾಸ್ಯ ಕ್ಷೇತ್ರದ ಎಲ್ಲೆಯನ್ನು ಪ್ರವೇಶಿಸಿದನು. ಆ ಕ್ಷಣದಲ್ಲಿಯೇ ಆ ಕ್ಷೇತ್ರದ ಮಹಿಮೆಯಿಂದ ಇತರರನ್ನು ಹೆದರಿಸುವ ಆಕಾರವನ್ನು ಹೊಂದಿರುವ ಕ್ರೂರವಾದ ವೃತ್ರಹತ್ಯೆಯು ಕೊಂಚವೂ ಶಕ್ತಿಯಿಲ್ಲದ್ದಾಯಿತು. ಇಂದ್ರನ ಪಾಪಗಳೊಡನೆ ಸೇರಿಕೊಂಡು ಅವನ ಶರೀರದ ಹೊರಗಡೆ ಬಂದು ಒಂದು ಪ್ರದೇಶದಲ್ಲಿ ನಿಂತುಕೊಂಡಿತು. ಈ ಕ್ಷೇತ್ರದ ಪ್ರಭಾವದಿಂದ ಇಂದ್ರನ ಶರೀರವನ್ನು ಬಿಟ್ಟು ಅದು ನಿಂತಿರುವ ಪ್ರದೇಶವನ್ನು ಈಗಲೂ ವೃತ್ರಹತ್ಯಾಸ್ಥಾನವೆಂದು ಹೇಳುವರು.

ಸದಾ ಸಹಚರಂ ವೃತ್ರವಧೋತ್ಥಂ ಕಲುಷಂ ಸ್ವರಾಟ್ ।
ಅದೃಷ್ಟ್ವಾ ಪರಯಾ ಪ್ರೀತ್ಯಾ ಸಹಿತೋ ಗತಸಾಧ್ವಸಃ ॥ ೧೫ ॥

ಬೃಹಸ್ಪತಿಂ ಚ ಸರ್ವಜ್ಞಂ ವಿಲೋಕ್ಯ ವಿಬುಧೋತ್ತಮಾನ್ ।
ವಿಮುಕ್ತೋಽಹಂ ವಿಮುಕ್ತೋಽಹಂ ಮಹತ್ಯಾ ವೃತ್ರಹತ್ಯಯಾ ॥ ೧೬ ॥

ಶ್ರುತ್ವಾ ವಾಕ್ಯಂ ಮಹೇಂದ್ರಸ್ಯ ಬೃಹಸ್ಪತಿಮುಖಾಮರಾಃ ॥ ೧೭ ॥

ವಿಸ್ಮಿತಾಶ್ಚಾತಿಸಂತುಷ್ಟಾಃ ಪ್ರಾಹುಃ ಸರ್ವೇ ಬಿಡೌಜಸಂ ।
ವಿಶೇಷೋಽಸ್ತೀತಿ ಭವತಾ ವಿಶೇಷಜ್ಞೇನ ಧೀಮತಾ ॥ ೧೮ ॥

ಪ್ರೋಕ್ತಂ ಪುರಾತ್ರ ತದ್ವಾಕ್ಯಂ ಸತ್ಯಂ ನಸ್ಯಾತ್ಕಥಂ ಪ್ರಭೋ ।
ಮೃಗೇಂದ್ರಾಶ್ಚ ಗಜೇಂದ್ರಾಶ್ಚ ಪಕ್ಷೀಂದ್ರಾಃ ಪನ್ನಗಾಸ್ತಥಾ ॥ ೧೯ ॥

---

೧೫-೧೬. ಇಂದ್ರನು ಯಾವಾಗಲೂ ತನ್ನ ಜೊತೆಯಲ್ಲಿಯೇ, ತನ್ನನ್ನು ಹೆದರಿಸುತ್ತಿದ್ದ ವೃತ್ರಹತ್ಯೆಯನ್ನು ಆ ಪ್ರದೇಶದಲ್ಲಿ ಕಾಣದೆ ಬಹಳ ಸಂತೋಷದಿಂದ, ಯಾವ ಭಯವೂ ಇಲ್ಲದಿರುವವನಾದನು. ಆಗ ಸರ್ವಜ್ಞನಾದ ಬೃಹಸ್ಪತಿಯನ್ನೂ ಇತರ ದೇವತೆಗಳನ್ನೂ ನೋಡಿ ಗಂಭೀರವಾದ ಧ್ವನಿಯಿಂದ "ನಾನು ವೃತ್ರಹತ್ಯೆಯಿಂದ ಬಿಡುಗಡೆಯನ್ನು ಹೊಂದಿದೆನು." ಎಂದು ಗಟ್ಟಿಯಾಗಿ ಹೇಳಿದನು. ಮಾತನ್ನು ಕೇಳಿದ ಬೃಹಸ್ಪತಿಯೇ ಮೊದಲಾದವರು ಆಶ್ಚರ್ಯಪಟ್ಟರು. ಮತ್ತು ಸಂತೋಷವನ್ನು ಹೊಂದಿದರು.

೧೭-೧೯. ಅನಂತರದಲ್ಲಿ ಅವರೆಲ್ಲರೂ "ನೀನು ನಮ್ಮೆಲ್ಲರಿಗಿಂತಲೂ ಹೆಚ್ಚು ತಿಳುವಳಿಕೆಯುಳ್ಳವನು. ಆದ್ದರಿಂದಲೇ ಈ ಕ್ಷೇತ್ರದಲ್ಲಿ ಏನೋ ಮಹಿಮೆಯು ಇರುವುದು ಎಂದು, ಹಿಂದೆಯೇ ಹೇಳಿರುತ್ತೀಯೆ. ನಿನ್ನ ವಾಕ್ಯವು ಸತ್ಯವಾದದ್ದು. ದಟ್ಟವಾದ ಈ ಕದಂಬವನದಲ್ಲಿ ಸಿಂಹ, ಆನೆ, ಹಾವು, ಹಕ್ಕಿ, ಹುಲಿ, ಇವೇ ಮುಂತಾದ ಪ್ರಾಣಿಗಳೆಲ್ಲವೂ, ತಮ್ಮ ತಮ್ಮ ವೈರವನ್ನು ಬಿಟ್ಟಿರುವುವು. ಮತ್ತು ಅವುಗಳು ಸ್ನೇಹದಿಂದ ಒಡನಾಡಿಗಳ ಹಾಗೆ ಓಡಾಡುತ್ತಿರುವುದನ್ನು ನಾವು ನೋಡುತ್ತಿರುವೆವು. ಆದ್ದರಿಂದ ಈ ಕದಂಬ ವಿಪಿನವು ಪುಣ್ಯತಮವಾದದ್ದು. ಈ ಚಿಹ್ನೆಗಳಿಂದ ಈ ಕ್ಷೇತ್ರದಲ್ಲಿ ಬಹಳ ಪರಿಶುದ್ಧವಾದ ವಸ್ತುವು ಅವಶ್ಯವಾಗಿ ಇರಬೇಕು." ಎಂದು ಇಂದ್ರನ ಸಂಗಡ ಹೇಳಿದರು.

**ಅನ್ಯೇ ವ್ಯಾಘ್ರಮೃಗಾದ್ಯಾಶ್ಚ ಮುಕ್ತ್ವಾನ್ಯೋನ್ಯವಿರೋಧತಾಂ ।**
**ಸಂಚರಂತಿ ಮಹಾಪುಣ್ಯೇ ಕದಂಬನಿಬಿಡೇ ವನೇ ॥ ೨೦ ॥**

**ತಸ್ಮಾದವಶ್ಯಮತ್ರಾಸ್ತಿ ವಸ್ತು ಚಾತ್ಯಂತಪಾವನಂ ।**
**ದೇವಾಚಾರ್ಯಾದಿದೇವಾನಾಂ ಶ್ರುತ್ವಾ ವಚನಮಾದರಾತ್ ॥ ೨೧ ॥**

**ಕಿಮದ್ಭುತಂ ವಸ್ತು ಚಾತ್ರ ದೇಶೇಸ್ತೀತಿ ವಿಚಾರ್ಯತಾಂ ।**
**ಇತ್ಯುಕ್ತ್ವಾ ಪ್ರೇಷಯಾಮಾಸ ದೇವೇಂದ್ರೋ ದೇವತಾಗಣಾನ್ ॥ ೨೨ ॥**

**ತೇ ಸರ್ವೇ ಪರಿತೋ ಗತ್ವಾ ಸಮ್ಯಗಾಲೋಕ್ಯ ಸರ್ವತಃ ।**
**ದೃಷ್ಟ್ವಾ ತಟಾಕಂ ಗಂಭೀರಂ ಪ್ರಸನ್ನಸಲಿಲಾನ್ವಿತಂ ॥ ೨೩ ॥**

**ಸರ್ವೇ ಸಂಭೂಯತತ್ತೀರೇ ತಿಷ್ಠಂತಿ ವಿಗತಶ್ರಮಾಃ ।**
**ತತ್ತಟಾಕಸ್ಯ ವಾಯವ್ಯೇ ಪ್ರದೇಶೇತ್ಯಂತಪಾವನೇ ॥ ೨೪ ॥**

**ಪುಷ್ಪಿತೈಶ್ಚ ಕದಂಬೈಶ್ಚ ಶ್ರೀವೃಕ್ಷೈಶ್ಚ ವಿರಾಜಿತೇ ।**
**ಶ್ಯಾಮಲಾಃ ಪಂಚವರ್ಣಾಶ್ಚ ಕೋಮಲಾಶ್ಚ ಶುಕಾಃ ಸ್ಥಿತಾಃ ॥ ೨೫ ॥**

---

೨೦–೨೨. ಬೃಹಸ್ಪತಿಯೇ ಮೊದಲಾದ ದೇವತೆಗಳ ಮಾತನ್ನು ಇಂದ್ರನು ಆದರದಿಂದ ಕೇಳಿ, "ಕ್ಷೇತ್ರದ ಯಾವ ಭಾಗದಲ್ಲಿ ಅತ್ಯಾಶ್ಚರ್ಯಕರವಾದ ಆ ವಸ್ತುವು ಇರುವುದು ಅದನ್ನು ಗೊತ್ತುಮಾಡಿರಿ" ಎಂದು ದೇವತೆಗಳಿಗೆ ಅಪ್ಪಣೆಮಾಡಿ ಅದನ್ನು ಹುಡುಕಿ ತಿಳಿಯುವುದಕ್ಕಾಗಿ ಅವರನ್ನು ಕಳುಹಿಸಿಕೊಟ್ಟನು.

೨೩. ಅವರೆಲ್ಲರೂ ಆ ಕ್ಷೇತ್ರದ ಸುತ್ತಲೂ ಎಲ್ಲಾ ಕಡೆಯಲ್ಲಿಯೂ, ಹುಡುಕಿದರು. ಆಗ ಅಲ್ಲಿ ಒಂದು ತಿಳಿಯಾದ ನೀರುಳ್ಳ ಆಳವಾದ ಒಂದು ಕೊಳವನ್ನು ಕಂಡರು ಅದನ್ನು ಕಂಡೊಡನೆಯೇ ಅವರೆಲ್ಲರೂ ಆ ಕೊಳದ ದಡದಲ್ಲಿ ತಮ್ಮ ಆಯಾಸವನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಒಂದು ಕಡೆಯಲ್ಲಿ ಒಟ್ಟಾಗಿ ಸೇರಿದರು. ಅವರು ಶ್ರಮವನ್ನು ಪರಿಹರಿಸಿಕೊಂಡು ಕೊಳದ ವಾಯುವ್ಯದಿಕ್ಕಿನಲ್ಲಿ ಬಹಳ ಪವಿತ್ರವಾದ ಪ್ರದೇಶದಲ್ಲಿ ಒಂದು ತಪೋವನವನ್ನು ನೋಡಿದರು.

೨೪–೨೭. ಆ ತಪೋವನದಲ್ಲಿ ಕದಂಬ ವೃಕ್ಷಗಳೂ, ಶ್ರೀ ವೃಕ್ಷಗಳೂ ಹೂ ಗೊಂಚಲುಗಳಿಂದ ಪ್ರಕಾಶಿಸುತ್ತಿದ್ದವು. ಗಿಣಿಗಳು ಕಪ್ಪುಬಣ್ಣದಿಂದಲೂ, ಐದು ವರ್ಣಗಳಿಂದಲೂ ಕೂಡಿ ಇರುತ್ತಾ, ಶಿವ, ಶಂಭೋ, ಮಹಾದೇವ, ಪರಮೇಶ್ವರ

ಶಿವಶಂಭೋ ಮಹಾದೇವ ಪರಮೇಶ್ವರ ಶಂಕರ ।
ಚಂದ್ರಶೇಖರ ಭೂತೇಶ ಸಾಂಬ ಶ್ರೀಕಂಠ ಶಾಶ್ವತ ॥ ೨೬ ॥

ಆಜ್ಞಯಾ ದೇವದೇವಸ್ಯ ನಾಮಾನ್ಯೇವಂ ವದಂತಿ ಚ ।
ಶ್ರುತ್ವಾ ಶುಕಾನಾಂ ವಚನಂ ತತ್ರ ಗತ್ವಾ ದಿವೌಕಸಃ ॥ ೨೭ ॥

ದೃಷ್ಟ್ವಾ ಶಂಭೋರ್ಮಹಾಲಿಂಗಂ ನೀಪವನ್ಯಾಂತರೋದ್ಗತಂ ।
ಅಮೃತದ್ರವಸಂಯುಕ್ತಂ ನಯನಾನಂದದಾಯಕಂ ॥ ೨೮ ॥

ಅತಿವಿಸ್ಮಯಸಂಯುಕ್ತಾ ಅಭವನ್ದಿವಿ ಷದ್ಗಣಾಃ ।
ಸದ್ಯಃ ಪ್ರಾಪ್ಯ ಮನೋವೇಗಾತ್ಸಹಸ್ರಾಕ್ಷಂ ಪ್ರಣಮ್ಯ ತೇ ॥ ೨೯ ॥

ಇತಿ ವಿಜ್ಞಾಪಯಾಮಾಸುಃ ದೃಷ್ಟಂ ದೃಷ್ಟಂ ಮಹಾದ್ಭುತಂ ।
ನಿಬಿಡೈಃ ನೀಪಬಿಲ್ವೈಶ್ಚ ವನೇಸ್ಮಿನ್ವಾರಿವರ್ಜಿತೇ । ॥ ೩೦ ॥

ಮಹಾತೀರ್ಥಂ ಮಹಾಲಿಂಗಮಸ್ಮಾಭಿಃ ಪರಿದೃಶ್ಯತೇ ।
ಇತಿ ಶ್ರುತ್ವಾ ಮಹೇಂದ್ರೋಽಪಿ ಮಹಾತೀರ್ಥಮವಾಪ್ಯ ಚ ॥ ೩೧ ॥

---

ಶಂಕರ, ಚಂದ್ರಶೇಖರ, ಭೂತೇಶ, ಸಾಂಬ, ಶ್ರೀಕಂಠ, ಶಾಶ್ವತ, ಎಂದು ಪರಮೇಶ್ವರನ ಅಪ್ಪಣೆಯಿಂದ, ಅವನ ಹೆಸರುಗಳನ್ನು ಹೇಳುತ್ತಿದ್ದವು. ಗಿಣಿಗಳ ಈ ಮಾತನ್ನು ಕೇಳಿ, ದೇವತೆಗಳು ಆ ಗಿಣಿಗಳು ಇರುವ ಸ್ಥಳಕ್ಕೆ ಹೋದರು.

೨೮-೩೧. ಅವರು ಕದಂಬವನದ ಮಧ್ಯದಲ್ಲಿ ತಾನಾಗಿ ಉದ್ಭವಿಸಿರುವ ದೊಡ್ಡದಾದ ಲಿಂಗವನ್ನು ನೋಡಿದರು. ಆ ಲಿಂಗದ ಮೇಲುಗಡೆಯಿಂದ ಗಂಗಾ ತೀರ್ಥವು ಬರುತ್ತಿತ್ತು. ಆ ದೇವತೆಗಳಿಗೆ ಅದನ್ನು ಕಂಡ ಕೂಡಲೇ ಬಹಳ ಆಶ್ಚರ್ಯ ವಾಯಿತು. ಕೂಡಲೇ ಅವರು ಮನೋವೇಗದಿಂದ ಇಂದ್ರನ ಹತ್ತಿರಕ್ಕೆ ಓಡಿದರು ಇಂದ್ರನಿಗೆ ನಮಸ್ಕಾರವನ್ನು ಮಾಡಿ, ಬಹಳ ಆಶ್ಚರ್ಯಕರವಾದ ವಸ್ತುವನ್ನು ನಾವು ನೋಡಿದೆವು. ಬಿಲ್ವವೃಕ್ಷ, ನೀಪವೃಕ್ಷಗಳಿಂದ ತುಂಬಿ ನೀರಿಲ್ಲದೆ ಇರುವ ಈ ಕಾಡಿನಲ್ಲ ದೊಡ್ಡದಾದ ತೀರ್ಥವೂ, ಪವಿತ್ರವಾದ ಲಿಂಗವೂ ಇರುವುದು. ಎಂದು ವಿಜ್ಞಾಪನೆ ಯನ್ನು ಮಾಡಿದರು. ಇವರ ಮಾತನ್ನು ಕೇಳಿ, ಇಂದ್ರನು ಸಂತೋಷದಿಂದ ಆ ತೀರ್ಥದ ಹತ್ತಿರಕ್ಕೆ ಬಂದನು.

ಗುರೋರ್ವದನಮಾಲೋಕ್ಯ ಯತ್ಕರ್ತವ್ಯಂ ಮಯಾಧುನಾ ।
ವಕ್ತವ್ಯಂ ತತ್ತ್ವಯಾ ಸರ್ವಂ ಪೃಚ್ಛತೇ ಪ್ರೀತಿಸಂಯುತಃ ॥ ೩೨ ॥

ಬೃಹಸ್ಪತಿಶ್ಚ ಸರ್ವಜ್ಞಸ್ತದಾ ಆಮ್ನಾಯಜಂ ವಿಧಿಂ ।
ಸ್ನಾನಮಸ್ಮಿನ್ಮಹಾತೀರ್ಥೇ ವಿಧಾಯ ವಿಧಿನಾ ಪುರಾ ॥ ೩೩ ॥

ಕಾರಯಿತ್ವಾಸ್ಯ ಲಿಂಗಸ್ಯ ವಿಮಾನಂ ತವ ನಾಮತಃ ।
ಪೂಜಯ ತ್ವಂ ಮಹಾಲಿಂಗಂ ಮಹಾಪಾತಕಶಾಂತಯೇ ॥ ೩೪ ॥

ಗುರೋರನುಜ್ಞಾಂ ಲಬ್ಧ್ವೈವಂ ಮಹಾತೀರ್ಥೇವತೀರ್ಯ ಚ ।
ದೇವಾಚಾರ್ಯೇಣ ದೇವೈಶ್ಚ ಸಹಿತೋ ವೈದಿಕೈಃ ಪರೈಃ ॥ ೩೫ ॥

ಮಂತ್ರೈರೇನೋಹರೈಸ್ಸಮ್ಯಕ್ ಸ್ನಾತ್ವಾ ಸಂಕಲ್ಪಪೂರ್ವಕಂ ।
ಭಸ್ಮೋದ್ಧೂಳಿತಗಾತ್ರಸ್ಸನ್ನಿತ್ಯಕೃತ್ಯಂ ಸಮಾಪ್ಯ ಚ ॥ ೩೬ ॥

---

೩೨–೩೪ ಗುರುವಿನ ಮುಖವನ್ನು ನೋಡಿ, “ ಈಗ ನಾನು ಮಾಡಬೇಕಾಗಿರುವುದನ್ನು ನನಗೆ ತಿಳಿಸು. ” ಎಂದು ಹೇಳಿದ ಇಂದ್ರನ ಮಾತನ್ನು ಕೇಳಿ ಸರ್ವಜ್ಞನಾದ ಗುರುವು “ ಶಾಸ್ತ್ರದಲ್ಲಿ ಹೇಳಿದ ಕ್ರಮದಿಂದ ಈ ತೀರ್ಥದಲ್ಲಿ ಸ್ನಾನವನ್ನು ಮಾಡು. ಅನಂತರ ಈ ಶಿವಲಿಂಗಕ್ಕೆ ನಿನ್ನ ಹೆಸರಿನಿಂದ ವಿಮಾನವನ್ನು ಸ್ಥಾಪಿಸು. ನಿನ್ನ ಪಾತಕವು ಹೋಗುವುದಕ್ಕಾಗಿ ಈ ಶಿವಲಿಂಗವನ್ನು ಪೂಜಿಸು ” ಎಂದು ಹೇಳಿದನು.

೩೫–೩೬ ಇಂದ್ರನು ಬೃಹಸ್ಪತಿಯ ಈ ಪ್ರಕಾರವಾದ ಅನುಜ್ಞೆಯನ್ನು ವಹಿಸಿ ಪವಿತ್ರಕರವಾದ ಆ ತೀರ್ಥದಲ್ಲಿ ಇಳಿದು, ಸಂಕಲ್ಪಪೂರ್ವಕವಾಗಿ ಪಾಪನಾಶಕಗಳಾದ ಮಂತ್ರಗಳನ್ನು ಹೇಳುತ್ತಾ ಚೆನ್ನಾಗಿ ಸ್ನಾನವನ್ನು ಮಾಡಿದನು. ದೇವತೆಗಳೂ, ಬೃಹಸ್ಪತಿಯೂ, (ಇತರ ವೈದಿಕರೂ) ಇತರ ಋಷಿಗಳೂ ಎಲ್ಲರೂ ಇವನಂತೆಯೇ ಸ್ನಾನ ಮಾಡಿದರು.

ದದರ್ಶ ಮೂಲಲಿಂಗಂ ತತ್ಸ್ವಯಂಭೂತಂ ಪುರಂದರಃ ।
ದೃಷ್ಟಮಾತ್ರೇಣ ಲಿಂಗಸ್ಯ ವೃತ್ರಹತ್ಯಾ ಬಹಿಸ್ಸ್ಥಿತಾ ॥ ೩೭ ॥

ನಾಶಮಾಯಾತಿ ಸಹಸಾ ಕಾಲಾಗ್ನೌ ತೂಲಲೇಶವತ್ ।
ದೇವೇಂದ್ರವಿಗ್ರಹೇ ಯಸ್ತು ಪಾಪಭಾರೋ ಮಹಾಂಸ್ಥಿತಃ ॥ ೩೮ ॥

ಸೋಽಪಿ ನಶ್ಯತಿ ತತ್ಕಾಲೇ ಮೂಲನಾಶೇನ ವೃಕ್ಷವತ್ ।
ತತಸ್ತುಷ್ಟಸ್ಸುರಾಧೀಶೋ ವೃತ್ರಹತ್ಯಾವಿವರ್ಜಿತಃ ॥ ೩೯ ॥

ವಿಶ್ವಕರ್ಮಾಣಮಾಹೂಯ ವಿಮಾನಂ ದಿವ್ಯಮದ್ಭುತಂ ।
ಮಹಾಲಿಂಗಸ್ಯ ಚ ಕೃತೇ ಸಹಸಾ ಕಲ್ಪ್ಯತಾಂ ತ್ವಯಾ ॥ ೪೦ ॥

ಇತ್ಯಾಜ್ಞಾಪ್ಯ ಚ ಸುಸ್ನಾತಾನ್ಮಹಾತೀರ್ಥೇ ಸುರೋತ್ತಮಾನ್ ।
ಸಮಾಹರ್ತುಂ ಪ್ರಸೂನಾನಿ ಪ್ರೇಷಯಿತ್ವಾ ಬಹೂನಿ ಚ । ॥ ೪೧ ॥

ಛೇದಯಿತ್ವಾ ಚ ಪರಿತೋ ವನಾನಿ ಸುಬಹೂನಿ ಚ ॥
ದರ್ಪಣೋದರವದ್ಭೂಮಿಂ ಕಾರಯಿತ್ವಾ ಸಮಂತತಃ ॥ ೪೨ ॥

---

೩೭–೩೯ ಅನಂತರದಲ್ಲಿ ಇಂದ್ರನು ತನ್ನ ಶರೀರಕ್ಕೆ ಭಸ್ಮೋದ್ಧೂಳನೆಯನ್ನು ಮಾಡಿಕೊಂಡು, ತನ್ನ ನಿತ್ಯಕರ್ಮವನ್ನು ಮುಗಿಸಿಕೊಂಡನಂತರ, ಸ್ವಯಂ ಉದ್ಭವಿಸಿರುವ ಆ ಶಿವಲಿಂಗವನ್ನು ದರ್ಶನ ಮಾಡಿದನು. ಶಿವಲಿಂಗವನ್ನು ಇವನು ದರ್ಶನ ಮಾಡಿದ ಕ್ಷಣದಲ್ಲಿಯೇ ಹೊರಗಡೆಯಲ್ಲಿದ್ದ ವೃತ್ರಹತ್ಯೆಯು, ಅಗ್ನಿಯಲ್ಲಿ ಬಿದ್ದ ಹತ್ತಿಯಂತೆ ನಾಶವಾಯಿತು. ಇದಕ್ಕೆ ಮೊದಲು ಇಂದ್ರನ ಶರೀರದಲ್ಲಿ ಬಹಳ ಭಾರವು ಅವನಿಗೆ ಕಂಡು ಬರುತ್ತಿತ್ತು. ಬುಡವು ಹೋದ ಮರದಂತೆ ವೃತ್ರಹತ್ಯೆಯು ಹೋದನಂತರ ಇವನ ಶರೀರದಲ್ಲಿ ಆ ಭಾರವು ಇಲ್ಲದೆ ಶರೀರವು ಹೂವಿನಂತೆ ಲಘುವಾಯಿತು.

೪೦–೪೧ ಇದರಿಂದ ದೇವಾಧಿಪನಾದ ಇಂದ್ರನು ಸಂತೋಷಗಿಂದ ವಿಶ್ವಕರ್ಮನನ್ನು ಕರೆದು “ ಈ ಶಿವಲಿಂಗಕ್ಕೆ ತಕ್ಕ ವಿಮಾನವನ್ನು ನೀನು ಬೇಗನೆ ನಿರ್ಮಿಸು.” ಎಂದು ಅವನಿಗೆ ಅಪ್ಪಣೆಯನ್ನು ಮಾಡಿ, ಆ ಮಹಾತೀರ್ಥದಲ್ಲಿ ಸ್ನಾನ ಮಾಡಿರುವ ದೇವತೆಗಳನ್ನು, ಶಿವಲಿಂಗವನ್ನು ಪೂಜಿಸಲು ಹೂವುಗಳನ್ನು ತರುವುದಕ್ಕಾಗಿ ಕಳುಹಿಸಿದನು.

೪೨–೪೪ ಆ ಶಿವಲಿಂಗದ ಸುತ್ತಲೂ ಇರುವ ದಟ್ಟವಾದ ಕಾಡುಗಳನ್ನು ಕಡಿದು, ಭೂಮಿಯೆಲ್ಲವನ್ನೂ ಕನ್ನಡಿಯಂತೆ ಸರಿಮಾಡಿದನು. ಪುನಃ ಆ ಸ್ವಯಂ

**ಪುನಃ ಪುನಶ್ಚ ಸಂವೀಕ್ಷ್ಯ ಲಿಂಗಂ ಸ್ವಾಯಂಭುವಂ ಮಹತ್ ।**
**ಆತ್ಮೀಯ ಮಾತಪತ್ರಂ ಚ ಮಹಾಲಿಂಗಸ್ಯ ಮಸ್ತಕೇ ॥ ೪೩ ॥**

**ಸ್ವಯಂ ಧರ್ತುಂ ಸಮುದ್ಯುಕ್ತೋ ಯಾವದಾತಪಶಾಂತಯೇ ।**
**ತಾವದ್ವಿಮಾನಂ ಸಂಪ್ರಾಪ್ತಂ ವಿಹಿತಂ ವಿಶ್ವಕರ್ಮಣಾ ॥ ೪೪ ॥**

**ದ್ವಿತೀಯಮಿವ ಹೇಮಾದ್ರಿಂ ಸುರೈಸ್ಸರ್ವೈರಧಿಷ್ಠಿತಂ ।**
**ಗಜಾಷ್ಟಕೈರ್ದಂತಿಸಿಂಹೈಶ್ಚತುಷಷ್ಟಿಗಣೇಶ್ವರೈಃ ॥ ೪೫ ॥**

**ಸರ್ವೈಃ ಕಥಂಚಿದ್ವಿಧೃತಂ ಸರ್ವರತ್ನೈರ್ವಿಚಿತ್ರಿತಂ ।**
**ಉದ್ಯತ್ಪ್ರಭಾಕರನಿಭೈರ್ಹೇಮಕುಂಭೈರ್ವಿರಾಜಿತಂ ॥ ೪೬ ॥**

**ವೃಷಾಂಕಿತೇನ ಮಹತಾ ಧ್ವಜೇನ ಪರಿಶೋಭಿತಂ ।**
**ವಿತಾನಮುಕ್ತಾಮಾಲಾಭಿಃ ಪತಾಕಾಕಿಂಕಿಣೀಗಣೈಃ ॥ ೪೭ ॥**

**ಛತ್ರೈಶ್ಚ ಚಾಮರೈರ್ದಿವ್ಯೈಸ್ಸಮಲಂಕೃತಮದ್ಭುತಂ ।**
**ವಿಲೋಕ್ಯ ವಿಸ್ಮಿತೋ ಭೂತ್ವಾ ವಿಮಾನಂ ವಿಬುಧೇಶ್ವರಃ ॥ ೪೮॥**

---

ಭೂಲಿಂಗವನ್ನು ದರ್ಶನ ಮಾಡಿ, ಅದರ ಮೇಲುಗಡೆಗೆ ಬಿಸಿಲು ಬೀಳದಂತೆ ತನ್ನ ಶ್ವೇತ ಛತ್ರವನ್ನು ಹಿಡಿಯಲು ಉದ್ಯುಕ್ತನಾಗುವ ವೇಳೆಗೆ ಸರಿಯಾಗಿ ವಿಶ್ವಕರ್ಮನು ವಿಮಾನವನ್ನು ಸಿದ್ಧಮಾಡಿ ಅಲ್ಲಿಗೆ ತಂದನು.

೪೫–೪೭ ಆ ವಿಮಾನವು ಎರಡನೆಯ ಮೇರುಪರ್ವತದಂತೆ ಇತ್ತು. ಅದರಲ್ಲಿ ದೇವತೆಗಳೆಲ್ಲರ ಪ್ರತಿಮೆಗಳೂ, ಎಂಟು ಆನೆಗಳೂ, ಸಿಂಹಗಳೂ, ಅರವತ್ತುನಾಲ್ಕು ಜನ ಗಣೇಶ್ವರರೂ ಪ್ರಕಾಶಿಸುತ್ತಿದ್ದರು. ಇವರೆಲ್ಲರೂ ವಿಮಾನವನ್ನು ಧರಿಸಿರುವಂತೆ ವಿಶ್ವಕರ್ಮನು ನಿರ್ಮಿಸಿದ್ದನು. ಎಲ್ಲಾ ವಿಧವಾದ ರತ್ನಗಳೂ ಇದರಲ್ಲಿ ಅಲ್ಲಲ್ಲಿ ಹೊಳೆಯುತ್ತಿದ್ದವು. ವಿಮಾನದಲ್ಲಿ ವೃಷಭದ ಚಿಹ್ನೆಯಿಂದ ಕೂಡಿದ ಧ್ವಜಪಟವು ಅಲಂಕಾರವಾಗಿತ್ತು. ಈ ವಿಮಾನವು ಮೇಲುಕಟ್ಟು, ಮುತ್ತಿನಸರಗಳು, ಬಾವುಟಗಳು, ಕಿರುಗಂಟೆಗಳು, ಛತ್ರ, ಚಾಮರ, ಇವೆಲ್ಲದರಿಂದಲೂ ಪ್ರಕಾಶಸುತ್ತಿದ್ದಿತು. ಈ ಪ್ರಕಾರದಿಂದ ಇರುವ ವಿಮಾನವನ್ನು ಇಂದ್ರನು ನೋಡಿ ಆಶ್ಚರ್ಯಪಟ್ಟನು.

೪೮–೫೧ ಬೃಹಸ್ಪತಿಯು ಈ ವಿಮಾನವನ್ನು ಸ್ಥಾಪನೆ ಮಾಡುವುದಕ್ಕೆ ಉತ್ತಮವಾದ ಮುಹೂರ್ತ, ಲಗ್ನ ಇವುಗಳನ್ನು ತಿಳಿಸಿದನು. ಆ ವೇಳೆಗೆ ಸರಿಯಾಗಿ

ಸುಮುಹೂರ್ತೇ ಗುರೂಕ್ತೇ ತು ಸ್ಥಾಪಯಾಮಾಸ ತತ್ಸ್ಥಲೇ ।
ಅಥ ದೇವೇಂದ್ರವಚನಾದ್ವಿಶ್ವಕರ್ಮಾ ಚ ತತ್ಕ್ಷಣೇ ॥ ೪೯ ॥

ಪ್ರಾಕಾರಾಣಾಂ ಪಂಚಕಂ ಚ ಮಂಟಪಾನಿ ಬಹೂನಿ ಚ ।
ಗೋಪುರಾಣಿ ಚ ಸರ್ವಾಣಿ ದೇವೀಪ್ರಾಸಾದಮುತ್ತಮಂ ॥ ೫೦ ॥

ಆಲಯಂ ಪರಿವಾರಾಣಾಂ ವಿವಿಧಾಃ ಪ್ರತಿಮಾ ಅಪಿ ।
ಸೋಪಾನಪಂಕ್ತಿಂ ತೀರ್ಥಸ್ಯ ನಿರ್ಮಮೇ ತಪಸೋ ಬಲಾತ್ ॥ ೫೧ ॥

ಪ್ರಸೂನಾಹರಣಾರ್ಥಂ ಚ ಯೇ ದೇವಾಸ್ತೇನ ಚೋದಿತಾಃ ।
ಅಲಬ್ಧಾನಿ ಪ್ರಸೂನಾನೀತ್ಯುಕ್ತ್ವಾ ಸರ್ವೇ ಸಮಾಗತಾಃ ॥ ೫೨ ॥

ತಾರ್ಪ್ರತ್ಯಾಹ ಸಹಸ್ರಾಕ್ಷೋ ಮಹಾಲಿಂಗಾರ್ಚನೋತ್ಸುಕಃ ।
ಭವಂತೋದ್ಯ ದಿವಂ ಗತ್ವಾ ಗಂಧಪುಷ್ಪಾಕ್ಷತಾದಿಕಂ ॥ ೫೩ ॥

ಹಿರಣ್ಮಯಾನಿ ಪಾತ್ರಾಣಿ ಪಾದ್ಯಾದಿಸ್ಥಾಪನಾಯ ಚ ।
ಗೃಹೀತ್ವಾ ಯಾಂತು ಶೀಘ್ರೇಣ ಭೂಷಣಾನ್ಯಂಬರಾಣಿ ಚ ॥ ೫೪ ॥

ಇತ್ಯಾಜ್ಞಾಪ್ಯ ಸ್ವಯಮಪಿ ಪ್ರವಿಶ್ಯ ಗಹನಾನಿ ಚ ।
ವಿಲೋಕ್ಯಾಕ್ಷ್ಣಾಂ ಸಹಸ್ರೇಣ ನ ದೃಷ್ಟ್ವಾ ಕುಸುಮಾನ್ಯಪಿ ॥ ೫೫ ॥

---

ಇಂದ್ರನು ಆ ವಿಮಾನವನ್ನು ಅಲ್ಲಿ ಸ್ಥಾಪನೆ ಮಾಡಿದನು. ಇದನ್ನು ನೋಡಿ ವಿಶ್ವಕರ್ಮನು ಐದು ಪ್ರಕಾರಗಳು, ಅಲ್ಲಲ್ಲಿಗೆ ಮಂಟಪಗಳು, ಎಲ್ಲಾ ಗೋಪುರಗಳು ದೇವಿಯು ಪ್ರಾಸಾದ, ಪರಿವಾರ ದೇವತೆಗಳಿಗೆ ವಾಸಸ್ಥಾನ,ಅನೇಕ ವಿಧವಾದ ಪ್ರತಿಮೆಗಳು, ತೀರ್ಥದ ಕೊಳಕ್ಕೆ ಸೋಪಾನಗಳು, ಇವೆಲ್ಲವನ್ನೂ ತನ್ನ ತಪಸ್ಸಿನ ಬಲದಿಂದ ನಿರ್ಮಿಸಿದನು.

೫೨–೫೫ ಹೂವುಗಳನ್ನು ತರುವುದಕ್ಕಾಗಿ ಕಳುಹಿಸಿದ್ದ ದೇವತೆಗಳು,ಹೂವುಗಳು ಯಾವುದೂ ಸಿಕ್ಕಲಿಲ್ಲವೆಂದು ಇಂದ್ರನ ಸಂಗಡ ತಿಳಿಸಿದರು. ಆ ಮಹಾಲಿಂಗವನ್ನು ಪೂಜೆಮಾಡಲು ಕುತೂಹಲಾವಿಷ್ಟನಾಗಿರುವ ಇಂದ್ರನು ಗಂಧ, ಪುಷ್ಪ, ಅಕ್ಷತೆ ಇವೇ ಮೊದಲಾದ ಪೂಜಾದ್ರವ್ಯಗಳನ್ನೂ,ವಸ್ತ್ರಾಭರಣಗಳನ್ನೂ ಅರ್ಘ್ಯಾದಿಗಳನ್ನೂ, ಇಡುವುದಕ್ಕೆ ಬಂಗಾರದ ಪಾತ್ರೆಗಳನ್ನೂ ಕೂಡ ಸ್ವರ್ಗದಿಂದ ಬೇಗನೆ ತರಬೇಕೆಂದು ದೇವತೆಗಳಿಗೆ ಅಪ್ಪಣೆಯನ್ನು ಮಾಡಿ, ಪೂಜೆಗಾಗಿ ಹೂವನ್ನು ತರಲು ತಾನೇ ಕಾಡಿಗೆ ಹೋದನು. ಅಲ್ಲಿ ಅವನು ತನ್ನ ಸಾವಿರ ಕಣ್ಣುಗಳಿಂದಲೂ ಹೂವನ್ನು ಹುಡುಕಿದರೂ, ಯಾವ ಹೂವು ಸಿಕ್ಕಲಿಲ್ಲ. ಆಗ ಅವನು ಬಹಳ ಆಯಾಸದಿಂದ ಆ ತೀರ್ಥದ ತೀರಕ್ಕೆ ಬಂದನು.

ಶ್ರಾಂತ್ವಾ ಮಹತ್ಯಾ ಸಂಯುಕ್ತಸ್ತೀರ್ಥತೀರಂ ಸಮಾಯಯೌ ।
ಅತ್ಮಾರ್ಚನೇಚ್ಛಿತಾತ್ಸರ್ಯೋತ್ಭ್ರಾಂತಸ್ಯಾಪಿ ಬಿಡೌಜಸಃ ॥ ೫೬ ॥

ಸುಂದರೇಶಕೃಪಾ ತತ್ರ ಸ್ವರ್ಣಪದ್ಮಾನ್ಯದರ್ಶಯತ್ ।
ಉತ್ಫುಲ್ಲಸ್ವರ್ಣಪದ್ಮಂ ತತ್ತಟಾಕಂ ವೀಕ್ಷ್ಯ ವಿಸ್ಮಿತಃ ॥ ೫೭ ॥

ಹೇಮಪದ್ಮಾಕರಮಿತಿ ತೀರ್ಥನಾಮ ವಿಧಾಯ ಚ ।
ಪದ್ಮಾನ್ಯಾದಾಯ ಸಹಸಾ ಸ್ವಹಸ್ತೇನ ಪುರಂದರಃ ॥ ೫೮ ॥

ಯಾವಲ್ಲಿಂಗಸಮೀಪಂ ಚ ಪ್ರಾಪ್ತಸ್ತಾವದ್ದಿವೌಕಸಃ ।
ಆಯಾಂತಿ ಜಿಷ್ಣುನೋಕ್ತಾನಿ ಪೂಜಾದ್ರವ್ಯಾಣಿ ಯಾನಿ ಚ ॥ ೫೯ ॥

ಗೃಹೀತ್ವಾ ತಾನಿ ಸರ್ವಾಣಿ ವಾಯುವೇಗ ಸಮನ್ವಿತಾಃ ।
ವಾಚಸ್ಪತಿವಿಧಾನಜ್ಞೈರ್ದೇವೈರ್ದಿವ್ಯೈರ್ಮುನೀಶ್ವರೈಃ ॥ ೬೦ ॥

ಜ್ಞಾನಶಕ್ತಿಮಯೇ ಲಿಂಗೇ ಕ್ರಿಯಾಶಕ್ತಿಸ್ವರೂಪಿಣೀಂ ।
ಪೀಠಿಕಾಂ ವಿಧಿನಾ ಯೋಜ್ಯ ವಿಶ್ವಕರ್ಮವಿನಿರ್ಮಿತಾಂ ॥ ೬೧ ॥

ದೇವ್ಯಾಶ್ಚ ಪರಿವಾರಾಣಾಂ ಪ್ರತಿಮಾನಾಂ ಮಹೇಶಿತುಃ ।
ಪ್ರತಿಷ್ಠಾಂ ಕಾರಯಿತ್ವಾಥ ಮಹಾಲಿಂಗಸ್ಯ ಸನ್ನಿಧೌ ॥ ೬೨ ॥

---

೫೬–೫೮. ಆ ಪ್ರದೇಶದಲ್ಲಿ ಪರಮಾತ್ಮನನ್ನು ಅರ್ಚನೆ ಮಾಡಲು ಬಹಳ ಆಸೆಯಿಂದ ಇರುವ ಇಂದ್ರನಿಗೆ, ಸುಂದರೇಶ್ವರನ ಕೃಪೆಯು ಆ ತೀರ್ಥದಲ್ಲಿ ಚಿನ್ನದ ಪದ್ಮಗಳನ್ನು ತೋರಿಸಿತು ಅರಳಿರುವ ಆ ಚಿನ್ನದ ತಾವರೆ ಹೂವುಗಳಿಂದ ತುಂಬಿರುವ ಆ ತಟಾಕವನ್ನು ಇಂದ್ರನು ನೋಡಿ, ಆಶ್ಚರ್ಯಪಡುತ್ತಾ, ಆ ಕೊಳಕ್ಕೆ ಹೇಮಪದ್ಮಾಕರವೆಂದು ಹೆಸರನ್ನು ಇರಿಸಿ ಕೆಲವು ಪದ್ಮಗಳನ್ನು ಕಿತ್ತು ಪೂಜೆಗಾಗಿ ತಂದನು. ಅವನು ಶಿವಲಿಂಗದ ಹತ್ತಿರಕ್ಕೆ ಬರುವುದರೊಳಗಾಗಿ, ಪೂಜಾಸಾಮಗ್ರಿಗಳನ್ನು ತರಲು ಸ್ವರ್ಗಕ್ಕೆ ಹೋಗಿದ್ದ ದೇವತೆಗಳೆಲ್ಲರೂ ಅದನ್ನು ತೆಗೆದುಕೊಂಡು ವಾಯುವೇಗದಿಂದ ಇವನ ಹತ್ತಿರಕ್ಕೆ ಬಂದರು.

೫೯–೬೨. ಬೃಹಸ್ಪತಿಯು ಹೇಳುವ ಪೂಜಾಕ್ರಮವನ್ನು ತಿಳಿದಿರುವ ದೇವತೆಗಳೂ, ಮತ್ತು ಋಷಿಶ್ರೇಷ್ಠರೂ, ಇಬ್ಬರೂ ಸೇರಿ ಕ್ರಿಯಾ ಶಕ್ತಿರೂಪದಿಂದ ಇರುವ ಪೀಠದಲ್ಲಿ ಜ್ಞಾನಶಕ್ತಿ ಮಯವಾದ ಶಿವಲಿಂಗವನ್ನು ಇರಿಸಿ, ವಿಶ್ವಕರ್ಮನು ತಂದಿರುವ ವಿಮಾನಗತವಾದ ಪ್ರತಿಮೆಗಳಲ್ಲಿ ದೇವಿಯು ಮತ್ತು ಮಹೇಶ್ವರನ ಪರಿವಾರ ದೇವತೆಗಳ ಪ್ರತಿಮೆಗಳನ್ನು ಪ್ರತಿಷ್ಠೆ ಮಾಡಿದರು.

ಶ್ರುತೀರಿತಾನಿ ಸೂಕ್ತಾನಿ ರೌದ್ರಾಣಿ ಸಕಲಾನಿ ಚ ।
ಉಚ್ಚೈರುಚ್ಚೈರತಿಶ್ರದ್ಧಾಭಕ್ತಿಭ್ಯಾಂ ಮುನಿಪುಂಗವೈಃ ॥ ೬೩ ॥

ಗಾನೈಶ್ಚ ವಾದ್ಯಘೋಷೈಶ್ಚ ನೃತ್ಯಂತ್ಯಪ್ಸರಸಸ್ತಥಾ ।
ದೇವೇಂದ್ರೋಽಪಿ ಮಹಾಲಿಂಗಂ ಗವ್ಯೈಃ ಪಂಚಾಮೃತೈರಪಿ ॥ ೬೪ ॥

ಅಭಿಷಿಚ್ಯ ವಿಧಾನೇನ ಶುದ್ಧೈಸ್ತೀರ್ಥಜಲೈರಪಿ ।
ದಿವ್ಯೈಶ್ಚ ಭೂಷಣೈರ್ವಸ್ತ್ರೈಃ ಗಂಧೈಸ್ಸೌವರ್ಣಪಂಕಜೈಃ ॥ ೬೫ ॥

ಪಾರಿಜಾತಪ್ರಸೂನೈಶ್ಚ ಧೂಪೈರ್ದೀಪೈರ್ವಿಶೇಷತಃ ।
ನೈವೇದ್ಯೈರಪಿ ತಾಂಬೂಲೈರ್ಭಕ್ತ್ಯಾ ಪೂಜಾಂ ವಿಧಾಯ ಚ ॥ ೬೬ ॥

ಪ್ರದಕ್ಷಿಣಾನಿ ಕುರ್ವಾಣಃ ಪ್ರಣಿಪತ್ಯ ಮುಹುರ್ಮುಹುಃ ।
ಉತ್ಥಾಯ ಲಿಂಗಮಾಲೋಕ್ಯ ಸೌಂದರ್ಯಾತಿಶಯಾನ್ವಿತಂ ॥ ೬೭ ॥

ಅಸ್ಮಿನ್ ಲಿಂಗವರೇ ಯಸ್ತು ಸನ್ನಿಧತ್ತೇ ಸದಾ ಶಿವಃ ।
ಸುಂದರೇಶ ಇತಿ ಪ್ರೋಚ್ಚೈರುಚರನ್ನಾಮ ಚಾಕರೋತ್ ॥ ೬೮ ॥

---

೬೩-೬೬. ಅನಂತರದಲ್ಲಿವೇದಗತವಾದ ರುದ್ರಸೂಕ್ತವೇ ಮೊದಲಾದ ಸೂಕ್ತಗಳನ್ನು ಆದರ, ಮತ್ತು ಭಕ್ತಿಗಳಿಂದ ಗಟ್ಟಿಯಾಗಿ ಹೇಳುತ್ತಾ ಆ ಮಹಾಲಿಂಗಕ್ಕೆ ಅಭಿಷೇಕವನ್ನು ಮಾಡಿದರು. ಆ ಕಾಲದಲ್ಲಿ ಗಾನವೂ ನಡೆಯುತ್ತಿತ್ತು. ವಾದ್ಯಘೋಷಗಳು ಕೇಳಿ ಬರುತ್ತಿದ್ದವು. ಅಪ್ಸರ ಸ್ತ್ರೀಯರು ನರ್ತನವನ್ನು ಮಾಡುತ್ತಿದ್ದರು. ಇಂದ್ರನೂ ಕೂಡ ಆ ಮಹಾಲಿಂಗವನ್ನು ಪಂಚಾಮೃತ ದ್ರವ್ಯಗಳಿಂದಲೂ ಅಭಿಷೇಕ ಮಾಡಿದನು. ಉತ್ತಮವಾದ ಆಭರಣಗಳು, ವಸ್ತ್ರಗಳು, ಗಂಧ, ಚಿನ್ನದ ತಾವರೆ ಹೂವುಗಳು, ಪಾರಿಜಾತ ಪುಷ್ಪ ಇವುಗಳಿಂದ ಶಿವಲಿಂಗವನ್ನು ಪೂಜಿಸಿದನು. ಧೂಪ ದೀಪ ಇವುಗಳನ್ನೂ, ನೈವೇದ್ಯ ತಾಂಬೂಲಗಳನ್ನೂ ಅರ್ಪಿಸಿದನು.

೬೭-೬೮. ಅನಂತರದಲ್ಲಿ ಇಂದ್ರನು ಪ್ರದಕ್ಷಿಣೆಯನ್ನು ಮಾಡಿ,ಬಾರಿ ಬಾರಿಗೂ ನಮಸ್ಕರಿಸಿ ಆ ಮೂಲ ಲಿಂಗವು ಬಹಳ ಸುಂದರವಾಗಿರುವುದನ್ನು ನೋಡಿ“ ಈ ಶಿವಲಿಂಗದಲ್ಲಿ ಯಾವಾಗಲೂ ಸನ್ನಿಧಾನವನ್ನು ಕಲ್ಪಿಸಿರುವ ಶಿವನು ಸುಂದರೇಶ್ವರನಾಗಿರುವನು, ” ಎಂದು ಗಟ್ಟಿಯಾಗಿ ಹೇಳಿ ಆ ಶಿವಲಿಂಗಕ್ಕೆ ಹೆಸರನ್ನು ಇರಿಸಿದನು.

ತತೋ ವಿಲೋಕಯಾಮಾಸ ಮಧ್ಯೇ ಲಿಂಗಂ ಪುರಂದರಃ ।
ತರುಣಾರುಣಸಂಕಾಶಂ ಕರುಣಾವರುಣಾಲಯಂ ॥ ೬೯ ॥

ಸ್ವನಾಮಧೇಯಸದೃಶಂ ಸೌಂದರ್ಯೇಣ ಸಮನ್ವಿತಂ ।
ಪರಶುಂ ಚ ಮೃಗಂ ಹಸ್ತೈರ್ದಧಾನಂ ವರದಾ ಭಯೇ ॥ ೭೦ ॥

ಸ್ವರ್ಧುನೀಚಂದ್ರಶಕಲಾವಿರಾಜಿತಕಿರೀಟಕಂ ।
ಹಾರಕುಂಡಲಕೇಯೂರಕಟಕಾದಿವಿಭೂಷಣೈಃ ॥ ೭೧ ॥

ವಿಭೂಷಿತಂ ಮಹಾದೇವಂ ತ್ರಿನೇತ್ರಂ ಸುಸ್ಮಿತಾನನಂ ।
ದಿವ್ಯಾಂಬರಧರಂ ದಿವ್ಯಗಂಧಪುಷ್ಪೈರಲಂಕೃತಂ ॥ ೭೨ ॥

ಯುವತ್ಯಾ ಸಹಿತಂ ದೇವ್ಯಾ ಯುವಾನಂ ಸೋಮಸುಂದರಂ ।
ತಮಾಲೋಕ್ಯ ಸ್ತುತಿಂ ಚಕ್ರೇ ಭಕ್ತ್ಯಾ ಗದ್ಗದಯಾ ಗಿರಾ ॥ ೭೩ ॥

ಏಕಂ ಬ್ರಹ್ಮಾ ದ್ವಿತೀಯಂ ಚ ಪರಿಪೂರ್ಣಂ ಪರಾತ್ಪರಂ ।
ಇತಿ ಯೋ ಗೀಯತೇ ವೇದೈಸ್ತಂ ವಂದೇ ಸೋಮಸುಂದರಂ ॥ ೭೪ ॥

---

೬೯-೭೩. ಅನಂತರದಲ್ಲಿ ಇಂದ್ರನು ಆ ಶಿವಲಿಂಗದ ಮಧ್ಯದಲ್ಲಿ ಚೆನ್ನಾಗಿ ನೋಡಿದನು. ಆಗ ಅವನು ಎಳೆಯ ಸೂರ್ಯನ ಕಾಂತಿಯಿಂದ ಕೂಡಿಕೊಂಡು ಅಪಾರವಾದ ದಯೆಯುಳ್ಳವನಾದ, ಶಿವನು ತಾನು ಶಿವಲಿಂಗಕ್ಕೆ ಇರಿಸಿದ ಹೆಸರಿಗೆ ಅನುಸಾರವಾಗಿ ಸುಂದರವಾಗಿರುವುದನ್ನು ನೋಡಿದನು. ಆ ಸುಂದರೇಶ್ವರನು ವರದ, ಅಭಯಹಸ್ತಗಳಿಂದಲೂ, ಪರಶು, ಮೃಗ, ಇವುಗಳನ್ನು ಧರಿಸಿ ಇರುವ ಹಸ್ತಗಳಿಂದಲೂ, ದೇವಗಂಗಾ, ಚಂದ್ರಕಲಾ, ಇವುಗಳಿಂದ ಕೂಡಿರುವ ಕಿರೀಟವುಳ್ಳವನಾಗಿ ಹಾರ, ಕುಂಡಲ, ಕೇಯೂರ, ಕಟಕ ಇವೇ ಮೊದಲಾದ ಆಭರಣಗಳಿಂದ ಪ್ರಕಾಶಿಸುತ್ತಿದ್ದನು. ದಿವ್ಯಾಂಭರಧರನಾಗಿ, ದಿವ್ಯಗಂಧ, ಪುಷ್ಪಗಳಿಂದ ಒಪ್ಪುತ್ತಾ ತ್ರಿಣೇತ್ರನಾಗಿರುವ ದೇವನ ಪಾರ್ಶ್ವದಲ್ಲಿ ದೇವಿಯು ಪ್ರಕಾಶಿಸುತ್ತಿದ್ದಳು. ಈ ಸೋಮಸುಂದರೇಶ್ವರನನ್ನು ನೋಡಿ, ಇಂದ್ರನು ಭಕ್ತಿಯಿಂದ, ಗದ್ಗದವಾದ ಧ್ವನಿಯಿಂದ ಸ್ತುತಿಮಾಡಿದನು.

೭೪-೭೭. ಇಂದ್ರನು ಹೇಳಿದನು:— ವೇದಗಳು, " ಅದ್ವಿತೀಯನಾದ ಬ್ರಹ್ಮನು, ಪರಿಪೂರ್ಣನಾಗಿ ಎಲ್ಲಕ್ಕಿಂತಲೂ ಶ್ರೇಷ್ಠನಾಗಿ ಇರುವನು; " ಎಂದು ಹೇಳುವವು. ಈ ಸುಂದರೇಶ್ವನೇ ಈ ಪ್ರಕಾರದಿಂದ ಇರುವುದರಿಂದ ಈ ದೇವನಿಗೆ ನಮಸ್ಕಾರಮಾಡುವೆನು.

॥ ಇಂದ್ರ ಉವಾಚ ॥

ಜ್ಞಾತೃಜ್ಞಾನಜ್ಞೇಯರೂಪಂ ವಿಶ್ವಂ ವ್ಯಾಪ್ಯ ವ್ಯವಸ್ಥಿತಂ ।
ಸ್ವಯಂ ಸರ್ವೈರದೃಶ್ಯೋಯಸ್ತಂ ವಂದೇ ಸೋಮಸುಂದರಂ ॥ ೭೫ ॥

ಅಶ್ವಮೇಧಾದಿಯಜ್ಞೈಶ್ಚ ಯಃ ಸಮಾರಾಧ್ಯತೇ ದ್ವಿಜೈಃ ।
ದದಾತಿ ಚ ಫಲಂ ತೇಷಾಂ ತಂ ವಂದೇ ಸೋಮಸುಂದರಂ ॥ ೭೬ ॥

ಯಂ ವಿದಿತ್ವಾ ಬುಧಾಃ ಸರ್ವೇ ಕರ್ಮಬಂಧವಿವರ್ಜಿತಾಃ ।
ಲಭಂತೇ ಪರಮಾಂ ಮುಕ್ತಿಂ ತಂ ವಂದೇ ಸೋಮಸುಂದರಂ ॥ ೭೭ ॥

ದೇವದೇವಂ ಯಮಾರಾಧ್ಯ ಮೃಕಂಡುತನಯೋ ಮುನಿಃ ।
ನಿತ್ಯತ್ವಮಗಮತ್ಸದ್ಯಸ್ತಂ ವಂದೇ ಸೋಮಸುಂದರಂ ॥ ೭೮ ॥

ನಿಜನೇತ್ರಾಂಬುಜಕೃತಪೂಜಯಾ ಪರಿತೋಷ್ಯ ಯಂ ।
ಶ್ರೀಪತಿರ್ಲಭತೇ ಚಕ್ರಂ ತಂ ವಂದೇ ಸೋಮಸುಂದರಂ ॥ ೭೯ ॥

---

೭೫. ಈ ಸೋಮಸುಂದರೇಶ್ವರನು ಯಾರಿಗೂ ಕಾಣದೆ ಇರುವನಾದರೂ, ಜ್ಞಾತೃ, ಜ್ಞಾನ, ಜ್ಞೇಯ ಎಂಬ ತ್ರಿಪುಟಿಯಿಂದ ಪ್ರಪಂಚವನ್ನು ವ್ಯಾಪಿಸಿರುವನು.

೭೬-೭೭ ಅಶ್ವಮೇಧ ಮೊದಲಾದ ಯಜ್ಞಗಳನ್ನು ದ್ವಿಜರು ಮಾಡಿದ್ದರಿಂದ ಸಂತೋಷವನ್ನು ಹೊಂದಿ ಅವರಿಗೆ ಫಲವನ್ನು ಕೊಡುವ ಈ ಸೋಮಸುಂದ ರೇಶ್ವರನಿಗೆ ನಮಸ್ಕಾರವು. ಜ್ಞಾನಿಗಳು ಈ ಸೋಮಸುಂದರೇಶ್ವರನನ್ನು ಯಥಾ ವತ್ತಾಗಿ ತಿಳಿದುಕೊಂಡು ಕರ್ಮಬಂಧಗಳನ್ನು ದಾಟಿ ಉತ್ತಮವಾದ ಮುಕ್ತಿಯನ್ನು ಇವನಿಂದಲೇ ಹೊಂದುವರು.

೭೮-೮೦. ಮೃಕಂಡುಋಷಿಗೆ ಪುತ್ರನಾದ ಮಾರ್ಕಂಡೇಯಋಷಿಯು ದೇವದೇವನಾದ ಈ ಸೋಮಸುಂದರೇಶ್ವರನನ್ನು ಸೇವಿಸಿ,ಜನನ ಮರಣ ಬಂಧವನ್ನು ದಾಟಿದನು. ಈ ಪ್ರಕಾರದಿಂದ ತನ್ನ ಭಕ್ತರಿಗೆ ಉತ್ತಮವಾದ ಗತಿಯನ್ನು ಕೊಡುವ ಸೋಮಸುಂದರೇಶ್ವರನಿಗೆ ನಮಸ್ಕಾರವು. ತನ್ನ ಕಮಲದಂತಿರುವ ಕಣ್ಣನ್ನು ಪೂಜೆಗಾಗಿ ಒಪ್ಪಿಸಿ ಸಂತೋಷಪಡಿಸಿದ ವಿಷ್ಣುವಿಗೆ, ಚಕ್ರವನ್ನು ದಯಪಾಲಿಸಿದ ಈ ಸೋಮ

**ಯೇನ ಸರ್ವಂ ಜಗತ್ಸೃಷ್ಟಂ ರಕ್ಷಿತಂ ಸಂಹೃತಂ ಕ್ರಮಾತ್ ।**
**ಸತ್ಯಂ ವಿಜ್ಞಾನಮಾನಂದಂ ತಂ ವಂದೇ ಸೋಮಸುಂದರಂ　　॥ ೮೦ ॥**

**ಯಸ್ಮೈ ವೇದಾಶ್ಚ ಚತ್ವಾರೋ ನಮಸ್ಯಂತಿ ವಪುರ್ಧರಾಃ ।**
**ಈಶಾನಸ್ಸರ್ವವಿದ್ಯಾನಾಂ ತಂ ವಂದೇ ಸೋಮಸುಂದರಂ　　॥ ೮೧ ॥**

**ಯಸ್ಮಾತ್ಪರಂ ಚಾಪರಂ ಚ ಕಿಂಚಿದ್ವಸ್ತು ನ ವಿದ್ಯತೇ ।**
**ಈಶ್ವರಸ್ಸರ್ವಭೂತಾನಾಂ ತಂ ವಂದೇ ಸೋಮಸುಂದರಂ　　॥ ೮೨ ॥**

**ಯಸ್ಯ ಪ್ರಣಾಮಮಾತ್ರೇಣ ಸಂತಿ ಸರ್ವಾಶ್ಚ ಸಂಪದಃ ।**
**ಸರ್ವಸಿದ್ಧಿಪ್ರದಂ ಶಂಭುಂ ತಂ ವಂದೇ ಸೋಮಸುಂದರಂ　　॥ ೮೩ ॥**

**ಯಸ್ಯ ದರ್ಶನಮಾತ್ರೇಣ ಬ್ರಹ್ಮಹತ್ಯಾದಿಪಾತಕಂ ।**
**ಅವಶ್ಯಂ ನಶ್ಯತಿ ಕ್ಷಿಪ್ರಂ ತಂ ವಂದೇ ಸೋಮಸುಂದರಂ　　॥ ೮೪ ॥**

---

ಸುಂದರೇಶ್ವರನಿಗೆ ನಮಸ್ಕಾರವು. ಪ್ರಪಂಚವೆಲ್ಲವನ್ನೂ ಸೃಷ್ಟಿಮಾಡಿ, ರಕ್ಷಿಸಿ, ಲಯವನ್ನು ಮಾಡುತ್ತಿರುವ ಸತ್ಯಜ್ಞಾನಾನಂದರೂಪನಾದ ಸೋಮಸುಂದರೇಶ್ವರನಿಗೆ ನಮಸ್ಕಾರವು.

೮೧–೮೫. ನಾಲ್ಕು ವೇದಗಳೂ ಆಕಾರವನ್ನು ಧರಿಸಿ ಈ ದೇವನಿಗೆ ನಮಸ್ಕಾರ ಮಾಡುತ್ತಿರುವುವು. ಎಲ್ಲಾ ವಿದ್ಯಗಳಿಗೂ ಅಧಿಪತಿಯಾಗಿರುವ ಈ ಸೋಮಸುಂದರೇಶ್ವರನಿಗೆ ನಮಸ್ಕಾರವು. ಈ ದೇವನಿಗಿಂತ ಮಿಗಿಲಾಗಿರುವ ಬೇರೆಯ ವಸ್ತುವಿಲ್ಲವು. ಪ್ರಾಣಿಗಳೆಲ್ಲರಿಗೂ ಅಧಿಪತಿಯಾದ ಈ ಸೋಮಸುಂದರೇಶ್ವರನಿಗೆ ನಮಸ್ಕಾರವು. ಈ ದೇವನಿಗೆ ನಮಸ್ಕಾರಮಾಡಿದ ಮಾತ್ರದಿಂದ ಸರ್ವೈಶ್ವರ್ಯಗಳೂ ಸಿದ್ಧವಾಗುವುವು. ನಮಸ್ಕಾರ ಮಾಡಿದವರಿಗೆ ಎಲ್ಲಾ ಸಿದ್ಧಿಯನ್ನೂ ಕೊಡುವ ಈ ದೇವನಿಗೆ ನಮಸ್ಕಾರವು. ಬ್ರಹ್ಮಹತ್ಯಾದಿ ಪಾತಕಗಳನ್ನು ದರ್ಶನಮಾತ್ರದಿಂದ ನಾಶಮಾಡುತ್ತಿರುವ ಈ ದೇವನಿಗೆ ನಮಸ್ಕಾರವು. ಬ್ರಹ್ಮನು ಈ ದೇವನ ಶಿರಸ್ಸನ್ನೂ,

ಉತ್ತಮಾಂಗಂ ಚ ಚರಣಂ ಬ್ರಹ್ಮಣಾ ವಿಷ್ಣುನಾಪಿ ಚ ।
ನ ದೃಶ್ಯತೇ ಯಸ್ಯ ಯತ್ನಾತ್ತಂ ವಂದೇ ಸೋಮಸುಂದರಂ ॥ ೮೫ ॥

ತ್ವಯಾ ನೀಪಾರಣ್ಯನಾಥ ತ್ವದನ್ಯಾನ್
ಸಮಾನಾಹುರ್ದೈವತಾನ್ಪಾಪಿನಸ್ತೇ
ಯದಾ ಶಂಭೋ ತ್ವತ್ಸಮಂ ದೈವತಂ
ಸ್ಯಾತ್ತದಾ ಯೋಗೋ ವಾಜಿನೋ ರಾಸಭಸ್ಯ ॥
ಅಣೋರಣುಸ್ತ್ವಂ ಮಹತೋ ಮಹಾಂಸ್ತ್ವಂ
ಸರ್ವಾತ್ಮಭಾವಾತ್ಪರಿಪೂರ್ಣ ಏಕಃ
ತ್ವಮೇವ ಶಂಭೋ ಮಹಿಮಾಂ ತ್ವದೀಯಾಂ
ಸರ್ವಾಂ ವೇತ್ತುಂ ಕಃ ಕೃತೀಹ ಕ್ಷಮಸ್ವ ॥ ೮೯ ॥

ಇತಿ ಸ್ತುತ್ವಾ ಮಹಾದೇವಂ ಭಕ್ತ್ಯಾ ಪರವಶೋ ವೃಷಾ ।
ದಂಡವತ್ಸನ್ನಿಧೌ ತಸ್ಯ ಪ್ರಣನಾಮ ಮಹೀತಲೇ ॥ ೮೭ ॥

---

ವಿಷ್ಣುವು ಈ ದೇವನ ಪಾದವನ್ನು ಪ್ರಯತ್ನಮಾಡಿಯೂ (ಕಾಣಲಾಗಲಿಲ್ಲ) ದರ್ಶನಮಾಡಲು ಶಕ್ತನಾಗಲಿಲ್ಲ. ಈ ಪ್ರಕಾರವಾದ ಮಹಿಮೆಯುಳ್ಳ ಸೋಮಸುಂದರನಿಗೆ ನಮಸ್ಕಾರವು.

೮೬–೮೭. ಎಲೈ ಕದಂಬವನಾಧಿಪನಾದ ಸೋಮಸುಂದರೇಶ್ವರನೆ, ಕೆಲವರು ಇತರ ದೇವತೆಗಳು ನಿನಗೆ ಸಮಾನರೆಂದು ಹೇಳುವರು. ಕುದುರೆಗೆ ಕತ್ತೆಯು ಸಮನಾದಾಗ ಬೇರೆ ದೇವತೆಯು ನಿನಗೆ ಸಮನಾಗುವನು. ನೀನು ಅಣುವಿಗಿಂತಲೂ,ಅಣುವಾಗಿರುವವನು. ಮಹತ್ತಾದ ಪದಾರ್ಥಕ್ಕಿಂತಲೂ ದೊಡ್ಡವನಾಗಿರುವವನು. ನೀನು ಸರ್ವಾತ್ಮಭಾವದಿಂದ ಇರುವ ಕಾರಣ ಪರಿಪೂರ್ಣನಾಗಿ ಒಬ್ಬನೇ ಆಗಿರುತ್ತೀಯೆ. ಎಲೈ ಶಂಭುವೇ, ನೀನೇ ಮಹಿಮೆಯುಳ್ಳವನು. ನಿನ್ನ ಮಹಿಮೆಯೆಲ್ಲವನ್ನೂ ಯಾರೂ ಹೇಳಿ ಮುಗಿಸಲಾರರು. ಇಷ್ಟುಮಟ್ಟಿಗೆ ನಿನ್ನ ಸನ್ನಿಧಿಯಲ್ಲಿ ಇಷ್ಟುಮಾತ್ರ ಹೇಳಿದ ನನ್ನ. ಅಪರಾಧವನ್ನು ಕ್ಷಮಿಸು ”—ಹೀಗೆ ಹೇಳಿ ಇಂದ್ರನು ಭಕ್ತಿಯಿಂದ ಮಹಾದೇವನಿಗೆ ಭೂಮಿಯಲ್ಲಿ ದಂಡಪ್ರಣಾಮವನ್ನು ಮಾಡಿದನು.

**ಅಥ ಗಂಭೀರಯಾ ವಾಚಾ ಶಿವಃ ಪ್ರಾಹ ಶತಕ್ರತುಂ ।**
**ಉತ್ತಿಷ್ಠೋತ್ತಿಷ್ಠ ಮಘವನ್ ವರಂ ವರಯ ಸುವ್ರತ ॥ ೮೮ ॥**

**ಇತ್ಯಾಕರ್ಣ್ಯ ವಚಃ ಶಂಭೋಸ್ಸಮುತ್ಥಾಯಾವಿಲಂಬಿತಂ ।**
**ಪ್ರಾರ್ಥಯಾಮಾಸ ಸುಪ್ರೀತ್ಯಾ ಪ್ರಬದ್ಧಕರಸಂಪುಟಃ ॥ ೮೯ ॥**

**ಪುರಾ ದರ್ಶನಮಾತ್ರೇಣ ಲಿಂಗಸ್ಯ ಮಹತಸ್ತವ ।**
**ವೃತ್ರಹತ್ಯಾ ಚ ವಿಧ್ವಸ್ತಾ ಮತ್ಕೃತೈರ್ದುಷ್ಕೃತೈಸ್ಸಹ ॥ ೯೦ ॥**

**ಇತಃಪರಂ ಪ್ರಾರ್ಥನೀಯೋ ವರೋ ನಾಸ್ತಿ ಮಹೇಶ್ವರ ।**
**ತಥಾಪಿ ಪ್ರಾರ್ಥಯಾಮ್ಯದ್ಯ ಕ್ಷಮಸ್ವ ಕರುಣಾನಿಧೇ ॥ ೯೧ ॥**

**ಪ್ರಸನ್ನೋ ಯದಿ ದೇವೇಶ ಭಗವನ್ಸೋಮಸುಂದರ ।**
**ಭವತಶ್ಚರಣಾಂಭೋಜಮಕರಂದಸಮುತ್ಸುಕಃ ॥ ೯೨ ॥**

---

೮೮. ಆಗ ಮಹೇಶ್ವರನು ಪ್ರತ್ಯಕ್ಷವಾಗಿ, " ಎಲೈ ನಿಯಮದಿಂದ ಇರುವ ಇಂದ್ರನೇ, ನೀನು ಮೇಲಕ್ಕೆ ಎದ್ದು ನಿನಗೆ ಬೇಕಾದ ವರಗಳನ್ನು ಕೇಳು." ಎಂದು ಮೇಘದಂತೆ ಗಂಭೀರವಾದ ಮಾತನ್ನು ಹೇಳಿದನು.

೮೯–೯೦. ಈ ಮಾತನ್ನು ಕೇಳಿ ಇಂದ್ರನು ಬೇಗ ಮೇಲಕ್ಕೆ ಎದ್ದು, ಎರಡು ಕೈಗಳನ್ನು ಜೋಡಿಸಿಕೊಂಡು, ಬೇಡಿಕೊಂಡನು. " ಮೊದಲು ನಿನ್ನ ಈ ಶಿವ ಲಿಂಗದ ದರ್ಶನಮಾತ್ರದಿಂದಲೇ ನಾನು ಹಿಂದೆ ಮಾಡಿದ ಪಾತಕಗಳೊಡನೆ, ವೃತ್ರ ಹತ್ಯಾಪಾಪವು ನಾಶವಾಯಿತು. ಇದಕ್ಕಿಂತಲೂ ಬೇರೆಯಾದ ವರವು ಕೇಳಬೇಕಾದದ್ದು ಇಲ್ಲ. ಆದಾಗ್ಯೂ ದಯಾನಿಧಿಯಾದ ನಿನ್ನನ್ನು ನನ್ನ ಅಪರಾಧಗಳನ್ನು ಕ್ಷಮಿಸುವುದಕ್ಕಾಗಿ ಪ್ರಾರ್ಥಿಸುತ್ತೇನೆ. ಎಲೈ ಷಡ್ಗುಣೈಶ್ವರ್ಯ ಸಂಪನ್ನನಾದ ಸೋಮಸುಂದರೇಶ್ವರನೇ, ದೇವದೇವನೇ, ನೀನು ಪ್ರಸನ್ನನಾಗಿ ಇದ್ದಲ್ಲಿ ನಿನ್ನ ಪಾದಾರವಿಂದಗಳನ್ನು ಸೇವಿಸಬೇಕೆಂಬ ಬುದ್ಧಿಯು ನನಗೆ ಸ್ಥಿರವಾಗಿರಲಿ. ಈ ವಿಷಯದಲ್ಲಿ ಸ್ಥಿರವಾದ ಮನಸ್ಸು ನನಗೆ ಇರುವಂತೆ ಅನುಗ್ರಹವನ್ನು ಮಾಡು."

೯೧–೯೪. ಶಿವನು ಹೇಳಿದನು:—ನೀನು ಭಕ್ತರಲ್ಲಿ ಉತ್ತಮನಾಗಿರುತ್ತೀಯೆ, ನಿನಗೆ ನನ್ನಲ್ಲಿ ಭಕ್ತಿಯು ಹೆಚ್ಚಾಗಿ ಇರುವುದು. ಆದ್ದರಿಂದ ಬೇರೆಯ ಇನ್ನೊಂದು

ಮನ್ಮನೋ ಭ್ರಮರೋ ಭ್ರಾಂತಿಂ ವಿಹಾಯಾಸ್ತು ಸುನಿಶ್ಚಲಃ ।

॥ ಶ್ರೀಶಿವ ಉವಾಚ ॥

ಅತೀವ ಮಮ ಭಕ್ತೋಽಸಿ ಭಕ್ತಿಸ್ತೇ ಸುದೃಢಾ ಮಯಿ ।
ಪುನರನ್ಯಂ ವರಂ ಪ್ರೀತ್ಯಾ ಪ್ರಯಚ್ಛಾಮಿ ಸುರೋತ್ತಮ ॥ ೯೩ ॥

ತ್ವಯಾ ಮಹ್ಯಂ ದೀಯತೇ ಯದ್ವಿಮಾನಮತಿಶೋಭನಂ ।
ತ್ವನ್ನಾಮ್ನಾ ಪ್ರಥಿತಂ ಚೇಂದ್ರ ವಿಮಾನಮಿತಿ ಚಾಸ್ತು ತತ್ ॥ ೯೪ ॥

ಮಹಾ ಪ್ರಲಯಕಾಲೇಽಪಿ ಮಮೇದಂ ಕ್ಷೇತ್ರಮದ್ಭುತಂ
ನ ನಶ್ಯತಿ ಶಚೀನಾಥ ಸತ್ಯಮೇವ ಮಯೋದಿತಂ ॥ ೯೫ ॥

ತ್ರಿಪುರೇ ದಹ್ಯಮಾನೇ ಪಿ ಮಚ್ಛರೋತ್ಥೇನ ವಹ್ನಿನಾ ।
ತನ್ಮಧ್ಯಗಾಶ್ಚ ಮೇ ಭಕ್ತಾಃ ನ ದಹ್ಯಂತೇ ಯಥಾ ತಥಾ ॥ ೯೬ ॥

ಕ್ಷೇತ್ರಂ ಮನ್ಯೇ ತತ್ಕಾಲಾಗ್ನಿಜ್ವಾಲಯಾ ನೈವ ದಹ್ಯತೇ ।
ಉಪಪಾತಕಿನೋ ಯೇಽಪಿ ಮಹಾಪಾತಕಿನೋಽಪಿ ವಾ ॥ ೯೭ ॥

ಪ್ರವಿಶ್ಯ ಚ ಮಮ ಕ್ಷೇತ್ರಂ ಭವಿಷ್ಯಂತಿ ನಿರೈನಸಃ ।
ಮದೀಯಸ್ಯ ಚ ಲಿಂಗಸ್ಯ ದರ್ಶನಂ ತ್ವತಿದುರ್ಲಭಂ ॥ ೯೮ ॥

---

ವರವನ್ನು ಪ್ರೀತಿಯಿಂದ ನಾನೇ ಕೊಡುವೆನು. ನೀನು ಪ್ರೀತಿಯಿಂದ ತಂದು ಒಪ್ಪಿಸಿರುವ ಬಹಳ ಚನ್ನಾಗಿರುವ ಈ ವಿಮಾನವು ಇಂದ್ರ ವಿಮಾನವೆಂದು ಹೆಸರಿನಿಂದ ಪ್ರಸಿದ್ಧವಾಗಿ ಇಲ್ಲಿಯೇ ಇರಲಿ.

೯೫–೯೯. ಮಹಾ ಪ್ರಳಯಕಾಲದಲ್ಲಿಯೂ ನನ್ನ ವಾಸಸ್ಥಾನವಾದ ಈ ಕ್ಷೇತ್ರವು, ನಾಶವಾಗುವುದಿಲ್ಲ. ಇದು ಸತ್ಯವಾದದ್ದು. ತ್ರಿಪುರವನ್ನು ನಾನು ಬಾಣದಿಂದ ನಾಶಮಾಡಿದಾಗ ಅದರ ಬೆಂಕಿಯಿಂದ ನನ್ನ ಭಕ್ತರೆಲ್ಲರೂ ಉಳಿದಿರುವರು. ಅದರಂತೆಯೇ ಈ ಕ್ಷೇತ್ರವೂ ಉಳಿದಿರುವುದು. ಉಪಪಾತಕ, ಮಹಾಪಾತಕ, ಇವುಗಳನ್ನು ಮಾಡಿದವರೂ ಇಲ್ಲಿಗೆ ಬಂದು ತಮ್ಮ ತಮ್ಮ ಪಾತಕಗಳನ್ನು ಕಳೆದುಕೊಳ್ಳುವರು. ನನ್ನ ಈ ಶಿವಲಿಂಗದ ದರ್ಶನವಾಗುವುದು ಬಹಳ ಕಷ್ಟಕರವಾಗಿರುವುದು.

ಭೋಗಮೋಕ್ಷಪ್ರದಂ ಸದ್ಯಃ ಕಥಂ ಸಿಧ್ಯತಿ ಪೂಜನಂ ।
ಇತಿ ಶ್ರುತ್ವಾ ಶಂಭುವಾಕ್ಯಂ ಪುನಃ ಪ್ರಾಹ ಶತಕ್ರತುಃ ॥೯೯॥

ಭಗವನ್ಪಾರ್ವತೀನಾಥ ತ್ವದೀಯಂ ಲಿಂಗಮದ್ಭುತಂ ।
ದೃಷ್ಟಮಾತ್ರೇಣ ಹರತಿ ಬ್ರಹ್ಮಹತ್ಯಾದಿಪಾತಕಂ ॥ ೧೦೦ ॥

ತಸ್ಮಾದಿದಂ ಮಹಾಲಿಂಗಂ ಪೂಜಿತುಂ ಪ್ರತಿವಾಸರಂ ।
ಮಮೇಚ್ಛಾ ಮಹತೀ ಜಾತಾ ತದರ್ಥಂ ಕುರ್ವನುಗ್ರಹಂ ॥ ೧೦೧ ॥

ಏವಮುಕ್ತೇ ಸಹಸ್ರಾಕ್ಷೇ ಪ್ರತ್ಯುವಾಚ ಮಹೇಶ್ವರಃ ।
ಋತೂತ್ತಮೋ ವಸಂತಸ್ತು ಮಾಸಾನಾಮುತ್ತಮೋ ಮಧುಃ ॥ ೧೦೨ ॥

ತಿಥ್ಯುತ್ತಮಾ ಪೌರ್ಣಮಾಸೀ ಚಿತ್ರಾನಕ್ಷತ್ರಮುತ್ತಮಂ ।
ಏತತ್ಸರ್ವಂ ವಿದ್ಯತೇಽಸ್ಮಿನ್ಪ್ರಾಸರೇ ತೀವಶೋಭನಂ ॥ ೧೦೩ ॥

ಅತೀವಪುಣ್ಯಃ ಕಾಲಸ್ತು ಭವಿಷ್ಯತಿ ಪುನಃ ಪುನಃ ।
ತದಾ ತ್ವಂ ಚ ಸುರೈಸ್ಸಾರ್ಧಮಿಮಂ ಕ್ಷೇತ್ರಮುಪಾಪ್ಯ ಚ ॥ ೧೦೪ ॥

---

ಭುಕ್ತಿ, ಮುಕ್ತಿಗಳನ್ನು ಕೊಡುವ ಈ ಲಿಂಗದ ದರ್ಶನವೇ ಉಂಟಾಗದಿರುವಾಗ, ಇದನ್ನು ಪೂಜಿಸಬೇಕೆಂಬ ಬುದ್ಧಿಯು ಹೇಗೆ ಉಂಟಾಗುವುದು ?" ಈ ಮಾತನ್ನು ಕೇಳಿ ಇಂದ್ರನು ಹೇಳಿದನು.

೧೦೦–೧೦೧. ಎಲೈ ಪಾರ್ವತೀಪತಿಯೆ, ಪೂಜ್ಯನಾದ ಶಂಕರನೆ, ನಿನ್ನ ಬಹಳ ಆಶ್ಚರ್ಯಕರವಾದ ಮಹಿಮೆಯಿಂದ ಕೂಡಿರುವ ಈ ಶಿವಲಿಂಗವನ್ನು ದರ್ಶನಮಾಡಿದ ಮಾತ್ರದಿಂದಲೇ ನನ್ನ ಬ್ರಹ್ಮಹತ್ಯೆಯೇ ಮೊದಲಾದ ಪಾತಕವು ನಾಶವಾಯಿತು. ಆದ್ದರಿಂದ, ಪ್ರತಿದಿನವೂ ಇದನ್ನು ಪೂಜಿಸಬೇಕೆಂದು ನನಗೆ ಬಹಳ ಇಚ್ಛೆಯುಂಟಾಗಿದೆ. ಆದ್ದರಿಂದ ನೀನು ಅದು ನೆರವೇರುವಂತೆ ಅನುಗ್ರಹಿಸು." ಇಂದ್ರನು ಹೇಳಿದ ಈ ಮಾತನ್ನು ಕೇಳಿ ಮಹೇಶ್ವರನು ಮಾತನಾಡಿದನು.

೧೦೨–೧೦೫. "ವಸಂತ ಋತುವು ಎಲ್ಲಾ ಋತುಗಳಿಗಿಂತಲೂ ಉತ್ತಮವು. ಅದರಲ್ಲಿಯೂ ಚೈತ್ರಮಾಸವು ಉತ್ತಮವು. ಅದರಲ್ಲಿಯೂ ಚಿತ್ತಾನಕ್ಷತ್ರದಿಂದ ಕೂಡಿದ ಪೂರ್ಣಿಮೆಯು ಬಹಳ ಶ್ರೇಷ್ಠವಾದದ್ದು. ಈಗ ಈ ಕಾಲವು ಒದಗಿರುವುದು. ಹೀಗೆಯೇ ಪುಣ್ಯಕರವಾದ ಈ ಕಾಲಗಳು ಬರುತ್ತಲೇ ಇರುವುವು. ಆಗ

**ಮಹಾತೀರ್ಥೇ ಚ ಸಂಸ್ನಾಯ ಸೌವರ್ಣೈಃ ಮಹೋತ್ಪಲೈಃ ।**
**ಮಾಂ ಪೂಜಯ ವಿಧಾನೇನ ಮಹಾಲಿಂಗಸ್ವರೂಪಿಣಂ ॥ ೧೦೫ ॥**

**ತದಾ ಸ್ನಾನಂ ಜಪೋ ಹೋಮಸ್ತರ್ಪಣಂ ಲಿಂಗದರ್ಶನಂ ।**
**ದಾನಂ ಯದನ್ಯತ್ಸತ್ಕರ್ಮ ತದನಂತಫಲಾವಹಂ ॥ ೧೦೬ ॥**

**ಇತಿ ಜ್ಞಾತ್ವಾ ಯಥಾಶಕ್ತಿಸ್ನಾನ ದಾನಜಪಾದಿಕಂ ।**
**ಕುರ್ಯಾದವಶ್ಯಂ ಮತಿಮಾನ್ಸರ್ವಪಾಪಪ್ರಶಾಂತಯೇ ॥ ೧೦೭ ॥**

**ತವಾಪಿ ದಿವ್ಯಮೈಶ್ವರ್ಯಂ ಪೂರ್ವಸ್ಮಾದಧಿಕಂ ತತಃ ।**
**ವೀರ್ಯಂ ಯಶಶ್ಚ ತೇಜಶ್ಚ ಪ್ರಭಾವಶ್ಚ ಭವಿಷ್ಯತಿ ॥ ೧೦೮ ॥**

**ಇದಾನೀಂ ತ್ರಿದಶಾಧೀಶ ತ್ರಿದಿವಂ ಗಮ್ಯತಾಂ ತ್ವಯಾ ।**
**ಸರ್ವತ್ರ ವಿಜಯೀ ಭೂತ್ವಾ ಸರ್ವೈರ್ದೇವೈರಭಿಷ್ಟುತಃ ॥ ೧೦೯ ॥**

---

ನೀನು ದೇವತೆಗಳೊಡನೆ ಈ ಕ್ಷೇತ್ರಕ್ಕೆ ಬಂದು, ಈ ತೀರ್ಥದಲ್ಲಿ ಸ್ನಾನವನ್ನು ಮಾಡಿ ಸುವರ್ಣ ಉತ್ಪಲಗಳಿಂದ ಮಹಾಲಿಂಗದ ರೂಪಿನಿಂದ ಇರುವ ನನ್ನನ್ನು ಶಾಸ್ತ್ರಕ್ರಮ ದಿಂದಲೇ ಪೂಜೆಮಾಡು.

೧೦೬–೧೦೭. ಆ ಚೈತ್ರ ಪೂರ್ಣಿಮೆಯಲ್ಲಿ ಮಾಡಿದ ಸ್ನಾನ, ದಾನ, ಜಪ, ಹೋಮ, ತರ್ಪಣ, ಲಿಂಗದರ್ಶನ ಇವುಗಳು ಬಹಳ ಫಲವನ್ನು ಕೊಡುತ್ತವೆ. ಇದನ್ನು ತಿಳಿದು ಬುದ್ಧಿವಂತನು ತನ್ನ ಪಾಪದ ನಾಶಕ್ಕಾಗಿ ತನ್ನ ಕೈಲಾದವಟ್ಟಿಗೆ ಇವುಗಳನ್ನು ಆಚರಿಸತಕ್ಕದ್ದು, ಶ್ರೇಯಸ್ಕರವಾಗಿರುವುದು.

೧೦೮–೧೧೨. ನಿನ್ನ ಐಶ್ವರ್ಯ, ತೇಜಸ್ಸು, ವೀರ್ಯ, ಕೀರ್ತಿ ಇವುಗಳು ಹಿಂದೆ ಇರುವುದಕ್ಕಿಂತಲೂ, ಇನ್ನು ಮುಂದೆ ಹೆಚ್ಚಾಗುವುವು. ಈಗ ನೀನು ಸ್ವರ್ಗಕ್ಕೆ ಹೋಗು. ಎಲ್ಲಾ ಕಡೆಯಲ್ಲಿಯೂ ಜಯಶೀಲನಾಗಿ, ದೇವತೆಗಳೆಲ್ಲರಿಂದಲೂ ಶ್ಲಾಘ್ಯ ನಾಗಿ, ಬಹಳಕಾಲದವರಿಗೆ ಅನೇಕ ಭೋಗಗಳನ್ನು ಅನುಭವಿಸು. ನೀನು ಈ ಶರೀರವನ್ನು ಬಿಟ್ಟನಂತರ ಯಾರೂ ಹೊಂದಲಸಾಧ್ಯವಾದ ನನ್ನ ಸಾಯುಜ್ಯವನ್ನು ಹೊಂದುತ್ತೀಯೆ. ನೀನು ನನ್ನ ಎದುರಿನಲ್ಲಿ ಹೇಳಿದ ಸ್ತೋತ್ರವನ್ನು ಭಕ್ತಿಯಿಂದ

ತತ್ರ ಭುಕ್ತ್ವಾ ಮಹಾಭೋಗಾಂಶ್ಚಿರಕಾಲಂ ಮುದಾನ್ವಿತಃ ।
ಕಳೇಬರಾಂತೇ ಸಾಯುಜ್ಯಂ ಮಮ ಪ್ರಾಪ್ಸ್ಯಸಿ ದುರ್ಲಭಂ ॥ ೧೧೦ ॥

ತ್ವಯಾ ಕೃತಮಿದಂ ಸ್ತೋತ್ರಂ ಪಠತಿ ಶ್ರದ್ಧಯಾ ತು ಯಃ ।
ಧರ್ಮಾದಿಪುರುಷಾರ್ಥಾಂಶ್ಚ ತಸ್ಮೈ ದಾಸ್ಯಾಮ್ಯಹಂ ಧ್ರುವಂ ॥ ೧೧೧ ॥

ಇತಿ ದತ್ವಾ ವರಂ ತ್ರ್ಯಕ್ಷಸ್ಸಹಸ್ರಾಕ್ಷಾಯ ಸತ್ವರಂ ।
ಆತ್ಮೀಯ ಮೂಲಲಿಂಗೇ ತು ದೇವದೇವಸ್ತಿರೋದಧೇ ॥ ೧೧೨ ॥

ಇತಿ ಶಂಭೋರ್ವರಂ ಪ್ರಾಪ್ಯ ಮಹಾಹರ್ಷಸಮನ್ವಿತಃ ।
ಪುನಃ ಪ್ರದಕ್ಷಿಣೀಕೃತ್ಯ ಸ್ತುತ್ವಾ ಭಕ್ತ್ಯಾ ಪ್ರಣಮ್ಯ ಚ ॥ ೧೧೩ ॥

ಉಪವಿಶ್ಯ ಸಹಸ್ರಾಕ್ಷೋ ಮೂಲಲಿಂಗಸ್ಯ ಸನ್ನಿಧೌ ।
ಹೃತ್ಪುಂಡರೀಕಮಧ್ಯೇ ತು ಸಾಂಬಂ ಹಾಲಾಸ್ಯನಾಯಕಂ ॥ ೧೧೪ ॥

ಧ್ಯಾತ್ವಾ ಪಂಚಾಕ್ಷರಂ ಮಂತ್ರಂ ಜಪಿತ್ವಾಷ್ಟೋತ್ತರಂಶತಂ ।
ಶಂಭೋ ಶಂಕರ ದೇವೇಶ ಭಗವನ್ಸೋಮಸುಂದರ ॥ ೧೧೫ ॥

---

ಹೇಳುವವನಿಗೆ ನಾನು ಧರ್ಮವೇ ಮೊದಲಾದ ನಾಲ್ಕು ಪುರುಷಾರ್ಥಗಳನ್ನು ಉಂಟುಮಾಡುವೆನು. ಹೀಗೆಂದು ಶಿವನು ಇಂದ್ರನಿಗೆ ವರವನ್ನು ಅನುಗ್ರಹಿಸಿ ತನ್ನ ಮೂಲಲಿಂಗದಲ್ಲಿ ಅದೃಶ್ಯನಾದನು.

೧೧೩–೧೧೭. ಇಂದ್ರನು ಶಿವನಿಂದ ಈ ಪ್ರಕಾರವಾದ ವರವನ್ನು ಹೊಂದಿದ ನಂತರ ಬಹಳ ಹರ್ಷವುಳ್ಳವನಾಗಿ ಪುನಃ ಶಿವಲಿಂಗವನ್ನು ಪ್ರದಕ್ಷಿಣ ಮಾಡಿ, ಭಕ್ತಿಯಿಂದ ಸ್ತೋತ್ರಗಳನ್ನು ಹೇಳುತ್ತಾ ನಮಸ್ಕರಿಸಿ, ಅದರ ಹತ್ತಿರದಲ್ಲಿ ಕುಳಿತು ಕೊಂಡು, ತನ್ನ ಹೃದಯ ಮಧ್ಯದಲ್ಲಿ ಧ್ಯಾನಮಾಡುತ್ತಾ ಪಂಚಾಕ್ಷರ ಮಂತ್ರವನ್ನು ನೂರೆಂಟುಸಾರಿ ಜಪಮಾಡಿಕೊಂಡನು. "ಎಲೈ ಶಂಭುವೇ, ಶಂಕರನೇ, ದೇವ ದೇವನೇ, ಸೋಮಸುಂದರನೇ, ನೀನು ನನ್ನ ಅಪರಾಧಗಳನ್ನು ಕ್ಷಮಿಸು." ಎಂದು ದೇವದೇವನನ್ನು ಪ್ರಾರ್ಥಿಸಿದನು.ಅನಂತರದಲ್ಲಿ ಪೂಜೆಯನ್ನು ಮುಗಿಸಿಕೊಂಡು

ಅಪರಾಧಂ ಮಯಾ ಯತ್ತು ಕೃತಂ ತತ್ ಕ್ಷಮ್ಯತಾಂ ತ್ವಯಾ ।
ಇತಿ ವಿಜ್ಞಾಪ್ಯ ದೇವೇಶಂ ಪೂಜಾಕರ್ಮ ಸಮಾಪ್ಯ ಚ ॥ ೧೧೬ ॥

ತತಃ ಪ್ರಣಮ್ಯ ಸರ್ವಜ್ಞಂ ಸ್ವಗುರುಂ ಚ ಬೃಹಸ್ಪತಿಂ ।
ಆತ್ಮಾನಂ ನಿರ್ಮಲಂ ಬುಧ್ವಾ ದ್ಯಾಂ ಪ್ರಯಾತಿ ಸುರೋತ್ತಮಃ ॥ ೧೧೭ ॥

ತದಾರಭ್ಯ ಮಹೇಂದ್ರೋಽಪಿ ದಿವ್ಯಂ ಚ ಪ್ರತಿವತ್ಸರಂ ।
ಆಗತ್ಯ ಚಿತ್ರಾನಕ್ಷತ್ರೇ ಚೈತ್ರಮಾಸೇ ಸಮಾಗತೇ ॥ ೧೧೮ ॥

ಕರೋತಿ ಪೂಜಾಂ ಮಹತೀಂ ಮಹಾಲಿಂಗಸ್ಯ ಭಕ್ತಿತಃ ।
ಸಮಷ್ಟಿವಿದ್ಯಾನಗರೀನಾಯಕಸ್ಯ ಮಹೇಶಿತುಃ । ॥ ೧೧೯ ॥

ಇಯಂ ತು ಪ್ರಥಮಾ ಲೀಲಾ ಮಹೇಂದ್ರಾನುಗ್ರಹಾತ್ಮಿಕಾ ।
ಮಹಾಸಂಪತ್ತಿಜನನೀ ಮಹಾಪುಣ್ಯಪ್ರದಾಯಿನೀ ॥ ೧೨೦ ॥

ಮಹಾವ್ಯಾಧಿಪ್ರಶಮಿನೀ ಮಹಾಪಾತಕನಾಶಿನೀ ।
ಶ್ರೋತವ್ಯಾ ಪಠಿತವ್ಯಾ ಚ ಭಕ್ತಿಮದ್ಭಿರ್ಜನೈಸ್ಸದಾ ॥ ೧೨೧ ॥

---

ಸರ್ವಜ್ಞನಾದ ತನ್ನ ಗುರುವಿಗೆ ನಮಸ್ಕರಿಸಿ, ತನ್ನನ್ನು ಪರಿಶುದ್ಧನೆಂದು ಭಾವಿಸಿಕೊಂಡು ದೇವತೆಗಳೊಡನೆ ಸ್ವರ್ಗಕ್ಕೆ ಪ್ರಯಾಣಮಾಡಿದನು.

೧೧೮–೧೨೧. ಆ ಕಾಲಮೊದಲುಗೊಂಡು, ಇಂದ್ರನೂ ಕೂಡ ಚೈತ್ರಮಾಸದಲ್ಲಿ ಚಿತ್ತಾನಕ್ಷತ್ರವು ಬಂದ ಕಾಲದಲ್ಲಿ ಪ್ರತಿವರ್ಷವೂ ಇಲ್ಲಿಗೆ ಬಂದು ಈ ಮಹಾಲಿಂಗದ ಪೂಜೆಯನ್ನು ಭಕ್ತಿಯಿಂದ ಮಾಡುವನು. ಸಮಷ್ಟಿವಿದ್ಯಾನಗರಿಗೆ ಪ್ರಭುವಾದ ಮಹೇಶ್ವರನು ನಡೆಸಿರುವ ಲೀಲೆಗಳಲ್ಲಿ ಇಂದ್ರನಿಗೆ ಅನುಗ್ರಹಮಾಡಿದ ಲೀಲೆಯು ಮೊದಲನೆಯದಾಗಿ ಇರುವುದು. ಇದನ್ನು ಭಕ್ತಿಯಿಂದ ಓದಿದವರಿಗೂ ಕೇಳಿದವರಿಗೂ ಐಶ್ವರ್ಯವು ವೃದ್ಧಿಯಾಗುವುದು. ಪುಣ್ಯವು ಹೆಚ್ಚುವುದು. ರೋಗವು ನಾಶವಾಗುವುದು. ಮಹಾಪಾತಕಗಳೂ ನಾಶವಾಗುವವು.

**ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ ಮಾಹಾತ್ಮ್ಯೇ ಮಹೇಂದ್ರಾನುಗ್ರಹೋನಾಮ ಪಂಚಮೋಽಧ್ಯಾಯಃ**

---

ಸಂಪದ್ಯುಕ್ತವಾದ ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯ ಹಾಲಾಸ್ಯಮಾಹಾತ್ಮ್ಯೆಯಲ್ಲಿ ಮಹೇಂದ್ರಾನುಗ್ರಹವೆಂದು ಹೆಸರುಳ್ಳ ಐದನೆಯ ಅಧ್ಯಾಯವು ಮುಗಿದುದು.

---

|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ

## ಷಷ್ಠೋऽಧ್ಯಾಯಃ

|| ಶ್ರೀ ಸೂತ ಉವಾಚ ||

**ಇತ್ಯಗಸ್ತ್ಯೋಕ್ತಮಾಕರ್ಣ್ಯ ಸರ್ವೇ ತೇ ಮುನಿಪುಂಗವಾಃ**
**ಪುನಶ್ಚ ಪ್ರಾರ್ಥಯಾಮಾಸುಃ ಕುಂಭಯೋನಿಂ ತಪೋನಿಧಿಂ || ೧ ||**

**ವಯಂ ಸರ್ವೇ ಕೃತಾರ್ಥಾಸ್ಸ್ಮಃ ಶ್ರುತ್ವಾ ಪುಣ್ಯಾಂ ಕಥಾಮಿಮಾಂ ।**
**ಪುನಸ್ತು ಕಿಂ ಕಿಂ ದೇವೇನ ಕೃತಂ ಕರ್ಮ ಮಹಾದ್ಭುತಂ || ೨ ||**

**ತತ್ಸರ್ವಂ ಕಥಯಾಸ್ಮಾಕಂ ಕ್ರಮೇಣ ಮುನಿಪುಂಗವ ।**
**ಇತಿ ಶ್ರುತ್ವಾ ವಚಸ್ತೇಷಾಂ ಮುನೀನಾಂ ಕುಂಭಸಂಭವಃ || ೩ ||**

---

### ಆರನೆಯ ಅಧ್ಯಾಯವು.

೧-೪. ಸೂತಪುರಾಣಿಕನು ಹೇಳಿದನು:—ತಪೋನಿಧಿಯಾದ ಅಗಸ್ತ್ಯ ಋಷಿಯು ಹೇಳಿದ ಈ ಮಾತುಗಳನ್ನು ಕೇಳಿ ಆ ಋಷಿಗಳೆಲ್ಲರೂ "ಎಲೈ ಋಷಿ ಶ್ರೇಷ್ಠನೇ ನಾವೆಲ್ಲರೂ ಈ ಕಥೆಯನ್ನು ಕೇಳಿ ಕೃತಾರ್ಥರಾದೆವು. ದೇವ ದೇವನಾದ ಪರಮೇಶ್ವರನು ಮಾಡಿದ ಆಶ್ಚರ್ಯಕರವಾದ ಕೆಲಸಗಳೆಲ್ಲವನ್ನೂ ಕ್ರಮವಾಗಿ ನಮಗೆ ತಿಳಿಸು" ಎಂದು ಅವನಿಗೆ ಪ್ರಾರ್ಥನೆ ಮಾಡಿದರು. ಅವರ ಮಾತನ್ನು ಕೇಳಿ ಅಗಸ್ತ್ಯ

ದುರ್ವಾಸಸೋ ಮುನೇಶ್ಶಾಪಾನ್ಮುಕ್ತಿನ್ಯೈರಾವತಸ್ಯ ಚ ।
ವಸಿಷ್ಠಾದಿಮುನೀಂದ್ರೇಭ್ಯೋ ವಕ್ತುಂ ಸಮುಪಚಕ್ರಮೇ ॥ ೪ ॥

॥ ಅಗಸ್ತ್ಯ ಉವಾಚ ॥

ಪುರಾ ನಿರ್ಜಿತ್ಯ ಸಮರೇ ಜಂಭಾದೀನಸುರೇಶ್ವರಾನ್ ।
ಮಹಾವಿಜಯಸಂಪನ್ನೋ ದೇವರಾಜೋ ಮುದಾ ಯುತಃ ॥ ೫ ॥

ಶೈಲರಾಜೇನ ಸದೃಶಮುನ್ನತ್ಯಾ ಧವಳತ್ವಿಷಾ ।
ಅತ್ಯಂತಧವಳೈರ್ದಂತೈಶ್ಚತುರ್ಭಿಶ್ಚ ವಿರಾಜಿತಂ ॥ ೬ ॥

ಐರಾವತಂ ಸಮಾರುಹ್ಯ ಗಜರಾಜಂ ಸುರೇಶ್ವರಃ ।
ತ್ರಯಸ್ತ್ರಿಂಶತ್ಕೋಟಿಸಂಖ್ಯೈರಮರೈಸ್ಸಿದ್ಧಚಾರಣೈಃ ॥ ೭ ॥

ಗಂಧರ್ವೈಃ ಕಿನ್ನರೈರ್ದಿವ್ಯೈರನ್ಯೈಶ್ಚ ಮುನಿಪುಂಗವೈಃ ।
ಜಯಘೋಷಂ ಪ್ರಕುರ್ವದ್ಭಿಸ್ಸ್ತುವದ್ಭಿಸ್ಸರ್ವೈಃ ಪರಿವಾರಿತಃ ॥ ೮ ॥

ಪುರೀಂ ಪ್ರಾಪ್ಯ ಮಹಾನಿಂದ್ರೋ ಮಹತೀಮಮರಾವತೀಂ ।
ತದಾ ದಿವೌಕಸಃ ಸರ್ವೇ ಸುಮನಸ್ಸೂನಿ ಮುದಾ ದದುಃ ॥ ೯ ॥

---

ಋಷಿಯು, ವಸಿಷ್ಠನೇ ಮೊದಲಾದ ಋಷಿಗಳಿಗೆ ದುರ್ವಾಸಋಷಿಯಿಂದ ಐರಾವತಕ್ಕೆ ಬಂದಿದ್ದ ಶಾಪವನ್ನು ಪರಮೇಶ್ವರನು ಪರಿಹರಿಸಿದ ಕಥೆಯನ್ನು ಹೇಳಲು ಉಪಕ್ರಮಿಸಿದನು.

೫–೭. ಅಗಸ್ತ್ಯಋಷಿಯು ಹೇಳಿದನು:—ಪೂರ್ವದಲ್ಲಿ ಇಂದ್ರನಿಗೂ, ಜಂಭನೇ ಮುಂತಾದ ರಾಕ್ಷಸರಿಗೂ ಯುದ್ಧವು ನಡೆಯಿತು. ಆಗ ದೇವತೆಗಳೊಡನೆ ಇಂದ್ರನು ರಾಕ್ಷಸರನ್ನು ಗೆದ್ದನು. ಜಯಶಾಲಿಯಾದ ಇಂದ್ರನು ತನಗೆ ಉಂಟಾದ ಜಯದಿಂದ, ಸಂತೋಷದಿಂದ ಕೂಡಿದವನಾಗಿ, ಬೆಟ್ಟದಂತಿರುವ ಬಹಳ ಶುಭ್ರವಾದ ನಾಲ್ಕು ದಂತಗಳುಳ್ಳ ಐರಾವತವನ್ನು ಹತ್ತಿಕೊಂಡು ಬರುತ್ತಿದ್ದನು.

೮–೧೦. ಆಗ ಮೂವತ್ತುಮೂರು ಕೋಟಿ ದೇವತೆಗಳೂ, ಸಿದ್ಧರು, ಚಾರಣರು, ಗಂಧರ್ವರು, ಕಿನ್ನರರು, ಇನ್ನೂ ಇತರರಾದ ಋಷಿಶ್ರೇಷ್ಠರು, ಇವರೆಲ್ಲರೂ ಜಯಕಾರಗಳನ್ನು ಮಾಡುತ್ತಾ, ವೇದಮಂತ್ರಗಳಿಂದ ಇಂದ್ರನನ್ನು ಶ್ಲಾಘಿಸುತ್ತಾ ಬರುತ್ತಿದ್ದರು. ಇಂದ್ರನು ಹೀಗೆಯೇ ಬಹಳ ವೈಭವದಿಂದ ಬರುತ್ತಾ ತನ್ನ

ಅನರ್ಘ್ಯಾರ್ಣ್ಯುಪಹಾರಾಣಿ ದಿವ್ಯಾನಿ ವಿಬುಧೋತ್ತಮೈಃ ।
ಸಮರ್ಪಿತಾನಿ ಜಗ್ರಾಹ ಜಂಭಾಸುರನಿಷೂದನಃ ॥ ೧೦ ॥

ದುರ್ವಾಸಾಸ್ತು ಮಹಾತೇಜಾಃ ಕಾಶೀಂ ಸಂಪ್ರಾಪ್ಯ ಸಾದರಂ ।
ಸರ್ವತೀರ್ಥೇಸು ಸಂಸ್ನಾಯ ಸರ್ವಲಿಂಗಾನಿ ಪೂಜ್ಯ ಚ ॥ ೧೧ ॥

ನಾಮ್ನಾ ಕಾಮೇಶ್ವರಂ ಲಿಂಗಂ ಪ್ರತಿಷ್ಠಾಪ್ಯ ಪ್ರಪೂಜ್ಯ ಚ ।
ಪ್ರದಕ್ಷಿಣನಮಸ್ಕಾರಸ್ತೋತ್ರೈಸ್ಸಂತೋಷ್ಯ ಶಂಕರಂ ॥ ೧೨ ॥

ಸನ್ನಿಧೌ ತಸ್ಯ ದೇವಸ್ಯ ಲಿಂಗಮಾಲೋಕ್ಯ ಸಂಸ್ಥಿತಃ ।
ತದಾ ಪತತಿ ಲಿಂಗಸ್ಯ ಮಸ್ತಕಸ್ಥಂ ಮಹೋತ್ಪಲಂ ॥ ೧೩ ॥

ಗೃಹೀತ್ವಾ ತನ್ಮಹಾಪ್ರೀತ್ಯಾ ಸ್ವೇಚ್ಛಯಾ ಸಂಚರನ್ಮುನಿಃ ।
ದೇವರಾಜಂ ತತೋ ದೃಷ್ಟ್ವಾ ಚಾಶೀರ್ಭಿರಭಿನಂದ್ಯ ಚ ॥ ೧೪ ॥

---

ರಾಜಧಾನಿಯಾದ ಅಮರಾವತಿಯ ಹತ್ತಿರಕ್ಕೆ ಬರುತ್ತಿದ್ದನು. ಆಗ ದೇವತೆಗಳೆಲ್ಲರೂ ಬೆಲೆಬಾಳುವ ಪದಾರ್ಥಗಳೆಲ್ಲವನ್ನೂ ಇಂದ್ರನಿಗೆ ಕಾಣಿಕೆಯಾಗಿ ಒಪ್ಪಿಸುತ್ತಿದ್ದರು. ಜಂಭಾರಿಯಾದ ಇಂದ್ರನು ದೇವತೆಗಳು ಒಪ್ಪಿಸಿದ ಕಾಣಿಕೆಗಳನ್ನು ಸ್ವೀಕರಿಸುತ್ತಿದ್ದನು.

೧೧–೧೩. ಆಗ ಮಹಾಮಹಿಮನಾದ ದುರ್ವಾಸಋಷಿಯು, ಕಾಶೀಕ್ಷೇತ್ರಕ್ಕೆ ಹೋದನು. ಭಕ್ತಿಯಿಂದ ಅಲ್ಲಿರುವ ಎಲ್ಲಾ ತೀರ್ಥಗಳಲ್ಲಿಯೂ ಸ್ನಾನವನ್ನು ಮಾಡಿದನು. ಶಿವಲಿಂಗಗಳೆಲ್ಲವನ್ನೂ ಪೂಜಿಸಿದನು. ಕಾಮೇಶ್ವರನೆಂದು ಹೆಸರುಳ್ಳ ಶಿವಲಿಂಗವನ್ನು ತಾನು ಪ್ರತಿಷ್ಠೆಮಾಡಿ, ಅದನ್ನು ಭಕ್ತಿಯಿಂದ ಪೂಜಿಸಿದನು. ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ಸ್ತೋತ್ರಗಳಿಂದ ಶಿವನನ್ನು ಮೆಚ್ಚಿಸಿದನು. ಆ ಶಿವಲಿಂಗದ ಸಮೀಪದಲ್ಲಿ ಭಕ್ತಿಯಿಂದ ನಿಂತಿರುವಾಗ, ಅದರ ಶಿರಸ್ಸಿನಿಂದ ಒಂದು ದೊಡ್ಡದಾದ ಕನ್ನೈದಿಲೆಯ ಹೂವು ಬಿದ್ದಿತು. ಅನುಗ್ರಹರೂಪದಿಂದ ಬಿದ್ದುದನ್ನು ತೆಗೆದುಕೊಂಡು ಬಂದು, ಬಹಳ ಆದರದಿಂದ ಹಿಡಿದುಕೊಂಡು ತನ್ನ ಇಚ್ಛಾನುಸಾರವಾಗಿ ಸಂಚರಿಸುತ್ತಿದ್ದನು.

೧೪–೧೬. ಅವನು ಹೀಗೆಯೇ ಸಂಚರಿಸುತ್ತಾ, ಇಂದ್ರನು ಮಹಾ ಸಂತೋಷದಿಂದ ಬರುತ್ತಿದ್ದುದನ್ನು ಕಂಡು, ಅವನಿಗೆ ಆಶೀರ್ವಾದವನ್ನು ಮಾಡಿ ಅವನನ್ನು

ಪ್ರಸಾದಂ ಶಂಕರಸ್ಯೇತಿ ದದೌ ತಸ್ಮೈ ಮಹೋತ್ಪಲಂ ।
ಗೃಹೀತ್ವಾ ಪಾಣಿನೈಕೇನ ತತ್ಪುಷ್ಪಂ ಪಾಕಶಾಸನಃ ॥ ೧೫ ॥

ಮೋಹಿತೋ ಜಯಲಕ್ಷ್ಮ್ಯಾ ಚ ನ ಧೃತ್ವಾ ನಿಜಮೌಳಿನಾ ।
ಐರಾವತಸ್ಯೋತ್ತಮಾಂಗೇ ಸ್ಥಾಪಯಾಮಾಸ ಚೋನ್ನತೇ ॥ ೧೬ ॥

ತನ್ಮಸ್ತಕಸ್ಯ ಚಾಂಚಲ್ಯಾದಧಃ ಪತತಿ ತತ್ತಥಾ ।
ಪತಿತಂ ಚ ಸ್ವಪಾದೇನ ಮರ್ದಯಿತ್ವಾ ಪುನಃ ಪುನಃ ॥ ೧೭ ॥

ಕ್ರೀಡತ್ಯಮರಮಾತಂಗೋ ಮದಯುಕ್ತೋ ವಿಧೇರ್ವಶಾತ್ ।
ದುರ್ವಾಸಾಸ್ತು ತದಾಲೋಕ್ಯ ಕೋಪೇನ ಸ್ಫುರಿತಾಧರಃ ॥ ೧೮ ॥

ಮಹೇಂದ್ರಂ ಚ ಗಜೇಂದ್ರಂ ಚ ಶಪ್ತುಂ ಪ್ರಾಹ ಸಮುದ್ಯತಃ ।
ಮಹೇಂದ್ರ ತ್ವಂ ಗರ್ವಿತೋಽಸಿ ದಾನವಾನಾಂ ಜಯೇನ ಚ ॥ ೧೯ ॥

ಸಮಾನಮನ್ಯೈರ್ಮುನಿಭಿರ್ಮಾಮಪಿ ಪ್ರವಿಚಾರ್ಯ ಚ ।
ನ ದಧಾಸಿ ಕಿರೀಟೇನ ಮಯಾ ದತ್ತಂ ಮಹೋತ್ಪಲಂ ॥ ೨೦ ॥

---

ಶ್ಲಾಘಿಸಿ, "ಇದು ಶಿವನ ಪ್ರಸಾದವು" ಎಂದು ಹೇಳಿ, ಆ ಹೂವನ್ನು ಇಂದ್ರನಿಗೆ ಒಪ್ಪಿಸಿದನು. ಇಂದ್ರನು ಅದನ್ನು ಒಂದು ಕೈಯಿನಲ್ಲಿ ತೆಗದುಕೊಂಡು, ತನಗೆ ಉಂಟಾಗಿರುವ ಜಯದ ಹೆಮ್ಮೆಯಿಂದ ತನ್ನ ಕಿರೀಟದಲ್ಲಿ ಧರಿಸದೆ, ತನ್ನ ವಾಹನ ವಾದ ಐರಾವತದ ತಲೆಯಲ್ಲಿ ಇರಿಸಿದನು.

೧೭–೨೨. ಆನೆಯು ಸಂಚರಿಸುವಾಗ ಅದರ ಶಿರಸ್ಸು ಅಲುಗುವುದರಿಂದ ಆ ಹೂವು ನೆಲಕ್ಕೆ ಬಿದ್ದಿತು. ನೆಲಕ್ಕೆ ಬಿದ್ದ ಆ ಹೂವನ್ನು ಆ ಐರಾವತವು ತುಳಿದು ಹಾಕಿತು. ಮತ್ತು ತನ್ನ ಹಿಂದಿನ ರೀತಿಯಲ್ಲಿ ವಿಲಾಸ ಪ್ರಕಾರವಾದ ನಡಿಗೆಯಿಂದ ಹೋಗುತ್ತಿತ್ತು. ವಿಧಿಯ ವಶದಿಂದ ಆ ಆನೆಯೂ, ಇಂದ್ರನೂ ಮಾಡಿದ ಕೆಲಸ ವನ್ನು ನೋಡಿದ ದುರ್ವಾಸಋಷಿಗೆ ಕೂಡಲೆ ಕೋಪವು ಉಂಟಾಯಿತು. ಆಗ ಅವನು ಕೋಪದಿಂದ ತುಟಿಗಳನ್ನು ನಡುಗಿಸುತ್ತಾ, ಅವರಿಬ್ಬರನ್ನೂ ಶಪಿಸಲು ಉದ್ಯುಕ್ತ ನಾದನು. ಆಗ ಆ ದುರ್ವಾಸಋಷಿಯು, "ಎಲೈ ಮಹೇಂದ್ರನೇ, ನೀನು ಗರ್ವ ವುಳ್ಳವನು. ಅದರಲ್ಲಿಯೂ ದಾನವರ ಜಯದಿಂದ ನಿನಗೆ ಹೆಮ್ಮೆಯು ಇನ್ನೂ ಹೆಚ್ಚಿ ರುವುದು. ಇದರಿಂದ ನೀನು ನನ್ನನ್ನು, ಇತರ ಋಷಿಗಳನ್ನು ತಿಳಿದಂತೆ ತಿಳಿದು

**ಅನ್ಯೈಸ್ಸಮರ್ಪಿತಂ ಸರ್ವೈರ್ಗೃಹೀತಂ ಚ ತ್ವಯಾದರಾತ್ ।**
**ಕಿಂಚಿಚ್ಚ ಮಾಂ ನ ಜಾನಾಸಿ ಕ್ರುಧಾ ಚ ತಪಸಾತುಲಂ ॥ ೨೧ ॥**

**ತಸ್ಮಾತ್ತ್ವನ್ಮಸ್ತಕಸ್ಯಾಥ ಭೇತ್ತಾ ಪಾಂಡ್ಯೋ ಭವಿಷ್ಯತಿ ।**
**ಐರಾವತಃ ಕ್ಷುದ್ರಗಜಃ ಪೃಥಿವ್ಯಾಂ ಸಂಚರಿಷ್ಯತಿ ॥ ೨೨ ॥**

**ಇತಿ ದುರ್ವಾಸಸಾ ಶಪ್ತೇ ದೇವೇಂದ್ರೇ ಚ ಸವಾಹನೇ ।**
**ಉಕ್ತವಂತಂ ಕ್ಷಮಸ್ವೇತಿ ಪ್ರಣೇಮುಶ್ಚ ಪುನಃ ಪುನಃ ॥ ೨೩ ॥**

**ಸುರಾ ಸ್ಸರ್ವೇನುಸ್ಮೃತ್ಯೈನಂ ಪ್ರಸನ್ನಂ ಚಕ್ರಿರೇ ಮುನಿಂ ।**
**ಜಲಸ್ಯೋಷ್ಣಂ ಶಿಖಿಸ್ಪರ್ಶಾನ್ನ ಸ್ವಭಾವತಯಾ ಮುನೇ ॥ ೨೪ ॥**

---

ಇರುತ್ತೀಯೆ. ನಾನು ನಿನಗೆ ಆದರದಿಂದ ಒಪ್ಪಿಸಿದ ಶಿವ ಪ್ರಸಾದವನ್ನು ಶಿರಸ್ಸಿನಲ್ಲಿ ಧರಿಸದೆ, ಇರುತ್ತೀಯೆ. ಇತರರು ಕೊಟ್ಟಿದ್ದೆಲ್ಲವನ್ನೂ ಆದರದಿಂದ ಸ್ವೀಕರಿಸುತ್ತಿದ್ದೀಯೆ. ನನ್ನನ್ನು ನೀನು ತಿಳಿದಿಲ್ಲ. ಶಿವನ ಪ್ರಸಾದದ ಮಹಿಮೆಯನ್ನು ನೀನು ತಿಳಿದಿಲ್ಲ. ಆದ್ದರಿಂದ ನಿನ್ನ ತಲೆಯನ್ನು ಪಾಂಡ್ಯ ರಾಜನು ಭೇಧಿಸುವನು. ಈ ಐರಾವತವೂ ಭೂಮಿಯಲ್ಲಿರುವ ಇತರ ಆನೆಗಳಂತೆ ಕ್ಷುದ್ರಗಜವಾಗಿ ಭೂಮಿಯಲ್ಲಿ ಸಂಚರಿಸುವುದು." ಎಂದು ಶಾಪವನ್ನು ಕೊಟ್ಟನು.

೨೩–೨೪. ಆಗ ದೇವತೆಗಳೆಲ್ಲರೂ ಇಂದ್ರನ ಮತ್ತೂ ಐರಾವತದ ಅಪರಾಧವನ್ನು, ಕ್ಷಮಿಸಬೇಕೆಂದು ದುರ್ವಾಸಋಷಿಯನ್ನು ಬೇಡಿಕೊಂಡರು. ಎಲ್ಲರೂ ಸೇರಿಕೊಂಡು ಆ ಋಷಿಯು ಪ್ರಸನ್ನನಾಗುವಂತೆ ಮಾಡಿದರು. "ನೀರು ಅಗ್ನಿಯಿಂದ ಬಿಸಿಯಾಗುವುದು. ಋಷಿಗಳ ಸ್ವಭಾವವು ದಯೆಯಿಂದ ಇರಬೇಕಾದದ್ದು. ಆದ್ದರಿಂದ ಉಪಶಾಂತಿಯನ್ನು ನೀನು ಹೊಂದು. ಶಿವಪ್ರಸಾದವೆಂದು ತಿಳಿಯದೆ ಹೋಯಿತು.ಆದ ಕಾರಣ ಹೀಗೆ ಆಯಿತು. ರೋಷವುಂಟಾಗಲು ಕಾರಣವು ಇದ್ದಲ್ಲಿ, ಅದು ಸರಿಯಾದ ಕಾರಣವಾದಲ್ಲಿ, ರೋಷವು ಸಾರ್ಥಕವು. ಆದ್ದರಿಂದ ನೀನು ಕೋಪವನ್ನು ಬಿಟ್ಟು ಅನುಗ್ರಹವನ್ನು ಮಾಡಬೇಕು." ಎಂದು ದೇವತೆಗಳೇ ಮೊದಲಾಗಿ ಎಲ್ಲರೂ ಆ ದುರ್ವಾಸಮುನಿಗೆ ಹೇಳಿದರು.

**ಕಾರಣೇ ಸತಿ ರೋಷಸ್ಯ ಪ್ರಸನ್ನೋ ದಯಯಾ ಭವ ।**
**ಇತಿ ಶ್ರುತ್ವಾ ಸುರವಚೋ ದುರ್ವಾಸಾಶ್ಚ ಮಹಾಮುನಿಃ ॥ ೨೫ ॥**

**ವಿಹಾಯ ಕೋಪಂ ಸಹಜಮುವಾಚಾಥ ಸುರೋತ್ತಮಾನ್ ।**
**ಮದುಕ್ತಮನ್ಯಥಾ ಕರ್ತುಂ ನ ಶಕ್ತೋಽಹಂ ದಿವೌಕಸಃ ॥ ೨೬ ॥**

**ಮಚ್ಛಾಪಮಾತ್ರಸಂಯುಕ್ತೋ ನ ತು ಶಕ್ರಸ್ಸವಾಹನಃ ।**
**ಕಿಂ ತು ದ್ರೋಹೇಣ ಶಂಭೋಸ್ತು ಸಂಯುಕ್ತೋ ಮಹತಾಧುನಾ ॥ ೨೭ ॥**

**ವಾರಾಣಸೀಮಹಾಕ್ಷೇತ್ರೇ ಮಯಾ ಸಂಸ್ಥಾಪಿತಸ್ಯ ಚ ।**
**ಕಾಮೇಶ್ವರಾಖ್ಯಲಿಂಗಸ್ಯ ಪ್ರಸಾದಂ ತನ್ಮಹೋತ್ಪಲಂ ॥ ೨೮ ॥**

**ಶಕ್ರೇಣ ನ ಧೃತಂ ಮೂರ್ಧ್ನಿ ಪದಾ ಸ್ಪೃಷ್ಟಂ ಗಜೇನ ಚ ।**
**ಔದಾಸಿನ್ಯಂ ಲಂಘನಂ ವಾ ಪ್ರಸಾದಸ್ಯ ಮಹೇಶಿತುಃ ॥ ೨೯ ॥**

**ಸಮಹತ್ಪಾತಕಂ ಪ್ರೋಕ್ತಂ ಶಿವಶಾಸ್ತ್ರವಿಶಾರದೈಃ ।**
**ಸುಮಹತ್ಪಾತಕಾನಾಂ ತು ಪ್ರಾಯಶ್ಚಿತ್ತಂ ನ ವಿದ್ಯತೇ ॥ ೩೦ ॥**

---

೨೫–೨೯. ದುರ್ವಾಸಮಹಾಮುನಿಯು ಇವರ ಮಾತನ್ನು ಕೇಳಿ, ತನ್ನ ಸಹಜವಾದ ಕೋಪವನ್ನು ಬಿಟ್ಟು ದೇವತೆಗಳ ಸಂಗಡ ಮಾತನಾಡಿದನು. ಈಗ ನಾನು ಹೇಳಿರುವ ಮಾತನ್ನು ಬೇರೆಯ ವಿಧದಿಂದ ಆಗುವ ಹಾಗೆ ಮಾಡುವ ಶಕ್ತಿಯು ನನಗೆ ಇಲ್ಲ. ನನ್ನ ಶಾಪಕ್ಕೆ ಮಾತ್ರವೇ ಇಂದ್ರನೂ, ಐರಾವತವೂ ಇಬ್ಬರೂ ಒಳಗಾಗಿಲ್ಲ. ಅವರು ಶಿವಪ್ರಸಾದವನ್ನು ತಿರಸ್ಕಾರ ಮಾಡಿರುವರು. ಅದನ್ನು ಇಂದ್ರನು ಶಿರಸ್ಸಿನಲ್ಲಿ ಧರಿಸಲಿಲ್ಲ. ಅದನ್ನು ಆನೆಯು ಕಾಲಿನಿಂದ ತುಳಿಯಿತು. ಮಹೇಶ್ವರನ ಪ್ರಸಾದದಲ್ಲಿ ಉದಾಸೀನತೆಯೂ, ತಿರಸ್ಕಾರ ಬುದ್ಧಿಯೂ, ಬಹಳವಾದ ಶಿವದ್ರೋಹವೆಂದು ಶಿವನ ಮಹಿಮೆಯನ್ನು ಬಲ್ಲವರು ತಿಳಿದಿರುವರು.

೩೦–೩೨. ಮಹಾಪಾತಕಗಳಿಗೆ ಪ್ರಾಯಶ್ಚಿತ್ತವಿರುವುದಿಲ್ಲ. ಆದಾಗ್ಯೂ ದೇವದೇವನಾದ ಪರಮೇಶ್ವರನು ರಹಸ್ಯವಾಗಿ ಮಹಾಪಾತಕಗಳಿಗೂ, ಉತ್ತಮವಾದ

ತಥಾಪಿ ದೇವದೇವೇನ ರಹಸ್ಯೇ ಚ ಪ್ರಭಾಷಿತಂ ।
ಸುಮಹತ್ಪಾತಕಾನಾಂ ತು ಪ್ರಾಯಶ್ಚಿತ್ತಮನುತ್ತಮಂ ॥ ೩೧ ॥

ತದಹಂ ಕೃಪಯಾ ವಕ್ಷ್ಯೇ ಪಾಪಶಾಪನಿವೃತ್ತಯೇ ।
ವೇದಾನಾಂ ಮಸ್ತಕೈಶ್ಚೈವ ಪ್ರತಿಪಾದಿತಮಾದರಾತ್ ॥ ೩೨ ॥

ಭೂಲೋಕಶಿವಲೋಕಾಖ್ಯಂ ಶಿವಕ್ಷೇತ್ರಂ ಮಹಾದ್ಭುತಂ ।
ಮಹಾಪಾಪಹರಂ ಚಾಸ್ತಿ ಮಹಾಶಾಪಹರಂ ಚ ತತ್ ॥ ೩೩ ॥

ಹೇಮಪದ್ಮಾಕರಂ ತತ್ರ ಮಹಾತೀರ್ಥಂ ಚ ವಿದ್ಯತೇ ।
ಶ್ರೀ ಹಾಲಾಸ್ಯೇಶ್ವರಂ ಲಿಂಗಮಸ್ತಿ ತ್ರೈಲೋಕ್ಯವಿಶ್ರುತಂ ॥ ೩೪ ॥

ಯೇ ಪಾಪಭೀರವೋ ಲೋಕೇ ಯೇ ಮಹಾಶಾಪಭೀರವಃ ।
ಯೇ ವಾಂಛಂತಿ ಮಹಾಭೋಗಾನ್ಮುಕ್ತಿಂ ವಾತ್ಯಂತದುರ್ಲಭಾಂ ॥ ೩೫ ॥

ತೇ ಸರ್ವೇ ತತ್ರ ಸಂಪ್ರಾಪ್ಯ ಭಕ್ತ್ಯಾ ಚ ಶ್ರದ್ಧಯಾ ಸಹ ।
ಮಹಾತೀರ್ಥೇ ಚ ಸಂಸ್ನಾಯ ದೃಷ್ಟ್ವಾ ಹಾಲಾಸ್ಯನಾಯಕಂ ॥ ೩೬ ॥

---

ಪ್ರಾಯಶ್ಚಿತ್ತವನ್ನು ಹೇಳಿರುವನು. ನಾನು ಪಾಪ ಮತ್ತು ಶಾಪ ಇವೆರಡೂ ನಾಶವಾಗುವುದಕ್ಕಾಗಿ ದಯೆಯಿಂದ ನಿಮಗೆ ತಿಳಿಸುವೆನು. ಉಪನಿಷದ್ಭಾಗಗಲ್ಲಿಯೂ, ನಾನು ಹೇಳುವ ವಿಷಯವು ಇರುವುದು.

೩೩–೩೬. ಭೂಲೋಕ, ಶಿವಲೋಕವೆಂದು ಹೆಸರುಳ್ಳ ಬಹಳ ಆಶ್ಚರ್ಯಕರವಾದ ಶಿವಕ್ಷೇತ್ರವು ಇರುವುದು. ಇದು ಬಹಳ ದೊಡ್ಡಪಾತಕಗಳನ್ನೂ ಶಾಪಗಳನ್ನೂ ನಾಶಪಡಿಸುವುದು. ಇದರಲ್ಲಿ ಹೇಮಪದ್ಮಾಕರವೆಂಬ ತೀರ್ಥವೂ, ಹಾಲಾಸ್ಯೇಶ್ವರನೆಂದು ಹೆಸರುಳ್ಳ ಶಿವಲಿಂಗವೂ, ಮೂರು ಲೋಕದಲ್ಲಿಯೂ ಪ್ರಸಿದ್ಧವಾಗಿರುವುದು. ಮಹಾಪಾತಕಗಳಿಂದ ಹೆದರುವವರೂ, ಮಹಾ ಭೋಗಗಳನ್ನು ಹೊಂದಲು ಇಚ್ಛಿಸುವವರೂ, ಮುಕ್ತಿಯನ್ನು ಹೊಂದಲು ಆಶೆಯುಳ್ಳವರೂ, ಆ ಕ್ಷೇತ್ರಕ್ಕೆ ಹೋಗಿ, ಭಕ್ತಿ ವಿಶ್ವಾಸಗಳಿಂದ ಆ ತೀರ್ಥದಲ್ಲಿ ಸ್ನಾನಮಾಡಿ, ಹಾಲಾಸ್ಯೇಶ್ವರನನ್ನು ದರ್ಶನಮಾಡಿದಲ್ಲಿ ಅವರ ಪಾತಕಗಳೆಲ್ಲವೂ ನಾಶವಾಗಿ ಅವರ ಇಷ್ಟಾರ್ಥಗಳೆಲ್ಲವೂ ನೆರವೇರುವವು.

ಸರ್ವದೋಷವಿನಿರ್ಮುಕ್ತಾಸ್ಸರ್ವಾನ್ಕಾಮಾನ್ಪ್ರಯಾಂತಿ ಚ ।
ಗಜೇಂದ್ರೋಽಪಿ ಮಹೇಂದ್ರೋಽಪಿ ಪ್ರಾಪ್ಯ ಹಾಲಾಸ್ಯಮುತ್ತಮಂ ॥ ೩೭ ॥

ಮಹಾಶಾಪಾತ್ತು ನಿರ್ಮುಕ್ತೌ ಭವೇತಾಂ ತಾವುಭೌ ಧ್ರುವಂ ।
ಕೃಪಯಾ ದೇವದೇವಸ್ಯ ಶ್ರೀಹಾಲಾಸ್ಯೇಶ್ವರಸ್ಯ ಚ ॥ ೩೮ ॥

ಕಿರೀಟಮಾತ್ರಮಿಂದ್ರಸ್ಯ ಪಾಂಡ್ಯಭೂಪೋ ಭಿನತ್ತ್ವಿತಿ ।
ವತ್ಸರಾಣಾಂ ಶತಂ ಯಾವಚ್ಚರಿತ್ವಾ ಪೃಥಿವೀತಲೇ ॥ ೩೯ ॥

ಐರಾವತೋಽಪಿ ತಂ ನತ್ವಾ ಮುಕ್ತೋ ಭವತು ಶಾಪತಃ ।
ಇತ್ಯುಕ್ತ್ವಾ ಶಿರಸಾ ಧೃತ್ವಾ ಗೃಹೀತ್ವಾ ತನ್ಮಹೋತ್ಪಲಂ ॥ ೪೦ ॥

ಸ್ವಚ್ಛಂದಗತ್ಯಾ ಸಂಯುಕ್ತೋ ಪ್ರಯಯೌ ಸ ಮಹಾಮುನಿಃ ।
ಐರಾವತೋ ಮುನೇಶ್ಶಾಪಾದತಿನೀಲವಪುರ್ಧರಃ ॥ ೪೧ ॥

ಭುವಿ ಕ್ಷುದ್ರಗಜೋ ಭೂತ್ವಾ ದಂತದ್ವಯಸಮನ್ವಿತಃ ।
ವನೇಷು ಹಸ್ತಿಭಿಸ್ಸಾರ್ಧಂ ಚಚಾರಾತೀವ ದುಃಖಿತಃ ॥ ೪೨ ॥

---

೩೭–೪೧. ಈ ಐರಾವತನೂ, ಇಂದ್ರನೂ, ಇಬ್ಬರೂ ಕೂಡ ಹಾಲಾಸ್ಯಕ್ಷೇತ್ರಕ್ಕೆ ಹೋಗಿ ಸೇವೆಯನ್ನು ಮಾಡಿದರೆ, ದೇವದೇವನಾದ ಹಾಲಾಸ್ಯೇಶ್ವರನ ಕೃಪೆಯಿಂದ ಇವರಿಬ್ಬರ ಶಾಪವೂ ಹೋಗುವುದು. ಪಾಂಡ್ಯಭೂಪನು ಇಂದ್ರನ ಕಿರೀಟವನ್ನು ಮಾತ್ರ ನಾಶಮಾಡುವನು. ಒಂದುನೂರು ವರ್ಷಗಳು ಮಾತ್ರ ಐರಾವತವು ಭೂಮಿಯಲ್ಲಿ ಸಂಚರಿಸುತ್ತಿರುವುದು. ಹಾಲಾಸ್ಯೇಶ್ವರನ ಸೇವೆಯಿಂದ ಅದಕ್ಕೂ ಶಾಪವಿಮೋಚನೆಯೂ ಆಗುವುದು, ಎಂದು ದುರ್ವಾಸಮುನಿಯು ವಿಶಾಪವನ್ನು ಹೇಳಿದನು. ಅನಂತರದಲ್ಲಿ ಶಿವಪ್ರಸಾದವಾದ ಆ ಮಹೋತ್ಪಲವನ್ನು ತಾನೇ ತೆಗೆದುಕೊಂಡು ತನ್ನ ಶಿರಸ್ಸಿನಲ್ಲಿ ಧರಿಸಿಕೊಂಡು ಸ್ವೇಚ್ಛೆಯಾಗಿ ಆ ಋಷಿಯು ಹೊರಟುಹೋದನು.

೪೨–೪೫. ಐರಾವತವು ಆ ಋಷಿಯ ಶಾಪದಿಂದ ಇತರ ಆನೆಗಳಹಾಗೆ, ಕಪ್ಪು ಬಣ್ಣದ ಶರೀರವನ್ನು ಧರಿಸಿ, ಇತರ ಆನೆಗಳ ಹಾಗೆಯೇ ಎರಡು ದಂತಗಳಿಂದ

ಅನುಭೂಯ ಚಿರಂ ಕಾಲಂ ದುಃಖಂ ಚ ಮುನಿಶಾಪಜಂ ।
ಶ್ರೀಹಾಲಾಸ್ಯಂ ಶಿವಕ್ಷೇತ್ರಂ ದೈವಗತ್ಯಾ ಪ್ರವಿಶ್ಯ ಚ ॥ ೪೩ ॥

ಮುನಿನೋಕ್ತಂ ಶಾಪಶಾಂತ್ಯೈ ಸ್ಮೃತ್ವೋಪಾಯಂ ಮಹತ್ತರಂ ।
ಮಹಾತೀರ್ಥೇ ಮಹಾಭಕ್ತ್ಯಾ ಕರೋತಿ ಸ್ನಾನಮುತ್ತಮಂ ॥ ೪೪ ॥

ಸ್ನಾನಮಾತ್ರೇಣ ಶಾಪೋತ್ಥಂ ಸದ್ಯೋ ನಶ್ಯತಿ ಕಿಲ್ಬಿಷಂ ।
ಚತುಷ್ಟಯಂ ತು ದಂತಾನಾಂ ಲಬ್ಧ್ವಾ ಸ್ವಸ್ಯಸಿತ ಪ್ರಭಾಂ ॥ ೪೫ ॥

ಪ್ರೀತ್ಯಾ ಮಹತ್ಯಾ ಸಂಯುಕ್ತಸ್ಸಂ ಪ್ರಾಪ್ಯ ಶಿವಸನ್ನಿಧಿಂ ॥ ೪೬ ॥

ಸ್ವಕೀಯವರ್ಗಸ್ಕಂಧಸ್ಥವಿಮಾನಾಂತರಸಂಸ್ಥಿತಂ ।
ಶಿವಲಿಂಗಂ ಸಮಾಲೋಕ್ಯ ಸರ್ವೈರ್ದೇವೈಃ ಪ್ರಪೂಜಿತಂ ॥ ೪೭ ॥

ಪುಷ್ಕರೇಣ ಗೃಹೀತೇನ ತೀರ್ಥೋದೇನಾಭಿಷಿಚ್ಯ ಚ ।
ಉಪಚಾರೈಶ್ಚ ಗಂಧಾದ್ಯೈರ್ಸಸಾರಾಧ್ಯ ಪಂಚಭಿಃ . ॥ ೪೮ ॥

ಸ್ತುತ್ವಾ ನಾಸಾವಿಧೈಸ್ತೋತ್ರೈಸ್ಸುಂದರೇಶಂ ಪ್ರಣಮ್ಯ ಚ ।
ಉತ್ಥಾಯ ಲಿಂಗಮಾಲೋಕ್ಯ ಹಾಲಾಸ್ಯೇಶಮಯಾಚತ ॥ ೪೯ ॥

---

ಕೂಡಿದ್ದಾಗಿ, ಆನೆಗಳ ಜೊತೆಯಲ್ಲಿ ಭೂಮಿಯಲ್ಲಿ ಆಯಾಯ ಕಾಡುಗಳಲ್ಲಿ ಸಂಚರಿಸುತ್ತಿತ್ತು. ಬಹಳ ಕಾಲದವರೆಗೂ ಹೀಗೆಯೇ ಬಹಳ ದುಃಖವನ್ನು ಅದು ಅನುಭವಿಸುತ್ತಾ ಇರುವಾಗ ದೈವಗತಿಯಿಂದ ಹಾಲಾಸ್ಯಕ್ಷೇತ್ರಕ್ಕೆ ಸಂಬಂಧಿಸಿದ ಕಾಡಿಗೆ ಬಂದು, ಋಷಿಯು ಹೇಳಿದ ಮಾತಿನಂತೆ, ತನ್ನ ದುಃಖವನ್ನು ಪರಿಹರಿಸಿ ಕೊಳ್ಳುವ ಉಪಾಯವು, ಅದರ ಜ್ಞಾಪಕಕ್ಕೆ ಬಂದಿತು. ಆಗ ಆ ಆನೆಯು ಪವಿತ್ರ ಕರವಾದ ಆ ಮಹಾತೀರ್ಥದಲ್ಲಿ ಸ್ನಾನವನ್ನು ಮಾಡಿತು. ಸ್ನಾನಮಾಡಿದ ಮಾತ್ರ ದಿಂದಲೇ ಆ ಆನೆಗೆ ಹಿಂದಿನ ಅದರ ಪಾಪವು ನಾಶವಾಗಿ ಅದರ ದೇಹದ ಬಿಳಿಯ ಬಣ್ಣವೂ, ನಾಲ್ಕು ದಂತಗಳೂ ಬಂದವು.

೪೬–೫೧. ಆಗ ಆ ಅನೆಯು, ಬಹಳ ಸಂತೋಷದಿಂದ ಕೂಡಿದ್ದಾಗಿ, ಶಿವನ ಸಮೀಪಕ್ಕೆ ಹೋಯಿತು. ಅದು ಅಲ್ಲಿ ತನ್ನಂತೆ ಇರುವ ಇತರ ದಿಗ್ಗಜಗಳು ಶಿವನ ವಿಮಾನವನ್ನು ಧರಿಸಿರುವುದನ್ನೂ, ಎಲ್ಲಾ ದೇವತೆಗಳೂ ಪೂಜಿಸಿರುವ ಶಿವಲಿಂಗ

ಮದ್ವಂಶ್ಯಾ ಭಾಗಧೇಯೇನ ತ್ವದಾಯತನಧಾರಕಾಃ ।
ಸುಖಂ ತಿಷ್ಠಂತ್ಯಹಮಪಿ ತ್ವದಾಯತನಧಾರಕಃ ॥ ೫೦ ॥

ವಸೇಯಮಿತಿ ಬುದ್ಧಿರ್ಮೇ ಪ್ರಸಾದಃ ಕ್ರಿಯತಾಂ ಶಿವ ।
ತದ್ವಚಶ್ಶಂಕರಶ್ಶ್ರುತ್ವಾ ಪ್ರಾಹ ಸಾನ್ನಿಧ್ಯಕೃದ್ಗಜಂ ॥ ೫೧ ॥

॥ ಶಂಕರ ಉವಾಚ ॥

ಮಹಾಭಕ್ತೋ ಮಹೇಂದ್ರೋ ಮೇ ತದೀಯಸ್ತ್ವಂ ಚ ತತ್ಸಮಃ ।
ತಂ ಧಾರಯ ಸ ದೈವ ತ್ವಂ ತದೇವಾದ್ಯ ಮಮ ಪ್ರಿಯಂ ॥ ೫೨ ॥

ಇತ್ಯುಕ್ತೋ ದೇವದೇವೇನ ಗಜೇಂದ್ರಃ ಪುನರಬ್ರವೀತ್ ।
ಭಗವನ್ಪಾರ್ವತೀನಾಥ ಭಕ್ತವತ್ಸಲ ಶಂಕರ ॥ ೫೩ ॥

---

ವನ್ನು ನೋಡಿತು. ಆಗ ಆ ಐರಾವತವು ತನ್ನ ಸೊಂಡಲಿನಿಂದ ಆ ತೀರ್ಥವನ್ನು ತುಂಬಿಕೊಂಡು, ಅದರಿಂದ ಆ ಶಿವಲಿಂಗಕ್ಕೆ ಅಭಿಷೇಕವನ್ನು ಮಾಡಿತು. ಶಿವಪೂಜೆಗೆ ಬೇಕಾದ ಸಾಮಗ್ರಿಗಳನ್ನು ಮನಸ್ಸಿನಲ್ಲಿಯೇ ಭಾವಿಸಿ, ಪಂಚೋಪಚಾರ ಪೂಜೆಯನ್ನು ಮಾಡಿತು. ಐರಾವತವು ಸ್ತೋತ್ರಗಳನ್ನು ಹೇಳುತ್ತಾ, ಸುಂದರೇಶ್ವರನಿಗೆ ನಮಸ್ಕಾರಗಳನ್ನು ಮಾಡಿತು. ಅನಂತರದಲ್ಲಿ ಮೇಲಕ್ಕೆ ಎದ್ದು "ಎಲೈ ಶಿವನೆ ನನ್ನ ವಂಶದವರು ಬಹಳ ಪುಣ್ಯವನ್ನು ಮಾಡಿ, ನೀನು ವಾಸವಾಗಿರುವ ವಿಮಾನವನ್ನು ಧರಿಸಿ ಸುಖವಾಗಿ ಇರುವಂತೆ, ನಾನೂ ನಿನ್ನ ವಿಮಾನವನ್ನು ಧರಿಸಿಕೊಂಡು ಸುಖವಾಗಿರುವ ಬುದ್ಧಿಯು ನನಗೆ ಉಂಟಾಗಲಿ. ಇದು ಅನುಕೂಲವಾಗುವಹಾಗೆ ನನ್ನ ವಿಷಯದಲ್ಲಿ ಅನುಗ್ರಹವು ಉಂಟಾಗಲಿ" ಎಂದು ಪ್ರಾರ್ಥಿಸಿತು.

೫೨-೫೫. ಆಗ ಶಂಕರನು ಆ ಐರಾವತದ ಮಾತನ್ನು ಕೇಳಿ ಆ ಶಿವಲಿಂಗದಲ್ಲಿ ತನ್ನ ಸಾನ್ನಿಧ್ಯವನ್ನು ಪ್ರಕಟಪಡಿಸಿ, ಆ ಆನೆಯ ಸಂಗಡ ಮಾತನಾಡಿದನು. ಶಿವನು ಹೇಳಿದನು :—ಇಂದ್ರನು ನನಗೆ ದೊಡ್ಡ ಭಕ್ತನಾಗಿರುವುದರಿಂದ, ನೀನೂ ಅವನಂತೆಯೇ ಭಕ್ತನಾಗಿರುತ್ತೀಯೆ. ನನ್ನ ವಿಮಾನವನ್ನು ನಿನ್ನ ಇಷ್ಟದಂತೆ, ಇತರ ಆನೆಗಳಂತೆಯೇ ಧರಿಸು. ಹೀಗೆ ಮಾಡುವುದರಿಂದ ನನಗೆ ಸಂತೋಷವು

**ದುರ್ವಾಸಸೋ ಮುನೇಶ್ಶಾಪಮನುಭೂಯ ಮಹಾತ್ಮನಃ ।**
**ಪುನಸ್ತ್ವಹಂ ತ್ವಾಮಭ್ಯೇತ್ಯ ಶಿವ ಮುಕ್ತೋಽಸ್ಮಿ ಶಾಪತಃ ॥ ೫೪ ॥**

**ಗಜೇಂದ್ರೇಷು ಯಥಾ ಶಂಭೋ ಶ್ರೀಮತ್ಪ್ರಸಾದಧಾರಿಷು ।**
**ಅನುಗ್ರಹಸ್ತ್ವಯಾ ಕಾರ್ಯೋ ಮಯ್ಯಪಿ ತ್ವಂ ತಥಾ ಕುರು ॥ ೫೫ ॥**

**ಇತ್ಯುಕ್ತೋ ಗಜರಾಜೇನ ಶಂಭುಃ ಪ್ರಾಹ ಗಜೇಶ್ವರಂ ।**
**ತಥಾಸ್ತು ಗಜ ಗಚ್ಛತ್ವಂ ಇತ್ಯುಕ್ತ್ವಾಂ ತರ್ದದೌ ಹರಃ ॥ ೫೬ ॥**

**ಸರ್ವಪಾಪಪ್ರಶಮನಂ ಸರ್ವಶಾಪಹರಂ ಪರಂ ।**
**ಭೂಲೋಕಶಿವಲೋಕಾಖ್ಯಂ ಶಿವಕ್ಷೇತ್ರಂ ಪುರಾತನಂ ॥ ೫೭ ॥**

**ತ್ಯಕ್ತ್ವಾ ಗಂತುಮನಿಚ್ಛನ್ಸಃ ದೇವಪಶ್ಚಿಮಭಾಗತಃ ।**
**ಖಾತ್ವಾ ತೀರ್ಥಂ ಸ್ವಪಾದೇನ ತತ್ತೀರೇ ತು ಗಣಾಧಿಪಂ ॥ ೫೮ ॥**

**ಶಿವಲಿಂಗಂ ಚ ಸಂಸ್ಥಾಪ್ಯ ಸ್ವನಾಮ್ನಾ ಚಾದರೇಣ ಚ ।**
**ವಿನಾಯಕಂ ಚ ತಲ್ಲಿಂಗಂ ಪ್ರಪೂಜ್ಯ ಪ್ರತಿವಾಸರಂ ॥ ೫೯ ॥**

---

ಉಂಟಾಗುವುದು.' ದೇವದೇವನಾದ ಶಂಕರನು ಹೇಳಿದ ಈ ಮಾತನ್ನು ಕೇಳಿ ಐರಾವತವು "ಎಲೈ ಭಕ್ತವತ್ಸಲನೆ, ಶಂಕರನೆ, ಪಾರ್ವತೀಪತಿಯೆ, ದೇವದೇವನೆ, ಮಹಾತ್ಮನಾದ ದುರ್ವಾಸಮುನಿಯು ಕೊಟ್ಟ ಶಾಪವನ್ನು ಅನುಭವಿಸಿದೆನು. ನಿನ್ನ ಸಮೀಪಕ್ಕೆ ಬಂದು, ಹಿಂದಿನಂತೆ ಶಾಪದಿಂದ ಬಿಡುಗಡೆಯನ್ನು ಹೊಂದಿದೆನು. ನಿನ್ನ ಪ್ರಸಾದವನ್ನು ಧರಿಸಿರುವ ಇತರ ಆನೆಗಳ ವಿಷಯದಲ್ಲಿ ನಿನಗೆ ಇರುವ ಅನುಗ್ರಹವು ನನ್ನ ವಿಷಯದಲ್ಲಿಯೂ ಉಂಟಾಗಬೇಕು." ಎಂದು ಪುನಃ ಹೇಳಿತು.

೫೬–೬೩. ಶಂಭುವು ಗಜರಾಜನ ಆ ಮಾತನ್ನು ಕೇಳಿ, "ಹಾಗೇ ಆಗಲಿ ನೀನು ಹೋಗು" ಎಂದು ಐರಾವತದ ಸಂಗಡ ಹೇಳಿ, ಆ ಶಿವಲಿಂಗದಲ್ಲಿ ಅಂತರ್ಧಾನವನ್ನು ಹೊಂದಿದನು. ಭೂಲೋಕ ಶಿವಲೋಕವೆಂದು ಹೆಸರನ್ನು ಹೊಂದಿ, ಪುರಾತನವಾದ ಎಲ್ಲಾ ಪಾತಕಗಳನ್ನೂ ನಾಶಮಾಡುವ, ಎಲ್ಲಾ ಶಾಪಗಳಿಂದಲೂ, ಬಿಡುಗಡೆಯನ್ನು ಮಾಡುವ, ಆ ಶಿವಕ್ಷೇತ್ರವನ್ನು ಬಿಟ್ಟು ಹೋಗಲು ಮನಸ್ಸಿಲ್ಲದೆ, ಆ ಐರಾವತವು ಹಾಲಾಸ್ಯೇಶ್ವರನ ಪಶ್ಚಿಮಭಾಗದಲ್ಲಿ ತನ್ನ ಕಾಲಿನಿಂದಲೇ ಒಂದು ಕೊಳವನ್ನು ಭಕ್ತಿಯಿಂದ ಪ್ರತಿಷ್ಠೆ ಮಾಡಿತು. ತನ್ನ ಹೆಸರನ್ನು ಆಗಣೇಶನಿಗೂ, ಆ ಶಿವ

**ಯಥಾ ತಿಷ್ಠತಿ ನಾಕೇಚ ಸಂತೋಷೇಣ ಗಜೇಶ್ವರಃ ।**
**ಭೂಲೋಕಶಿವಲೋಕೇ ತು ತಥಾ ತಿಷ್ಠತಿ ವೈ ಚಿರಂ ॥ ೬೦ ॥**

**ಐರಾವತಂ ಮುಕ್ತಶಾಪಂ ಪರಿಜ್ಞಾಯ ಸುರೇಶ್ವರಃ ।**
**ದೂತಂ ಸಂಪ್ರೇಷಯಾಮಾಸ ಸಂಪ್ರಾಪ್ತುಮುಮುರಾವತೀಂ ॥ ೬೧ ॥**

**ದೇವೇಂದ್ರಾಜ್ಞಾಭೂಯಾತ್ಸದ್ಯೋ ನಿರ್ಗತ್ಯ ಮಧುರಾಪುರಾತ್ ।**
**ಪ್ರಸ್ಥಾನಂ ಸುಂದರೇಶಸ್ಯ ಪೂರ್ವಭಾಗೇ ವಿಧಾಯ ಚ ॥ ೬೨ ॥**

**ತತ್ರಾಪಿ ಹರ್ಮ್ಯಮತುಲಂ ಕೃತ್ವಾ ಸ್ವಸ್ವಾಮಿನಾಮತಃ ।**
**ಇಂದ್ರೇಶ್ವರಾಖ್ಯಂ ಲಿಂಗಂ ಚ ಪ್ರತಿಷ್ಠಾಪ್ಯ ಪ್ರಪೂಜ್ಯ ಚ ॥ ೬೩ ॥**

**ನೀಪಾರಣ್ಯಂ ಮಹಾಕ್ಷೇತ್ರಂ ನ ವಿಹಾಯ ಸುಖಂಸ್ಥಿತಃ ।**
**ಪುನಃ ಪ್ರೇಷಿತದೂತೇನ ದೇವೇಂದ್ರೇಣ ಮಹಾಗಜಃ ॥ ೬೪ ॥**

---

ಲಿಂಗಕ್ಕೂ ಇರಿಸಿತು. ಪ್ರತಿದಿವಸವೂ ಆ ಶಿವಲಿಂಗವನ್ನೂ, ಆ ಗಣೇಶನನ್ನೂ ಭಕ್ತಿಯಿಂದ ಆ ಐರಾವತವು ಪೂಜಿಸುತ್ತಾ ಸ್ವರ್ಗದಲ್ಲಿ ಇಂದ್ರನು ಅನುಭವಿಸುತ್ತಿರುವಷ್ಟು ಸಂತೋಷದಿಂದ ಆ ಶಿವಕ್ಷೇತ್ರದಲ್ಲಿಯೇ ಸುಖವಾಗಿ ಕಾಲವನ್ನು ಕಳೆಯುತ್ತಿತ್ತು.

೬೪-೬೬ ದೇವತೆಗಳಿಗೆ ಅಧಿಪತಿಯಾದ ಇಂದ್ರನು ಐರಾವತಕ್ಕೆ ಬಂದಿದ್ದ ಶಾಪವು ಹೋಯಿತು. ಎಂದು ತಿಳಿದು, ಅದನ್ನು ಪುನಃ ಸ್ವರ್ಗಕ್ಕೆ ಕರದುಕೊಂಡು ಬರಲು ದೂತನನ್ನು ಕಳುಹಿಸಿದನು. ಆಗ ಐರಾವತವು ಇಂದ್ರನ ಆಜ್ಞಾನುಸಾರವಾಗಿ ಆ ಕ್ಷಣದಲ್ಲಿಯೇ ಮಧುರಾನಗರದಿಂದ ಹೊರಟಿತು. ಸುಂದರೇಶ್ವರನ ವಿಮಾನದ ಪೂರ್ವಭಾಗದಲ್ಲಿ ನಿಂತುಕೊಂಡಿತು. ಆ ಪ್ರದೇಶದಲ್ಲಿಯೂ, ಆ ಐರಾವತವು ಒಂದು ಉತ್ತಮವಾದ ಮಹಡಿಯ ಮನೆಯನ್ನು ಕಟ್ಟಿ, ಅಲ್ಲಿ ತನ್ನ ಪ್ರಭುವಾದ ಇಂದ್ರನ ಹೆಸರಿನಿಂದ ಶಿವಲಿಂಗವನ್ನು ಪ್ರತಿಷ್ಠೆಮಾಡಿ ಅದನ್ನು ಪೂಜಿಸಿತು. ಅದು ಹೀಗೆಯೇ ಶಿವನ ಸೇವೆಯನ್ನು ಮಾಡುತ್ತಾ ಆ ನಿಪಾರಣ್ಯವನ್ನು ಬಿಟ್ಟು ಹೋಗ

ತ್ರಿದಿವಂ ಚ ಯಯೌ ಸದ್ಯಸ್ಸ್ವಾಮ್ಯಾಜ್ಞಾಮವಲಂಬಯನ್ ।
ಖಾತಿತಂ ಗಜಪಾದೇನ ತಟಾಕಂ ತೀರ್ಥಮುತ್ತಮಂ ॥ ೬೫ ॥

ಗಜಪುಷ್ಕರಿಣೀ ಚೇತಿ ಪ್ರಥಿತಂ ನಾಮಧೇಯತಃ ।
ವಿನಾಯಕೋಽಪಿ ತೀರಸ್ಥ ಐರಾವತವಿನಾಯಕಃ ॥ ೬೬ ॥

ಐರಾತೇಶ್ವರಂ ಲಿಂಗಂ ತತ್ಪ್ರತಿಷ್ಠಿತಮಿಷ್ಟದಂ ।
ದೃಷ್ಟಮಾತ್ರೇಣ ಹರತಿ ಶಾಪಪಾಪಭಯಂ ಮಹತ್ ॥ ೬೭ ॥

ಗಜಪುಷ್ಕರಿಣೀತೀರ್ಥೇ ಸ್ನಾತ್ವಾ ಚೈರಾವತೇಶ್ವರಂ !
ದೃಷ್ಟ್ವಾ ವಿಮುಚ್ಯತೇ ಪಾಪೈಶ್ಯಾಪೈಸ್ಸರ್ವಾಮಯೈರಪಿ ॥ ೬೮ ॥

ಪ್ರಸ್ಥಾನಂ ಚ ಯಯಾ ವೀಥ್ಯಾ ಕರೋತ್ಯೈರಾವತೋ ಗಜಃ
ನಾಮ್ನಾ ಪ್ರಸಿದ್ಧಾ ಸಾ ವೀಥೀ ಗಜಧಾವನವೀಥಿಕಾ ॥ ೬೯ ॥

---

ಲಾರದೆ ಸುಖದಿಂದ ಇರುವಾಗ ಇಂದ್ರನು ತಿರುಗಿ ಅದನ್ನು ಸ್ವರ್ಗಕ್ಕೆ ಕರೆದುಕೊಂಡು ಬರಲು ದೂತರನ್ನು ಕಳುಹಿಸಿದನು.

೬೭–೬೮. ಆಗ ಆ ಆನೆಯು ತನ್ನ ಪ್ರಭುವಿನ ಆಜ್ಞೆಯನ್ನು ಅನುಸರಿಸಿ ಆಕ್ಷಣದಲ್ಲಿಯೇ ಸ್ವರ್ಗಕ್ಕೆ ಹೊರಟುಹೋಯಿತು. ಆ ಐರಾವತವು ತನ್ನ ಕಾಲಿನಿಂದಲೇ ತೋಡಿದ ಕೊಳಕ್ಕೆ ಗಜಪುಷ್ಕರಿಣೀ ಎಂದು ಹೆಸರು ಬಂದಿರುವುದು. ಅದರ ತೀರದಲ್ಲಿರುವ ಗಣಪತಿಗೆ ಐರಾವತ ವಿನಾಯಕನೆಂದು ಹೆಸರು ಉಂಟಾಗಿರುವುದು. ಆ ಆನೆಯು ಪ್ರತಿಷ್ಠೆಮಾಡಿದ ಶಿವಲಿಂಗವು ಐರಾವತೇಶ್ವರನೆಂದು ಪ್ರಸಿದ್ಧವಾಗಿರುವುದು. ಈ ಶಿವಲಿಂಗದ ದರ್ಶನದಿಂದ ಬಹಳವಾದ ಪಾಪ, ಶಾಪ ಭಯವು ನಾಶವಾಗುವುದು.

೬೯–೭೦. ಗಜಪುಷ್ಕರಿಣೀ ತೀರ್ಥದಲ್ಲಿ ಸ್ನಾನವನ್ನು ಮಾಡಿ, ಐರಾವತವು ಪ್ರತಿಷ್ಠೆಮಾಡಿದ ಐರಾವತೇಶ್ವರನನ್ನು ದರ್ಶನಮಾಡಿದವರಿಗೆ, ಪಾಪಗಳು, ನಾಶ

ಪ್ರಸ್ಥಿತಂ ಯದ್ಗಜೇಂದ್ರೇಣ ದೇವೇಂದ್ರಸ್ಯ ಮಹಾಜ್ಞಯಾ ।
ನಾಮ್ನಾ ಚೈರಾವತಪುರಂ ಪ್ರಸಿದ್ಧಮಧುನಾಪಿ ಚ ॥ ೭೦ ॥

ಇಂದ್ರೇಶ್ವರಂ ತತ್ರ ದೃಷ್ಟ್ವಾ ಪುರುಷಾರ್ಥಮಹಾನಿಧಿಂ ।
ಇಂದ್ರಲೋಕೇ ವಸೇದ್ಧೀಮಾನ್ಯಾವದಿಂದ್ರಾಶ್ಚತುರ್ದಶ ॥ ೭೧ ॥

ಏವಮ್ಮೈರಾವತಂ ಶಾಪಾನ್ಮೋಚಯಿತ್ವಾ ಮಹಾಮುನೇಃ ।
ಅನುಗೃಹ್ಣಾತಿ ದೇವೇಶೋ ಜೀವನ್ಮುಕ್ತಿಪುರೇಶ್ವರಃ ॥ ೭೨ ॥

ಇತಿ ದ್ವಿತೀಯಾ ಯಾ ಲೀಲಾ ಕೃತಾ ಹಾಲಾಸ್ಯವಾಸಿನಾ ।
ತಾಂ ತು ಶ್ರುತ್ವಾ ನರೋ ಧೀಮಾನ್ಮಹಾಪಾಪೈಃ ಪ್ರಮುಚ್ಯತೇ ॥ ೭೩ ॥

---

ರೋಗಗಳು ಇನ್ನೆಲ್ಲವೂ ನಾಶವಾಗುವವು. ಐರಾವತವು ಪ್ರಯಾಣಮಾಡಿದ ಬೀದಿಗೆ ಗಜಧಾವನ ವೀಧಿ ಎಂದು ಈಗಲೂ ಪ್ರಸಿದ್ಧವಾದ ಹೆಸರು ಬಂದಿರುವುದು. ಇಂದ್ರನ ಆಜ್ಞೆಯಿಂದ ಮೊದಲು ಹೊರಟು, ಒಂದು ಕಡೆಯಲ್ಲಿ ಆ ಆನೆಯು ನಿಂತ ಪ್ರದೇಶವನ್ನು ಐರಾವತಪುರವೆಂದು ಕರೆಯುವರು.

೭೧-೭೨. ಐರಾವತಪುರದಲ್ಲಿ ಇರುವ ಇಂದ್ರೇಶ್ವರನ ದರ್ಶನದಿಂದ, ಈ ಲೋಕದಲ್ಲಿ ಪುರುಷಾರ್ಥಗಳನ್ನು ಅನುಭವಿಸಿ. ಅನಂತರ ಇಂದ್ರನ ಲೋಕದಲ್ಲಿ ಹದಿನಾಲ್ಕು ಇಂದ್ರರು ಇರುವವರಿಗೂ, ಸುಖವನ್ನು ಅನುಭವಿಸುವ ಪುಣ್ಯವು ಉಂಟಾಗುವುದು. ಜೀವನ್ಮುಕ್ತಿಪುರೀಶ್ವರನಾದ ಸುಂದರೇಶ್ವರನು ಮಹಾಮುನಿಯಾದ ದೂರ್ವಾಸಮುನಿಯಿಂದ ಶಾಪವನ್ನು ಹೊಂದಿ, ಕಷ್ಟವನ್ನು ಅನುಭವಿಸುತ್ತಿದ್ದ ಐರಾವತವನ್ನು ನೋಡಿ ಅದಕ್ಕೆ ಅನುಗ್ರಹವನ್ನು ಮಾಡಿ, ಅದು ಸುಖದಿಂದ ಇರುವಂತೆ ರಕ್ಷಿಸಿದನು.

೭೩. ಹಾಲಾಸ್ಯಕ್ಷೇತ್ರದಲ್ಲಿ ನೆಲಸಿರುವ ಸುಂದರೇಶ್ವರನು ಆಚರಿಸಿರುವ ಲೀಲೆಗಳಲ್ಲಿ ಎರಡನೆಯ ಲೀಲೆಯನ್ನು ಹೇಳಿರುವೆನು. ಇದನ್ನು ಕೇಳಿದವನು ಮಹಾಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವನು.

**ಇತಿ ಶ್ರೀ ಸ್ಕಾಂಧಪುರಾಣೇ ಅಗಸ್ಯಸಂಹಿತಾಯಾಂ ಹಾಲಾಸ್ಯ ಮಾಹಾತ್ಮ್ಯೇ ಐರಾವತಶಾಪವಿಮೋಚನಂ ನಾಮ ಷಷ್ಠೋಽಧ್ಯಾಯಃ**

---

ಸಂಪದ್ಯುಕ್ತವಾದ ಸ್ಕಾಂದಪುರಾಣದ ಆಗಸ್ತ್ಯಸಂಹಿತೆಯ ಹಾಲಾಸ್ಯಮಾಹಾತ್ಮ್ಯ
ಯಲ್ಲಿ ಐರಾವತಶಾಪವಿಮೋಚನವೆಂದು ಹೆಸರುಳ್ಳ
ಆರನೆಯ ಅದ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ

## ಸಪ್ತಮೋಽಧ್ಯಾಯಃ

|| ಅಗಸ್ತ್ಯ ಉವಾಚ ||

**ಯಯಾ ಕದಂಬಕಾಂತಾರಂ ಪುರೀಣಾಂ ಪ್ರವರಂ ಭವೇತ್ ।**
**ತಾಂ ಲೀಲಾಂ ಸುಂದರೇಶಸ್ಯ ಶೃಣ್ವಂತು ಮುನಿಪುಂಗವಾಃ || ೧ ||**

**ಯದಾ ವಿಮಾನಂ ಸಂಸ್ಥಾಪ್ಯ ಸಂಪೂಜ್ಯ ಚ ಪುರಂದರಃ ।**
**ತ್ರಿವಿಷ್ಟಪಂ ಸಂಪ್ರಯಾತಿ ತದಾದಿ ತ್ರಿದಶಾಶ್ಶಿವಂ । || ೨ ||**

**ಅನಿಶಂ ಪೂಜಯಂತಿ ಸ್ಮ ಭೋಗಮೋಕ್ಷಪ್ರಸಿದ್ಧಯೇ ।**
**ವಿಶೇಷತಸ್ಸೋಮವಾರೇ ನಿಶಿ ತೌರ್ಯತ್ರಿಕಾನ್ವಿತಂ || ೩ ||**

---

### ಏಳನೆಯ ಅಧ್ಯಾಯವು.

೧. ಅಗಸ್ತ್ಯಋಷಿಯು ಹೇಳಿದನು:—ಸುಂದರೇಶ್ವರನು ಕದಂಬಕಾಂತಾರವನ್ನು, ದೊಡ್ಡ ನಗರಿಯನ್ನು ಮಾಡಿದ ಲೀಲೆಯನ್ನು ನಾನು ಹೇಳುವೆನು. ಮುನಿಶ್ರೇಷ್ಠರಾದ ನೀವೆಲ್ಲರೂ ಕೇಳಿರಿ.

೨-೩. ಇಂದ್ರನು ವಿಮಾನವನ್ನು ತರಿಸಿ ಸುಂದರೇಶ್ವರನನ್ನು ಪೂಜಿಸಿ ಸ್ವರ್ಗಕ್ಕೆ ಹೋದ ಕಾಲ ಮೊದಲುಗೊಂಡು, ದೇವತೆಗಳೆಲ್ಲರೂ, ಶಿವನನ್ನು ಭುಕ್ತಿ, ಮುಕ್ತಿಗಾಗಿ ಯಾವಾಗಲೂ ಪೂಜೆ ಮಾಡಲುಪಕ್ರಮಿಸಿದರು. ಸೋಮವಾರದಲ್ಲಿ ಇತರ ದಿನಗಳಿಗಿಂತಲೂ ಅಧಿಕವಾಗಿ ವಾದ್ಯ, ನೃತ್ಯ, ಗೀತಗಳಿಂದಲೂ ಶಿವನನ್ನು ಪ್ರತಿ ಯಾಮದಲ್ಲಿಯೂ ಪೂಜಿಸುತ್ತಾ ಬಂದರು. ಹೀಗೆಯೇ ಬಹಳ ಕಾಲವು ಕಳೆ

**ಅರ್ಹಣಂ ಚಕ್ರುರಮರಾಃ ಪ್ರತಿ ಯಾಮಂ ಮಹೇಶಿತುಃ ।**
**ಏವಂ ಚಿರಗತೇ ಕಾಲೇ ಶ್ರೀ ವೃಕ್ಷೈಶ್ಚ ಹರಪ್ರಿಯೈಃ ॥ ೪ ॥**

**ಅನ್ಯೈರಭ್ರಂಲಿಹೈರ್ವೃಕ್ಷೈರಭೂತ್ತ ನ್ನಿಬಿಡಂ ವನಂ ।**
**ಮನುಷ್ಯಾಣಾಂ ತು ಸಂಚಾರೋ ಯದಾ ನಾಸ್ತಿ ಮಹಾವನೇ ॥ ೫ ॥**

**ತದಾ ಕದಂಬವನ್ಯಾಂ ಚ ನಗರೀಂ ಕರ್ತುಮಾದರಾತ್ ।**
**ಕಾಲೇ ಕಾಲೇ ಮಹಾದೇವೇ ಬಾಲಚಂದ್ರಾವತಂಸಕೇ ॥ ೬ ॥**

**ನೀಲಕಂಠೇ ವಿರೂಪಾಕ್ಷೇ ಜೀವನ್ಮುಕ್ತಿಪುರೀಶ್ವರೇ ।**
**ಕಪಾಲಿನಿ ಕೃಪಾರಾಶೌ ದೇವ್ಯಾ ಸಂಪ್ರಾರ್ಥಿತೇ ಸತಿ ॥ ೭ ॥**

**ಕಶ್ಚಿದ್ವೈಶ್ಯ ವರಶ್ರೀಮಾನಾಸೀನ್ನಾಮ್ನಾ ಧನಂಜಯಃ ।**
**ಶಿವಭಕ್ತಿಸಮಾಯುಕ್ತಃ ಶಿವಪೂಜಾಪರಾಯಣಃ ॥ ೮ ॥**

**ಧನಾನಿ ಶಿವಭಕ್ತೇಭ್ಯೋ ಪ್ರದದಾತ್ಯಾರ್ಜಿತಾನಿ ಚ ।**
**ಶಿವವ್ರತೇಷು ಸರ್ವೇಷು ಸೋಮವಾರವ್ರತಪ್ರಿಯಃ ॥ ೯ ॥**

---

ಯಿತು. ಈ ಸುಂದರೇಶ್ವರನು ಇರುವ ಪ್ರದೇಶದಲ್ಲಿ ಹಿಂದಿನಂತೆಯೇ ಎತ್ತರವಾಗಿ ಮರಗಳು ಬೆಳೆದು ದಟ್ಟವಾದ ಕಾಡು ಉಂಟಾಗಿ ಆ ಕಾಡಿನಲ್ಲಿ ಮನುಷ್ಯರ ಸಂಚಾರವೇ ನಿಂತು ಹೋಯಿತು.

೬–೮. ಆಗ ದೇವಿಯಾದ ಪಾರ್ವತಿಯು, ಬಾಲಚಂದ್ರ ಚೂಡನಾಗಿ, ನೀಲ ಕಂಠನಾಗಿ, ಮೂರು ಕಣ್ಣುಗಳಿಂದ ಕೂಡಿರುವ ಪರಮೇಶ್ವರನು, ಜೀವನ್ಮುಕ್ತಿನಗ ರಕ್ಕೆ ಒಡೆಯನಾಗಿ, ದಯಾಶಾಲಿಯಾಗಿ ಇರುವುದರಿಂದ ಅವನನ್ನು ಆ ಕದಂಬವನ ವನ್ನೇ ನಗರವನ್ನಾಗಿ ಮಾಡಲು ಆಗಾಗ್ಯೆ ಪ್ರಾರ್ಥಿಸುತ್ತಿದ್ದಳು. ಹೀಗಿರುವಾಗ ಧನಂಜಯನೆಂದು ಹೆಸರುಳ್ಳ ಒಬ್ಬ ವೈಶ್ಯನು ಶಿವನಲ್ಲಿ ಭಕ್ತಿಯುಳ್ಳವನಾಗಿ ಪರಮೇ ಶ್ವರನ ಪೂಜೆಯನ್ನು ಮಾಡುತ್ತಿದ್ದನು.

೯–೧೦. ಅವನು ತಾನು ಸಂಪಾದಿಸಿದ ದ್ರವ್ಯವನ್ನು ಶಿವಭಕ್ತರಿಗೆ ದಾನ ಮಾಡುತ್ತಿದ್ದನು. ಶಿವವ್ರತಗಳಲ್ಲಿ ಉತ್ತಮವಾದ ಸೋಮವಾರ ವ್ರತವನ್ನು ಆಚರಿ ಸಲು ಅವನಿಗೆ ಬಹಳ ಆಸಕ್ತಿಯು ಇತ್ತು. ಇದರಿಂದ ಅವನು ಪ್ರತಿಸೋಮವಾರವೂ

**ನಿಯಮೇನೋಪವಾಸಂ ಚ ಪ್ರತಿಯಾಮಂ ಶಿವಾರ್ಚನಂ ।**
**ಕರೋತಿ ಶ್ರದ್ಧಯಾ ರಾತ್ರೌ ಶಿವರಾತ್ರೌ ಯಥಾ ತಥಾ　　　　॥ ೧೦ ॥**

**ಏವಂ ಭಕ್ತ್ಯಾ ಚ ವಿತ್ತೇನ ಧರ್ಮಮೇವ ಸದಾ ಕರೋತ್ ।**
**ನಿರ್ಗತ್ಯ ಕಲ್ಯಾಣಪುರಾತ್ ಸ್ವಸ್ಥಾನಾಚ್ಚ ಧನಂಜಯಃ　　　　॥ ೧೧ ॥**

**ವ್ಯಾಪಾರಾರ್ಥಂ ಸಮುದ್ಯುಕ್ತಃ ಪ್ರಯಯೌ ಪಶ್ಚಿಮಾಂ ದಿಶಂ ।**
**ತತ್ರ ದೇಶಾನ್ಪರಿಭ್ರಮ್ಯ ಬಹುಲಂ ಧನಮಾಹರತ್　　　　॥ ೧೨ ॥**

**ಆದಾಯ ತದ್ಧನಂ ವೈಶ್ಯಃ ಸ್ವಪುರಂ ಪ್ರತಿ ನಿರ್ಯಯೌ ।**
**ವಿಶ್ರಮ್ಯ ವಿಶ್ರಮ್ಯ ತತೋ ದಿನೈಃ ಕತಿಪಯೈಶ್ಚ ಸಃ　　　　॥ ೧೩ ॥**

**ಪ್ರಾಪ ದೈವವಶಾತ್ತತ್ತು ಕದಂಬವನಮದ್ಭುತಂ ।**
**ವೈಶ್ಯೇ ಗಚ್ಛತಿ ತಸ್ಮಿನ್ನೇ ವನಮಧ್ಯೇ ಮಹಾಮತಿಃ　　　　॥ ೧೪ ॥**

---

ನಿಯಮದಿಂದ ಉಪವಾಸವನ್ನು ಮಾಡುತ್ತಾ ರಾತ್ರಿಯಲ್ಲಿ ಪ್ರತಿಯೊಂದು ಯಾಮದಲ್ಲಿಯೂ, ಶಿವರಾತ್ರಿಯ ದಿವಸ ಭಕ್ತಿಯಿಂದ ಮಹೇಶ್ವರನ ಪೂಜೆಯನ್ನು ಆಚರಿಸುವಂತೆ ತಪ್ಪದೆ ಪೂಜಿಸುತ್ತಿದ್ದನು.

೧೧-೧೨. ಆ ಧನಂಜಯನು ಭಕ್ತಿಯಿಂದ ತನ್ನ ಸ್ಥಿತಿಗೆ ಅನುಸಾರವಾಗಿ ದ್ರವ್ಯದಿಂದ ಯಾವಾಗಲೂ ಧರ್ಮವನ್ನು ಮಾಡುತ್ತಿದ್ದನು. ಹೀಗೆ ಇರುವಾಗ ಒಂದು ದಿನ ಅವನು ತನ್ನ ಜೀವಿಕೆಯಾದ ವ್ಯಾಪಾರ ವೃತ್ತಿಯನ್ನು ಮಾಡಲು ಕಲ್ಯಾಣನಗರದಿಂದ ಪಶ್ಚಿಮ ದಿಕ್ಕಿಗೆ ಹೊರಟು, ಅನೇಕ ಪ್ರದೇಶಗಳಲ್ಲಿ ವ್ಯಾಪಾರವನ್ನು ಮಾಡಿಕೊಂಡು ಬಹಳ ಲಾಭವನ್ನು ಸಂಪಾದಿಸಿದನು. ಅವನು ಆ ದ್ರವ್ಯವೆಲ್ಲವನ್ನೂ ತನ್ನ ಜೊತೆಯಲ್ಲಿಯೇ ತರುವವನಾಗಿ ತನ್ನ ವಾಸಸ್ಥಾನವಾದ ಕಲ್ಯಾಣನಗರಕ್ಕೆ ಹಿಂತಿರಿಗಿ ಹೊರಟನು.

೧೩-೧೪. ಅವನು ತಾನು ಹಿಂತಿರಿಗಿ ಊರಿಗೆ ದಾರಿಯಲ್ಲಿ ಅಲ್ಲಲ್ಲೇ ವಿಶ್ರಮಿಸಿಕೊಂಡು ಬರುತ್ತಿರುವಾಗ ಕೆಲವು ದಿನಗಳು ಕಳೆದುಹೋದವು. ಒಂದು ದಿನ ಹೀಗೆಯೇ ಬುದ್ಧಿವಂತನಾದ ಅವನು ಊರಿಗೆ ಬರುತ್ತಿರುವಾಗ ಮಧ್ಯಮಾರ್ಗದಲ್ಲಿ ಈ ಕದಂಬವನವನ್ನು ಪ್ರವೇಶಿಸಿದನು. ಆ ವೈಶ್ಯನು ಕಾಡು ಮಧ್ಯಕ್ಕೆ ಬರುವ ಹೊತ್ತಿಗೆ ಸರಿಯಾಗಿ

**ಜಗಾಮಾಸ್ತಂ ದಿನಮಣಿಃ ಪದ್ಮಿನೀಪ್ರಾಣನಾಯಕಃ ।**
**ಪಕ್ಷಿಣಶ್ಚ ಮೃಗಾದ್ಯಾಶ್ಚ ಸ್ವವಾಸಂ ಸಹಸಾಯಯುಃ ॥ ೧೫ ॥**

**ಸಂಜಾತೇ ಚಾಂಧಕಾರೇ ತು ಸಿಂಹವ್ಯಾಘ್ರವರಾಹಕೈಃ ।**
**ಸದಾ ಸಂಚರಿತೇಽರಣ್ಯೇ ನಿರ್ಜನೇಽತಿಭಯಂಕರೇ ॥ ೧೬ ॥**

**ಸೋಮವಾರೋಪವಾಸೇನ ಶ್ರಾಂತ್ಯಾ ಭೀತ್ಯಾ ಚ ಸಂಯುತಃ ।**
**ಧನಂಜಯೋ ವೈಶ್ಯವರೋ ದಿಗ್ಭ್ರಮಾಮನುಭೂಯ ಚ ॥ ೧೭ ॥**

**ಶ್ರೀಮದ್ಧಾಲಾಸ್ಯನಾಥಸ್ಯ ಮಹಾಲಿಂಗಸ್ವರೂಪಿಣಃ ।**
**ವಿಮಾನಸ್ಯ ಚ ದಿವ್ಯಸ್ಯ ಸಮೀಪಂ ಸಂಪ್ರವಿಶ್ಯ ಚ ॥ ೧೮ ॥**

**ಗಂತುಂ ಕುತ್ರಾಪ್ಯಶಕ್ತಸ್ಸನ್ ತತ್ರ ತಿಷ್ಠತಿ ಚಿಂತಯಾ ।**
**ಸೋಮವಾರೇ ಮಹಾಲಿಂಗಂ ಸಮಾರಾಧಯಿತುಂ ಸುರಾಃ ॥ ೧೯ ॥**

---

ಸೂರ್ಯನು ಅಸ್ತನಾದನು. ಪಕ್ಷಿಗಳೂ, ಮೃಗಗಳೂ ತಮ್ಮ ತಮ್ಮ ವಾಸಸ್ಥಾನವನ್ನು ಸೇರಿಕೊಂಡವು. ಕತ್ತಲೆಯು ಕ್ರಮ ಕ್ರಮವಾಗಿ ಹೆಚ್ಚುತ್ತಾ ಬಂದಿತು ಕಾಡಿನಲ್ಲಿ ಸಿಂಹ, ಹುಲಿ, ಇವುಗಳು ತಿರುಗಾಡುವುದಕ್ಕೆ ಪ್ರಾರಂಭವಾಯಿತು.

೧೬-೧೭. ಆಗ ಧನಂಜಯನಿಗೆ ಮನುಷ್ಯರ ಸಂಚಾರವೇ ಇಲ್ಲದ ಆ ಕಾಡಿನಲ್ಲಿ ಸೋಮವಾರ ಉಪವಾಸವ್ರತದಿಂದ ಆಯಾಸ, ದುಷ್ಟಜಂತುಗಳಿಂದ ಪ್ರಾಣ ಭಯವೂ ಹೆಚ್ಚಿದಕಾರಣ, ಬುದ್ಧಿಗೆ ಯಾವುದೂ ತೋರದಂತೆ ಆಯಿತು. ಆಗ ಅವನು ಈ ಕಾಡಿನಲ್ಲಿ ಎಲ್ಲಿಯಾದರೂ ಒಂದು ಕಡೆಯಲ್ಲಿರಬೇಕೆಂದು ಯೋಚಿಸುತ್ತಾ ಅಲ್ಲಲ್ಲಿ ಸಂಚರಿಸುತ್ತಿರುವಾಗ ಸುಂದರೇಶ್ವರನ ವಿಮಾನವನ್ನು ನೋಡಿ ಅದರ ಹತ್ತಿರಕ್ಕೆ ಬಂದನು. ಅದರ ಒಳಗಡೆಗೆ ಹೋಗಿ ಮಹಾಲಿಂಗರೂಪದಿಂದ ಇರುವ ಹಾಲಾಸ್ಯೇಶ್ವರನನ್ನು ನೋಡಿದ್ದರಿಂದ ಅವನಿಗೆ ಬೇರೆಯಕಡೆಗೆ ಹೋಗುವುದಕ್ಕೆ ತೋರದೇ ಇರುವುದರಿಂದ ಅವನು ಅಲ್ಲಿಯೇ ಯೋಚಿಸುತ್ತಾ ನಿಂತು ಕೊಂಡನು.

೧೮-೨೦. ಆ ದಿವಸ ಸೋಮವಾರವಾಗಿದ್ದುದರಿಂದ ದೇವತೆಗಳು ಎಲ್ಲರೂ ಅಲ್ಲಿಗೆ ಬಂದರು. ಅವರೆಲ್ಲರೂ ಮಹಾತೀರ್ಥದಲ್ಲಿ ಸ್ನಾನವನ್ನು ಮಾಡಿಕೊಂಡು

ಸಮಾಗತ್ಯ ಮಹಾತೀರ್ಥೇ ಸಂಸ್ನಾಯ ಶ್ರದ್ಧಯಾ ಸಹ ।
ಆರೇಭಿರೇ ತದಾ ಪೂಜಾಂ ತೌರ್ಯತ್ರಿಕಪುರಸ್ಸರಂ ॥ ೨೦ ॥

ಹಾಲಾಸ್ಯನಾಥೋ ದೇವೇಶೋ ಭಕ್ತಾನಾಮಭಯಂಕರಃ ।
ಧನಂಜಯಸ್ಯ ಭಕ್ತಸ್ಯ ದಿವ್ಯದೃಷ್ಟಿಂ ದದೌ ತತಃ ॥ ೨೧ ॥

ಸುರಾಣಾಂ ತು ಸ್ವರೂಪಾಣಿ ವಿಲೋಕ್ಯಾತೀವ ವಿಸ್ಮಿತಃ ।
ದೇವೈಸ್ಸಹ ಮಹಾತೀರ್ಥೇ ಸಂಸ್ನಾಯ ಶ್ರದ್ಧಯಾ ಸಹ ॥ ೨೨ ॥

ಸ್ವಕೀಯಂ ನಿಯಮಂ ಸರ್ವಂ ನಿರ್ವೃತ್ಯ ಪ್ರೀತಿಸಂಯುತಃ ।
ಪ್ರದಕ್ಷಿಣಕ್ರಮೇಣೈವ ಗತ್ವಾ ಪ್ರಾಸಾದಮದ್ಭುತಂ । ॥ ೨೩ ॥

ದೃಷ್ಟಮಾತ್ರೇಣ ಪಾಪಘ್ನಂ ದೃಷ್ಟ್ವಾ ಭಕ್ತೋತ್ತಮೋ ರಹಃ ।
ಸಹಸಾಂತಃ ಸಂಪ್ರವಿಶ್ಯ ಮಹಾಲಿಂಗಂ ಸುರಾರ್ಚಿತಂ ॥ ೨೪ ॥

ಆಲೋಕ್ಯ ದಂಡವತ್ತಸ್ಮೈ ಲಿಂಗಾಯ ಪ್ರಣಿಪತ್ಯ ಚ ।
ಉತ್ಥಾಯ ಸನ್ನಿಧೌ ತಸ್ಥೌ ಪಶ್ಯನ್ಪೂಜಾಂ ಸುರೈಃ ಕೃತಾಂ ॥ ೨೫ ॥

ವಾದ್ಯಘೋಷಗಳೊಡನೆ ತಮ್ಮ ತಮ್ಮ ಪೂಜೆಯನ್ನು ಯಥಾವಿಧಿಯಾಗಿ ನೆರವೇರಿಸಲು ಉಪಕ್ರಮಿಸಿದರು. ದೇವ ದೇವನಾದ ಹಾಲಾಸ್ಯೇಶ್ವರನು ತನ್ನ ಭಕ್ತನಾದ ಧನಂಜಯ ವೈಶ್ಯನು ಅಲ್ಲಿಗೆ ಬಂದು ನಿಂತಿರುವುದನ್ನು ನೋಡಿ ಅವನಿಗೆ ಆಗ ದಿವ್ಯ ಜ್ಞಾನವು ಉಂಟಾಗುವಂತೆ ಅನುಗ್ರಹಿಸಿದನು. ಧನಂಜಯನಿಗೆ ದೇವನ ಅನುಗ್ರಹದಿಂದ ಬುದ್ಧಿಯಲ್ಲಿ ಪ್ರಕಾಶವು ಹೆಚ್ಚಿದ್ದರಿಂದ ದೇವತೆಗಳು ಮಾಡುತ್ತಿರುವ ಕೆಲಸವೂ ದೇವತೆಗಳ ಆಕಾರವೂ ಅವನಿಗೆ ಕಾಣಿಸಿದವು. ಅದರಿಂದ ಅವನಿಗೆ ಆಶ್ಚರ್ಯವು ಉಂಟಾಯಿತು.

೨೧--೨೫. ಆಗ ಅವನು ಸ್ನಾನವನ್ನು ಮಾಡುತ್ತಿರುವವರ ಜೊತೆಯಲ್ಲಿ ತಾನೂ ಭಕ್ತಿಯಿಂದ ಸ್ನಾನವನ್ನು ಮಾಡಿದನು. ಸಂತೋಷದಿಂದ ತನ್ನ ನಿಯಮಗಳೆಲ್ಲವನ್ನೂ ಆಚರಿಸಿಕೊಂಡನು. ಪ್ರದಕ್ಷಿಣೆಯನ್ನು ಮಾಡುತ್ತಾ ಹಾಲಾಸ್ಯೇಶ್ವರನ ಪ್ರಾಸಾದವನ್ನು ಪ್ರವೇಶಿಸಿದನು. ಭಕ್ತೋತ್ತಮನಾದ ಅವನು ಬೇಗನೆ ಒಳಗಡೆಗೆ ಹೋಗಿ ಅಲ್ಲಿ ದರ್ಶನ ಮಾತ್ರದಿಂದ ಪಾತಕಗಳನ್ನು ಪರಿಹಾರಮಾಡುವ, ದೇವತೆಗಳು ಪೂಜಿಸುತ್ತಿರುವ ಶಿವಲಿಂಗವನ್ನು ನೋಡಿದನು. ಅವನು ನೋಡಿದಕೂಡಲೇ ದಂಡಪ್ರಣಾಮವನ್ನು ಮಾಡಿ. ಮೇಲಕ್ಕೆ ಎದ್ದು, ಹತ್ತಿರದಲ್ಲಿಯೇ ನಿಂತುಕೊಂಡು ದೇವತೆಗಳು ರಹಸ್ಯವಾಗಿ ಆಗತಾನೆ ಆಚರಿಸಿರುವ ಪೂಜೆಯನ್ನು ನೋಡಿದನು.

ಸ್ವಸಂಭಾರಾತ್ಸ್ವಯಮಪಿ ಕಸ್ತೂರೀಕುಂಕುಮಾದಿಕಂ ।
ಗಂಧದ್ರವ್ಯಂ ಸಮಾನೀಯ ಪೇಷಯಿತ್ವಾ ಹಿಮೋದಕೈಃ । ॥ ೨೬ ॥

ಲಿಂಗಮಾಲೇಪಯಾಮಾಸ ದಿವ್ಯಗಂಧವಿಲೇಪಿತಂ ।
ಪುನಸ್ತುತ್ವಾ ನಮಸ್ಕೃತ್ಯ ಸನ್ನಿಧೌ ಮಂಟಪೇ ಶುಭೇ ॥ ೨೭ ॥

ಸ್ವಯಂ ಚ ಗುರುಣಾ ದತ್ತಂ ಲಿಂಗಂ ಚ ಪ್ರತಿಯಾಮಕಂ ।
ಪೂಜಯಾಮಾಸ ಸುಪ್ರೀತ್ಯಾ ಸೋಮವಾರವ್ರತಪ್ರಿಯಃ ॥ ೨೮ ॥

ಪುನಸ್ತು ದೃಷ್ಟ್ವಾತು ತದಾ ಹಾಲಾಸ್ಯೇಶಂ ಸುರಾರ್ಚಿತಂ ।
ಕೃತಾರ್ಥೋಽಹಂ ಕೃತಾರ್ಥೋಽಹಂ ಇತಿ ಬುಧ್ವಾ ವಿಚಾರ್ಯ ಚ ॥ ೨೯ ॥

ತೌರ್ಯತ್ರಿಕೇನ ದಿವ್ಯೇನ ದೇವಾನಾಂ ದರ್ಶನೇನ ಚ ।
ನಿನಾಯ ಕ್ಷಣವದ್ರಾತ್ರಿಂ ವೈಶ್ಯವರ್ಯೋ ಧನಂಜಯಃ ॥ ೩೦ ॥

ತತಃ ಪ್ರಭಾತೇ ವಿದುಲೇ ಸ್ವಚ್ಛಂದಃ ಸೋಮಸುಂದರಃ ।
ದಿವ್ಯದೃಷ್ಟಿತಿರೋಧಾನಂ ಲೀಲಯಾ ತಸ್ಯ ಚಾಕರೋತ್ ॥ ೩೧ ॥

೨೬–೨೯. ಆಗ ಅವನು ತನ್ನ ಪದಾರ್ಥಗಳಲ್ಲಿರುವ ಕಸ್ತೂರಿಯೇ ಮೊದಲಾದ ಗಂಧದ್ರವ್ಯಗಳನ್ನು ತಾನೇ ತೆಗೆದುಕೊಂಡು, ಹಿಮದ ನೀರಿನಿಂದ ಚೆನ್ನಾಗಿ ಅರೆದು, ಉತ್ತಮವಾದ ಗಂಧವನ್ನು ಶಿವಲಿಂಗಕ್ಕೆ ಅರ್ಪಿಸಿದನು. ಅವನು ಪುನಃ ಸ್ತೋತ್ರ ಮಾಡಿ ನಮಸ್ಕರಿಸಿದನು. ಅನಂತರ ಆ ಮಂಟಪದ ಹತ್ತಿರದಲ್ಲಿಯೇ ತನಗೆ ಗುರುವು ಕೊಟ್ಟಿರುವ ಲಿಂಗವನ್ನು ನಾಲ್ಕು ಯಾಮಗಳಲ್ಲಿಯೂ ಪೂಜಿಸಿದನು. ಸೋಮವಾರ ವ್ರತಾಚರಣೆಯಲ್ಲಿ ಆಸಕ್ತನಾದ ಆ ಧನಂಜಯನು ದೇವ ಪೂಜಿತವಾದ ಹಾಲಾಸ್ಯೇಶ್ವರನನ್ನು ದರ್ಶನಮಾಡಿ, ತಾನು ಕೃತಾರ್ಥನಾದೆನೆಂದು ಚೆನ್ನಾಗಿ ತಿಳಿದುಕೊಂಡನು

೩೦–೩೧. ಅವನು ನೃತ್ಯಗೀತ ವಾದ್ಯಗಳಿಂದ ಕೂಡಿರುವ ದೇವತೆಗಳ ಪೂಜಾದರ್ಶನ ಮತ್ತು ದೇವತೆಗಳ ದರ್ಶನಗಳಿಂದ ಆ ರಾತ್ರಿಯನ್ನು ಒಂದು ಕ್ಷಣ ದಂತೆ ಅಲ್ಲಿ ಕಳೆದನು. ತನ್ನ ಇಚ್ಛೆಯಂತೆ ಇರುವ ಸೋಮಸುಂದರೇಶ್ವರನು ಬೆಳಗಾದಕೂಡಲೆ ಲೀಲೆಯಿಂದ ತಾನು ಅನುಗ್ರಹಿಸಿದ್ದ ದಿವ್ಯದೃಷ್ಟಿಯನ್ನು ವೈಶ್ಯನಿಂದ

ಲಿಂಗಮಾತ್ರಂ ವಿಮಾನಂ ಚ ವಿಲೋಕ್ಯ ವನಮಧ್ಯಗಂ ।
ಆಶ್ಚರ್ಯಾವಿಷ್ಟಚಿತ್ತೋಽಭೂತ್ಕಿಮೇತದಿತಿ ಚಿಂತಯನ್ ॥ ೩೨ ॥

ಭಕ್ತಾತಿವತ್ಸಲೇನೈವ ಹಾಲಾಸ್ಯೇಶೇನ ರಕ್ಷಿತಃ ।
ಉತ್ಥಿತೇ ಸತಿ ತಿಗ್ಮಾಂಶೌ ಪರಿಜ್ಞಾಯ ಮಹಾಪಥಂ ॥ ೩೩ ॥

ಕಲ್ಯಾಣಪುರಮಾಸಾದ್ಯ ಸ್ವಗೃಹಂ ಸಂಪ್ರವಿಶ್ಯ ಚ ।
ಸೋಮವಂಶಪ್ರಸೂತಾನಾಮಗ್ರಗಣ್ಯೋ ಮಹೀಕ್ಷಿತಾಂ ॥ ೩೪ ॥

ಸೋಮವತ್ಸ್ವಚ್ಛಹೃದಯಶ್ಶಾಖ್ಯಯಾ ಕುಲಶೇಖರಃ ।
ಅತುಲಶ್ಶಿವಭಕ್ತ್ಯಾ ಚ ವೀರ್ಯೇಣ ಯಶಸಾ ಶ್ರಿಯಾ ॥ ೩೫ ॥

ತತ್ರ ಕಲ್ಯಾಣನಗರೇ ಪಾಲಯನ್ನಿಖಿಲಾಃ ಪ್ರಜಾಃ
ರಾಜ್ಯಂ ಚಕಾರ ನೀತ್ಯಾಯಸ್ತಂ ಸಂಪ್ರಾಪ್ಯ ಧನಂಜಯಃ ॥ ೩೬ ॥

ನಿಖಿಲಂ ರಾತ್ರಿವೃತ್ತಾಂತಂ ರಾಜ್ಞೇ ಸರ್ವಂ ವ್ಯಜಿಜ್ಞಪತ್ ।
ಪ್ರೋಕ್ತಂ ವೈಶ್ಯೇನ ವೃತ್ತಾಂತಂ ಶ್ರುತ್ವಾ ಪಾಂಡ್ಯಮಹೀಪತಿಃ ॥ ೩೭ ॥

---

ಹಿಂದಕ್ಕೆ ತೆಗೆದುಕೊಂಡನು. ಆಗ ಆ ಧನಂಜಯನಿಗೆ ಶಿವಲಿಂಗವೂ, ವಿಮಾನವೂ ಮಾತ್ರ ಕಾಣಿಸುತ್ತಿತ್ತು. ಆ ಕಾಡಿನ ಮಧ್ಯದಲ್ಲಿ ಈ ಆಶ್ಚರ್ಯವನ್ನು ನೋಡಿದ ಧನಂಜಯನು ಭಕ್ತರಲ್ಲಿ ಅತಿಪ್ರಿಯನಾದ ಹಾಲಾಸ್ಯೇಶ್ವರನ ಕರುಣೆಯಿಂದ ಸುರಕ್ಷಿತನಾಗಿ ರಾತ್ರಿಯಲ್ಲಿ ತಾನು ನೋಡಿದ್ದೆಲ್ಲವನ್ನೂ, ಮನಸ್ಸಿನಲ್ಲಿಯೇ ಯೋಚಿಸುತ್ತಾ, ಸೂರ್ಯೋದಯವಾದನಂತರ ದಾರಿಯನ್ನು ಹುಡುಕಿಕೊಂಡು ತನ್ನ ಮನೆಗೆ ಬಂದು ಸೇರಿದನು.

೩೪. ಆಗ ಚಂದ್ರವಂಶರಾಜರಲ್ಲಿ ಪ್ರಸಿದ್ಧನಾದ, ಚಂದ್ರನಂತೆ ನಿರ್ಮಲ ಹೃದಯನಾದ ಕುಲಶೇಖರನು ಅಲ್ಲಿ ರಾಜ್ಯವನ್ನು ಆಳುತ್ತಿರುವುದರಿಂದ, ಈ ಧನಂಜಯನು ಅವನನ್ನು ನೋಡಿದನು.

೩೫-೩೭. ಕುಲಶೇಖರರಾಜನು ಹೆಚ್ಚಾದ ಶಿವಭಕ್ತಿಯುಳ್ಳವನಾಗಿ, ಯಶಸ್ಸು, ಐಶ್ವರ್ಯ, ಪರಾಕ್ರಮ, ಪ್ರಜಾನುರಾಗಗಳಿಂದ ಪ್ರಕಾಶಿಸುತ್ತಿದ್ದನು. ಆ ರಾಜನನ್ನು ಈ ಧನಂಜಯನು ನೋಡಿ, ದಾರಿಯಲ್ಲಿ ತಾನು ನೋಡಿದ ರಾತ್ರಿ ವೃತ್ತಾಂತವೆಲ್ಲವನ್ನೂ ಅವನಿಗೆ ತಿಳಿಸಿದನು. ಪಾಂಡ್ಯರಾಜನು ವೈಶ್ಯನು ಹೇಳಿದ ವೃತ್ತಾಂತವೆಲ್ಲವನ್ನೂ ಕೇಳಿದನು.

ಶಿವಪ್ರಭಾವಂ ಸಂಚಿಂತ್ಯ ರಾತ್ರೌ ಸುಷ್ವಾಪ ಭೂಪತಿಃ ।
ಕದಂಬವನವಾಸೀಶಃ ಕೃಪಯಾ ಪರಯಾ ಯುತಃ ॥ ೩೮ ॥

ತದಾ ಸ್ವಪ್ನೇಽವದದ್ರಾಜ್ಞೇ ಗಿರಿಶಸ್ಸಿದ್ಧವೇಷವಾನ್ ।
ರಾಜಶ್ಶಶಿಕುಲಾಧೀಶ ಕುಲಶೇಖರ ಸುವ್ರತ ॥ ೩೯ ॥

ಕದಂಬಕಾನನಂ ನಾಮ್ನಾ ಪಶ್ಚಿಮೇಽಸ್ತಿ ವನಂ ಮಹತ್ ।
ಮತ್ಪ್ರಾಸಾದಂ ಚ ತತ್ರಾಸ್ತೇ ಮಹೇಂದ್ರೇಣ ವಿನಿರ್ಮಿತಂ ॥ ೪೦ ॥

ತದ್ವನಂ ತೇ ಪುರಂ ಭೂಯಾದಿತ್ಯುಕ್ತ್ವಾ ಸ ತಿರೋದಧೇ ।
ರಾಜಾ ಪ್ರಭಾತೇ ಮಂತ್ರಿಭ್ಯಃ ಸ್ವಪ್ನವೃತ್ತಾಂತಮಬ್ರವೀತ್ ॥ ೪೧ ॥

ಶ್ರುತ್ವಾ ತೇ ವಿಸ್ಮಿತಾಸ್ಸರ್ವೇ ಪ್ರತ್ಯೂಚುಃ ಪೃಥಿವೀಪತಿಂ ।
ಯಥಾಭಾಷಿತಮೀಶೇನ ಕರ್ತವ್ಯಂ ಚ ತ್ವಯಾ ತಥಾ ॥ ೪೨ ॥

ಏವಮುಕ್ತೇಷ್ವಮಾತ್ಯೇಷು ಸದ್ಯೋ ಗತ್ವಾ ಮಹಾವನಂ ।
ಅಪಶ್ಯದೈಂದ್ರಂ ಪ್ರಾಸಾದಂ ಪ್ರಸನ್ನಾಂ ಹೇಮಪದ್ಮಿನೀಂ ॥ ೪೩ ॥

೩೮–೪೦. ಶಿವನ ಮಹಿಮೆಯನ್ನು ಧ್ಯಾನಮಾಡುತ್ತಾ ರಾತ್ರಿಯಲ್ಲಿ ಮಲಗಿಕೊಂಡನು. ಆಗ ಸುಂದರೇಶ್ವರನು ದಯೆಯಿಂದ, ಅವನ ಸ್ವಪ್ನದಲ್ಲಿ ಅವನಿಗೆ ಸಿದ್ಧವೇಷದಿಂದ ಕಾಣಿಸಿಕೊಂಡು, ಚಂದ್ರವಂಶದಲ್ಲಿ ಅವತರಿಸಿರುವ ರಾಜರಿಗೆ ಉತ್ತಮನೇ, ಸರಿಯಾಗಿ ವ್ರತವನ್ನು ಆಚರಿಸುತ್ತಿರುವ, ಎಲೆ, ಕುಲಶೇಖರ ರಾಜನೇ, ಇಲ್ಲಿಗೆ ಪಶ್ಚಿಮದಲ್ಲಿರುವ ಕದಂಬ ಕಾನನದಲ್ಲಿ ಇಂದ್ರನು ನಿರ್ಮಿಸಿರುವ ನನ್ನ ಪ್ರಾಸಾದವು ಇರುವುದು. ಆ ವನವು ಇನ್ನು ಮುಂದೆ ನಿನ್ನ ನಗರವಾಗುವುದು. ಎಂದು ಹೇಳಿ ಅದೃಶ್ಯನಾದನು. ಬೆಳಗಾದನಂತರ ರಾಜನು ತನ್ನ ಸ್ವಪ್ನವನ್ನು ಮಂತ್ರಿಗಳಿಗೆ ಹೇಳಿದನು.

೪೧–೪೩. ಅವರೆಲ್ಲರೂ ಅದನ್ನು ಕೇಳಿ ಆಶ್ಚರ್ಯದಿಂದ “ ಈಶ್ವರನು ಹೇಳಿದಂತೆ ನೀನು ಮಾಡತಕ್ಕದ್ದು ” ಎಂದು ರಾಜನಿಗೆ ಹೇಳಿದರು. ಮಂತ್ರಿಗಳು ಹೀಗೆ ಹೇಳುತ್ತಿರುವುದನ್ನು ಕೇಳಿ ಕುಲಶೇಖರರಾಜನು ಕಾಡಿಗೆ ಹೋಗಿ ಇಂದ್ರನು ಮಾಡಿರುವ ಪ್ರಾಸಾದವನ್ನೂ, ಹೇಮಪದ್ಮಿನೀತೀರ್ಥವನ್ನೂ ನೋಡಿದನು. ಅವನು

ನೃಪತಿಃ ಸಚಿವೈಃ ಸಾರ್ಧಂ ತೀರ್ಥೇ ಸ್ನಾತ್ವಾದರೇಣ ಚ ।
ಸ್ವಾಯಂಭುವಂ ಮಹಾಲಿಂಗಂ ದೃಷ್ಟ್ವಾ ಭಕ್ತ್ಯಾ ಪ್ರಣಮ್ಯ ಚ ॥ ೪೪ ॥

ಬಹಿರ್ನಿರ್ಗತ್ಯ ಪರಿತೋ ವಿಲೋಕ್ಯ ನಿಬಿಡಂ ವನಂ ।
ನಗರೀಂ ಕರ್ತುಮುದ್ಯುಕ್ತೋ ನೃಪಾಲೀಕುಲಶೇಖರೇ ॥ ೪೫ ॥

ಸಿದ್ಧರೂಪೀ ಶಿವಃ ಸ್ವಪ್ನೇ ಯಥಾ ದೃಷ್ಟೋ ಮಹೀಭುಜಾ ।
ತಥಾ ವಿಧಂ ವಪುರ್ಧೃತ್ವಾ ಶಂಕರಶ್ಚಿತ್ರವೈಭವಃ ॥ ೪೬ ॥

ಪುರಸೀಮಾಂ ದರ್ಶಯಿತ್ವಾ ತತ್ರೈವಾಂತರ್ಧಿಮಾಪ ಸಃ ।
ಅಮಾತ್ಯೇಭ್ಯಸ್ತದಾ ಪ್ರಾಹ ರಾಜಾ ಕೌತೂಹಲೇನ ಚ ॥ ೪೭ ॥

ಸ್ವಪ್ನೇ ಯಸ್ತು ಮಯಾ ದೃಷ್ಟಃ ಸಿದ್ಧರೂಪೀ ಮಹೇಶ್ವರಃ ।
ಸ ಏವ ತತ್ಸ್ವರೂಪೇಣ ಪ್ರತ್ಯಕ್ಷೀಕೃತ್ಯ ಚಾಧುನಾ ॥ ೪೮ ॥

ಅಜ್ಞಾತಾಂ ಪುರಸೀಮಾಂ ಚ ವ್ಯಕ್ತೀಕೃತ್ಯ ತಿರೋಹಿತಃ ।
ಇತಿ ಭೂಪವಚಶ್ಶ್ರುತ್ವಾ ಸಚಿವಾದ್ಯಾಸ್ಸುವಿಸ್ಮಿತಾಃ ॥ ೪೯ ॥

ಕೂಡಲೆ ತನ್ನ ಮಂತ್ರಿಗಳೊಡನೆ ಆ ತೀರ್ಥದಲ್ಲಿ ಸ್ನಾನವನ್ನು ಮಾಡಿ, ಭಕ್ತಿಯಿಂದ ಆ ಮಹಾಲಿಂಗವನ್ನು ದರ್ಶನಮಾಡಿ, ನಮಸ್ಕರಿಸಿ, ಹೊರಗಡೆಯಲ್ಲಿ ಸುತ್ತಲೂ ಇರುವ ದಟ್ಟವಾದ ಕಾಡನ್ನು ಪಟ್ಟಣವನ್ನಾಗಿ ಮಾಡಲು ಉದ್ಯುಕ್ತನಾದನು.

೪೬-೪೯. ಆಗ ವಿಚಿತ್ರವಾದ ಮಹಿಮೆಯುಳ್ಳ ಪರಮೇಶ್ವರನು ಹಿಂದೆ ರಾಜನಿಗೆ ಸ್ವಪ್ನದಲ್ಲಿ ತಾನು ಕಾಣಿಸಿಕೊಂಡಂತೆಯೇ ಸಿದ್ಧರೂಪದಿಂದ ಕಾಣಿಸಿಕೊಂಡು, ಮುಂದೆ ನಿರ್ಮಿಸಬೇಕಾಗಿರುವ ನಗರದ ಎಲ್ಲೆಯನ್ನು ತೋರಿಸಿ ಅದೃಶ್ಯನಾದನು. ರಾಜನು ಅದನ್ನು ನೋಡಿ "ಈಗ ನಾನು ಸ್ವಪ್ನದಲ್ಲಿ ನೋಡಿದ ಮಹೇಶ್ವರನು, ಅದೇ ರೂಪದಿಂದ ಪ್ರತ್ಯಕ್ಷನಾಗಿ ನಮಗೆ ತಿಳಿಯದೆ ಇರುವ ನಗರದ ಎಲ್ಲೆಯನ್ನು ತೋರಿಸಿ ಅದೃಶ್ಯನಾದನು ಎಂದು ತನ್ನ ಮಂತ್ರಿಗಳಿಗೆ ಹೇಳಿದನು. ಅದನ್ನು ಕೇಳಿ ಅವರೆಲ್ಲರೂ ಆಶ್ಚರ್ಯವುಳ್ಳವರಾದರು.

ಪ್ರಾಹುಸ್ಸರ್ವೇ ಮಹೀಪಾಲಂ ತವ ಶ್ರೇಯೋಭಿವೃದ್ಧಯೇ ।
ಅನುಗ್ರಹಾಯ ಸರ್ವೇಷಾಂ ಜನಾನಾಂ ಚ ಮಹೇಶ್ವರಃ ॥ ೫೦ ॥

ಅದೃಶ್ಯೋ ಬ್ರಹ್ಮವಿಷ್ಣ್ವೋಶ್ಚ ದೃಶ್ಯೋ ಭೂದಿಹ ಕಾನನೇ ।
ತಸ್ಮಾದವಶ್ಯಂ ಕರ್ತವ್ಯಮಿದಂ ನೀಪವನಂ ಪುರಂ ॥ ೫೧ ॥

ಗಜೈಶ್ಚ ದಂತಿಭಿಸ್ಸಿಂಹೈರ್ವಿಮಾನಂ ಚ ವಿರಾಜಿತಂ ।
ವಿದ್ಯತೇ ದೋಷರಹಿತಂ ಪ್ರಾಕಾರಂ ಗೋಪುರಾದಿಕಂ ॥ ೫೨ ॥

ಶುದ್ಧಸ್ಫಟಿಕಸಂಕಾಶಂ ಕರ್ತವ್ಯಮಧುನಾ ತ್ವಯಾ ।
ಸಚಿವೈರೇವಮುಕ್ತಸ್ತು ಮಹಾಪ್ರೀತ್ಯಾ ಮಹೀಪತಿ: ॥ ೫೩ ॥

ಕ್ಷಣೇನ ಕಾನನಂ ಸರ್ವಂ ಛೇದಯಿತ್ವಾ ಪರಶ್ವಥೈಃ
ನಿಮ್ನೋನ್ನತಾಭ್ಯಾಂ ರಹಿತಂ ಭೂತಲಂ ಚ ಸಮಂತತಃ ॥ ೫೪ ॥

ಕಾರಯಿತ್ವಾ ಶಿವಸ್ಯಾಪಿ ಪ್ರಾಕಾರಂ ಗೋಪುರಾದಿಕಂ
ನವೀಚಕಾರ ಮತಿಮಾನ್ದಶಭಿರ್ದಿವಸೈರ್ನೃಪಃ ॥ ೫೫ ॥

೫೦-೫೨. ಆಗ ಅವರೆಲ್ಲರೂ, "ನಿನ್ನ ಶ್ರೇಯಸ್ಸಿನ ಅಭಿವೃದ್ಧಿಗಾಗಿಯೇ ಬ್ರಹ್ಮವಿಷ್ಣುಗಳಿಗೂ ಅದೃಶ್ಯನಾದ ಪರಮೇಶ್ವರನು ನಿನಗೆ ಕಾಣಿಸಿಕೊಂಡನು. ಎಲ್ಲರಿಗೂ ಅನುಗ್ರಹವನ್ನು ಮಾಡುವುದಕ್ಕಾಗಿಯೇ ಅವನು ಹೀಗೆ ಮಾಡಿರುವನು. ಈ ದೊಡ್ಡಕಾಡನ್ನೆಲ್ಲವನ್ನೂ ಅವಶ್ಯವಾಗಿ ನಗರವನ್ನು ಮಾಡಲೇಬೇಕು. ಸಿಂಹಗಳೂ, ಆನೆಗಳೂ ಈ ದೇವನ ವಿಮಾನದಲ್ಲಿ ಕಾಣುತ್ತಿರುವವು. ಈ ದೇವಪ್ರಾಸಾದದ ಗೋಪುರ, ಪ್ರಾಕಾರ, ಇವೆಲ್ಲವನ್ನೂ ಕೊಂಚವೂ ದೋಷವಿಲ್ಲದೆ ಸ್ಫಟಿಕದಂತೆ ಹೊಳೆಯುತ್ತಿರುವಂತೆ ನಾವೆಲ್ಲರೂ ಮಾಡಬೇಕು." ಎಂದು ದೊರೆಯ ಸಂಗಡ ಹೇಳಿದರು.

೫೩-೫೭ ರಾಜನು ಮಂತ್ರಿಗಳ ಮಾತನ್ನು ಕೇಳಿ, ಬಹಳ ಸಂತೋಷದಿಂದ, ಒಂದು ಕ್ಷಣದಲ್ಲಿ ಆ ಕಾಡೆಲ್ಲವನ್ನೂ ಕೊಡಲಿಯಿಂದ ಕಡಿಸಿ, ನೆಲವೆಲ್ಲವನ್ನೂ ಹಳ್ಳ, ತಿಟ್ಟುಗಳು ಇಲ್ಲದಂತೆ, ಸಮತಲವಾಗಿ ಮಾಡಿಸಿದನು. ಆ ರಾಜನು ಹತ್ತು ದಿನಗಳ ವಳಗೆ ಶಿವಪ್ರಾಸಾದದ ಗೋಪುರವೇ ಮೊದಲುಗೊಂಡು ಎಲ್ಲವನ್ನೂ ಹೊಸದಾಗಿರುವ ಹಾಗೆ ಮಾಡಿಸಿದನು. ಅವನು ಕಾಡೆಲ್ಲವನ್ನೂ ನಗರವನ್ನಾಗಿ ಮಾಡಿ, ಅದರಲ್ಲಿ ದೊಡ್ಡ ಬೀದಿಗಳು, ಅವುಗಳಲ್ಲಿ ಮನೆಗಳ ಸಾಲು, ಹೆಬ್ಬಾಗಿಲಿನಲ್ಲಿ ಪೂರ್ಣಕಲಶಗಳು

ಕಾನನಂ ನಗರೀಂ ಕೃತ್ವಾ ಮಂದಿರಶ್ರೇಣಿಮಂಡಿತಾಂ ।
ಪ್ರತಿದ್ವಾರಂ ವಿತರ್ದಿಸ್ಥಪೂರ್ಣಕುಂಭಸುಶೋಭಿತಾಂ ॥ ೫೯ ॥

ತೋರಣೈಶ್ಚ ಪತಾಕಾಭಿಃ ರಂಭಾಸ್ತಂಭೈರಲಂಕೃತಾಂ ।
ಫುಲ್ಲಾರವಿಂದಕಲ್ಹಾರಮುಕರಂದಸಮುತ್ಸುಕೈಃ ॥ ೫೭ ॥

ಭ್ರಮರೈಶ್ಶೋಭಮಾನಾನಿ ತಟಾಕಾನಿ ವಿಧಾಯ ಚ ।
ಪೂಗೈಶ್ಚೂತೈರ್ನಾರಿಕೇಳೈಶ್ಚಂಪಕೈಃ ಪನಸೈರಪಿ ॥ ೫೮ ॥

ಮಾತುಲುಂಗೈಶ್ಚ ಜಂಬೀರೈರ್ನಾರಂಗೈರ್ಬಿಲ್ವವೃಕ್ಷಕೈಃ ।
ಅನ್ಯೈಶ್ಚ ಪುಷ್ಪವೃಕ್ಷೈಶ್ಚ ವಿಧಾಯೋಪವನಾನಿ ಚ ॥ ೫೯ ॥

ಯಾಯಜೂಕೈರ್ಭೂಸುರೈಶ್ಚ ಸರ್ವವಿದ್ಯಾವಿಶಾರದೈಃ ।
ವೀರೈಶ್ಚ ಬಾಹುಜೈರ್ವೈಶ್ಯೈರ್ವೃಷಲೈರಪರೈರ್ಜನೈಃ ॥ ೬೦ ॥

ಪ್ರತಿಲೋಮಾನುಲೋಮಾದ್ಯೈರ್ನಿಬಿಡೀಕೃತ್ಯ ತತ್ಪುರಂ ।
ಮಹಾಲಿಂಗಸ್ಯ ಪೂಜಾರ್ಥಂ ಶಿವಸ್ಪೃಷ್ಟ್ವಾನ್ದ್ವಿಜೋತ್ತಮಾನ್ ॥ ೬೧ ॥

ಇರುವಂತೆ ಮಾಡಿಸಿ, ಅಲ್ಲಲ್ಲಿ ಬಾಳೆಯಕಂಬಗಳು, ಅವುಗಳಿಗೆ ತೋರಣ, ಧ್ವಜಪಟ ಇವುಗಳಿಂದ ಅಲಂಕಾರ ಮಾಡಿಸಿದನು. ಅಲ್ಲಲ್ಲಿ ಕೆರೆಗಳನ್ನು ಕಟ್ಟಿಸಿ ಅವುಗಳಲ್ಲಿ ಕಲ್ಹಾರ, ತಾವರೆಹೂವು, ಇವುಗಳ ಗಿಡಗಳನ್ನು ನೆಡಿಸಿದನು.

೫೮-೫೯. ಆ ಕೊಳಗಳ ಸುತ್ತಲೂ ಅಡಿಕೆ, ತೆಂಗು, ಸಂಪಿಗೆ, ಹಲಸು, ನೇರಳೆ, ಮಾದಲದಗಿಡ, ಕಿತ್ತಲೆ, ಬಿಲ್ವಪತ್ರೆ, ಇವೇ ಮುಂತಾದ ಗಿಡಗಳನ್ನು ಹಾಕಿಸಿ, ಉದ್ಯಾನವನವನ್ನು ಮಾಡಿಸಿದನು. ಈ ಉದ್ಯಾನವನದಲ್ಲಿ ಬಹಳ ವಿಧವಾದ ಹೂವಿನ ಗಿಡಗಳನ್ನು ಹಾಕಿಸಿದನು.

೬೦-೬೩. ಹೊಸದಾಗಿ ನಿರ್ಮಿಸಿದ ಈ ನಗರದಲ್ಲಿ ಯಜ್ಞ, ಯಾಗಾದಿಗಳನ್ನು ಮಾಡುವ ಮಂತ್ರಜ್ಞರಾದವರು, ಎಲ್ಲಾ ವಿದ್ಯೆಗಳಲ್ಲಿಯೂ ನಿಪುಣರಾದವರು, ಶೂರರಾದ ಕ್ಷತ್ರಿಯರು, ಧನಿಕರಾದ ವೈಶ್ಯರು, ಶೂದ್ರರು, ಮುಂತಾದ ಇತರ ಎಲ್ಲಾ ವಿಧವಾದ ಜನರಿಗೂ ವಾಸಕ್ಕೆ ಅನುಕೂಲವಾಗಿರುವಂತೆ ಮಾಡಿದನು. ಪ್ರತಿಲೋಮ ಅನುಲೋಮ ಜಾತಿಯವರೆಲ್ಲರೂ ಕೂಡ ಆ ನಗರದಲ್ಲಿ ವಾಸಮಾಡಲು ಬಂದು ಸೇರಿದರು. ಇವರಿಂದ ಆ ನಗರವು ತುಂಬಿಹೋಯಿತು. ಮಹಾಲಿಂಗದ ಪೂಜೆಯು

**ಗಂಗಾತೀರಸ್ಥಿತಾನ್ವಿಪ್ರಾನ್ಸಮಾಹೂಯ ಮಹೀಪತಿಃ ।**
**ಸಿದ್ಧಾಂತೈಃ ಕಾಮಿಕಾದ್ಯೈಶ್ಚ ಮಹಾಲಿಂಗಂ ನಿರಂತರಂ ॥ ೬೨ ॥**

**ಪೂಜಯಂತ್ವಿತಿ ಸಂಪ್ರಾರ್ಥ್ಯ ವೃತ್ತಿಂ ತೇಭ್ಯಃ ಪ್ರದಾಯ ಚ ।**
**ತೈಃ ಪೂಜಾಂ ಕಾರಯಾಮಾಸ ಮಹಾವಿಭವವಿಸ್ತರೈಃ ॥ ೬೩ ॥**

**ದೇವಾಲಯೇಶದಿಗ್ಭಾಗೇ ಸ್ವಸ್ಯ ಹರ್ಮ್ಯಂ ಮಹಾದ್ಭುತಂ ।**
**ಸಂಪಾದ್ಯ ತತ್ರ ನಿವಸನ್ಶಿವಭಕ್ತಿಪರಾಯಣಃ ॥ ೬೪ ॥**

**ಶ್ರೀಹಾಲಾಸ್ಯೇಶ್ವರಂ ಲಿಂಗಂ ತ್ರಿಕಾಲಮಭಿವಂದ್ಯ ಚ ।**
**ಸುಖೇನ ತಿಷ್ಠತಿ ಪುರೇ ದೇವೇಂದ್ರಸ್ತ್ರಿದಿವೇ ಯಥಾ ॥ ೬೫ ॥**

**ತತ್ಕಾನನಂ ನೃಪಃ ಕೃತ್ವಾ ಪುರೀಮತ್ಯಮರಾವತೀಂ ।**
**ವ್ಯಾಘ್ರಸಿಂಹರ್ಕ್ಷಶರಭೈಸ್ಸತ್ವೈಃ ಸಂಚಾರಿತಂ ವನಂ ॥ ೬೬ ॥**

**ಕೇನ ಶುದ್ಧಂ ಭವೇತ್ಸದ್ಯಃ ಕೇನ ರಕ್ಷಾಂ ಚ ಯಾಸ್ಯತಿ ।**
**ಶಿವಭಕ್ತೋ ಮಹೀಪಾಲೋ ಮನುಸ್ಯೇವಮಚಿಂತಯೇತ್ ॥ ೬೭ ॥**

ಶಾಸ್ತ್ರಕ್ಕನುಸಾರವಾಗಿ ಆಯಾಯ ಕಾಲಕ್ಕೆ ಸರಿಯಾಗಿ ನಡೆಯುವಂತೆ ಗಂಗಾತೀರದಲ್ಲಿ ಇದ್ದ ಪವಿತ್ರರಾದವರನ್ನು ಕರೆಸಿ, ಅವರಿಗೆ ಜೀವಿಕೆಯನ್ನು ಮಾಡಿಕೊಟ್ಟು, ಶಿವನನ್ನು ಪೂಜಿಸಲು ಹೇಳಿ, ಕಾಮಿಕಾದ್ಯಾಗಮಗಳಲ್ಲಿ ಹೇಳಿರುವಂತೆ ತಪ್ಪದೆ ಪೂಜೆಯನ್ನು ನಡೆಸಲು ತಕ್ಕ ಕ್ರಮಗಳನ್ನು ಮಾಡಿಸಿದನು.

೬೪–೬೫. ಕುಲಶೇಖರ ರಾಜನು ಮಾಡಿರುವ ಕ್ರಮಗಳಿಂದ ಹಾಲಾಸ್ಯೇಶ್ವರನಿಗೆ ಪ್ರತಿದಿನದಲ್ಲಿಯೂ ಪೂಜೆಯು ಬಹಳ ವೈಭವದಿಂದ ನಡೆಯುತ್ತಿತ್ತು. ರಾಜನು ದೇವಸ್ಥಾನದ ಈಶಾನ್ಯ ದಿಕ್ಕಿನಲ್ಲಿ ತನ್ನ ವಾಸದ ಮನೆಯನ್ನು ಮಾಡಿಸಿ, ಅಲ್ಲಿ ವಾಸ ಮಾಡುತ್ತಿದ್ದನು. ಅವನು ಪರಮೇಶ್ವರನಲ್ಲಿ ಬಹಳ ಭಕ್ತಿಯುಳ್ಳವನಾಗಿದ್ದು ಆಯಾಯ ಕಾಲಕ್ಕೆ ಸರಿಯಾಗಿ ತಕ್ಕ ನಿಯಮದಿಂದ ಮಹಾದೇವನ ದರ್ಶನವನ್ನು ಮಾಡಿಕೊಂಡು, ಆ ದೇವನಿಗೆ ನಮಸ್ಕರಿಸುತ್ತಿದ್ದನು. ಇದರಿಂದ ಅವನು, ಇಂದ್ರನು ಸ್ವರ್ಗದಲ್ಲಿರುವಂತೆ ಸುಖವಾಗಿ ಇದ್ದನು.

೬೬–೬೭. ಹೀಗೆ ಇರುವಾಗ ಇಂದ್ರನ ಅಮರಾವತಿಯನ್ನು ಮೀರಿರುವ ಈ ನಗರವನ್ನು ನಾನು ಮಾಡಿಸಿದೆನು. ಈ ಪ್ರದೇಶದಲ್ಲಿ ಹುಲಿ, ಸಿಂಹ ಇವುಗಳು ಓಡಾಡುತ್ತಾ ವಾಸವನ್ನು ಮಾಡುತ್ತಿದ್ದವು. ಇದರಿಂದ ಈ ಸ್ಥಳಕ್ಕೆ ಪವಿತ್ರತೆಯನ್ನು ಮಾಡುವವರು ಯಾರು. ಇದನ್ನು ಒಂದೇ ಸಮನಾಗಿರುವಂತೆ ಯಾರು ರಕ್ಷಿಸುವವರು, ಎಂದು ಅವನಿಗೆ ಯೋಚನೆಯು ಉಂಟಾಯಿತು.

ಏತದ್ದೃಷ್ಟ್ವಾ ದಯಾಂಭೋಧಿಃ ಶ್ರೀಹಾಲಾಸ್ಯೇಶ್ವರಃ ಶಿವಃ ।
ಜಟಾಶಶಾಂಕವಿಮಲಜ್ಯೋತ್ಸ್ನಾತಿಧವಲೇನ ಚ ॥ ೬೮ ॥

ಗಂಗಾಜಲೇನ ಸಹಸಾ ವೃಷ್ಟಿವ್ಯಾಜೇನ ತತ್ಪುರಂ ।
ಪ್ರಕ್ಷಾಳ್ಯ ಪಾವನೀಕೃತ್ಯ ರಕ್ಷಾರ್ಥಂ ನಗರಸ್ಯ ಚ ॥ ೬೯ ॥

ಪೂರ್ವಸ್ಯಾಂ ದಿಶಿ ಶಾಸ್ತಾರಂ ಸಪ್ತ ಮಾತೄಂಶ್ಚ ದಕ್ಷಿಣೇ ।
ಪಶ್ಚಿಮೇ ತು ಮಹಾವಿಷ್ಣುಂ ಭದ್ರಕಾಳೀಂ ತತೋತ್ತರೇ ॥ ೭೦ ॥

ರಾಜಸಂಸ್ಥಾಪಯೇತ್ಯಾಶು ಶೈವೀವಾಕ್ಯಮಭೂತ್ತದಾ ।
ತಾಂ ವಾಚಂ ಪಾಂಡ್ಯಭೂಪಾಲಃ ಶ್ರುತ್ವಾ ತೇಷು ಸ್ಥಲೇಷು ಚ ॥ ೭೧ ॥

ದೇವತಾನಾಮಾಯತನಂ ಕೃತ್ವಾ ಸಂಸ್ಥಾಪ್ಯ ದೇವತಾಃ ।
ಪೂಜಾಂ ಚ ಕಾರಯಾಮಾಸ ನಿತ್ಯಂ ಶಾಸ್ತ್ರೋಕ್ತಮಾರ್ಗತಃ ॥ ೭೨ ॥

---

೬೮-೭೦. ಅಪಾರ ದಯಾನಿಧಿಯಾದ, ಪರಮೇಶ್ವರನು ಇದನ್ನು ತಿಳಿದು, ಆಗ ತನ್ನ ಜಡೆಯಂತೆ ಪವಿತ್ರವಾಗಿಯೂ, ಚಂದ್ರನ ಬೆಳದಿಂಗಳಿನಂತೆ ಬೆಳ್ಳಗೂ ಇರುವ, ಗಂಗಾಜಲದ ಮಳೆಯಿಂದ ಆ ನಗರವೆಲ್ಲವನ್ನೂ (ಚೆನ್ನಾಗಿ ತೊಳಸಿದನು) ಪವಿತ್ರವನ್ನು ಮಾಡಿಸಿದನು. ಅನಂತರದಲ್ಲಿ ಆ ಹಾಲಾಸ್ಯೇಶ್ವರನು ನಗರದ ಪೂರ್ವ ದಿಕ್ಕಿನಲ್ಲಿ ರಕ್ಷಿಸಲು ಶಾಸ್ತೃವೆಂಬುವನನ್ನೂ, ದಕ್ಷಿಣದಿಕ್ಕಿನಲ್ಲಿ ಸಪ್ತಮಾತೃಕೆಯರನ್ನೂ, ಪಶ್ಚಿಮದಿಕ್ಕಿನಲ್ಲಿ ಮಹಾವಿಷ್ಣುವನ್ನೂ, ಉತ್ತರ ದಿಕ್ಕಿನಲ್ಲಿ ಭದ್ರಕಾಳಿಯನ್ನೂ, ಪುರದ ರಕ್ಷಣೆಗಾಗಿ ಪ್ರತಿಷ್ಠೆಯನ್ನು ಮಾಡು, ಎಂದು ಆಕಾಶವಾಣಿಯ ಮೂಲಕ ರಾಜನಿಗೆ ಹೇಳಿದನು.

೭೧-೭೨. ಪಾಂಡ್ಯ ಭೂಪತಿಯು ಆ ಮಾತನ್ನು ಕೇಳಿದಕೂಡಲೆ ಅದರಂತೆಯೇ ಆ ನಗರದ ಆಯಾಯ ದಿಕ್ಕಿನಲ್ಲಿ ದೇವಾಲಯಗಳನ್ನು ನಿರ್ಮಿಸಿ, ಅದರಲ್ಲಿ ಆಯಾಯ ದೇವರುಗಳನ್ನು ಪ್ರತಿಷ್ಠೆಮಾಡಿ, ಕಾಲಕ್ಕೆ ತಕ್ಕಂತೆ ಅವರವರ ಪೂಜೆಗಳು ನಡೆಯಲು ಸಿದ್ಧಪಡಿಸಿದನು.

ತತಃ ಪುರೀ ವಿಶ್ರುತಾ ಸಾ ಚತುರಾಲಯಸಂಗತಾ ।
ದಿವ್ಯೇ ವಿಮಾನೇ ನಗರೀಮಧ್ಯಸ್ಥೇ ಸೋಮಸುಂದರಃ ॥ ೭೩ ॥

ನ್ಯವಸತ್ಪರಯಾ ಪ್ರೀತ್ಯಾ ಭಕ್ತಾನಾಂ ಭುಕ್ತಿಮುಕ್ತಿದಃ ।
ಕುಲಶೇಖರಭೂಪಾಲಸ್ಸಂಪದಾ ಯಕ್ಷರಾಣ್ಣಿಭಃ ॥ ೭೪ ॥

ಅನುಗ್ರಹೇಣ ಮಹತಾ ಜೀವನ್ಮುಕ್ತಿಪುರೇಶಿತುಃ ।
ವಿಜಿತ್ಯ ಸಮರೇ ಶತ್ರೂನ್ ಸಾರ್ವಭೌಮತ್ವಮಾಪ್ಯ ಚ ॥ ೭೫ ॥

ಮಲಯಧ್ವಜನಾಮಾನಂ ಗುಣರೂಪಪರಾಕ್ರಮೈಃ ।
ನಿಸ್ತುಲಂ ಚಾತ್ಮಜಂ ಲಬ್ಧ್ವಾ ಜಯಂತಮಿವ ದೇವರಾಟ್ ॥ ೭೬ ॥

ಷಟ್ಸಹಸ್ರಂ ವತ್ಸರಾಣಾಂ ಪರಿಪಾಲ್ಯ ವಸುಂಧರಾಂ ।
ಸ್ವಪ್ನೇ ಶಿವಾಜ್ಞಾಂ ಲಬ್ಧ್ವಾಥ ಮಲಯಧ್ವಜಮಾತ್ಮಜಂ ॥ ೭೭ ॥

ಸಿಂಹಾಸನೋಪರಿ ಸ್ಥಾಪ್ಯ ತೀರ್ಥೋದೈರಭಿಷಿಚ್ಯ ಚ ।
ಮಕುಟಾದೀನಿ ಸರ್ವಾಣಿ ರಾಜಚಿಹ್ನಾನಿ ಯಾನಿ ಚ ॥ ೭೮ ॥

೭೩–೭೬. ಅನಂತರದಲ್ಲಿ ಆ ನಗರವು ಚೆನ್ನಾಗಿರುವ ಮನೆಗಳಿಂದ ಹೊಳೆಯುತ್ತಿತ್ತು. ಆ ನಗರದ ಮಧ್ಯದಲ್ಲಿ ಉತ್ತಮವಾದ ವಿಮಾನದಲ್ಲಿ ಹಾಲಾಸ್ಯೇಶ್ವರನು ಬಹಳ ಸಂತೋಷದಿಂದ ಭಕ್ತರಿಗೆ ಭುಕ್ತಿ,ಮುಕ್ತಿಗಳನ್ನು ದಯಪಾಲಿಸುತ್ತಿದ್ದನು. ಕುಲಶೇಖರ ರಾಜನು ಕುಬೇರನಂತೆ, ಜೀವನ್ಮುಕ್ತಿ ಪುರೇಶ್ವರನ ಅನುಗ್ರಹದಿಂದ, ಯುದ್ಧದಲ್ಲಿ ಶತ್ರುಗಳನ್ನು ಗೆದ್ದು. ಚಕ್ರವರ್ತಿಯಾದನು. ಅವನಿಗೆ ಮಲಯಧ್ವಜನೆಂದು ಹೆಸರುಳ್ಳ ಮಗನು ಹುಟ್ಟಿದನು, ಅವನು ತನ್ನ ಮಗನಾದ ಮಲಯಧ್ವಜನು ಗುಣ,ರೂಪ, ಪರಾಕ್ರಮಗಳಿಂದ ಎಲ್ಲರಿಗಿಂತಲೂ ಅತಿಶಯವಾಗಿ ಇರುವುದನ್ನು ನೋಡಿ,ಸಂತೋಷದಿಂದ ಜಯಂತನೊಡನೆ ಇರುವ, ಇಂದ್ರನ ಹಾಗೆ ಇರುತ್ತಾ ಆರು ಸಾವಿರವರ್ಷಗಳು ರಾಜ್ಯಭಾರವನ್ನು ಮಾಡಿದನು.

೭೭–೭೮. ಅನಂತರದಲ್ಲಿ ಕುಲಶೇಖರರಾಜನು ಸ್ವಪ್ನದಲ್ಲಿ ಶಿವನ ಆಜ್ಞಾನುಸಾರವಾಗಿ ತನ್ನ ಮಗನನ್ನು ಸಿಂಹಾಸನದಲ್ಲಿ ಕೂರಿಸಿ, ತೀರ್ಥ ಜಲಗಳಿಂದ ಅಭಿಷೇಕ ಮಾಡಿ, ಅವನಿಗೆ ಕಿರೀಟ ಮೊದಲಾದ ರಾಜಚಿಹ್ನೆಗಳೆಲ್ಲವನ್ನೂ ಕೊಟ್ಟು, ಅವನನ್ನು ರಾಜನನ್ನಾಗಿ ಮಾಡಿದನು.

ತಾನಿ ಸರ್ವಾಣಿ ತಸ್ಮೈ ಚ ಪ್ರದತ್ವಾ ಪುನರಬ್ರವೀತ್ ।
ಮಲಯಧ್ವಜ ಹೇ ವತ್ಸ ಮಹಾಲಿಂಗಸ್ವರೂಪಿಣಃ ॥ ೭೯ ॥

ಕದಂಬವನನಾಥಸ್ಯ ಶ್ರೀಮತ್ಪಾದಾರವಿಂದಯೋಃ ।
ಭಕ್ತಿರೇವ ಸದಾ ಭುಕ್ತಿಪ್ರದಾ ಮುಕ್ತೇಶ್ಚ ಕಾರಣಂ ॥ ೮೦ ॥

ಇತಿ ಸಮ್ಯಗ್ಬೋಧಯಿತ್ವಾ ಪುತ್ರಸ್ಯ ಚ ಪುನಃ ಪುನಃ ।
ಶ್ರೀಮದ್ಧಾಮ ಪ್ರವಿಶ್ಯಾಥ ಗರ್ಭಗೇಹಂ ಪ್ರವಿಶ್ಯ ಚ ॥ ೮೧ ॥

ಲಿಂಗಂ ಪ್ರದಕ್ಷಿಣೀಕೃತ್ಯ ರಾಜರ್ಷಿಃ ಕುಲಶೇಖರಃ ।
ಸ ಶರೀರಂ ಚ ಸಾಯುಜ್ಯಂ ಪ್ರಾಪ್ನೋತ್ಯಾಲೋಕಿತೈರ್ಜನೈಃ ॥ ೮೨ ॥

ಇತಿ ತೃತೀಯಾ ಲೀಲಾ ಚ ಶ್ರೀಹಾಲಾಸ್ಯೇಶ್ವರಸ್ಯ ಚ ।
ವರ್ಣಿತಾ ಚ ಮಹಾಪುಣ್ಯಾ ಸರ್ವಪಾಪಕ್ಷಯಂಕರೀ ॥ ೮೩ ॥
ಶೃಣ್ವತಾಂ ಪಠತಾಂ ಪುಂಸಾಂ ಸರ್ವಸಂಪತ್ಕರೀ ಸದಾ ।

---

೭೯–೮೦. ಆ ಪಾಂಡ್ಯ ಭೂಪನು, ಎಲೈ ಮಲಯಧ್ವಜನೆ ಮಹಾಲಿಂಗ ರೂಪದಿಂದ ಇರುವ ಕದಂಬವನನಾಥನಾದ ಪರಮೇಶ್ವರನ ಪಾದಗಳಲ್ಲಿ ನಿಶ್ಚಲವಾದ ಭಕ್ತಿಯು ಶ್ರೇಯಸ್ಸಿನ ಅಭಿವೃದ್ಧಿಗೆ ಕಾರಣವಾಗಿರುತ್ತದೆ. ಈ ಪ್ರಕಾರವಾದ ಭಕ್ತಿಯಿಂದ ಭುಕ್ತಿ. ಮುಕ್ತಿಗಳೆರಡೂ ಉಂಟಾಗುತ್ತವೆ. ಎಂದು ಮಗನಿಗೆ ಚೆನ್ನಾಗಿ ಬೋಧಿಸಿ ಇನ್ನೂ ಇತರ ಬುದ್ಧಿವಾದಗಳನ್ನು ಹೇಳಿದನು.

೮೧–೮೨. ಅನಂತರದಲ್ಲಿ ರಾಜರ್ಷಿಯಾದ ಕುಲಶೇಖರರಾಜನು, ಹಾಲಾಸ್ಯೇಶ್ವರನ ಗರ್ಭಗೃಹವನ್ನು ಪ್ರವೇಶಿಸಿ ಆ ಶಿವಲಿಂಗವನ್ನು ಪ್ರದಕ್ಷಿಣೆ ಮಾಡಿ, ಶರೀರ ದೊಡನೆ ಅದರಲ್ಲಿ ಐಕ್ಯವಾದದ್ದನ್ನು ಅಲ್ಲಿರುವ ಜನರೆಲ್ಲರೂ ಪ್ರತ್ಯಕ್ಷವಾಗಿ ನೋಡಿದರು.

೮೩. ಎಲ್ಲಾ ವಿಧವಾದ ಪಾತಕಗಳನ್ನೂ ನಾಶಮಾಡಿ, ಬಹಳ ಪುಣ್ಯವನ್ನುಂಟುಮಾಡುವ ಹಾಲಾಸ್ಯೇಶ್ವರನ ಮೂರನೆಯ ಲೀಲೆಯನ್ನು ಹೇಳಿರುವೆನು. ಇದು ಹೇಳುವವರಿಗೂ, ಕೇಳುವವರಿಗೂ ಎಲ್ಲಾ ವಿಧವಾದ ಐಶ್ವರ್ಯವನ್ನುಂಟು ಮಾಡುವುದು.

**ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ ಮಾಹಾತ್ಮ್ಯೇ ವೈಶ್ಯಕದಂಬವಿಪಿನಪುರೀ ನಿರ್ಮಾಣ ವರ್ಣನಂ ನಾಮ ಸಪ್ತಮೋಽಧ್ಯಾಯಃ.**

---

ಸಂಪದ್ಯುಕ್ತವಾದ ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯ ಹಾಲಾಸ್ಯ ಮಾಹಾತ್ಮ್ಯೆಯಲ್ಲಿ ವೈಶ್ಯಕದಂಬವಿಪಿನಪುರೀ ನಿರ್ಮಾಣವೆಂದು ಹೆಸರುಳ್ಳ ಏಳನೆಯ ಅಧ್ಯಾಯವು ಮುಗಿದುದು.

---

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ

## ಅಷ್ಟಮೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

**ಯಯಾ ದೇವೀ ಸುಮೀನಾಕ್ಷೀ ಕದಂಬವನನಾಯಿಕಾ ।**
**ತಟಾತಕೇತಿ ನಾಮ್ನಾಽಭೂತ್ಸಾ ಲೀಲಾ ಶ್ರೂಯತಾಂ ಶುಭಾ ॥ ೧ ॥**

**ಕುಲಶೇಖರಪಾಂಡ್ಯಸ್ಯ ತನಯೋ ಮಲಯಧ್ವಜಃ ।**
**ಪರಿಭೂತ ರಿಪುಸ್ಸದ್ಯಃ ಪಾಂಡ್ಯಾನ್ವಯವಿಶೇಷಕಃ ॥ ೨ ॥**

**ಪದ್ಮಿನೀ ಸೇವ್ಯಮಾನಶ್ಚ ಪದ್ಮೋಽನ್ನಿದ್ರವಿಲೋಚನಃ ।**
**ಮಹಾಬಾಹುರ್ಮಹೇಷ್ವಾಸೋ ಮದನಪ್ರಖ್ಯಕಾಂತಿಮಾನ್ ॥ ೩ ॥**

---

### ಎಂಟನೆಯ ಅಧ್ಯಾಯವು.

೧–೪. ಅಗಸ್ತ್ಯಋಷಿಯು ಹೇಳಿದನು :—ಕದಂಬವನಾಧಿಪಳಾದ ಮೀನಾಕ್ಷೀದೇವಿಯು, ತಟಾತಕಾದೇವಿ ಎಂಬ ಹೆಸರಿನಿಂದ ಭೂಮಿಯಲ್ಲಿ ಅವತರಿಸಿದ ಲೀಲೆಯನ್ನು ಹೇಳುವೆನು. ಕೇಳಿರಿ. ಕುಲಶೇಖರಪಾಂಡ್ಯಭೂಪನ ಮಗನಾದ ಮಲಯಧ್ವಜರಾಜನು ಶತ್ರುಗಳೆಲ್ಲರನ್ನೂ ಗೆದ್ದು, ಪಾಂಡ್ಯವಂಶಕ್ಕೆ ಕೀರ್ತಿವಂತನಾದನು. (ಲಕ್ಷ್ಮಿಯು)ರಾಜ್ಯಲಕ್ಷ್ಮಿಯು ಇವನನ್ನು ಸೇವಿಸುತ್ತಿದ್ದಳು. ಇವನು ಕಮಲದಂತೆ ಇರುವ ಕಣ್ಣುಗಳನ್ನು ಹೊಂದಿದ್ದನು. ಇವನ ಬಾಹುಗಳು ರಾಜಲಕ್ಷಣಕ್ಕೆ ತಕ್ಕಹಾಗೆ ದೊಡ್ಡವುಗಳಾಗಿದ್ದವು. ರಾಜನ ಧನಸ್ಸು ಬಹಳ ದೊಡ್ಡದಾಗಿ ಇದ್ದಿತು.

ಸದಾ ದಯಾ ನಿವಾಸಾತ್ಮಾ ಸದಾ ದೀನಜನಾರ್ತಿಹಾ ।
ಭುಜೇ ವಿಧೃತ ಭೂಭಾರಃ ಪುರುಹೂತಸಮದ್ಯುತಿಃ ॥ ೪ ॥

ಪುಣ್ಯವೃತ್ತಃ ಪುರಾಣಜ್ಞೋ ಬುಧಸೇವಾಸಮುತ್ಸುಕಃ ।
ಚತುಃಷಷ್ಠಿಕಲಾದಕ್ಷಃ ಸರ್ವಶಾಸ್ತ್ರವಿಶಾರದಃ ॥ ೫ ॥

ಪ್ರಹೃಷ್ಟಃ ಪ್ರಯತಶ್ಚೈವ ಪ್ರಜಾರಂಜನತತ್ಪರಃ ।
ಶಿವಾರ್ಚನರತಃ ಶ್ರೀಮಾನ್ ಶಿವಭಕ್ತಪ್ರಪೂಜಕಃ ॥ ೬ ॥

ಶಿವಧ್ಯಾನೈಕನಿರತಃ ಶಿವಧರ್ಮಪರಾಯಣಃ ।
ಅನೇಕಲಕ್ಷತುರಗೈರಮರೇಂದ್ರಾಶ್ವಸನ್ನಿಭೈಃ ॥ ೭ ॥

ಐರಾವತಸಮಾನೈಶ್ಚ ಗಜೇಂದ್ರೈಃ ಪರಿಸೇವಿತಃ ।
ಮಹಾಸೇನಾಪರಿವೃತೋ ಮಹದೈಶ್ವರ್ಯಸಂಯುತಃ ॥ ೮ ॥

---

ರಾಜನು ಮನ್ಮಥನಂತೆ ಹೊಳೆಯುತ್ತಿದ್ದನು. ಮಲಯಧ್ವಜರಾಜನು ಯಾವಾಗಲೂ, ಎಲ್ಲರಲ್ಲಿಯೂ ದಯೆಯುಳ್ಳವನಾಗಿದ್ದನು. ಮತ್ತು ಸಂಕಟವುಳ್ಳ ಜನರ ಕಷ್ಟಗಳನ್ನು ಯಾವಾಗಲೂ ಈ ರಾಜನು ಪರಿಹರಿಸುತ್ತಿದ್ದನು. ಈ ರಾಜನು ತನ್ನ ಭುಜಬಲದಿಂದ ರಾಜ್ಯವನ್ನು ರಕ್ಷಿಸುವುದರಲ್ಲಿ ಇಂದ್ರನಿಗೆ ಸಮನಾಗಿ ಇದ್ದನು. ಇಂದ್ರನಂತೆ ತೇಜಶ್ಶಾಲಿಯಾಗಿ ಇದ್ದನು.

೫-೬. ಈ ರಾಜನ ನಡತೆಯು ಪವಿತ್ರಕರವಾಗಿ ಇತ್ತು. ಇವನು (ಪುರಾಣಗಳ ವಿಶೇಷಗಳನ್ನು) ಹಿಂದೆ ನಡೆದಿರುವ ಲೋಕ ವೃತ್ತಾಂತವೆಲ್ಲವನ್ನೂ ಪುರಾಣಗಳಿಂದ ಚೆನ್ನಾಗಿ ತಿಳಿದಿದ್ದನು. ಜ್ಞಾನಿಗಳನ್ನು ಸೇವಿಸುವುದರಲ್ಲಿ ಈ ರಾಜನಿಗೆ ಬಹಳ ಆಸಕ್ತಿಯು ಇತ್ತು. ಅರವತ್ತುನಾಲ್ಕು ಕಲೆಗಳಲ್ಲಿಯೂ (ಜ್ಞಾನವನ್ನು ಹೊಂದಿರುವ) ಬುದ್ಧಿವಂತನಾದ ಈ ರಾಜನು ಯಾವಾಗಲೂ ಸಂತೋಷದಿಂದಲೇ ಇರುವ ಸ್ವಭಾವವುಳ್ಳವನಾಗಿ, ಪ್ರಜೆಗಳನ್ನು ಅನುರಾಗದಿಂದ ಕಾಪಾಡಲು ಆಸಕ್ತಿಯನ್ನು ಹೊಂದಿದ್ದನು. ಶಿವನ ಪೂಜೆಯಲ್ಲಿ ಆಸಕ್ತನಾಗಿರುವ ಹಾಗೆ ಶಿವಭಕ್ತರ ಸೇವೆಯನ್ನೂ ಚೆನ್ನಾಗಿ ನಡೆಸುತ್ತಿರುವ ಈ ರಾಜನ ಬುದ್ಧಿಯು ಶಿವನ ಧ್ಯಾನ ಮಾಡುವುದು, ಶಿವಧರ್ಮವನ್ನು ಆಚರಿಸುವುದು, ಇವುಗಳಲ್ಲಿ ಬಹಳ ಆಸಕ್ತಿಯುಳ್ಳದ್ದಾಗಿ ಇತ್ತು.

೭-೯. ಇಂದ್ರನ ಕುದುರೆಗೆ ಸಮನಾದ ಅನೇಕ ಲಕ್ಷ ಕುದುರೆಗಳು ಈ ರಾಜನ ಹತ್ತಿರದಲ್ಲಿ ಇದ್ದವು. ಇಂದ್ರನ ಐರಾವತಕ್ಕೆ ಸಮನಾದ ಬಹಳ ಆನೆಗಳು

**ವಿಚಾರದಕ್ಷೈಃ ಸಚಿವೈರ್ಭೂಸುರೈಶ್ಚ ಸಮಾವೃತಃ ।**
**ಸರ್ವಾಂ ವಸುಂಧರಾಂ ಜಿತ್ವಾ ಸಾರ್ವಭೌಮತ್ವಮೇಯಿವಾನ್ ॥ ೯ ॥**

**ಪೃಥಿವೀಂ ಮನುವತ್ತಸ್ಮಿನ್ಪಾಲಯತ್ಯಮಲದ್ಯುತೌ ।**
**ವ್ಯಸ್ಮರನ್ಪ್ರಾಕ್ತನಾನ್ಭೂಪಾನ್ಜನಾಃ ಸರ್ವೇ ಮುದಾನ್ವಿತಾಃ ॥ ೧೦ ॥**

**ರಾಜ್ಞಾಂ ಕುಮಾರ್ಯೋ ಬಹ್ವ್ಯಶ್ಚ ತೇನೋಢಾಸ್ಸುಮನೋಹರಾಃ ।**
**ತಾಸಾಂ ಮಧ್ಯೇ ಮುಖ್ಯತಮಾ ಸರ್ವಾವಯವಸುಂದರೀ ॥ ೧೧ ॥**

**ಸೂರ್ಯವಂಶಸಮುದ್ಭೂತಶೂರಸೇನಮಹೀಭುಜಃ ।**
**ಕನ್ಯಾ ಕಾಂಚನಮಾಲಾಖ್ಯಾ ಮಹಿಷೀ ಭೂಪತೇರಭೂತ್ ॥ ೧೨ ॥**

**ತಯಾ ಸಾರ್ಧಂ ಮಹೀಪಾಲಸ್ಸತ್ಕರ್ಮಾಣಿ ಸದಾಕರೋತ್ ।**
**ಕುಲಶೇಖರಪಾಂಡ್ಯೇನ ಪಿತ್ರಾ ಸಮ್ಯಕ್ಪ್ರಬೋಧಿತಃ ॥ ೧೩ ॥**

---

ಈ ರಾಜನನ್ನು ಸೇವಿಸುತ್ತಿದ್ದವು. ಈ ಮಲಯಧ್ವಜರಾಜನ ಸೇನೆಯೂ, ಐಶ್ವರ್ಯವೂ ಬಹಳವಾಗಿ ಇತ್ತು. ಈ ರಾಜನು ವಿಮರ್ಶೆಮಾಡುವುದರಲ್ಲಿ ನಿಪುಣರಾದ ಮಂತ್ರಿಗಳು, ಬ್ರಾಹ್ಮಣರು, ಇವರಿಂದ ಪ್ರಕಾಶಿಸುತ್ತಿದ್ದನು. ಆರು ವಿಧವಾದ ಬಲದಿಂದಕೂಡಿದ ಈ ರಾಜನು ಭೂಮಿಯೆಲ್ಲವನ್ನೂ ತನ್ನ ಅಧೀನಕ್ಕೆ ಒಳಪಡುವಂತೆ ಮಾಡಿಕೊಂಡು ಚಕ್ರವರ್ತಿಯಾಗಿ ಇದ್ದನು.

೧೦–೧೨. ಈ ರಾಜ್ಯಭಾರದ ಸುಖವನ್ನು ಅನುಭವಿಸುತ್ತಿರುವ ಪ್ರಜೆಗಳೆಲ್ಲರೂ, '' ಮಲಯಧ್ವಜನು ಮನುಚಕ್ರವರ್ತಿಯ ಹಾಗೆ ನಮ್ಮನ್ನು ರಕ್ಷಿಸುತ್ತಿರುವನು. ಇವನಿಗಿಂತ ಹಿಂದಿನ ರಾಜರ ರಾಜ್ಯಭಾರವು ನಮ್ಮ ಮನಸ್ಸಿಗೆ ಅಷ್ಟು ಹಿತಕರವಾಗಿರಲಿಲ್ಲ. '' ವೆಂದು ಹೇಳುತ್ತಾ ಹಿಂದಿನ ರಾಜರ ಆ ಪ್ರಜಾರಕ್ಷಣೆಯ, ಕ್ರಮವನ್ನು ಮರೆತುಬಿಟ್ಟರು. ಈ ಮಲಯಧ್ವಜರಾಜನು ಬಹಳ ಮಂದಿ ರಾಜಕುಮಾರಿಯರನ್ನು ಮದುವೆ ಮಾಡಿಕೊಂಡನು. ಎಲ್ಲರೂ ಸುಂದರಿಯರೇ ಆಗಿದ್ದರೂ, ಅವರೆಲ್ಲರಲ್ಲಿಯೂ ಪರಮಸುಂದರಿಯಾದ, ಸೂರ್ಯವಂಶದ ರಾಜನಾದ ಶೂರಸೇನರಾಜನ ಮಗಳಾದ ಕಾಂಚನಮಾಲೆ ಎಂಬುವಳು ಈ ರಾಜನ ಪಟ್ಟಮಹಿಷಿಯಾಗಿದ್ದಳು.

೧೩–೧೪. ಮಲಯಧ್ವಜರಾಜನು ತನ್ನ ಪಟ್ಟಮಹಿಷಿಯೊಡನೆ ಧರ್ಮಕಾರ್ಯಗಳೆಲ್ಲವನ್ನೂ ಆಚರಿಸುತ್ತಿದ್ದನು. ಈ ರಾಜನು ತನ್ನ ತಂದೆಯಾದ ಕುಲಶೇಖರರಾಜನು, ತನಗೆ ಹೇಳಿರುವ ಬುದ್ಧಿವಾದಗಳನ್ನು ನೆನೆಪಿನಲ್ಲಿರಿಸಿಕೊಂಡು,

ನ ವಿಹಾಯ ಮಹಾಭಕ್ತಿಂ ಸೋಮಸುಂದರಪಾದಯೋಃ ।
ತ್ರಿಕಾಲಂ ಪ್ರತ್ಯಹಂ ನತ್ವಾ ಹಾಲಾಸ್ಯೇಶಂ ಶಿವಂ ವಿಭುಂ ॥ ೧೪ ॥

ರಾಜಕಾರ್ಯಾಣಿ ಸರ್ವಾಣಿ ಪಶ್ಚಾದೇವ ಕರೋತಿ ಹಿ ।
ಏವಂ ಸಮಾನಾಮಯುತಮನಪತ್ಯಸ್ಯ ಭೂಭುಜಃ ॥ ೧೫ ॥

ಪ್ರಯಯೌ ಸೋಮವಂಶೋದ್ಭ ಭೂಪಚೂಡಾಮಣೇಸ್ತತಃ ।
ವ್ರತಾನಿ ಚಕ್ರೇ ಅಪತ್ಯಾರ್ಥಂ ಶಾಂಭವಾನಿ ಬಹೂನಿ ಸಃ ॥ ೧೬ ॥

ಕೃಷ್ಣಾಯಾಂ ಚ ಚತುರ್ದಶ್ಯಾಮಷ್ಟಮ್ಯಾಂ ಸೋಮವಾಸರೇ ।
ನಿಯಮೇನೋಪವಾಸಂ ಚ ದಾನಾನಿ ವಿವಿಧಾನಿ ಚ ॥ ೧೭ ॥

ಶಿವಸ್ಯಾಪಿ ಮಹಾಪೂಜಾಂ ವಿಧಿವಚ್ಚ ವಿಧಾಯ ಚ ।
ಶಿವಭಕ್ತಾಂಶ್ಚ ಸಂಪೂಜ್ಯ ಧನೇನಾನ್ನೇನ ಸುವ್ರತಃ ॥ ೧೮ ॥

ಕರೋತಿ ಪಾರಣಾಂ ಪಶ್ಚಾತ್ಪರಿತೋಷೇಣ ಪಾಂಡ್ಯಪಃ ।
ಪುನಶ್ಚಾನ್ಯಾನಿ ಕರ್ಮಾಣಿ ಶಿವಪ್ರಿಯಕರಾಣಿ ಚ ॥ ೧೯ ॥

---

ಸೋಮಸುಂದರೇಶ್ವರನ ಪಾದಗಳಲ್ಲಿ ಸ್ಥಿರವಾದ ಭಕ್ತಿಯಿಂದ ಇರುವನು. ಪ್ರತಿದಿನವೂ, ಮೂರುಕಾಲಗಳಲ್ಲಿಯೂ ಹಾಲಾಸ್ಯೇಶ್ವರನನ್ನು ಸೇವಿಸಿದನಂತರ ಅವನು ತನ್ನ ರಾಜಕಾರ್ಯಗಳನ್ನು ನೆರವೇರಿಸುತ್ತಿದ್ದನು. ಈ ರಾಜನು ಈ ಕ್ರಮದಿಂದ ರಾಜ್ಯವನ್ನು ರಕ್ಷಿಸುವುದರಲ್ಲಿ ಹತ್ತುಸಾವಿರ ವರ್ಷಗಳು ಕಳೆದುಹೋದವು.

೧೫-೧೭. ಚಂದ್ರವಂಶದ ರಾಜ ಚೂಡಾಮಣಿಯಾದ ಮಲಯಧ್ವಜನಿಗೆ ಮಕ್ಕಳಿಲ್ಲದ ಕಾರಣ ಅವನು ಶಿವಸಂಬಂಧವಾದ ಅನೇಕ ವ್ರತಗಳನ್ನು ಆಚರಿಸಿದನು. ತಾನು ರಾಜನಾಗಿದ್ದಾಗ್ಯೂ ಕೃಷ್ಣಪಕ್ಷದ ಅಷ್ಟಮಿ, ಚತುರ್ದಶಿ, ಸೋಮವಾರ ಈ ದಿನಗಳಲ್ಲಿ ನಿಯಮದಿಂದ ಇರುತ್ತಾ, ಉಪವಾಸವನ್ನು ಆಚರಿಸುತ್ತಾ, ಅನೇಕ ವಿಧವಾದ ದಾನಗಳನ್ನು ಕೊಡುತ್ತಿದ್ದನು

೧೮-೧೯. ಶಿವನ ಮಹಾಪೂಜೆಯನ್ನು ಶಾಸ್ತ್ರಕ್ರಮದಿಂದ ನಡಸಿ, ಶಿವಭಕ್ತರನ್ನು ಪೂಜಿಸಿ, ಅವರಿಗೆ ನಿಯಮದಿಂದ ಧನವನ್ನು ದಾನಮಾಡಿದನಂತರ ಸಂತೋಷದಿಂದ ಅವನು ಉಪವಾಸವ್ರತದ ಪಾರಣೆಯನ್ನು ಮಾಡುತ್ತಿದ್ದನು. ಈ ಪ್ರಕಾರದಿಂದಲೇ ಶಿವನಿಗೆ ಪ್ರಿಯಕರವಾದ ಇತರ ಕರ್ಮಗಳನ್ನೂ ಆ ರಾಜನು ಆಚರಿಸುತ್ತಿದ್ದನು. ಮಲಯಧ್ವಜರಾಜನು ಈ ಕಾರ್ಯಗಳೆಲ್ಲವನ್ನೂ ಹಾಲಾಸ್ಯ ನಾಥನ ಎದುರಿನಲ್ಲಿಯೇ ಸಂತೋಷದಿಂದ ಮಾಡುತ್ತಿದ್ದನು.

**ಕರೋತಿ ತಾನಿ ಸರ್ವಾಣಿ ಮಲಯಧ್ವಜಭೂಪತಿಃ ।**
**ಶ್ರೀಮದ್ಧಾಲಾಸ್ಯನಾಥಸ್ಯ ಶಂಭೋರಗ್ರೇ ಸಮಾಹಿತಃ ॥ ೨೦ ॥**

**ಶತಕಂ ಚಾಶ್ವಮೇಧಾನಾಂ ನ್ಯೂನಮೇಕೇನ ಭೂಪತಿಃ ।**
**ವಿಧಾಯ ಪ್ರಾರ್ಥಿತಃ ಪಶ್ಚಾದಿಂದ್ರೇಣೈಕಂ ವಿಧಾಯ ಚ ॥ ೨೧ ॥**

**ತತಸ್ತು ಪುತ್ರಕಾಮೇಷ್ಟಿಮಕರೋತ್ ಬಹುದಕ್ಷಿಣಾಂ ।**
**ತದಾ ಶಂಭೋರಷ್ಟಮೂರ್ತೇರ್ಯಾ ಮೂರ್ತಿರತಿಪಾವನಾ ॥ ೨೨ ॥**

**ಪಾವಕಾಖ್ಯಾ ದೀಪ್ತಿಮತೀ ವ್ಯಾಪ್ತ ಸರ್ವಚರಾಚರಾ ।**
**ಮಲಯಧ್ವಜಭೂಪೇನ ಸಪ್ತತಂತೋಃ ಕೃತಸ್ಯ ಚ ॥ ೨೩ ॥**

**ಸರ್ವಕರ್ಮಪ್ರಪೂರಿಣ್ಯಾ ಪೂರ್ಣಾಹುತ್ಯಾ ಪ್ರವರ್ಧಿತಾ ।**
**ಹುತಾನಿ ಯಾಜಮಾನೈಶ್ಚ ಹವೀಂಷಿ ಪ್ರತಿಗೃಹ್ಯ ಚ ॥ ೨೪ ॥**

---

೨೦–೨೩. ಅಶ್ವಮೇಧಯಾಗಗಳನ್ನು ಕ್ರಮವಾಗಿ ಮಾಡುತ್ತಾ ಬರುವ ಮಲಯಧ್ವಜರಾಜನನ್ನು, ಇಂದ್ರನು ಬೇಡಿಕೊಂಡ ಕಾರಣ ಅವನು ತೊಂಭತ್ತೊಂಭತ್ತು ಯಾಗಗಳನ್ನು ಪೂರ್ತಿಮಾಡಿದನು. ಅನಂತರದಲ್ಲಿ ಆ ರಾಜನು ಬಹಳ ದಕ್ಷಿಣೆಯುಳ್ಳ ಪುತ್ರಕಾಮೇಷ್ಟಿಯನ್ನು ಮಾಡುತ್ತಿರುವಾಗ, ಅಷ್ಟಮೂರ್ತಿಯಾದ ಪರಮೇಶ್ವರನ ಮೂರ್ತಿಗಳಲ್ಲಿ ಅಗ್ನಿ ಎಂದು ಪ್ರಸಿದ್ಧವಾದ ಮೂರ್ತಿಯು ಚರಾಚರ ಪ್ರಪಂಚವೆಲ್ಲವನ್ನೂ ವ್ಯಾಪಿಸಿಕೊಂಡು, ಯಾವಾಗಲೂ ತೇಜೋರೂಪದಿಂದ ಇರುವ ಕಾರಣ, ಮಲಯಧ್ವಜರಾಜನು ನಡೆಸುತ್ತಿರುವ ಯಜ್ಞವು ಪೂರ್ತಿಯಾಗುವುದಕ್ಕಾಗಿ ರುತ್ವಿಕ್ ಜನಗಳು ತನ್ನಲ್ಲಿ ಹಾಕಿದ ಪೂರ್ಣಾಹುತಿಯಿಂದ ಬಹಳ ಕಾಂತಿಯನ್ನು ಹೊಂದಿ ಪ್ರಕಾಶಿಸುತ್ತಿತ್ತು.

೨೪. ಅಗ್ನಿಯೆಂಬ ಹೆಸರಿನ ಪರಮೇಶ್ವರನ ಈ ಮೂರ್ತಿಯು, ಯಜಮಾನನು ಹೋಮ ಮಾಡಿದ ಹವಿಸ್ಸುಗಳನ್ನು ಅಂಗೀಕರಿಸುವುದು. ಇದು ಶಿವನ ಅಪ್ಪಣೆಯಂತೆ ಅವರವರ ಕರ್ಮಫಲಗಳು ಅವರವರಿಗೆ ಉಂಟಾಗುವಂತೆ ಅನುಗ್ರಹಮಾಡುವುದು.

ತತ್ತತ್ಫಲಾನಿ ಸರ್ವಾಣಿ ಯಾ ದದಾತಿ ಶಿವಾಜ್ಞಯಾ ।
ತಸ್ಯಾ ಮೂರ್ತೇಃ ಸಮುತ್ಪನ್ನಾ ಸುಮೀನಾಕ್ಷೀ ನಿಜಾಂಶತಃ ॥ ೨೫ ॥

ಶ್ಯಾಮಲಾ ಕೋಮಲಾಕಾರಾ ತ್ರಿಸಂವತ್ಸರರೂಪಿಣೀ ।
ಭೃಂಗಾಲಿಕಲ್ಪಚಿಕುರಾ ಪೂರ್ಣಚಂದ್ರನಿಭಾನನಾ ॥ ೨೬ ॥

ಅರ್ಧಚಂದ್ರಾಲಿಕಾ ಲೀಲಾರೇಚಿತಭ್ರೂಲತಾಯುತಾ ।
ವಿತ್ರಸ್ತಹರಿಣಪ್ರಖ್ಯವಿಪುಲಾಯುತಲೋಚನಾ ॥ ೨೭ ॥

ವಿದ್ಯುದ್ವಲಯಸಂಕಾಶತಾಟಂಕಾಭರಣೋಜ್ವಲಾ ।
ತಿಲಪುಷ್ಪಸಮಘ್ರಾಣಾ ವೃತ್ತದ್ವಿಜವಿಭೂಷಿತಾ ॥ ೨೮ ॥

ವಿಶದಾಮೃತಸಂಪೂರ್ಣಕುಮುದಾಧರಶೋಭಿತಾ ।
ಶಂಖಪೂಗಸಮುಚ್ಛಾಯಕಂಧರಾ ಮಂಜುಭಾಷಿಣೀ ॥ ೨೯ ॥

---

೨೫–೨೮. ಅಗ್ನಿಮೂರ್ತಿಯಿಂದಲೇ ಮೀನಾಕ್ಷೀದೇವಿಯು ತನ್ನ ಅಂಶದಿಂದ ಅವತರಿಸಿದಳು. ಮಲಯಧ್ವಜರಾಜನು ಪುತ್ರಕಾಮೇಷ್ಟಿ ಯಾಗವನ್ನು ಮಾಡುವಾಗ ಪೂರ್ಣಾಹುತಿಯನ್ನು ಹೋಮಮಾಡಿದರು. ಆಗ ಅಗ್ನಿಯಿಂದ ಮೂರು ವರ್ಷ ವಯಸ್ಸಿನ ಒಂದು ಕನ್ಯೆಯು ಎದ್ದು ನಿಂತಿತು. ಆ ಬಾಲೆಯು ಶ್ಯಾಮಲವರ್ಣದಿಂದ ಇದ್ದಳು. ಅವಳ ಅಂಗವು ಮೃದುವಾಗಿ ಇದ್ದಿತು. ದುಂಬಿಯಂತಿರುವ ಮುಂಗುರುಳು, ಪೂರ್ಣಚಂದ್ರನಂತಿರುವ ಮುಖವು, ಅರ್ಧಚಂದ್ರನ ಹಾಗೆ ಇರುವ ವಕ್ರವಾದ ಮತ್ತು ಉದ್ದವಾದ ಎರಡು ಹುಬ್ಬುಗಳು ಇವುಗಳನ್ನು ಧರಿಸಿದ್ದಳು. ಈ ಹುಡುಗಿಯ ಕಣ್ಣುಗಳು ಹೆದರಿದ ಹುಲ್ಲೆಯ ಕಣ್ಣಿನಂತೆ ವಿಸ್ತಾರವಾಗಿ ಚಂಚಲವಾಗಿದ್ದವು. ಮಿಂಚನಂತೆ ಹೊಳೆಯುತ್ತಿರುವ (ತಾಟಂಕ) ಕಿವಿಯ ಆಭರಣದಿಂದ ಮನೋಹರಳಾಗಿದ್ದಳು. ಎಳ್ಳಿನ ಹೂವಿಗೆ ಸಮನಾದ ಮೂಗು, ದುಂಡಾಗಿರುವ ಹಲ್ಲುಗಳು, ನಿರ್ಮಲವಾದ ಅಮೃತ ರಸದಿಂದ ತುಂಬಿರುವ ಅಧರೋಷ್ಠವೂ, ಶಂಖಗಳ ಕಾಂತಿಯನ್ನು ಹೊಂದಿರುವ ಕಂಠವೂ, ಇವುಗಳಿಂದ ರಮ್ಯಳಾದ ಈ ಹುಡುಗಿಯು ಮನೋಹರಳಾಗಿ ಮುದ್ದಾದ ಮಾತನ್ನು ಆಡುತ್ತಿದ್ದಳು.

೨೯–೩೨. ಬಿದಿರಿನ ಗಿಣ್ಣಿಗೆ ಸಮನಾದ ಎರಡು ಭುಜಗಳು ಈ ಬಾಲೆಗೆ ಇದ್ದವು. ಆದರೆ ಕೊಂಚಮಟ್ಟಿಗೆ ಅಂಕುರಿಸಿರುವ ಆಶ್ಚರ್ಯಕರವಾಗಿರುವ ಮೂರು ಸ್ತನಗಳು ಈ ಬಾಲೆಗೆ ಕಾಣುತ್ತಿದ್ದವು. ಮಹಾದೇವನು ನಾಶಮಾಡಿದ ಕಾಮನನ್ನು ಬದುಕಿಸುತ್ತಿರುವ ಈ ಬಾಲೆಯ ಮಧ್ಯ ಪ್ರದೇಶವೂ, ಮದದಿಂದ ತುಂಬಿರುವ ಆನೆಯ

ಕೀಚಕಪ್ರತಿ ಸಂಕಾಶವೇಚಕಾಭಭುಜದ್ವಯಾ ।
ಕಿಂಚಿದಂಕುರಿತಾಶ್ಚರ್ಯಕುಚತ್ರಯಸಮನ್ವಿತಾ ॥ ೩೦ ॥

ಮಹಾದೇವವನಿನಿರ್ದಗ್ಧಮನ್ಮಥಾಂಗಾಭಮಧ್ಯಮಾ ।
ಮದಬೃಂಹಿತಮಾತಂಗಕುಂಭಬಿಂಬನಿತಂಬಿನೀ । ॥ ೩೧ ॥

ಕುಂಭೀಕರನಿಭಚ್ಛಾಯರಂಭಾಸ್ತಂಭಸಮೋರುಯುಕ್ ।
ಕಂದರ್ಪಶರಧಿಪ್ರಖ್ಯಜಂಘಾಕಾಂಡಾಭಿಶೋಭಿನೀ । ॥ ೩೨ ॥

ವಿಭಾತೋನ್ನಿದ್ರಪದ್ಮಾಭವಿಜಿತಾಂಘ್ರಿವಿರಾಜಿತಾ ।
ದಿವ್ಯಾಂಬರಧರಾ ದಿವ್ಯಗಂಧಪುಷ್ಪವಿಭೂಷಿತಾ ॥ ೩೩ ॥

ಏವಮುಜ್ವಲವೇಷಾ ಸಾ ಲೀಲಯಾ ಪರಮೇಶ್ವರೀ ।
ಮಲಯಧ್ವಜಭೂಪಾಲಯಜಮಾನಸಮೀಪಗಾಂ । ॥ ೩೪ ॥

ಪತ್ನೀಂ ಕಾಂಚನಮಾಲಾಂ ಚ ಸಮಾಲಿಂಗ್ಯ ಸುವಿಸ್ಮಿತಾಂ ।
ಅಂಕಂ ತಸ್ಯಾಶ್ಚಾರುರೋಹ ಬಾಲಾ ಲೋಕವಿಮೋಹಿನೀ ॥ ೩೫ ॥

---

ಕುಂಭಸ್ಥಳದಂತಿರುವ ಕಟಿಪಶ್ಚಾದ್ಭಾಗವೂ, ಮದ್ದಾನೆಯ ಸೊಂಡಿಲನ್ನು ಅನುಕರಿಸಿರುವ ಬಾಳೆಯ ಕಂಬದಂತಿರುವ ಎರಡು ತೊಡೆಗಳೂ, ಕಾಮನ ಬತ್ತಳಿಕೆಯ ಆಕಾರವನ್ನು ಧರಿಸಿರುವ ಎರಡು ಮೊಳಕಾಲುಗಳೂ ಬೆಳಗಾದಕೂಡಲೇ ಅರಳಿರುವ ಪದ್ಮವನ್ನು ಜರಿಯುವ ಪಾದಗಳೂ ಇವೆಲ್ಲವೂ, ಈ ಬಾಲೆಯಶರೀರದಲ್ಲಿ ಅನ್ಯೋನ್ಯವಾಗಿ ಅನುರೂಪ್ಯದಿಂದ ಸೌಂದರ್ಯವನ್ನು ಹೆಚ್ಚಿಸುತ್ತಿದ್ದವು.

೩೩–೩೪. ಪರಮೇಶ್ವರಿಯು ಈ ಪ್ರಕಾರವಾದ ಬಾಲೆಯ ವೇಷದಿಂದ ಉತ್ತಮವಾದ ಪೀತಾಂಬರವನ್ನು ಧರಿಸಿಕೊಂಡು, ದಿವ್ಯಗಂಧಾನುಲಿಪ್ತಳಾಗಿ, ದಿವ್ಯಪುಷ್ಪವನ್ನು ಧರಿಸಿ ಲೀಲೆಯಿಂದ ಯಜಮಾನನಾದ ಮಲಯಧ್ವಜರಾಜನ ಹತ್ತಿರದಲ್ಲಿ ಕುಳಿತುಕೊಂಡಿರುವ, ಅವನ ಧರ್ಮಪತ್ನಿಯಾದ ಕಾಂಚನಮಾಲೆಯನ್ನು ಆಲಂಗಿಸಿಕೊಂಡು, ಅವಳ ತೊಡೆಯಮೇಲೆ ಕುಳಿತುಕೊಂಡಳು. ಜಗತ್ತೆಲ್ಲವೂ ಮೋಹಗೊಳಿಸುವ ಆ ಹುಡುಗಿಯ ಸೌಂದರ್ಯವನ್ನು ನೋಡಿ ಕಾಂಚನಮಾಲೆಗೆ ಆಶ್ಚರ್ಯವಾಯಿತು.

೩೫–೩೬. ಮಲಯಧ್ವಜಭೂಪನು ಬಾಲೆಯ ಶರೀರದಲ್ಲಿ ವಿಕಾರವಾದ ಮೂರನೆಯ ಸ್ತನವನ್ನು ನೋಡಿ, ಕೊಂಚಮಟ್ಟಿಗೆ ಮನಸ್ಸಿನಲ್ಲಿ ಖೇದವನ್ನು ಹೊಂದಿ

ಕುಚೇನೈಕೇನ ವಿಕೃತಾಂ ತಾಂ ವಿಲೋಕ್ಯ ಸುಕನ್ಯಕಾಂ ।
ಮಲಯಧ್ವಜಭೂಪಾಲಸ್ತದಾ ಖಿನ್ನಮನಾಹ್ಯಭೂತ್ ॥ ೩೬ ॥

ತತ್ಖೇದಶಾಂತಯೇ ಸದ್ಯಸ್ಸಂಜಾತಾ ಶಂಕರಸ್ಯ ವಾಕ್ ।
ಮಾ ಶುಚಸ್ತ್ವಂ ಮಹೀಪಾಲ ಮಹತೀ ದೇವತಾ ತವ ॥ ೩೭ ॥

ಸಪತ್ನೀಕಸ್ಯ ಮಹತೀ ಶ್ರೇಯಸೇ ಜಗತಾಮಪಿ ।
ಅಂಗೀಕೃತ್ಯ ಚ ಪುತ್ರೀತ್ವಮಾವಿರ್ಭವತಿ ನಾಮತಃ ॥ ೩೮ ॥

ತಟಾತಕೇಯಂ ಕಲ್ಯಾಣೀ ಯದಾ ಭರ್ತ್ರಾ ವಿಲೋಕಿತಾ ।
ತದಾ ನಿಮಗ್ನಂ ಭವತಿ ವಿಕೃತಂ ಕುಚಮಂಡಲಂ ॥ ೩೯ ॥

ಜಾತಕರ್ಮಾದಿಯತ್ಕರ್ಮ ತತ್ಸರ್ವಂ ಸಹಸಾ ಕುರು ।
ಇತಿ ಪ್ರಾದಭವದ್ವಾಣೀ ಶ್ರೀ ಹಾಲಾಸ್ಯೇಶ್ವರಸ್ಯ ಚ ॥ ೪೦ ॥

ತಾಂ ಶ್ರುತ್ವಾ ದೇವದೇವಸ್ಯ ಪ್ರಸಾದ ಇತಿ ಚಿಂತಯನ್ ।
ಯಜಮಾನೋ ಮಹೀಪಾಲೋ ವಿದ್ವದ್ಭಿರ್ಜಾತಕರ್ಮ ಚ ॥ ೪೧ ॥

---

ದನು. ಆದರೆ ಆ ಕ್ಷಣದಲ್ಲಿಯೇ ಆಕಾಶವಾಣಿಯು "ಎಲೈ ರಾಜನೇ ನೀನು ಖೇದವನ್ನು ಹೊಂದಬೇಡ. ಈ ಹುಡುಗಿಯು ನಿನ್ನ ದೇವತೆಯು. ಪತ್ನಿಯಿಂದ ಒಡಗೂಡಿದ ನಿನಗೂ ಪ್ರಪಂಚವೆಲ್ಲಕ್ಕೂ ಶ್ರೇಯಸ್ಸನ್ನು ಉಂಟುಮಾಡಲು ಪರಮೇಶ್ವರಿಯು ಈ ರೂಪದಿಂದ ಅವತರಿಸಿರುವಳು. ಈ ಮಂಗಳಮೂರ್ತಿಗೆ ತಟಾತಕಾ ಎಂದು ಹೆಸರನ್ನು ನೀನು ಇರಿಸು. ಇವಳು ತನ್ನ ಪತಿಯನ್ನು ನೋಡಿದಕೂಡಲೇ ಇವಳ ಶರೀರದಲ್ಲಿರುವ ವಿಕಾರವಾದ ಮೂರನೆಯ ಸ್ತನವು ಅದೃಶ್ಯವಾಗುವುದು. ಇವಳಿಗೆ ಜಾತಕರ್ಮ ಮೊದಲಾಗಿ ಎಲ್ಲಾ ಸಂಸ್ಕಾರಗಳನ್ನೂ ಬೇಗನೆ ಮಾಡು" ಎಂದು ಕೇಳಿಸಿತು. ಹಾಲಾಸ್ಯೇಶ್ವರನು ಹೇಳಿದ ಈ ಮಾತನ್ನು ಕೇಳಿ ಮಲಯಧ್ವಜನು ದೇವದೇವನ ಅನುಗ್ರಹವು ಈ ರೂಪದಿಂದ ಇರುವುದು. ಎಂದು ನಿಶ್ಚಯಿಸಿದನು.

೪೧–೪೪. ಆಗ ಅವನು ಪುರೋಹಿತರಿಂದ ಜಾತಕರ್ಮವನ್ನು ಮಾಡಿಸಿದನು. ಆ ಹುಡುಗಿಗೆ ತಟಾತಕಾ ಎಂದು ನಾಮಕರಣವನ್ನು ಮಾಡಿ ಅನೇಕ ವಿಧವಾದ ದಾನಗಳನ್ನು ಮಾಡಿದನು. ನನ್ನ ಪುಣ್ಯ ದೇವತೆಯು ಸುಂದರವಾದ ಕನ್ಯೆಯ ಆಕಾರವನ್ನು ಹೊಂದಿ, ಮೂರು ವಂಶಗಳನ್ನೂ ಪವಿತ್ರಮಾಡುವಳು

ದಾನೈಶ್ಚ ವಿವಿಧೈಸ್ಸಾರ್ಧಂ ಸದ್ಯೋ ನಿರ್ವರ್ತ್ಯ ಕನ್ಯಕಾಂ ।
ನಾಮ್ನಾ ಕಟಾತಕಾಂ ಕೃತ್ವಾ ಪತ್ನ್ಯೈ ಕಾಂಚನಮಾಲಯಾ || ೪೨ ||

ಮದ್ಭಾಗಧೇಯಂ ಮಧುರಂ ಕನ್ಯಾವೇಷಂ ಪ್ರಗೃಹ್ಯ ಚ ।
ಪಂಶತ್ರಯಂ ಮದೀಯಂ ಚ ಸಮುದ್ಧರ್ತುಂ ಭವಾಂಬುಧೇಃ || ೪೩ ||

ಅನುಗ್ರಹಾಯ ಲೋಕಾನಾಂ ದುಷ್ಟಾನಾಂ ನಿಗ್ರಹಾಯ ಚ ।
ಪ್ರಾದುರ್ಭೂತಮಿದಂ ಜ್ಞಾತ್ವಾ ಮತಿಮಾನ್ಮಲಯಧ್ವಜಃ || ೪೪ ||

ಪತ್ನ್ಯೈ ಪುನಃ ಪುನಸ್ತ್ವೇವಂ ಕಥಯಿತ್ವಾ ಮಹಾದರಾತ್ ।
ಪುನಸ್ಸರ್ವೈರಾಭರಣೈರಲಂಕೃತ್ಯ ವಿಲೋಕ್ಯ ತಾಂ || ೪೫ ||

ಸಂತೋಷಸಾಗರೇ ಮಗ್ನಸ್ತಾಸ್ತೇ ಸರ್ವೈಸ್ಸುಹೃಜ್ಜನೈಃ ।
ದೇವೀ ಕಾಂಚನಮಾಲಾ ಚ ಪುತ್ರೀಂ ಲಬ್ಧ್ವಾ ಮನೋಹರಾಂ || ೪೬ ||

ರಮಾಂ ಮೇನೇ ಸುಸಂಹೃಷ್ಟಾ ತಾಂನಿತ್ಯಮುಪಲಾಲ್ಯ ಚ ।
ಅನುಭೂಯ ಮಹಾಭೋಗಾನ್ಪತ್ಯಾಸಾರ್ಧಂ ಸುಖೇ ಸ್ಥಿತಾ || ೪೭ ||

ಅನಾದ್ಯಂತಾ ಪರಾಶಕ್ತಿರದ್ವೈತಾ ಶಂಭುನೇರಿತಾ ।
ಲೀಲಯಾಂಶೇನಾವತೀರ್ಯ ಕುಲಯಧ್ವಜಮಂದಿರೇ || ೪೮ ||
ವರ್ಧತೇ ಶುಕ್ಲಪಕ್ಷೇ ಚ ಯಥಾ ಚಂದ್ರಕಲಾ ತಥಾ ।

---

ನನ್ನ ಜನ್ಮವನ್ನು ಸಾರ್ಥಕಗೊಳಿಸುವಳು. ಲೋಕದಲ್ಲಿ ಶಿಷ್ಟರ ಅನುಗ್ರಹ, ದುಷ್ಟರ ಶಿಕ್ಷಣೆಯನ್ನು ಮಾಡುವಳು. ಇದಕ್ಕಾಗಿಯೇ ದೇವಿಯು ಅವತರಿಸಿರುವಳು." ಎಂದು ಅವನು ತನ್ನ ಪತ್ನಿಯ ಸಂಗಡ ಪುನಃ ಪುನಃ ಆದರದಿಂದ ಹೇಳಿದನು. ಆ ಮಗುವಿಗೆ ಅನೇಕವಿಧವಾದ ಆಭರಣಗಳನ್ನು ಪುನಃ ತೊಡಿಸಿ, ಆ ಮಗುವನ್ನು ಚೆನ್ನಾಗಿ ನೋಡಿ ಬಹಳ ಸಂತೋಷದಿಂದ ತನ್ನ ಸ್ನೇಹಿತರೊಡನೆ ಸುಖದಿಂದ ಇದ್ದನು.

೪೫–೪೭. ಕಾಂಚನಮಾಲೆಯು ಮನೋಹರಳಾದ ಮಗಳನ್ನು ಹೊಂದಿ, ಅವಳನ್ನು ಆಕಾರವನ್ನು ಹೊಂದಿದ ಲಕ್ಷ್ಮಿ ಎಂದು ತಿಳಿದು, ಸಂತೋಷದಿಂದ ಅವಳನ್ನು ಲಾಲಿಸಿ ಪೋಷಿಸುತ್ತಾ, ಪತಿಯೊಡನೆ ಬಹಳ ಮಟ್ಟಿಗೆ ಭೋಗಗಳನ್ನು ಅನುಭವಿಸುತ್ತಾ ಸುಖವಾಗಿದ್ದಳು.

೪೮. ಮಲಯಧ್ವಜರಾಜನ ಮನೆಯಲ್ಲಿ ಆದ್ಯಂತರಹಿತಳಾದ ಪರಾಶಕ್ತಿ ದೇವಿಯು, ಪರಮೇಶ್ವರನ ಅಪ್ಪಣೆಯನ್ನು ಅನುಸರಿಸಿ, ಲೀಲೆಯಿಂದ ಅವತಾರಮಾಡಿ, ಶುಕ್ಲಪಕ್ಷದ ಚಂದ್ರನಹಾಗೆ, ದಿನದಿನದಲ್ಲಿಯೂ ವೃದ್ಧಿಯನ್ನು ಹೊಂದುತ್ತಿದ್ದಳು.

॥ ಋಷಯ ಊಚುಃ ॥

ಪುರಾ ದಾಕ್ಷಾಯಿಣೀ ದೇವೀ ಪಿತರಂ ಶಿವನಿಂದಕಂ ।
ತ್ಯಕ್ತ್ವಾ ಹಿಮಾದ್ರೇಸ್ಸಂಜಾತಾ ತ್ವಧುನಾ ಕೇನ ಹೇತುನಾ ॥ ೪೯ ॥
ಮಲಯಧ್ವಜಪುತ್ರ್ಯಾಸೀನ್ಮುನೇ ತತ್ಕಾರಣಂ ವದ ।

॥ ಆಗಸ್ತ್ಯ ಉವಾಚ ॥

ಪುರಾ ಗಂಧರ್ವರಾಜಸ್ಯ ಕನ್ಯಾ ವಿಶ್ವಾವಸೋರಭೂತ್ ।
ನಾಮ್ನಾ ವಿದ್ಯಾವತೀ ಕನ್ಯಾ ಗೀತೇನಾಖಿಲಮೋಹಿನೀ ॥ ೫೦ ॥

ಬಾಲ್ಯೇವಯಸಿ ವೈರಾಗ್ಯಂ ದೇವೀಭಕ್ತಿಮವಾಪ್ಯ ಸಾ ।
ಸುಗಂಧಾಲೇಪನಂ ತ್ಯಕ್ತ್ವಾ ಭಸ್ಮನೋದ್ಧೂಳ್ಯ ವಿಗ್ರಹಂ ॥ ೫೧ ॥

ಭೂಷಣಾನ್ಯಪಿ ಸಂತ್ಯಜ್ಯ ರುದ್ರಾಕ್ಷೈಃ ಕಲ್ಪಿತಾನಿ ಚ ।
ಹಾರಕುಂಡಲಕೇಯೂರಪ್ರಮುಖಾಭರಣಾನಿ ಚ ॥ ೫೨ ॥

---

೪೯. ಋಷಿಗಳು ಹೇಳಿದರು :—ಎಲೈ ಅಗಸ್ತ್ಯಮುನಿಯೆ, ಪೂರ್ವದಲ್ಲಿ ದಾಕ್ಷಾಯಿಣೀ ದೇವಿಯು, ಶಿವನನ್ನು ದೂಷಿಸಿದ ತನ್ನ ತಂದೆಯನ್ನು ಬಿಟ್ಟು, ಹಿಮವಂತನಿಂದ ಜನ್ಮವನ್ನು ಪಡದಳೆಂದು ನಾವು ಕೇಳಿರುವೆವು. ಈಗ ಅದೇ ದೇವಿಯು ಯಾತಕ್ಕಾಗಿ ಅವತರಿಸಿದಳು. ಆವಳು ಮಲಯಧ್ವಜನ ಪುತ್ರಿಯಾಗಿರಲು ಕಾರಣವೇನು" ? ಇದನ್ನು ತಿಳಿಸು.

೫೦–೫೨. ಆಗಸ್ತ್ಯಋಷಿಯು ಹೇಳಿದನು :—ವಿಶ್ವಾವಸು ಎಂಬ ಗಂಧರ್ವ ರಾಜನಿಗೆ ಗಾನವಿದ್ಯೆಯಲ್ಲಿ ನಿಪುಣೆಯಾದ ವಿದ್ಯಾವತಿ ಎಂದು ಪ್ರಸಿದ್ಧಳಾದ ಮಗ ಳಿದ್ದಳು. ಆವಳಿಗೆ ಬಾಲ್ಯದಲ್ಲಿಯೇ ವೈರಾಗ್ಯವು ಉಂಟಾಗಿ ಪರಮೇಶ್ವರಿಯಾದ ಪಾರ್ವತಿಯನ್ನು ಪೂಜಿಸಲು ಭಕ್ತಿಯು ಉಂಟಾಯಿತು. ಅವಳು ಸುಗಂಧಾನು ಲೇಪನಕ್ಕೆ ಬದಲಾಗಿ ಭಸ್ಮೋದ್ಧೂಳನೆಯನ್ನು ಮಾಡಿಕೊಂಡಳು. ಆಭರಣಗಳಿಗೆ ಬದ ಲಾಗಿ ರುದ್ರಾಕ್ಷಗಳಿಂದ ಹಾರವೇ ಮುಂತಾದ ಆಭರಣಗಳನ್ನು ಮಾಡಿ ಅವುಗಳನ್ನು ಧರಿಸಿದಳು. ಬಹಳ ಸಂತೋಷದಿಂದ ಪಾರ್ವತಿಯನ್ನು ತನ್ನ ಮನಸ್ಸಿನಲ್ಲಿ ಧ್ಯಾನ ಮಾಡುತ್ತಾ, ಯಾವಾಗಲೂ ಭಕ್ತಿಯಿಂದ ಪಾರ್ವತಿಯನ್ನು ಪೂಜಿಸುತ್ತಿದ್ದಳು.

ದಧಾತಿ ಸುಮಹತ್ಪ್ರೀತ್ಯಾ ಧ್ಯಾತ್ವಾ ಹೃದಯಪಂಕಜೇ ।
ಅಹರ್ನಿಶಂ ಪೂಜಯಂತೀ ಪಾರ್ವತೀಮೇವ ಭಕ್ತಿತಃ　　　　॥ ೫೩ ॥

ಮೂಲವಿದ್ಯಾಂ ಚ ಜಪತಿ ಪ್ರಸ್ತೌತಿಸ್ತುತಿಭಿಸ್ಸದಾ ।
ದೇವೀಪರಾಯಣಾ ಭೂತ್ವಾ ಪಿತರಂ ಜ್ಞಾನಿನಾಂ ವರಂ　　　　॥ ೫೪ ॥
ವಿಶ್ವಾವಸುಂ ಸಾ ಪಪ್ರಚ್ಛ ಸಾದರಂ ಮುನಿಪುಂಗವಾಃ ।

॥ ವಿದ್ಯಾವತೀ ಉವಾಚ ॥

ಆರ್ಯಾಣಾಮಾರ್ಯ ಭಗವಂಸ್ತಾತ ತ್ವಂ ಬ್ರೂಹಿ ತತ್ವತಃ ।
ಕರ್ಮಭೂಮೌ ವಿಶಿಷ್ಟಾನಿ ಮಹಾದೇವ್ಯಾ ಬಹೂನಿ ಚ　　　　॥ ೫೫ ॥
ಸಂತಿ ಸ್ಥಾನಾನಿ ತೇಷಾಂ ತು ಮಧ್ಯೇಸಾರತರಂ ವದ ।

॥ ವಿಶ್ವಾವಸುರುವಾಚ ॥

ಶೃಣು ವಿದ್ಯಾವತಿ ಸುತೇ ದೇವೀಸ್ಥಾನಮನುತ್ತಮಂ ।
ಶತಾನಂದೇನ ಕಥಿತಮಸ್ಮಾಭಿಃ ಪ್ರಾರ್ಥಿತೇನ ಚ　　　　॥ ೫೫ ॥

ನಿಶ್ಚೇತುಂ ಕ್ಷೇತ್ರಮಾಹಾತ್ಮ್ಯಂ ಬ್ರಹ್ಮಣಾ ತುಲಿತಂ ಪುರಾ ।
ಪುಣ್ಯಕ್ಷೇತ್ರಮಶೇಷಂ ಚ ಶ್ರೀಹಾಲಾಸ್ಯಮಭೂತ್ಮಹತ್　　　　॥ ೫೭ ॥

---

೫೩–೫೪. ವಿದ್ಯಾಪತಿಯು ದೇವಿಯ ಮೂಲಮಂತ್ರವನ್ನು ಜಪಮಾಡುತ್ತಾ, ದೇವಿಯನ್ನು ಯಾವಾಗಲೂ ಸ್ತುತಿಸುತ್ತಾ, ದೇವಿಯಲ್ಲಿ ಬಹಳ ಭಕ್ತಿಯಿಂದ ಇರುವವಳಾಗಿ, ಜ್ಞಾನಿಗಳಿಗೆಲ್ಲರಿಗೂ ಉತ್ತಮವಾದ ತನ್ನ ತಂದೆಯಾದ ವಿಶ್ವಾವಸುವನ್ನು, "ಕರ್ಮಭೂಮಿಯಲ್ಲಿ ಮಹಾದೇವಿಯ ಪವಿತ್ರಕರಗಳಾದ ಕ್ಷೇತ್ರಗಳು ಬಹಳವಿರುವುವು. ಅವುಗಳಲ್ಲಿ ಉತ್ತಮವಾದ ಕ್ಷೇತ್ರವನ್ನು ನನಗೆ ಹೇಳು". ಎಂದು ಆದರದಿಂದ ಪ್ರಶ್ನೆ ಮಾಡಿದಳು.

೫೫–೫೮. ವಿಶ್ವಾವಸುವು ಹೇಳಿದನು :—ಎಲೈ ಪುತ್ರಿಯಾದ ವಿದ್ಯಾವತಿಯೇ ಕೇಳು. ಶತಾನಂದಋಷಿಯನ್ನು ನಾನು ಕೇಳಿದಾಗ ಅವನು ಶ್ರೇಷ್ಠವಾದ ದೇವಿಯ ವಾಸಸ್ಥಾನವನ್ನು ಹೇಳಿ, ಅದರಲ್ಲಿಯೂ ಶ್ರೇಷ್ಠವಾದ ಕ್ಷೇತ್ರವನ್ನು ಹೇಳಿರುವನು. ಚತುರ್ಮುಖಬ್ರಹ್ಮನು ಪುಣ್ಯಕ್ಷೇತ್ರಗಳ ಮಹಿಮೆಯನ್ನು ಕಂಡುಹಿಡಿಯುವುದಕ್ಕಾಗಿ

**ಮೇರುಮಂದರಕೈಲಾಸಕಾಶೀಶ್ರೀಪರ್ವತಾದಿ ಚ ।**
**ಸರ್ವಮೇಕತ್ರ ಸಂಸ್ಥಾಪ್ಯ ಶ್ರೀಹಾಲಾಸ್ಯಮಥಾಪರೇ ॥ ೫೮ ॥**

**ಸ್ಥಾಪಿತಂ ಚಾಧಿಕತರಂ ಸದ್ಯಸ್ಸಿದ್ಧಿಕರಂ ಶತಃ ।**
**ಸ್ವರ್ಗದ್ವಾರಂ ಸದೈವಾಸ್ತೇ ಸೋದ್ಘಾಟಿತಕವಾಟಕಂ ॥ ೫೯ ॥**

**ಸುಮೀನಾಕ್ಷ್ಯಾಃ ಪೂಜನಾರ್ಥಂ ವಿಜ್ಞಾಪ್ಯ ತ್ರಿದಶೇಶ್ವರಂ ।**
**ರಂಭಾದಿದಿವ್ಯನಾರೀಭಿರಹರ್ನಿಶಮತೋಽಧಿಕಂ ॥ ೬೦ ॥**

**ಶ್ರೀಹಾಲಾಸ್ಯೇ ಮಹಾಕ್ಷೇತ್ರೇ ಮಹಾತೀರ್ಥಸ್ಯ ತೀರಕೇ ।**
**ದಿವ್ಯಹರ್ಮ್ಯೇ ಪರಾ ಶಕ್ತಿಃ ಪರಿಪೂರ್ಣಾ ಪರಾತ್ಪರಾ ॥ ೬೧ ॥**

**ಅನಾದ್ಯಂತಾ ಜಗನ್ಮಾತಾ ಸಚ್ಚಿದಾನಂದರೂಪಿಣೀ ।**
**ಸ್ಮೃತಮಾತ್ರೇಣ ಪಾಪಘ್ನೀ ಸರ್ವೈಶ್ವರ್ಯಪ್ರದಾಯಿನೀ ॥ ೬೨ ॥**

**ದೇವೀ ಸಾ ಕರುಣಾಮೂರ್ತಿಃ ಶ್ರೀಹಾಲಾಸ್ಯೇಶ್ವರಸ್ಯ ಚ ।**
**ಮನೋಜ್ಞಾ ಶಫರಾಕ್ಷೀ ಸಾ ಮಹಾದೇವೀ ಮನೋನ್ಮನೀ ॥ ೬೩ ॥**

---

ಮೇರು, ಮಂದರ, ಕೈಲಾಸ, ಕಾಶೀ, ಶ್ರೀಪರ್ವತ, ಇವೆಲ್ಲವನ್ನೂ ಒಂದು ಕಡೆಯಲ್ಲಿಯೂ ಹಾಲಾಸ್ಯ ಕ್ಷೇತ್ರವನ್ನು ಬೇರೆ ಕಡೆಯಲ್ಲಿಯೂ ಇರಿಸಿದನು. ಆಗ ಹಾಲಾಸ್ಯಕ್ಷೇತ್ರದ ತೂಕವು ಹೆಚ್ಚಾಯಿತು. ಹಾಲಾಸ್ಯಕ್ಷೇತ್ರದಲ್ಲಿ ಸೇವೆಯನ್ನು ಮಾಡುವವರಿಗೆ ಆ ಕ್ಷಣದಲ್ಲಿಯೇ ಸಿದ್ಧಿಯು ಉಂಟಾಗುವುದು.

೫೯–೬೩. ಹಾಲಾಸ್ಯಕ್ಷೇತ್ರದಲ್ಲಿ ಇರುವ ಮೀನಾಕ್ಷಿದೇವಿಯನ್ನು ಪೂಜಿಸುವುದಕ್ಕಾಗಿ ರಂಭೆಯೇ ಮೊದಲಾದ ಅಪ್ಸರಸ್ತ್ರೀಯರು ಇಂದ್ರನ ಅನುಜ್ಞೆಯನ್ನು ಹೊಂದಿ ಈ ಕ್ಷೇತ್ರಕ್ಕೆ ಬರುತ್ತಿರುವುದರಿಂದ ಸ್ವರ್ಗದಬಾಗಿಲು ಯಾವಾಗಲೂ ತೆಗೆದಿರುವುದು. ಇದರಿಂದ ಇದು ಉತ್ತಮವಾದದ್ದು. ಈ ಕ್ಷೇತ್ರದಲ್ಲಿ ಪವಿತ್ರವಾದ ತೀರ್ಥದ ತೀರದಲ್ಲಿರುವ ಶ್ರೇಷ್ಠವಾದ ಪ್ರಾಸಾದದಲ್ಲಿ ಪರಾಶಕ್ತಿದೇವಿಯು ಇರುವಳು. ಈ ದೇವಿಯು ಕಲ್ಯಾಣ ಗುಣಗಳಿಂದ ಪರಿಪೂರ್ಣಳು, ಪರಬ್ರಹ್ಮನಿಗಿಂತಲೂ ಶ್ರೇಷ್ಠಳು. ಇವಳು ಆದ್ಯಂತ ರಹಿತಳು. ಈ ಜಗನ್ಮಾತೆಯು ಸಚ್ಚಿದಾನಂದ ರೂಪಿಸಿಂದ ಇರುತ್ತಾ ತನ್ನನ್ನು ಸ್ಮರಿಸಿದವರ ಪಾತಕಗಳನ್ನು ಸ್ಮರಣಮಾತ್ರದಿಂದ ನಾಶಮಾಡುತ್ತಿರುವಳು. ಎಲ್ಲಾ ವಿಧವಾದ ಐಶ್ವರ್ಯವನ್ನೂ ಕೊಡುತ್ತಿರುವಳು. ಅಪಾರ ದಯೆಯುಳ್ಳ ಈ ದೇವಿಯು ಹಾಲಾಸ್ಯೇಶ್ವರನ ಮನಸ್ಸನ್ನು ಅನುಸರಿಸುತ್ತಾ ಮೀನಾಕ್ಷೀದೇವಿ, ಮನೋನ್ಮನಿ, ಮಹಾದೇವಿ, ಎಂಬ ಹೆಸರುಗಳಿಂದ ಭಕ್ತರಿಗೆ ಇಷ್ಟಾರ್ಥಗಳನ್ನು ಕೊಡುತ್ತಾ ಆ ಕ್ಷೇತ್ರದಲ್ಲಿ ತನ್ನ ಸಾನ್ನಿಧ್ಯವನ್ನು ಯಾವಗಲೂ ದಯಪಾಲಿಸಿರುವಳು.

**ಸದಾ ಕರೋತಿ ಸಾನ್ನಿಧ್ಯಂ ಭಕ್ತಾನಾಮಿಷ್ಟಸಿದ್ಧಯೇ ।**
**ದೇವೀಪೀಠಾನ್ಯನೇಕಾನಿ ಸಂತಿ ಲೋಕತ್ರಯೇಷು ಚ ॥ ೬೪ ॥**

**ತೇಷಾಂ ಮಧ್ಯೇ ಚತುಃಷಷ್ಟಿ ಪೀಠಾನಿ ಚ ಮಹಾಂತಿ ಚ ।**
**ತೇಷು ಮುಖ್ಯತಮಂ ಪೀಠಂ ಕದಂಬವನಪೀಠಕಂ ॥ ೬೫ ॥**

**ವಸುಪೂರ್ಣಃಸ್ವಚ್ಛವಿದ್ಯೋ ಯಕ್ಷೋ ವಿದ್ಯಾಧರಃ ಕ್ರಮಾತ್ ।**
**ಪಂಚಸ್ವರೋ ಮತ್ಪಿತಾ ಚ ತತ್ರ ಸಿದ್ಧಿಂ ಪರಾಂ ಯಯುಃ ॥ ೬೬ ॥**

**ಇತಿ ವಿಶ್ವಾವಸುವಚಃ ಶ್ರುತ್ವಾ ವಿದ್ಯಾವತೀ ತದಾ ।**
**ಅಹಂ ಚ ತತ್ರ ಗತ್ವಾ ತಾಂ ಸಮಾರಾಧ್ಯ ತ್ರಿಕಾಲತಃ ॥ ೬೭ ॥**

**ಆಶು ಸಿದ್ಧಿಮವಾಪ್ಸ್ಯಾಮೀತ್ಯಾಶಯಾ ಪರಯಾ ಯುತಾ ।**
**ವಿಶ್ವಾವಸುಂ ಚ ಜನಕಂ ಸಮ್ಯಕ್ಸಂಪ್ರಾರ್ಥ್ಯ ತಸ್ಯ ಚ ॥ ೬೮ ॥**

**ಲಬ್ಧ್ವಾನುಜ್ಞಾಂ ಸುಮೀನಾಕ್ಷೀದರ್ಶನೇ ಭಾಗ್ಯವತ್ಯಹಂ ।**
**ಇತಿ ಸಂಚಿಂತ್ಯ ಮನಸಾ ಮನೋವೇಗೇನ ಕನ್ಯಕಾ ॥ ೬೯ ॥**

---

೬೪–೬೫. ಮೂರು ಲೋಕಗಳಲ್ಲಿಯೂ ದೇವಿಯ ಪೀಠಗಳು ಬಹಳವಾಗಿ ಇರುವವು. ಅವುಗಳಲ್ಲಿ ಅರವತ್ತುನಾಲ್ಕು ಪೀಠಗಳು ಉತ್ತಮವಾದುವುಗಳು. ಅವುಗಳಲ್ಲಿ ಈ ಹಾಲಾಸ್ಯಕ್ಷೇತ್ರವು ಉತ್ತಮೋತ್ತಮವಾದದ್ದಾಗಿರುವುದು. ವಸುಪೂರ್ಣ, ಸ್ವಚ್ಛವಿದ್ಯಾ ಎಂಬ ಯಕ್ಷನೂ, ವಿದ್ಯಾಧರನೂ, ಪಂಚಸ್ವರನೆಂಬುವನೂ, ನನ್ನ ತಂದೆಯೂ ಕೂಡ ಹಾಲಾಸ್ಯಕ್ಷೇತ್ರದಲ್ಲಿ ಸಿದ್ಧಿಯನ್ನು ಹೊಂದಿರುವರು.

೬೬–೬೯. ಆಗ ವಿದ್ಯಾವತಿಯು ತಂದೆಯಾದ ವಿಶ್ವಾವಸುವಿನ ಮಾತನ್ನು ಕೇಳಿ, ನಾನು ಆ ಕ್ಷೇತ್ರಕ್ಕೆ ಹೋಗಿ ಮೀನಾಕ್ಷೀದೇವಿಯನ್ನು ಸೇವಿಸಿ, ಬೇಗನೆ, ಸಿದ್ಧಿಯನ್ನು ಹೊಂದುವೆನು. ಎಂದು ನಿಶ್ಚಯಮಾಡಿ, ಆ ಕೆಲಸವನ್ನು ಮಾಡಲು ತನ್ನ ತಂದೆಯ ಸಮ್ಮತಿಯನ್ನು ಹೊಂದಿದಳು. ತಂದೆಯು ತನ್ನ ಅಭಿಪ್ರಾಯಕ್ಕೆ ಸಮ್ಮತಿಸಿದಕಾರಣ, ಮೀನಾಕ್ಷೀದೇವಿಯನ್ನು ದರ್ಶನಮಾಡುವ ಪುಣ್ಯವು ನನಗೆ ಇರುವುದು, ಎಂದು ಅವಳು ಆಲೋಚಿಸಿದಳು. ಸೂರ್ಯನು ಉತ್ತರಾಯಣಕ್ಕೆ ಬರುವುದನ್ನು ನಿರೀಕ್ಷಿಸಿಕೊಂಡಿದ್ದ ವಿದ್ಯಾವತಿಯು ಮಕರಸಂಕ್ರಮಣದ ಪುಣ್ಯಕಾಲದಲ್ಲಿ ಹಾಲಾಸ್ಯಕ್ಷೇತ್ರವನ್ನು ಪ್ರವೇಶಿಸಿದಳು.

ಔತ್ತರೇಣ ಪಥಾ ಗಂತುಮುದ್ಯುಕ್ತೇ ದ್ವಾದಶಾತ್ಮನಿ ।
ಸಂಕ್ರಾಂತಿಪುಣ್ಯಕಾಲೇ ತು ಶ್ರೀಹಾಲಾಸ್ಯಂ ಸಮಾವಿಶತ್ ॥ ೭೦ ॥

ತಾದಾನೀಮೇವ ನಿಯಮಂ ಪುರುಷೈರಪಿ ದುಷ್ಕರಂ ।
ಮನಸ್ವಿನೀ ಚ ಜಗ್ರಾಹ ಸಾಂವತ್ಸರಮಹಾವ್ರತಂ ॥ ೭೧ ॥

ಸ್ವರ್ಣಪದ್ಮಾಕರೇ ಸ್ನಾತ್ವಾ ವಿಘ್ನೇಶಂ ಸಂಪ್ರಪೂಜ್ಯ ಚ ।
ದೇವೀಂ ನತ್ವಾ ಸುಮೀನಾಕ್ಷೀಂ ಶ್ರೀಹಾಲಾಸ್ಯೇಶ್ವರಂ ಶಿವಂ ॥ ೭೨ ॥

ಪ್ರಣಮ್ಯ ಭಕ್ತ್ಯಾ ಸಂಪ್ರಾರ್ಥ್ಯ ತಪಸ್ಸಿದ್ಧ್ಯರ್ಥಮಾದರಾತ್ ।
ದೇವ್ಯಾಶ್ಚ ಸನ್ನಿಧಿಂ ಪ್ರಾಪ್ಯ ಹೃದಿ ಧ್ಯಾತ್ವಾ ಮನೋನ್ಮನೀಂ ॥ ೭೩ ॥

ಶ್ಯಾಮಲಾಂ ದ್ವಿಭುಜಾಂ ದೇವೀಂ ದ್ವಿನೇತ್ರಾಂ ಸರ್ವಮಂಗಳಾಂ ।
ದಧತೀಂ ಪುಲ್ಲಕಹ್ಲಾರಂ ಮಕರಂದಪರಿಪ್ಲುತಂ ॥ ೭೪

ರಕ್ತವಸ್ತ್ರಧರಾಂ ದಿವ್ಯಗಂಧಮಾಲ್ಯೈರಲಂಕೃತಾಂ ।
ಅಂತರ್ಯಜ್ಞವಿಧಾನೇನ ಪ್ರತ್ಯಹಂ ಪರಿಪೂಜ್ಯ ಚ ॥ ೭೫ ॥

---

೭೦-೭೪. ಬಹಳ ಛಳಿಯುಳ್ಳ ಆ ಕಾಲದಲ್ಲಿ ತಪಸ್ವಿಗಳೂ ನಿಯಮವಾಗಿರಲಾರರು. ಆದಾಗ್ಯೂ ದೃಢಮನಸ್ಸಿನವಳಾದ ವಿದ್ಯಾವತಿಯು ಒಂದು ವರ್ಷ ಪೂರ್ತಿಯಾಗಿ ವ್ರತವನ್ನು ನಡೆಸಲು ಸಂಕಲ್ಪವನ್ನು ಮಾಡಿದಳು. ಈ ವಿದ್ಯಾವತಿಯು ಸ್ವರ್ಣಪದ್ಮಾಕರ ತೀರ್ಥದಲ್ಲಿ ಸ್ನಾನವನ್ನು ಮಾಡುವಳು, ವಿಘ್ನೇಶ್ವರನನ್ನು ಮೊದಲು ಪೂಜಿಸುವಳು. ಶ್ರೀ ಮೀನಾಕ್ಷಿದೇವಿಗೂ, ಹಾಲಾಸ್ಯೇಶ್ವರನಿಗೂ ನಮಸ್ಕಾರವನ್ನು ಮಾಡುವಳು. ನಮಸ್ಕಾರದ ನಂತರ ತನ್ನ ತಪಸಿದ್ಧಿಯಾಗಲಿ ಎಂದು ಪ್ರಾರ್ಥನೆ ಮಾಡುವಳು. ಇವುಗಳನ್ನು ನೆರವೇರಿಸಿದ ನಂತರ, ದೇವಿಯ ಸನ್ನಿಧಿಯಲ್ಲಿ ಕುಳಿತುಕೊಂಡು, ಮನಸ್ಸಿನಲ್ಲಿ ಶ್ಯಾಮಲವರ್ಣದಿಂದ ಇರುವ ಎರಡು ಭುಜಗಳುಳ್ಳ, ಮಕರಂದದಿಂದ ತುಬಿರುವ ಅರಳಿದ ಕಲ್ಹಾರ ಪುಷ್ಪಗಳಿಂದ, ಅಲಂಕೃತವಾದ ದೇವಿಯ ಪ್ರತಿಮೆಯನ್ನು ಧ್ಯಾನಮಾಡುತ್ತಿರುವಳು. ಈ ಕಾರ್ಯಗಳನ್ನು ಕ್ರಮವಾಗಿ ತಪ್ಪದೆ ಮಾಡುತ್ತಿರುವಳು.

೭೫-೭೭. ಈ ಕೆಲಸಗಳೆಲ್ಲವೂ ಮುಗಿದನಂತರ ಅವಳು ಪ್ರತಿದಿನವೂ ಅಂತರ್ಯಾಗಕ್ರಮದಿಂದ ದೇವಿಯನ್ನು ಪೂಜಿಸುವಳು. ಆ ತಪಸ್ವಿನಿಯು ಒಂದು

**ಅಷ್ಟೋತ್ತರಶತೈಃ ಪುಣ್ಯಕುಂಭೈಸ್ತೀರ್ಥೋದಪೂರಿತೈಃ**
**ಸುಮೀನಾಕ್ಷೀಂ ಚ ಸಂಸ್ನಾಪ್ಯ ದಿವ್ಯೈರಂಬರಭೂಷಣೈಃ ॥ ೭೬ ॥**

**ಗಂಧಾದ್ಯೈರುಪಚಾರೈಶ್ಚ ಪ್ರತ್ಯಹಂ ಸಾ ತಪಸ್ವಿನೀ ।**
**ಸಪರ್ಯಾಂ ಮಹತೀಂ ಕೃತ್ವಾ ಗಂಧರ್ವಪ್ರಭುಕನ್ಯಕಾ ॥ ೭೭ ॥**

**ಅಷ್ಟಾಧಿಕಸಹಸ್ರೈಸ್ತು ಸಮನೋಭಿಸ್ಸುನಿರ್ಮಿತಾಂ ।**
**ನೀಲೋತ್ಪಲಮಯೀಂ ಮಾಲಾಂ ಸಮರ್ಪಯತಿ ಸಾನ್ವಹಂ ॥ ೭೮ ॥**

**ಏಕಾಹಾರೇಣೈಕಮಾಸಂ ಮಾಸಂ ನಕ್ತಾಶನೇನ ಚ ।**
**ಅಯಾಚಿತಾಶನೇನೈಕಮನ್ಯಂ ಶಾಕಫಲಾಶನಾತ್ ॥ ೭೯ ॥**

**ತಿಲಪಿಷ್ಟೇನೈಕ ಮಾಸಮನ್ಯಂ ಚಾಂದ್ರಾಯಣೇನ ಚ ।**
**ಪಂಚಗವ್ಯಾಶನೇನೈಕಮನ್ಯಂ ಪಾನೀಯಪಾನತಃ ॥ ೮೦ ॥**

---

ನೂರೆಂಟು ಪುಣ್ಯತೀರ್ಥ ಕಲಶಗಳಿಂದ ಅಭಿಷೇಕಮಾಡಿ ದೇವಿಗೆ ದಿವ್ಯವಸ್ತ್ರಾಭರಣಗಳನ್ನು ಧರಿಸಿ, ಗಂಧಾದ್ಯುಪಚಾರದಿಂದ ದೇವಿಯನ್ನು ಪೂಜಿಸುವಳು. ಈ ಮಹಾ ಪೂಜೆಯು ಆದನಂತರ ಒಂದುಸಾವಿರದಎಂಟು ಸಂಖ್ಯೆಯುಳ್ಳ ನೈದಿಲೆಹೂವಿನ ಹಾರವನ್ನು ಪ್ರತಿದಿನವೂ ದೇವಿಗೆ ಒಪ್ಪಿಸುವಳು.

೭೮–೭೯. ವಿದ್ಯಾವತಿಯು ಹೀಗೆಯೇ ತಪಸ್ಸನ್ನು ಮಾಡುತ್ತಾ ಒಂದು ಹೊತ್ತು ಆಹಾರವನ್ನು ಸ್ವೀಕರಿಸುವುದರಿಂದ ಒಂದು ತಿಂಗಳನ್ನು ಕಳೆದಳು. ಎರಡನೆಯ ತಿಂಗಳಿನಲ್ಲಿ ಅವಳು ನಕ್ತಕಾಲದಲ್ಲಿ ಭೋಜನವನ್ನು ಮಾಡಿದಳು. ಮೂರನೆಯ ತಿಂಗಳಿನಲ್ಲಿ ಆಯಾಚಿತ ವ್ರತವನ್ನು ಮಾಡಿದಳು. (ಇತರರನ್ನು ಯಾಚಿಸದೆ ಆಹಾರವನ್ನು ತಿನ್ನುವ ಸಮಯಕ್ಕೆ ಸರಿಯಾಗಿ ದೊರೆತದ್ದನ್ನು ತಿನ್ನುವುದು ಆಯಾಚಿತವ್ರತ) ನಾಲ್ಕನೆಯ ತಿಂಗಳಿನಲ್ಲಿ ತರಕಾರಿ ಹಣ್ಣು ಇವುಗಳನ್ನು ತಿನ್ನುತ್ತಿದ್ದಳು.

೮೦–೮೨. ಅವಳು ಐದನೆಯ ತಿಂಗಳಿನಲ್ಲಿ ಎಳ್ಳನ್ನು ಅರೆದು ತಿನ್ನುತ್ತಿದ್ದಳು. ಆರನೆಯ ತಿಂಗಳಿನಲ್ಲಿ ಅವಳು ಚಾಂದ್ರಾಯಣವ್ರತವನ್ನು ಮಾಡಿದಳು. ಏಳನೆಯ ತಿಂಗಳಿನಲ್ಲಿ ಪಂಚಗವ್ಯವನ್ನು ಆಹಾರವಾಗಿ ಉಪಯೋಗಿಸುತ್ತಿದ್ದಳು. ಎಂಟನೆಯ ತಿಂಗಳಿನಲ್ಲಿ ಜಲಪಾನ ಮಾಡುತ್ತಿದ್ದಳು. ಒಂಭತ್ತನೆಯ ತಿಂಗಳಿನಲ್ಲಿ ಅವಳು ಪಯೋವ್ರತವನ್ನು ನೆರವೇರಿಸಿದಳು. ಹತ್ತನೆಯ ತಿಂಗಳಿನಲ್ಲಿ ದರ್ಭೆಯ

ಪಯೋವ್ರತೇನೈಕಮಾಸಂ ಕ್ಷುಶಾಗ್ರಾಂಬುವ್ರತೇನ ಚ ।
ವಾಯ್ವಾಹಾರೇಣೈಕಮಾಸಂ ನಿರಾಹಾರೇಣ ಚ ಕ್ರಮಾತ್ ॥ ೮೧ ॥

ನಿನಾಯ ನಿಯಮೇನೈವಂ ದುಷ್ಕರೇಣ ಮುನೀಶ್ವರೈಃ ।
ಮಾಸಾಶ್ಚ ದ್ವಾದಶಾಶ್ಚೈವಂ ವ್ಯತೀತಾಶ್ಚ ಮುನೀಶ್ವರಾಃ ॥ ೮೨ ॥

ಅಥ ತ್ರಯೋದಶೇ ಮಾಸಿ ಪ್ರತ್ಯೂಷೇ ನಿರ್ಮಲಾಶಯಾ ।
ಹೇಮಪದ್ಮಾಕರೇ ಸ್ನಾತ್ವಾ ಸುಮೀನಾಕ್ಷ್ಯಾಶ್ಚ ಸನ್ನಿಧಿಂ ॥ ೮೩ ॥

ಯಾವದಾಯಾತಿ ಸಾ ಕನ್ಯಾ ತಾವದ್ದೇವೀ ದಯಾವತೀ ।
ತ್ರಿವರ್ಷರೂಪಿಣೀ ಬಾಲಾ ಮಂದಸ್ಮಿತಮನೋಹರಾ ॥ ೮೪ ॥

ಕಲ್ಹಾರಕಮನೀಯೇನ ಪಾಣಿನಾ ಪರಿಶೋಭಿತಾ ।
ಶ್ಯಾಮಲಾ ಕೋಮಲತನುಃ ಶ್ರೀಹಾಲಾಸ್ಯೇಶ್ವರೀ ಶಿವಾ ॥ ೮೫ ॥

---

ತುದಿಯಿಂದ ಬರುವ ನೀರನ್ನು ಆಹಾರವಾಗಿ ಉಪಯೋಗಿಸುತ್ತಿದ್ದಳು. ಹನ್ನೊಂದನೆಯ ತಿಂಗಳಿನಲ್ಲಿ ಅವಳು ವಾಯುವನ್ನು ಆಹಾರವಾಗಿ ಮಾಡಿಕೊಂಡಳು. ಹನ್ನೆರಡನೆಯ ತಿಂಗಳಿನಲ್ಲಿ ಅವಳು ಯಾವ ವಿಧವಾದ ಆಹಾರವನ್ನೂ ತೆಗೆದುಕೊಳ್ಳದೆ ತನ್ನ ಸಂವತ್ಸರ ವ್ರತವನ್ನು ಸಮಾಪ್ತಿ ಮಾಡಿದಳು. ಮುನೀಶ್ವರರೂ ಆಚರಿಸಲಶಕ್ಯವಾದ ಈ ನಿಯಮಗಳನ್ನು ವಿದ್ಯಾವತಿಯು ನೆರವೇರಿಸಿ ಹನ್ನೆರಡು ತಿಂಗಳನ್ನು ಕಳೆದಳು.

೮೩–೮೫. ಹದಿಮೂರನೆಯ ತಿಂಗಳು ಬಂದಿತು. ಆಗ ಪವಿತ್ರವಾದ ಮನಸ್ಸಿನಿಂದ ಬೆಳಗಿನ ಜಾವದಲ್ಲಿಯೇ ಹೇಮಪದ್ಮಾಕರ ತೀರ್ಥದಲ್ಲಿ ಸ್ನಾನಮಾಡಿ ತನ್ನ ಇಷ್ಟದೇವತೆಯನ್ನು ಪ್ರತಿನಿತ್ಯದಂತೆ ಪೂಜಿಸಲು ಶ್ರೀಮೀನಾಕ್ಷೀದೇವಿಯ ಸಮೀಪಕ್ಕೆ ಬರುತ್ತಿದ್ದಳು. ವಿದ್ಯಾವತಿಯು ತನ್ನ ಹತ್ತಿರಕ್ಕೆ ಬರುವುದರೊಳಗಾಗಿ ಹಾಲಾಸ್ಯೇಶ್ವರಿಯಾದ ಶ್ರೀ ಮೀನಾಕ್ಷೀದೇವಿಯು ದಯೆಯುಳ್ಳವಳಾಗಿ ಮೂರು ವರ್ಷದ ಹುಡುಗಿಯ ಆಕಾರವನ್ನು ಧರಿಸಿ ಮಂದಸ್ಮಿತದಿಂದ ಕೂಡಿ, ಕಲ್ಹಾರ ಪುಷ್ಪವನ್ನು ಕೈಯ್ಯಿನಲ್ಲಿ ಹಿಡಿದುಕೊಂಡು, ಕಿವಿಯವರಿಗೂ ಇರುವ ಕಣ್ಣಿನಿಂದಲೂ

**ಆಕರ್ಣಪೂರ್ಣನಯನಾ ಸರ್ವಾಭರಣಭೂಷಿತಾ ।**
**ಪೀತಾಂಬರಧರಾ ಪೀತಗಂಧಪುಷ್ಪೈರಲಂಕೃತಾ ॥ ೮೬ ॥**

**ವರಂ ಬ್ರೂಹಿ ವರಂ ಬ್ರೂಹೀತ್ಯೇವಂ ಸಂಭಾಷ್ಯ ಚಾಸಕೃತ್ ।**
**ಗರ್ಭಗೇಹಾತ್ತು ನಿರ್ಗತ್ಯ ರಂಗಮಂಟಪಮಾಯಯೌ ॥ ೮೭ ॥**

**ವಿದ್ಯಾವತೀ ವಿಲೋಕ್ಯಾಥ ದೃಗಾನಂದಕರೀಂ ಶಿವಾಂ ।**
**ಸಾಷ್ಟಾಂಗಂ ಪ್ರಣಿಪತ್ಯಾಶು ಸ್ತುತಿಂ ಚಕ್ರೇ ಸುಭಕ್ತಿತಃ ॥ ೮೮ ॥**

**॥ ವಿದ್ಯಾವತೀ ಉವಾಚ ॥**

**ಯಾ ದೇವೀ ಜಗತಾಂ ಕರ್ತ್ರೀ ಶಂಕರಸ್ಯಾಪಿ ಶಂಕರೀ ।**
**ನಮಸ್ತಸ್ಯೈ ಸುಮೀನಾಕ್ಷ್ಯೈ ದೇವ್ಯೈ ಮಂಗಳಮೂರ್ತಯೇ ॥ ೮೯ ॥**

**ಸಕೃದಾರಾಧ್ಯ ಯಾಂ ಸರ್ವಮಭೀಷ್ಟಂ ಲಭತೇ ಜನಃ ।**
**ನಮಸ್ತಸ್ಯೈ ಸುಮೀನಾಕ್ಷ್ಯೈ ದೇವ್ಯೈ ಮಂಗಳಮೂರ್ತಯೇ ॥ ೯೦ ॥**

---

ಎಲ್ಲಾ ವಿಧವಾದ ಆಭರಣಗಳಿಂದಲೂ ಪ್ರಕಾಶಿಸುತ್ತಾ, "ನಿನಗೆ ಬೇಕಾದ ವರವನ್ನು ಕೇಳು." ಎಂದು ಪದೇಪದೇ ಹೇಳುತ್ತಾ ಗರ್ಭಗೃಹದಿಂದ ರಂಗಮಂಟಪಕ್ಕೆ ಬರುತ್ತಿರುವುದನ್ನು ನೋಡಿದಳು.

೮೭–೮೮. ವಿದ್ಯಾವತಿಯು ತನ್ನ ದೃಷ್ಟಿಗೆ ಆನಂದಕರಳಾದ ಆ ಬಾಲೆಯನ್ನು ನೋಡಿದಕೂಡಲೆ, ಅವಳಿಗೆ ಅಷ್ಟಾಂಗ ನಮಸ್ಕಾರವನ್ನು ಮಾಡಿದಳು. ಅನಂತರ ದಲ್ಲಿ ಭಕ್ತಿಯಿಂದ ಬೇಗನೆ ಆ ದೇವಿಯನ್ನು ಸ್ತುತಿಮಾಡಿದಳು.

೮೯–೯೪. ವಿದ್ಯಾವತಿಯು ಹೇಳಿದಳು :—"ಜಗತ್ತುಗಳೆಲ್ಲವನ್ನೂ ನಿರ್ಮಿಸುತ್ತಾ ಮಹಾದೇವನಿಗೂ, ಸುಖವನ್ನು ಉಂಟುಮಾಡುವ ಮಂಗಳಮೂರ್ತಿಯಾದ ಮೀನಾಕ್ಷೀದೇವಿಗೆ ನಮಸ್ಕಾರವನ್ನು ಮಾಡುವೆನು. ಮೀನಾಕ್ಷೀದೇವಿಯನ್ನು ಒಂದು ಸಾರಿ ಸೇವೆಮಾಡಿದ ಮಾತ್ರದಿಂದಲೇ ಅವರವರ ಇಷ್ಟಸಿದ್ಧಿಯಾಗುವುದು. ಆ ದೇವಿಯ ಕೊಂಚಮಟ್ಟಿನ ಅನುಗ್ರಹದಿಂದಲೇ ಭುಕ್ತಿ ಮುಕ್ತಿಗಳು ಸುಲಭವಾಗಿ ದೊರೆಯುವವು. ಈ ದೇವಿಯ ಸಹಾಯದಿಂದಲೇ ಪರಮೇಶ್ವರನು ಸೃಷ್ಟಿಯೇ

ಯಸ್ಯಾಃ ಪ್ರಸಾದಲೇಶೇನ ಭೋಗಮೋಕ್ಷೌ ನ ದುರ್ಲಭೌ ।
ನಮಸ್ತಸ್ಯೈ ಸುಮೀನಾಕ್ಷ್ಯೈ ದೇವ್ಯೈ ಮಂಗಳಮೂರ್ತಯೇ ॥ ೯೧ ॥

ಯಯಾ ಶಿವೋಽಪಿ ಯುಕ್ತಸ್ಸನ್ಪಂಚಕೃತ್ಯಂ ಕರೋತಿ ಹಿ ।
ನಮಸ್ತಸ್ಯೈ ಸುಮೀನಾಕ್ಷ್ಯೈ ದೇವ್ಯೈ ಮಂಗಳಮೂರ್ತಯೇ ॥ ೯೨ ॥

ಯಸ್ಯಾಃ ಪ್ರೀತ್ಯರ್ಥಮನಿಶಂ ಲಾಸ್ಯಂ ಕುರ್ವನ್ಶಿವೋ ಬಭೌ ।
ನಮಸ್ತಸ್ಯೈ ಸುಮೀನಾಕ್ಷ್ಯೈ ದೇವ್ಯೈ ಮಂಗಳಮೂರ್ತಯೇ । ॥ ೯೩ ॥

ಲಕ್ಷ್ಮೀಸರಸ್ವತೀಮುಖ್ಯಾಃ ಯಸ್ಯಾಸ್ತೇಜಃಕಣೋದ್ಭವಾಃ ।
ನಮಸ್ತಸ್ಯೈ ಸುಮೀನಾಕ್ಷ್ಯೈ ದೇವ್ಯೈ ಮಂಗಳಮೂರ್ತಯೇ ॥ ೯೪ ॥

ಯಾ ದೇವೀ ಮುಕ್ತಿಕಾಮಾನಾಂ ಬ್ರಹ್ಮವಿದ್ಯಾಪ್ರದಾಯಿನೀ ।
ನಮಸ್ತಸ್ಯೈ ಸುಮೀನಾಕ್ಷ್ಯೈ ದೇವ್ಯೈ ಮಂಗಳಮೂರ್ತಯೇ ॥ ೯೫ ॥

ಯಸ್ಯಾಃ ಪ್ರಣಾಮಮಾತ್ರೇಣ ವರ್ಧಂತೇ ಸರ್ವಸಂಪದಃ ।
ನಮಸ್ತಸ್ಯೈ ಸುಮೀನಾಕ್ಷ್ಯೈ ದೇವ್ಯೈ ಮಂಗಳಮೂರ್ತಯೇ ॥ ೯೬ ॥

---

ಮೊದಲಾದ ಪಂಚಕೃತ್ಯಗಳನ್ನು ಸುಲಭವಾಗಿ ನಡೆಸುತ್ತಿರುವನು. ಈ ದೇವಿಯನ್ನು ಸಂತೋಷಪಡಿಸುವುದಕ್ಕಾಗಿ ಮಹೇಶ್ವರನು ಯಾವಾಗಲೂ ನಾಟ್ಯವಾಡುತ್ತಿರುವನು. ಲಕ್ಷ್ಮಿ, ಸರಸ್ವತಿ ಮೊದಲಾದವರು ಈ ದೇವಿಯ ತೇಜಸ್ಸಿನ ಸಣ್ಣ ಕಣದಿಂದ ಉಂಟಾಗಿರುವರು. ಮಂಗಳಮೂರ್ತಿಯಾದ ದೇವಿಗೆ ನಮಸ್ಕಾರವು.

೯೫–೯೬. ಈ ದೇವಿಯು ಮುಕ್ತಿಯನ್ನು ಅಪೇಕ್ಷಿಸುವವರಿಗೆ ಬ್ರಹ್ಮವಿದ್ಯೆಯನ್ನು ಅನುಗ್ರಹಿಸುವಳು. ಈ ದೇವಿಯನ್ನು ನಮಸ್ಕರಿಸುವುದರಿಂದ ಎಲ್ಲಾ ವಿಧವಾದ ಸಂಪತ್ತುಗಳೂ ಹೆಚ್ಚುವವು. ಮೀನಾಕ್ಷೀದೇವಿಯನ್ನು ನಮಸ್ಕಾರಮಾಡಿದ ಮಾತ್ರದಿಂದ ಈ ದೇವಿಯು ಎಲ್ಲಾ ವಿಧವಾದ ಐಶ್ವರ್ಯಗಳನ್ನೂ ಹೆಚ್ಚಿಸುವಳು. ವಿಪತ್ತುಗಳನ್ನೂ ನಾಶಮಾಡುವಳು. ಈ ವಿಧವಾದ ಮಹಿಮೆಯನ್ನು ಹೊಂದಿರುವ ಮಂಗಳಮೂರ್ತಿಗೆ ನಮಸ್ಕಾರವನ್ನು ಮಾಡುವೆನು.

ಯಾ ಸ್ತುತಾ ಸರ್ವಪಾಪಘ್ನೀ ಸರ್ವೋಪದ್ರವನಾಶಿನೀ ।
ನಮಸ್ತಸ್ಯೈ ಸುಮೀನಾಕ್ಷ್ಯೈ ದೇವ್ಯೈ ಮಂಗಳಮೂರ್ತಯೇ ॥ ೯೭ ॥

ಯಾ ಧ್ಯಾತಾ ಪರಮಾ ಶಕ್ತಿಸ್ಸರ್ವಸಿದ್ಧಿಕರೀ ತತಃ ।
ನಮಸ್ತಸ್ಯೈ ಸುಮೀನಾಕ್ಷ್ಯೈ ದೇವ್ಯೈ ಮಂಗಳಮೂರ್ತಯೇ ॥ ೯೮ ॥

ಯಯಾ ದೇವ್ಯಾ ವಿರಹಿತಃ ಶಿವೋಽಪಿ ಹಿ ನಿರರ್ಥಕಃ
ನಮಸ್ತಸ್ಯೈ ಸುಮೀನಾಕ್ಷ್ಯೈ ದೇವ್ಯೈ ಮಂಗಳಮೂರ್ತಯೇ ॥ ೯೯ ॥

ಚರಾಚರಂ ಜಗತ್ಸರ್ವಂ ಯಸ್ಯಾಃ ಪಾದಸಮುದ್ಭವಂ ।
ನಮಸ್ತಸ್ಯೈ ಸುಮೀನಾಕ್ಷ್ಯೈ ದೇವ್ಯೈ ಮಂಗಳಮೂರ್ತಯೇ ॥ ೧೦೦ ॥

ಇತಿ ಸ್ತುತ್ವಾ ಮಹಾದೇವೀಂ ಪ್ರಣಮ್ಯ ಚ ಪುನಃ ಪುನಃ ।
ಅನುಜ್ಞಯಾ ಸುಮೀನಾಕ್ಷ್ಯಾಃ ಪ್ರಾರ್ಥಯಾಮಾಸ ಕನ್ಯಕಾ ॥ ೧೦೧ ॥

ಮಾತಸ್ತ್ವತ್ಪದಧ್ಯಾನೇ ಮನೋ ನಿಶ್ಚಲಮಸ್ತು ಮೇ ।
ಇದಮೇವ ವರಂ ಮುಖ್ಯಮಪರೈಃ ಕಿಂ ಪ್ರಯೋಜನಂ ॥ ೧೦೨ ॥

---

೯೭–೧೦೦. ಧ್ಯಾನಮಾಡಿದವರಿಗೆ ಎಲ್ಲಾ ವಿಧವಾದ ಸಿದ್ಧಿಗಳನ್ನೂ ಅನುಗ್ರಹ ಮಾಡುವ ಮಂಗಳಮೂರ್ತಿಯಾದ ಮೀನಾಕ್ಷೀದೇವಿಗೆ ನಮಸ್ಕಾರವು. ಮೀನಾಕ್ಷೀ ದೇವಿಯು ಸಹಾಯವಿಲ್ಲದಿದ್ದರೆ ಶಿವನು ಲೋಕದಲ್ಲಿ ಅನುಗ್ರಹಾದಿಗಳನ್ನು ಮಾಡ ಲಾರದೇ ಇರುವನು. ಚರಾಚರಾತ್ಮಕವಾದ ಪ್ರಪಂಚವೆಲ್ಲವೂ ಈ ದೇವಿಯ ನಾಲ್ಕ ನೆಯ ಒಂದು ಭಾಗದಿಂದ ಉತ್ಪನ್ನವಾಗಿರುವುದು. ಈ ಪ್ರಕಾರವಾದ ಪ್ರಭಾವವುಳ್ಳ ಮಂಗಳಮೂರ್ತಿಯಾದ ಮೀನಾಕ್ಷೀದೇವಿಗೆ ನಮಸ್ಕರಿಸುವೆನು.''

೧೦೧–೧೦೪. ಕನ್ಯಕಾರೂಪದಿಂದ ಇರುವ ಮೀನಾಕ್ಷೀದೇವಿಯನ್ನು ಸ್ತುತಿ ಮಾಡಿ ಕನ್ಯೆಯಾದ ವಿದ್ಯಾವತಿಯು ನಮಸ್ಕರಿಸಿ, ಆ ದೇವಿಯ ಅನುಜ್ಞೆಯನ್ನು ಪಡದು, '' ಎಲೈ ಜನನಿಯೇ, ನನ್ನ ಮನಸ್ಸು ನಿನ್ನ ಧ್ಯಾನದಲ್ಲಿ ನಿಶ್ಚಲವಾಗಿರಲಿ. ಇದು ನನ್ನ ಮುಖ್ಯವಾದ ವರವು. ಬೇರೆಯ ವರದಿಂದ ಪ್ರಯೋಜನವು ಇಲ್ಲವು.'' ಎಂದು ಪ್ರಾರ್ಥಿಸಿದಳು. ಆಗ ಸರ್ವಮಂಗಳಾದೇವಿಯು ಕೋಗಿಲೆಯ ಕಂಠಸ್ವರ

ಇತಿ ಸಂಪ್ರಾರ್ಥಿತಾ ದೇವೀ ಕನ್ಯಯಾ ಸರ್ವಮಂಗಳಾ ।
ಕನ್ಯಾರೂಪಾ ಕನ್ಯಕಾಂ ಚ ಪ್ರಾಹ ಕೋಕಿಲವದ್ಗಿರಾ ॥ ೧೦೩ ॥

ತವಾಸ್ತು ಮನಸಸ್ಸ್ಥೈರ್ಯಂ ಮಮ ರೂಪಸ್ಯ ಶೀಲನೇ ।
ಪುನಃ ಪ್ರಾರ್ಥಯ ಕಲ್ಯಾಣಿ ದುರ್ಲಭಂ ವರಮುತ್ತಮಂ ॥ ೧೦೪ ॥

ದೇವೀವಾಕ್ಯಮಿದಂ ಶ್ರುತ್ವಾ ಪ್ರಾಹ ಪಶ್ಚಾದಭೀಪ್ಸಿತಂ ।
ಮತ್ಪುತ್ರೀ ಭವತೀ ಭೂತ್ವಾ ರೂಪೇಣೈವಂ ವಿಧೇನ ಚ ॥ ೧೦೫ ॥

ಆಲಿಂಗನಾದಿಕೃತ್ಯೇನ ಸಂತೋಷ್ಯ ಪ್ರತಿವಾಸರಂ ।
ಮುಕ್ತಿಂ ಪುನಃ ಪ್ರಯಚ್ಛಾರ್ಯೇ ಮೀನಾಕ್ಷಿ ಮಹೇಶ್ವರಿ ॥ ೧೦೬ ॥

ವಿದ್ಯಾವತ್ಯಾ ಚೈವಮುಕ್ತೇ ಪುನಃ ಪ್ರಾಹ ಮಹೇಶ್ವರೀ ।
ಭವಿಷ್ಯಜ್ಜನ್ಮನಿ ತ್ವಂ ಚ ಚಂದ್ರವಂಶಶಿರೋಮಣಿಂ ॥ ೧೦೭ ॥

ಮಲಯಧ್ವಜಭೂಪಾಲಂ ಪತಿಂ ಲಬ್ಧ್ವಾ ಮಹೌಜಸಂ ।
ಅನುಭೂಯ ಚಿರಂ ಕಾಲಂ ತೇನ ಸಾರ್ಧಂ ಮಹಾಸುಖಂ ॥ ೧೦೮ ॥

---

ದಿಂದ ಕನ್ಯೆಯಾದ ವಿದ್ಯಾವತಿಗೆ, "ನೀನು ನನ್ನ ರೂಪವನ್ನು ಧ್ಯಾನಮಾಡುವಾಗ ಚಿತ್ತಸ್ಥೈರ್ಯವಿರಲಿ." ಎಂದು ವರವನ್ನು ಅನುಗ್ರಹಿಸಿ, ಇದಕ್ಕಿಂತಲೂ ಉತ್ತಮವಾದ ಇನ್ನೊಂದು ವರವನ್ನು ಕೇಳು ಎಂದು ಹೇಳಿದಳು.

೧೦೫-೧೧೨. ದೇವಿಯ ವಾಕ್ಯವನ್ನು ಕೇಳಿದ ವಿದ್ಯಾವತಿಯು, "ಈ ಪ್ರಕಾರವಾಗಿರುವ ಆಕಾರದಿಂದಲೇ ನನಗೆ ಪುತ್ರಿಯಾಗಿ, ಪ್ರತಿದಿನವೂ ನನ್ನನ್ನು ಆಲಿಂಗನಾದಿಗಳಿಂದ ಸಂತೋಷಪಡಿಸಿ ನನಗೆ ಮುಕ್ತಿಯನ್ನು ಅನುಗ್ರಹಿಸು." ಎಂದು ಎರಡನೆಯ ವರವನ್ನು ಕೇಳಿಕೊಂಡಳು. ಆ ಮಹೇಶ್ವರಿಯು, ನೀನು ಮುಂದಿನ ಜನ್ಮದಲ್ಲಿ ಚಂದ್ರವಂಶ ಶಿರೋಮಣಿಯಾದ, ಪರಾಕ್ರಮಶಾಲಿಯಾದ, ಮಲಯಧ್ವಜನನ್ನು ಪತಿಯನ್ನಾಗಿ ಹೊಂದಿ, ಅವನೊಡನೆ ಸುಖಗಳನ್ನು ಅನುಭವಿಸಿ ಪುತ್ರಕಾಮೇಷ್ಟಿಯನ್ನು ಅವನು ಮಾಡಿದಾಗ ಮೂರು ಸ್ತನಗಳಿರುವ ನನ್ನನ್ನು ಅಗ್ನಿಯಿಂದ ಹೊಂದುತ್ತೀಯೆ. ತನ್ನನ್ನು ಪುತ್ರಿಯೆಂದು ತಿಳಿದುಕೊಳ್ಳುವ ಮಲಯಧ್ವಜನೊಡನೆ ನಿನಗೆ ಮುಕ್ತಿಯಾಗುವುದು. ನೀನು ಮಾಡಿರುವ ಸ್ತೋತ್ರವು

ತತಸ್ತು ಪುತ್ರಕಾಮೋಽಸ್ಯಾಂ ಸಂಜಾತಾಂ ಜಾತವೇದಸಃ ।
ಕುಚತ್ರಯಯುತಾಂ ಪುತ್ರೀಂ ಮಾಂ ಲಬ್ಧ್ವಾ ಮದನುಗ್ರಹಾತ್ ॥ ೧೦೯ ॥

ಕೈವಲ್ಯಮಥ ತೇ ಭೂಯಾನ್ಮಲಯಧ್ವಜಭೂಭುಜಾ ।
ತ್ವಯಾ ಕೃತಮಿದಂ ಸ್ತೋತ್ರಂ ಪುತ್ರಪೌತ್ರಪ್ರವರ್ಧನಂ ॥ ೧೧೦ ॥

ಸ್ತ್ರಿಯಾ ವಾ ಪುರುಷೇಣಾಪಿ ನಿಯಮಾನ್ಮಮ ಭಕ್ತಿತಃ ।
ಜಪ್ತಂ ಚೇತ್ಸರ್ವಸೌಭಾಗ್ಯಪ್ರದಂ ಸ್ಯಾಚ್ಚ ನ ಸಂಶಯಃ ॥ ೧೧೧ ॥

ಇತಿ ವಿದ್ಯಾವತೀಂ ಕನ್ಯಾಮನುಗೃಹ್ಯ ಮಹೇಶ್ವರೀ ।
ಪುನಶ್ಚ ಗರ್ಭಗೇಹಂ ಚ ಪ್ರಾಪ್ಯಾದೃಶ್ಯಾಭವಚ್ಛಿವಾ ॥ ೧೧೨ ॥

ನಿರವದ್ಯಾ ಸುಮೀನಾಕ್ಷೀ ಹೇತುನಾನೇನ ನಿಷ್ಕಳಾ ।
ದೇವ್ಯಾಃ ಕಾಂಚನಮಾಲಾಯಾ ಮಲಯಧ್ವಜಭೂಪತೇಃ ॥ ೧೧೩ ॥

ಪುತ್ರೀ ತಟಾತಕಾ ನಾಮ್ನಾ ಸಂಜಾತಾ ಸರ್ವಮಂಗಳಾ ।
ಭವತ್ಕೃತಾಯಾಃ ಪೃಚ್ಛಾಯಾಃ ಪ್ರತಿವಾಕ್ಯಂ ಪ್ರಕೀರ್ತಿತಂ ॥ ೧೧೪ ॥

---

ಪುತ್ರ, ಪೌತ್ರರನ್ನು ಕೊಡುವುದು. ಸ್ತ್ರೀಯಾಗಲೀ, ಪುರುಷನಾಗಲೀ ಈ ಸ್ತೋತ್ರವನ್ನು ನಿಯಮದಿಂದ, ಭಕ್ತಿಯುಳ್ಳ ಮನಸ್ಸಿನಿಂದ ಪಾಠಮಾಡಿದಲ್ಲಿ ಅವರಿಗೆ ಎಲ್ಲಾ ವಿಧವಾದ ಶ್ರೇಯಸ್ಸುಗಳೂ ಉಂಟಾಗುವವು. ಇದರಲ್ಲಿ ಸಂಶಯವು ಇಲ್ಲವು." ಎಂದು ಹೇಳಿ, ವಿದ್ಯಾವತಿಯು ಇಚ್ಛಾನುಸಾರವಾದ ವರವನ್ನು ಕೊಟ್ಟು ಗರ್ಭಗೃಹದೊಳಕ್ಕೆ ಹಿಂತಿರಿಗಿ ಹೋಗಿ ಅದೃಶ್ಯಳಾದಳು.

೧೧೩–೧೧೬. ದೋಷರಹಿತಳಾದ, ನಿಷ್ಕಳಳಾದ, ಸರ್ವಮಂಗಳೆಯಾದ ಮೀನಾಕ್ಷೀದೇವಿಯು ಈ ಕಾರಣದಿಂದ ಮಲಯಧ್ವಜರಾಜನ ಪತ್ನಿಯಾದ ಕಾಂಚನಮಾಲೆಗೆ ತಟಾತಕಾ ಎಂಬ ಹೆಸರಿನಿಂದ ಪುತ್ರಿಯಾದಳು. ನೀವು ಕೇಳಿದ ಪ್ರಶ್ನೆಗೆ ಉತ್ತರವನ್ನು ಸಂಪೂರ್ಣವಾಗಿ ಹೇಳಿರುವೆನು. ನಾನು ಹೇಳಿರುವ ವಿದ್ಯಾವತಿಯು ಮಾಡಿರುವ ತಪಸ್ಸಿನಿಂದ ಮೀನಾಕ್ಷೀದೇವಿಯು ಅವಳಿಗೆ ಪ್ರತ್ಯಕ್ಷಳಾಗಿ ವರವನ್ನು ಅನುಗ್ರಹಿಸಿದ ಕಥೆಯನ್ನು ಕೇಳಿದವರಿಗೆ ಭುಕ್ತಿ, ಮುಕ್ತಿಗಳೆರಡೂ ಉಂಟಾಗುವವು. ಮಲಯಧ್ವಜರಾಜನು ಪರಮಸುಂದರಿಯಾದ ಆ ಕನ್ಯೆಯನ್ನು ಮಗನಂತೆ ತಿಳಿದು

ಯಸ್ಯಾಃ ಶ್ರವಣಮಾತ್ರೇಣ ಭುಕ್ತಿಮುಕ್ತೀ ನ ದುರ್ಲಭೇ ।
ಮಲಯಧ್ವಜಭೂಪಾಲಸ್ತಾಂ ಕನ್ಯಾಮತಿಸುಂದರೀಂ ॥ ೧೧೫ ॥

ಪುತ್ರವತ್ಸತತಂ ಮತ್ವಾ ಸ್ವವಂಶೋದ್ಧಾರಣಾಯ ಚ ।
ವಿದ್ಯಾಸ್ಸರ್ವಾ ಬೋಧಯಿತ್ವಾ ಧನುರ್ವೇದಪುರಸ್ಸರಾಃ ॥ ೧೧೬ ॥
ಕೃತಾರ್ಥೋಽಹಮಿತಿ ಜ್ಞಾತ್ವಾ ಸುಖೇನಾಸ್ತೇ ಸ್ತ್ರಿಯಾ ತಯಾ ।

ನಿತ್ಯಂ ಸ ರಾಜ್ಯಮನುಶಾಸ್ಯ ನಿಜಾಂತಕಾಲೇ ।
ಪುತ್ರೀಮಮಾತ್ಯಸಹಿತೋ ವಿಧಿನಾಭ್ಯಷಿಚ್ಯ ।
ತಸ್ಯಾಂ ತದಾತ್ಮವಿಧೃತಾಂ ಧುರಮರ್ಪಯಿತ್ವಾ ।
ತ್ಯಕ್ತ್ವಾ ತನುಂ ವಿಬುಧಸಂಪದಮಾಸಸಾದ ॥ ೧೧೭ ॥

ತತಸ್ಸ್ವರ್ಗಗತೇ ತಸ್ಮಿನ್ ಪುತ್ರಾಭಾವಾತ್ಸ್ವಯೈವ ಸಾ ।
ಔರ್ಧ್ವದೈಹಿಕಮಾತೇನೇ ಪುರೋಹಿತಮತಾನುಗಾ ॥ ೧೧೮ ॥

---

ಕೊಂಡು, ಅವಳಿಂದಲೇ ತನ್ನ ವಂಶವು ವೃದ್ಧಿಹೊಂದುವುದೆಂದು ನಿಶ್ಚಯದಿಂದ ಅವಳಿಗೆ ಧನುರ್ವೇದವೇ ಮುಂತಾದ ವಿದ್ಯೆಗಳೆಲ್ಲವನ್ನೂ ಚೆನ್ನಾಗಿ ಕಲಿಸಿದನು. ನಾನು ಕೃತಾರ್ಥನಾಗಿರುವೆನು, ಎಂದು ತಿಳಿದುಕೊಂಡು ತನ್ನ ಪತ್ನಿಯೊಡನೆ ಸುಖದಿಂದ ಇದ್ದನು.

೧೧೭-೧೨೦. ಮಲಯಧ್ವಜರಾಜನು ರಾಜ್ಯವನ್ನು ಸರ್ವಕಾಲದಲ್ಲಿಯೂ ಸರಿಯಾಗಿ ರಕ್ಷಿಸುತ್ತಿರುವವನಾಗಿ ತನ್ನ ಅಂತ್ಯಕಾಲದಲ್ಲಿ ತನ್ನ ಮಂತ್ರಿಯನ್ನು ಕರೆಸಿ ಅವನಿಗೆ ತನ್ನ ಅಭಿಪ್ರಾಯವನ್ನು ತಿಳಿಸಿ ತನ್ನ ಪುತ್ರಿಗೆ ಪಟ್ಟಾಭಿಷೇಕವನ್ನು ಮಾಡಿದನು. ತಾನು ವಹಿಸಿದ್ದ ರಾಜ್ಯಭಾರದ ಕ್ರಮವೆಲ್ಲವನ್ನೂ ತನ್ನ ಮಗಳಿಗೆ ಹೇಳಿ, ರಾಜ್ಯವನ್ನು ಅವಳಿಗೆ ಒಪ್ಪಿಸಿದನಂತರ, ಮಲಯಧ್ವಜರಾಜನು ತನ್ನ ಶರೀರವನ್ನು ಬಿಟ್ಟು ದೇವಭಾವವನ್ನು ಹೊಂದಿದನು. ಅವನಿಗೆ ಗಂಡುಮಕ್ಕಳು ಇಲ್ಲದ್ದರಿಂದ ಅವನ ಮಗಳಾದ ಈ ತಟಾತಕಾದೇವಿಯೇ ಪುರೋಹಿತನು ಹೇಳಿದಂತೆ ಅವನ ಊರ್ಧ್ವದೈಹಿಕ ಕರ್ಮಗಳನ್ನೆಲ್ಲವನ್ನೂ ನೆರವೇರಿಸಿದಳು. ತಟಾತಕಾದೇವಿಯು ಕನ್ಯೆಯಾಗಿದ್ದಾಗ್ಯೂ (ರಾಜ್ಯದ ಕೆಲಸ) ರಾಜ್ಯಪರಿಪಾಲನೆಯ ಕೆಲಸಗಳೆಲ್ಲವನ್ನೂ ಮಾಡಲು ಸಮರ್ಥಳಾಗಿ, ನೀತಿಯನ್ನು ಅನುಸರಿಸಿ ರಾಜ್ಯಪರಿಪಾಲನೆಯನ್ನು ಮಾಡಿದಳು ಶತ್ರುಗಳ ಸಂಗಡ ಶಕ್ತಿಯಿಂದ ಯುದ್ಧವನ್ನು ಮಾಡಿದಳು. ಎಲ್ಲಾ

ತಟಾತಕಾ ಚ ಕನ್ಯಾ ಚ ಸಮರ್ಥಾ ಸರ್ವ ಕರ್ಮಸು ।
ರಾಜ್ಯಂ ಚಕಾರ ಯುದ್ಧಂ ಚ ನೀತ್ಯಾ ಶಕ್ತ್ಯಾ ಚ ಶತ್ರುಭಿಃ ॥ ೧೧೯ ॥

ಸರ್ವದೇಶಾಧಿಪತ್ವಂ ಚ ಸರ್ವೈಶ್ವರ್ಯಮವಾಪ್ಯ ಚ ।
ಶಶಾಸ ಜಗತೀಂ ದೇವೀ ಕನ್ಯಕಾ ಕನ್ಯಕಾಪುರೀಂ ॥ ೧೨೦ ॥

ಲೀಲಾ ತುರೀಯಾ ದೇವಸ್ಯ ಕಥಿತಾ ಯಾ ಮಯಾಧುನಾ ।
ತಾಂ ಶ್ರುತ್ವಾ ಚ ಸಕೃದ್ಧೀಮಾನ್ಮಹತ್ಯಾ ಸಂಪದಾ ಯುತಃ ॥ ೧೨೧ ॥
ದೀರ್ಘಮಾಯುಶ್ಚ ಪುತ್ರಾಂಶ್ಚ ಲಬ್ಧ್ವಾಂತೇ ಮುಕ್ತಿಮಾಪ್ನುಯಾತ್ ।

ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ತಟಾತಕಾಜನನಂ ನಾಮ
ಅಷ್ಟಮೋಽಧ್ಯಾಯಃ

---

ದೇಶಗಳ ಅಧಿಪತ್ಯವನ್ನೂ, ಎಲ್ಲಾ ವಿಧವಾದ ಐಶ್ವರ್ಯವನ್ನೂ ಹೊಂದಿ, ಕನ್ಯಾ ಭಾವದಿಂದ ಇರುವ ತಟಾತಕಾದೇವಿಯು ಮಧುರಾನಗರವನ್ನೂ, ಜಗತ್ತೆಲ್ಲವನ್ನೂ ರಕ್ಷಿಸುತ್ತಿದ್ದಳು.

೧೨೧. ದೇವ ದೇವನಾದ ಪರಮೇಶ್ವರನ ನಾಲ್ಕನೆಯ ಲೀಲೆಯನ್ನು ನಾನು ಹೇಳಿರುವೆನು. ಬುದ್ಧಿವಂತನು ಇದನ್ನು ಒಂದು ಸಾರಿ ಕೇಳಿದ ಮಾತ್ರದಿಂದಲೇ ಬಹಳ ಐಶ್ವರ್ಯವಂತನಾಗಿ, ಬಹಳಕಾಲ ಜೀವಿಸಿ, ಪುತ್ರರನ್ನು ಹೊಂದಿ, ಕೊನೆಗೆ ಮುಕ್ತಿಯನ್ನು ಹೊಂದುವನು.

ಸಂಪನ್ಮುಕ್ತವಾದ ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯ
ಮಾಹಾತ್ಮ್ಯೆಯಲ್ಲಿ ತಟಾತಕಾ ಜನನವೆಂದು ಹೆಸರುಳ್ಳ
ಎಂಟನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥
॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ

## ನವಮೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ಬ್ರಹ್ಮವಿಷ್ಣ್ವಾದಿದೇವಾನಾಮದೃಶ್ಯಸ್ಸೋಮಸುಂದರಃ ।
ಸ್ವಾಂಶೇನ ಲಿಂಗಾನ್ನಿರ್ಗತ್ಯ ಸರ್ವಾವಯವಸುಂದರಃ ॥ ೧ ॥

ತಟಾತಕಾಮುದೂಹ್ಯಾಥ ಸ್ವಯಂ ಪಾಂಡ್ಯಮಹೀಪತಿಃ ।
ದೇವಸ್ಸುಂದರಪಾಂಡ್ಯೋಽಭೂತ್ತಾಂ ಲೀಲಾಂ ವರ್ಣಯಾಮಿ ವಃ ॥ ೨ ॥

ತಟಾತಕಾ ಕನ್ಯಕಾ ಸಾ ಸ್ವಯಂ ಸಿಂಹಾಸನೇ ಸ್ಥಿತಾ ಃ
ಸಾಂಮ್ರಾಜ್ಯಲಕ್ಷ್ಮೀಸೌಂದರ್ಯಲಕ್ಷ್ಮ್ಯೌ ಭಿನ್ನೈವ ರಾಜತೇ ॥ ೩॥ ॥

---

### ಒಂಭತ್ತನೆಯ ಅಧ್ಯಾಯವು.

೧. ಅಗಸ್ತ್ಯಋಷಿಯು ಹೇಳಿದನು:—ಬ್ರಹ್ಮ, ವಿಷ್ಣು ಮೊದಲಾದ ದೇವತೆಗಳಿಗೂ ಅದೃಶ್ಯನಾಗಿರುವ, ಸೋಮಸುಂದರೇಶ್ವರನು ತನ್ನ ಮೂಲ ಲಿಂಗದಿಂದ ಹೊರಕ್ಕೆ ಬಂದು, ಅಂಶದಿಂದ ಸುಂದರನಾಗಿ ಅವತರಿಸಿ, ತಟಾತಕಾದೇವಿಯನ್ನು ವಿವಾಹ ಮಾಡಿಕೊಂಡು ಪಾಂಡ್ಯದೇಶದ ರಾಜನಾಗಿ, ಸುಂದರ ಪಾಂಡ್ಯರಾಜನೆಂದು ಪ್ರಸಿದ್ಧನಾದ ಲೀಲೆಯನ್ನು ವರ್ಣಿಸಿ ಹೇಳುವೆನು.

೩-೬. ತಟಾತಕಾದೇವಿಯು ತಾನು ಕನ್ಯೆಯಾಗಿದ್ದರೂ, ಸಿಂಹಾಸನದಲ್ಲಿ ಕೂತುಕೊಂಡು ರಾಜ್ಯರಕ್ಷಣೆಯನ್ನು ಮಾಡುತ್ತಾ ಸಾಮ್ರಾಜ್ಯಲಕ್ಷ್ಮಿಯೇ ಸೌಂದರ್ಯ

**ನವರತ್ನವಿಚಿತ್ರೇಣ ಕಿರೀಟೇನ ಸಿತೇನ ಚ ।**
**ಛತ್ರೇಣ ಚಾಮರಾಭ್ಯಾಂ ಚ ಪುನರತ್ಯಂತಶೋಭಿತಾ ॥ ೪ ॥**

**ವಿಚಾರದಕ್ಷೈಸ್ಸಚಿವೈಸ್ಸತತಂ ಸಂವೃತಾ ಸತೀ ।**
**ಶಿಷ್ಟಾನಾಮಪಿ ದುಷ್ಟಾನಾಂ ರಕ್ಷಣಂ ಶಿಕ್ಷಣಂ ಕ್ರಮಾತ್ ॥ ೫ ॥**

**ಕರೋತಿ ಶಾಸ್ತ್ರನೀತ್ಯಾ ಚ ರಾಜ್ಯಭಾರಂ ದಧಾತಿ ಚ ।**
**ಯೌವನಂ ಪ್ರಾಪ್ಯ ಕಾಲೇನ ಮಾತ್ರಾ ಕಾಂಚನಮಾಲಯಾ ॥ ೬ ॥**

**ಚಿಂತಯಾಮಾಸ ಸಾ ಕನ್ಯಾ ಕದಾ ಭರ್ತಾ ಭವಿಷ್ಯತಿ ।**
**ಕದಾ ವಿಕೃತವಕ್ಷೋಜಂ ನಿಮಗ್ನಂ ಚ ಭವಿಷ್ಯತಿ ॥ ೭ ॥**

**ನ ಲಭ್ಯತೇತ್ರ ಸ್ಥಿತಯಾ ಮಯಾ ಚೈತದಭೀಪ್ಸಿತಂ ।**
**ದಿಶಾಂ ಚ ವಿಜಯವ್ಯಾಜಾತ್ ಭ್ರಾಂತಿಃ ಕಾರ್ಯಾ ಮಯಾ ಧ್ರುವಂ ॥ ೮ ॥**

---

ಲಕ್ಷ್ಮಿಯಾಗಿರುವ ಹಾಗೆ ಕಾಣುತ್ತಿರುವಳು. ಇವಳು ನವರತ್ನ ಖಚಿತವಾದ ಕಿರೀಟವನ್ನು ಧರಿಸಿರುವಳು. ಛತ್ರ, ಚಾಮರಗಳಿಂದ ಬಹಳ ಅಲಂಕೃತಳಾಗಿ ಕಾಣುವಳು. ರಾಜತಂತ್ರದಲ್ಲಿ ನಿಪುಣರಾದ ಮಂತ್ರಿಗಳು ಯಾವಾಗಲೂ ಇವಳ ಜೊತೆಯಲ್ಲಿ ಇರುವರು. ಶಿಷ್ಟರ ರಕ್ಷಣೆಯನ್ನೂ, ದುಷ್ಟರ ಶಿಕ್ಷೆಯನ್ನೂ ಇವಳು ನಡೆಸುವಳು. ಶಾಸ್ತ್ರಕ್ರಮದಿಂದಲೂ, ನೀತಿಯಿಂದಲೂ ರಾಜ್ಯವನ್ನು ರಕ್ಷಿಸುತ್ತಿದ್ದಳು ಹೀಗೆ ಇರುವಲ್ಲಿ ಇವಳಿಗೆ ಯೌವನವು ಪ್ರಾಪ್ತವಾಯಿತು.

೭-೮. ಆಗ ಇವಳು ತನ್ನ ತಾಯಿಯೊಡನೆ ಆಲೋಚಿಸಿದಳು. "ನನಗೆ ಪತಿಯು ಯಾವಾಗ ಬರುವನು ? ನನ್ನ ಶರೀರದಲ್ಲಿ ವಿಕಾರವಾದ ಮೂರನೆಯ ಸ್ತನವು ಯಾವಾಗ ಕಾಣದೆ ಹೋಗುವುದು. ಇದನ್ನು ನಾನು ಇಲ್ಲಿ ಹೀಗೆ ಇದ್ದರೆ, ಕಂಡು ಹಿಡಿಯಲು ಸಾಧ್ಯವಿಲ್ಲ. ನಾನು ದಿಗ್ವಿಜಯದ ನೆಪದಿಂದ ದೇಶಗಳನ್ನು ಕ್ರಮವಾಗಿ ಸುತ್ತುತ್ತಾ ಬಂದರೆ, ನನ್ನ ಭ್ರಾಂತಿಯು ಕಳೆದುಹೋಗುವುದು. ಪತಿಯು ದೊರಕುವನು." ಎಂದು ಆ ತಟಾತಕಾದೇವಿಯು ಮನಸ್ಸಿನಲ್ಲಿ ನಿಶ್ಚಯವನ್ನು ಮಾಡಿಕೊಂಡಳು.

ಇತಿ ನಿಶ್ಚಿತ್ಯ ಮನಸಾ ರಥೈಶ್ಚ ತುರಗೈರ್ಗಜೈಃ ।
ಸೇನಾಭಿರತಿಶೂರಾಭಿರ್ಮೀನಧ್ವಜಯುತಂ ರಥಂ ॥ ೯ ॥

ಮನೋವೇಗಸಮೈರಶ್ವೈಶ್ಚತುರ್ಭಿಶ್ಚಿತ್ರವರ್ಣಕೈಃ ।
ಶೋಭಿತಂ ಚಾಧಿರುಹ್ಯಾಶು ಯಥಾ ದೇವೋ ದಿವಾಕರಃ ॥ ೧೦ ॥

ಮೇರುಂ ಪ್ರದಕ್ಷಿಣೀಕೃತ್ಯ ತಮಸ್ಸಂಹರತಿ ಪ್ರಭುಃ ।
ತಥಾ ಸರ್ವಾಣಿ ದೇಶಾನಿ ದುರ್ಗಮಾಣಿ ವನಾದ್ರಿಭಿಃ ॥ ೧೧ ॥

ಜಿತ್ವಾ ವಿಂಶೋತ್ತರಶತವರ್ಣಯುಕ್ತಂ ಚ ಕಾಂಚನಂ ।
ವಿವಿಧಾನಿ ಚ ರತ್ನಾನಿ ವಿಚಿತ್ರಾನ್ ತುರಗಾನ್ಗಜಾನ್ ॥ ೧೨ ॥

ಅಂಬರಾಣಿ ವಿಚಿತ್ರಾಣಿ ಭೂಷಣಾನ್ಯದ್ಭುತಾನಿ ಚ ।
ಗಂಧದ್ರವ್ಯಾಣಿ ದಿವ್ಯಾನಿ ವಸ್ತೂನಿ ರಸವಂತಿ ಚ ॥ ೧೩ ॥

ತತ್ತದ್ದೇಶಾಧಿಪೈರ್ಭೀತ್ಯಾ ಪ್ರದತ್ತಾನಿ ಮಹಾಂತಿ ಚ ।
ಉಪಾಯನಾನಿ ಸರ್ವಾಣಿ ಲಬ್ಧ್ವಾ ಕನ್ಯಾ ತಟಾತಕಾ ॥ ೧೪ ॥

---

೯-೧೦ ಆ ತಟಾತಕಾದೇವಿಯು ಆನೆ, ಕುದುರೆ, ರಥ, ಶೂರರಾದ ಸೈನಿಕರು, ಇವರೆಲ್ಲರನ್ನೂ ಸೇರಿಸಿ, ಮನೋವೇಗವುಳ್ಳ ಕುದುರೆಗಳನ್ನು ಕಟ್ಟಿರುವ ಮೆರೆಯುವ ರಥದಲ್ಲಿ ಕುಳಿತುಕೊಂಡು, ಮೀನಧ್ವಜದಿಂದ ತನ್ನ ಸೇನೆಯೆಲ್ಲವನ್ನೂ ಸೂರ್ಯನಂತೆ ಬೆಳಗಿಸುತ್ತಾ, ದಿಗ್ವಿಜಯಕ್ಕಾಗಿ ಹೊರಟಳು. ಸೂರ್ಯನು ಮೇರು ಪರ್ವತವನ್ನು ಪ್ರದಕ್ಷಿಣೆ ಮಾಡುವಂತೆ ಕಾಡು, ಬೆಟ್ಟ ಇವುಗಳಿಂದ ದುರ್ಗಮವಾದ ದೇಶವೆಲ್ಲವನ್ನೂ ಕ್ರಮವಾಗಿ ಜಯಿಸುತ್ತಾ ಬಂದಳು.

೧೨-೧೬. ಆ ದೇವಿಯು ತಾನು ಜಯಿಸಿದ ದೇಶಗಳಲ್ಲಿ ನೂರಿಪ್ಪತ್ತು ಬಣ್ಣವುಳ್ಳ ಚಿನ್ನ, ಅನೇಕ ವಿಧವಾದ ರತ್ನಗಳು, ಆನೆಗಳು, ಕುದುರೆಗಳು, ವಸ್ತ್ರಗಳು, ಆಶ್ಚರ್ಯಕರವಾದ ಆಭರಣಗಳು, ಸುಗಂಧದ್ರವ್ಯಗಳು, ಇವೆಲ್ಲವನ್ನೂ ಸಂಗ್ರಹಿಸಿದಳು. ಅನೇಕ ರಾಜರು ಕಾಣಿಕೆಯಾಗಿ ಒಪ್ಪಿಸಿರುವ ಬೆಲೆಬಾಳುವ ಪದಾರ್ಥಗಳೆಲ್ಲವನ್ನೂ ತನ್ನ ರಾಜಧಾನಿಗೆ ಕಳುಹಿಸಿ, ಅದನ್ನು ಧನ ಧಾನ್ಯಗಳಿಂದ ತುಂಬುವಂತೆ ಮಾಡಿದಳು. ಎಂಟು ದಿಕ್ಕುಗಳ ಮಧ್ಯದಲ್ಲಿರುವ ಅದ್ಭುತವಾದ ಧನ ಧಾನ್ಯಗಳಿಂದ ತುಂಬಿರುವ ದೇಶಗಳೆಲ್ಲವನ್ನೂ ಜಯಿಸಿದ ನಂತರ ಆಯಾಯ ದಿಕ್ಕುಗಳ ಕೊನೆಯಲ್ಲಿರುವ ಲೋಕಪಾಲಕರ ನಗರಗಳನ್ನು ಜಯಿಸಲುದ್ಯುಕ್ತಳಾದಳು. ಅಂತರಿಕ್ಷದಲ್ಲಿ

ಚಕ್ರವಾಳಮಹಾಶೈಲಂ ಕೃತ್ವಾ ಪ್ರಾಕಾರಮುದ್ಧೃತಂ ।
ಸ್ವರಾಜ್ಯಸ್ಯ ಧನೈರ್ಧಾನ್ಯೈಸ್ಸಮೃದ್ಧಸ್ಯ ಸುವಸ್ತುಭಿಃ ॥ ೧೫ ॥

ಲೋಕಪಾಲಪದಂ ಜೇತುಮುತ್ಸುಕಾ ದಿವಮಾಕ್ರಮತ್ ।
ಶ್ರೀಮತ್ಪಂಚಾಕ್ಷರಂ ಮಂತ್ರಂ ಸಮುಚ್ಚಾರ್ಯ ಚತುರ್ವಿಧಂ ॥ ೧೬ ॥

ಬಲಂ ವಿಲೋಕ್ಯ ತೇಭ್ಯಶ್ಚ ದದೌ ದಿವ್ಯಂ ಪರಾಕ್ರಮಂ ।
ದಿವ್ಯದೃಷ್ಟಿಂ ಖೇಚರತ್ವಮಪಿ ದೇವೀ ತಟಾತಕಾ ॥ ೧೭ ॥

ಮಹೇಂದ್ರಸ್ಯ ಪುರೀಂ ಪೂರ್ವಂ ಪರಿವೃತ್ಯಾಮರಾವತೀಂ ।
ಪರಾಭವಂ ದೇವತಾನಾಂ ಕಾರಯಾಮಾಸ ಕನ್ಯಕಾ ॥ ೧೮ ॥

ತ್ಯಕ್ತ್ವಾ ವಜ್ರಂ ವಾಹನಂ ಚ ನತ್ವಾ ಶಕ್ರೇಣ ಭೀರುಣಾ ।
ಸಮರ್ಪಿತಂ ಕಲ್ಪವೃಕ್ಷಂ ಕಾಮಧೇನುಂ ಪ್ರಗೃಹ್ಯ ಚ ॥ ೧೯ ॥

ಚಿಂತಾಮಣಿಕೃತಾಂ ಮಾಲಾಮಮರಾಣಾಂ ಚ ದುರ್ಲಭಾಂ ।
ಪಶ್ಚಾದಗ್ನೇಃ ಪುರೀಂ ಜಿತ್ವಾ ಪ್ರದತ್ತಾನಿ ಹವಿರ್ಭುಜಾ ॥ ೨೦ ॥

---

ಸಂಚರಿಸುವುದಕ್ಕೆ ತಕ್ಕ ಶಕ್ತಿಯುಂಟಾಗಲು ಪಂಚಾಕ್ಷರ ಮಂತ್ರವು ನಾಲ್ಕು ವಿಧವಾಗಿರುವುದನ್ನು ಆ ದೇವಿಯು ಜಪಿಸಿದಳು.

೧೭-೧೯. ತನ್ನ ಸೇನೆಯೆಲ್ಲಕ್ಕೂ ದಿವ್ಯದೃಷ್ಟಿಯನ್ನೂ, ಅಂತರಿಕ್ಷದಲ್ಲಿ ಸಂಚರಿಸುವ ಸಾಮರ್ಥ್ಯವನ್ನೂ ಅನುಗ್ರಹಿಸಿದಳು. ಮೊದಲು ಇಂದ್ರನ ರಾಜಧಾನಿಯಿಂದ ಅಮರಾವತಿಯನ್ನು ಮುತ್ತಿ ದೇವತೆಗಳನ್ನು ಗೆದ್ದಳು. ಅಲ್ಲಿ ಇಂದ್ರನು ವಜ್ರಾಯುಧವನ್ನು ಕೆಳಗೆ ಇರಿಸಿ ನಮಸ್ಕರಿಸಿದನು. ಅವನು ತಟಾತಕಾದೇವಿಗೆ ಕಾಮಧೇನು, ಕಲ್ಪವೃಕ್ಷ, ದೇವತೆ ಗಳಿಗೆ ದುರ್ಲಭವಾದ ಚಿಂತಾಮಣಿ, ರತ್ನದಿಂದ ಕೂಡಿದ ಹಾರ, ಇವುಗಳನ್ನು ಕಾಣಿಕೆಯಾಗಿ ಒಪ್ಪಿಸಿದನು.

೨೦-೨೪. ಅನಂತರದಲ್ಲಿ ಆ ತಟಾತಕಾದೇವಿಯು ಅಗ್ನಿಯ ನಗರವನ್ನು ಮುತ್ತಿದಳು. ಅಲ್ಲಿ ಅಗ್ನಿಯನ್ನು ಸೋಲಿಸಿ, ಅವನು ಕಾಣಿಕೆಯಾಗಿ ಒಪ್ಪಿಸಿದ, ದಿವ್ಯವಾದ ವಸ್ತ್ರಗಳು, ಬಹಳ ಕಾಂತಿಯುಳ್ಳ ರತ್ನಗಳು, ಸುವರ್ಣ, ಅನೇಕ ವಿಧವಾದ ವಾಹನಗಳು ಇವೆಲ್ಲವನ್ನೂ ಸ್ವೀಕರಿಸಿ, ಅಗ್ನಿಗೆ ಅನುಗ್ರಹವನ್ನು ಮಾಡಿದಳು. ಆ ಮೇಲೆ ಅವಳು ಯಮನ ನಗರವನ್ನು ಗೆದ್ದು, ಅವನು ಕಾಣಿಕೆಯಾಗಿ ಒಪ್ಪಿಸಿದ ಕಪ್ಪು ಬಣ್ಣದ ಪದಾರ್ಥಗಳೆಲ್ಲವನ್ನೂ ಸ್ವೀಕರಿಸಿದಳು. ಕಸ್ತೂರಿ, ನೀಲವರ್ಣದ

ದಿವ್ಯವಸ್ತ್ರಾಣಿ ಸರ್ವಾಣಿ ಮಹಾದೀಪ್ತಿಯುತಾನಿ ಚ ।
ವಾಹನಾನಿ ಚ ರತ್ನಾನಿ ಕಾಂಚನಾನಿ ಬಹೂನಿ ಚ ॥ ೨೧ ॥

ಗೃಹ್ಯಾನುಗೃಹ್ಯ ಜ್ವಲನಂ ಧರ್ಮರಾಜಪುರೀಮಥ ।
ಪರಾಕ್ರಮೇಣ ಜಿತ್ವಾ ತಂ ಮಹಾಭೋಗೋಚಿತಾನಿ ಚ ॥ ೨೨ ॥

ನೀಲಕೌಶೇಯಕಸ್ತೂರೀನೀಲರತ್ನಾದಿಕಾನಿ ಚ ।
ಅನರ್ಘ್ಯಾಣಿ ಪ್ರಗೃಹ್ಯಾಶು ಮಹಾಧೀರಾ ತಟಾತಕಾ ॥ ೨೩ ॥

ನೈಋತಿಂ ಲೋಕಪಾಲಂ ಚ ವರುಣಂ ಚ ಸದಾಗತಿಂ ।
ಕುಬೇರಂ ಚ ಕ್ರಮೇಣೈವ ಜಿತ್ವಾ ತಲ್ಲೋಕಭಾಂಜಿ ಚ ॥ ೨೪ ॥

ಸುವಸ್ತೂನಿ ಸಮಸ್ತಾನಿ ಸಮಾದಾಯ ತಟಾತಕಾ ।
ಐಶಾನೀಂ ದಿಶಮಾಲೋಕ್ಯ ಮಹಾತೇಜೋವತೀಂ ಪುರೀಂ ॥ ೨೫ ॥

ಕೈಲಾಸಮಧ್ಯಶೃಂಗಸ್ಥಾಂ ಶಿವೇನಾಧಿಷ್ಠಿತಾಂ ವರಾಂ ।
ಜೇತುಂ ತಟಾತಕಾ ದೇವೀ ರಥಾಶ್ವಗಜಪತ್ತಿಭಿಃ ॥ ೨೬ ॥

---

ರೇಷ್ಮೆಬಟ್ಟೆಗಳು, ಬೆಲೆಬಾಳುವ ರತ್ನಾಭರಣಗಳು, ಇವುಗಳನ್ನು ಸಂಗ್ರಹಿಸಿದ ನಂತರ ಮಹಾಧೀರಳಾದ ತಟಾತಕಾದೇವಿಯು ಲೋಕಪಾಲಕನಾದ ನಿಋುತಿ, ವರುಣ, ವಾಯು, ಕುಬೇರ ಇವರನ್ನು ಕ್ರಮವಾಗಿ ಪರಾಕ್ರಮದಿಂದ ಯುದ್ಧದಲ್ಲಿ ಸೋಲಿಸಿದಳು. ಅವರು ಕಾಣಿಕೆಯಾಗಿ ಒಪ್ಪಿಸಿದ ಬೆಲೆಬಾಳುವ ಪದಾರ್ಥಗಳೆಲ್ಲವನ್ನೂ ಸ್ವೀಕರಿಸಿದಳು.

೨೫–೨೮. ತಟಾತಕಾದೇವಿಯು ಈಶಾನ್ಯ ದಿಕ್ಕಿನಲ್ಲಿರುವ ತೇಜೋವತೀನಗರವನ್ನು ಗೆಲ್ಲಬೇಕೆಂಬ ಉದ್ದೇಶದಿಂದ ಅಲ್ಲಿಗೆ ಪ್ರಯಾಣ ಮಾಡಿದಳು. ಆ ನಗರವು ಕೈಲಾಸಪರ್ವತದ ಮಧ್ಯದ ಶಿಖರದ ಮೇಲೆ ಇರುತ್ತಾ, ಶಿವನಿಂದ ರಕ್ಷಣೆಯನ್ನು ಹೊಂದುತ್ತಿತ್ತು. ಆ ನಗರದ ಸುತ್ತಲೂ ಬಲವಾದ ಕೋಟೆಯು ಇತ್ತು. ಶಿವನ ಪ್ರಮಥಗಣಗಳು ಅದೆಲ್ಲವನ್ನೂ ಬಹಳ ಎಚ್ಚರದಿಂದ ರಕ್ಷಿಸುತ್ತಿದ್ದರು. ತನ್ನ ಆನೆ, ಕುದುರೆ, ಮುಂತಾದ ಸೇನೆಗಳಿಂದ ತಟಾತಕಾದೇವಿಯು ಆ ನಗರದ ಹೊರಪ್ರಾಕಾರವೆಲ್ಲವನ್ನೂ ಗೆದ್ದಳು. ಅದನ್ನು ರಕ್ಷಿಸುವ ಗಣಗಳೆಲ್ಲವನ್ನೂ ಗೆದ್ದಳು. ಕ್ರಮ ಕ್ರಮ

ಬಹಿಃ ಪ್ರಾಕಾರಮಾವೃತ್ಯ ರಕ್ಷಿಣಸ್ತಾನ್ಗಣಾನ್ಬಹೂನ್ ।
ಜಿತ್ವಾ ಕ್ರಮೇಣ ಸರ್ವಾಂಶ್ಚ ಪ್ರಾಕಾರಾಂಶ್ಚ ಕ್ಷಣೇನ ಚ ॥ ೨೭ ॥

ಪ್ರಥಮಾವರಣದ್ವಾರೇ ಸ್ಥಿತಂ ತಂ ನಂದಿಕೇಶ್ವರಂ ।
ಯುದ್ಧೇನ ದೇವೀ ಜಯತಿ ಶಿವತುಲ್ಯಪರಾಕ್ರಮಂ ॥ ೨೮ ॥

ಯದಾ ತಟಾತಕಾ ದೇವೀ ನಿರ್ಗತಾ ವಿಜಯಾಯ ಚ ।
ತದಾನೀಮೇವ ಸಹಸಾ ಹಾಲಾಸ್ಯೇಶೋ ದಯಾನಿಧಿಃ ॥ ೨೯ ॥

ಸ್ವಯಮಂಶೇನ ನಿರ್ಗತ್ಯ ಮಹಾಲಿಂಗಾನ್ಮಹೇಶ್ವರಃ ।
ತಪ್ತಕಾಂಚನಸಂಕಾಶಃ ಮಹಾತೇಜಸ್ಸಮನ್ವಿತಃ ॥ ೩೦ ॥

ಸೌಂದರ್ಯಸಾಗರೋದ್ಭೂತ ಪೂರ್ಣಚಂದ್ರನಿಭಾನನಃ ।
ತಟಾತಕಾದಿಸೌಂದರ್ಯಸಮಾನವರವೇಷವಾನ್ ॥ ೩೧ ॥

ಷೋಡಶಾಬ್ದಾಕೃತಿಶ್ಶಂಭುಃ ಸರ್ವಲಕ್ಷಣಲಕ್ಷಿತಃ ।
ಕಿರೀಟಕುಂಡಲಾದ್ಯೈಶ್ಚ ಭೂಷಣೈಃ ಸಮಲಂಕೃತಃ । ॥ ೩೨ ॥

---

ವಾಗಿ ಪ್ರಾಕಾರಗಳೆಲ್ಲವನ್ನೂ ಗೆಲ್ಲುವಾಗ ಪ್ರಥಮಾವರಣದಲ್ಲಿಯೇ ಶಿವನಿಗೆ ಸಮನಾದ ಪರಾಕ್ರಮಶಾಲಿಯಾದ ನಂದಿಕೇಶ್ವರನನ್ನು ಹೆಬ್ಬಾಗಿಲಿನಲ್ಲಿಯೇ ಆ ದೇವಿಯು ಯುದ್ಧಮಾಡಿ ಸೋಲಿಸಿದಳು

೨೯-೩೪. ತಟಾತಕಾದೇವಿಯು ದಿಗ್ವಿಜಯಕ್ಕಾಗಿ ಹೊರಡುವುದನ್ನು ತಿಳಿದು, ಬಹಳ ದಯೆಯುಳ್ಳ ಹಾಲಾಸ್ಯೇಶ್ವರನು, ತನ್ನ ಅಂಶದಿಂದ, ತನ್ನ ಮೂಲಸ್ಥಾನವಾದ ಮಹಾಲಿಂಗದಿಂದ ರೂಪಾಂತರವನ್ನು ಹೊಂದಿದನು. ಹದಿನಾರು ವರ್ಷದ ತರುಣನಾದನು. ಮುಖದಲ್ಲಿ ಅಪರಿಮಿತವಾದ ತೇಜಸ್ಸು ಪ್ರಕಾಶಿಸುತ್ತಿತ್ತು. ಇವನು ತಟಾತಕಾದೇವಿಯಂತೆ, ಬಹಳ ಸುಂದರನಾಗಿದ್ದನು. ಎಲ್ಲಾ ವಿಧವಾದ ರಾಜಲಕ್ಷಣಗಳಿಂದ ಕೂಡಿದ ದಿವ್ಯವಾದ ಆಭರಣಗಳನ್ನು ಧರಿಸಿ, ಗಂಧ, ಪುಷ್ಪಮಾಲ್ಯಗಳಿಂದ ಅಲಂಕೃತನಾದ ಸೋಮಸುಂದರೇಶ್ವರನು, ವೃಷಭಧ್ವಜದಿಂದ ಮೆರೆಯುತ್ತಿರುವ ದಿವ್ಯವಾದ ವಿಮಾನದಲ್ಲಿ ಕುಳಿತುಕೊಂಡು, ತನ್ನ ಮಾಯೆಯಿಂದ ತಾನು ಯಾರಿಗೂ ಕಾಣದಂತೆ, ತಟಾತಕಾದೇವಿಯು ಜಯಿಸುವ ಪ್ರದೇಶಗಳೆಲ್ಲದರಲ್ಲಿಯೂ ಇವಳಿಗಿಂತ ಬೇಗನೆ ಬಂದು ಸೇರುತ್ತಿದ್ದನು. ತಟಾತಕಾದೇವಿಯನ್ನು ಮದುವೆಮಾಡಿಕೊಳ್ಳಲು

ದಿವ್ಯಾಂಬರೈರ್ದಿವ್ಯಗಂಧೈರ್ದಿವ್ಯಪುಷ್ಪೈಸ್ಸುಶೋಭಿತಃ ।
ದಿವ್ಯಂ ವಿಮಾನಮಾರುಹ್ಯ ವೃಷಭಧ್ವಜಚಿಹ್ನಿತಂ ॥ ೩೩ ॥

ಸರ್ವೈರದೃಶ್ಯಮಾನಸ್ಸ್ವಸುಂದರೇಶಃ ಸಮಾಯಯೌ ।
ತಟಾತಕಾಯಾ ದೇವ್ಯಾಶ್ಚ ಪಾಣಿಗ್ರಹಣಲೋಲುಪಃ ॥ ೩೪ ॥

ಯತ್ರ ಯತ್ರ ಚ ಸಾ ಕನ್ಯಾ ಜಯಾರ್ಥಂ ತ್ವರಯಾ ಯಯೌ ।
ಹಾಲಾಸ್ಯನಾಥೋ ಭಗವಾಂಸ್ತತ್ರ ತತ್ರ ಚ ಗಚ್ಛತಿ ॥ ೩೫ ॥

ಯದಾ ಶಂಕರಸಾಮಿಾಪ್ಯಂ ಗತ್ವಾ ಸ್ವಸ್ಯ ಪರಾಭವಂ ।
ಅಭೂದ್ವಕ್ತುಂ ಸಮುದ್ಯುಕ್ತೋ ನಂದೀಶೋ ಗಣನಾಯಕಃ ॥ ೩೬ ॥

ತದಾದೃಶ್ಯತ್ವಮಾತ್ಮೀಯಮಾಯಯೋದ್ಧುಂ ವಿಹಾಯ ಚ ।
ಆವಿರ್ಭವತಿ ದೇವೇಶೆ ಪುರೋ ನಂದೀಶ್ವರಸ್ಯ ಚ ॥ ೩೭ ॥

ಕ್ರಂದತೋ ರಕ್ಷ ರಕ್ಷೇತಿ ಕೈಲಾಸತಟವಾಸಿನಃ ।
ನಂದಿನಾ ಶಂಭುಪಾದಾಬ್ಜೇ ನಿಪೇತುರ್ಗಣನಾಯಕಾಃ ॥ ೩೮ ॥

---

ಬಹಳ ಆಸೆಯಿದ್ದ ಕಾರಣ, ಈ ಕನ್ಯೆಯು ಹೋಗುವ ಕಡೆಗಳೆಲ್ಲದರಲ್ಲಿಯೂ, ತಾನೂ ಹೋಗಿ ಅವಳಿಗೆ ಜಯವು ಉಂಟಾಗುವಂತೆ ಅನುಗ್ರಹವನ್ನು ಮಾಡುತ್ತಿದ್ದನು. ತಟಾತಕಾದೇವಿಗೆ ಯುದ್ಧಮಾಡುವ ಅತ್ಯವಶ್ಯಕವಾದ ಕೆಲಸವಿರುವ ಕಾರಣದಿಂದಲೂ, ಈ ದೇವನ ಮಾಯೆಯಿಂದಲೂ ಇವನು ಕಾಣಿಸುತ್ತಿರಲಿಲ್ಲ.

೩೫–೩೭. ಹಾಲಾಸ್ಯೇಶ್ವರನ ಮುಖ್ಯ ಸೇನಾಪತಿಯಾದ ನಂದಿಕೇಶ್ವರನು ಯುದ್ಧದಲ್ಲಿ ಅಪಜಯವಾದದ್ದನ್ನು ತನ್ನ ಪ್ರಭುವಿನ ಸಂಗಡ ತಿಳಿಸಿದ ಕೂಡಲೆ, ವೀರನಾಗಿ ಮಾಯೆಯಿಂದ ಆ ಕನ್ಯೆಯ ಜೊತೆಯಲ್ಲಿಯೇ ಬರುತ್ತಿದ್ದ ಸೋಮಸುಂದರೇಶ್ವರನು, ತನ್ನ ಮಾಯೆಯನ್ನು ದೂರಕ್ಕೆ ತಳ್ಳಿದನು. ಆ ದೇವನು ಯುದ್ಧಕ್ಕೆ ಸಿದ್ಧನಾಗಿರುವವನ ವೇಷದಿಂದ ನಂದೀಶ್ವರನ ಕಣ್ಣಿಗೆ ಗೋಚರನಾದನು.

೩೮–೩೯. ಕೈಲಾಸಪರ್ವತದ ತಪ್ಪಲಿನಲ್ಲಿ ವಾಸಮಾಡುತ್ತಿರುವ ನಂದಿಕೇಶ್ವರನೇ ಮೊದಲಾದ ಗಣೇಶ್ವರರೆಲ್ಲರೂ ಆಗ ತಮ್ಮ ಪ್ರಭುವಾದ ಪರಮೇಶ್ವರನ ಪಾದಗಳಿಗೆ ನಮಸ್ಕರಿಸಿ, "ಎಲೈ ದೇವನೆ, ನೀನು ನಮ್ಮನ್ನು ರಕ್ಷಿಸು. ಮೂರು ಸ್ತನಗಳಿರುವ ಒಬ್ಬ ಕನ್ಯೆಯು ಆಯುಧವನ್ನು ಹಿಡಿದುಕೊಂಡು ಯುದ್ಧಮಾಡಲು

ತ್ರಿಸ್ತನೀ ಕನ್ಯಕಾ ಕಾಚಿತ್ಸಾಯುಧಾಸ್ಮಾನ್ಪ್ರಬಾಧತೇ ।
ಭಗವಚ್ಛರಣಾಪನ್ನಾನ್ಪಾಹಿ ಸದ್ಯಃ ಕೃಪಾನಿಧೇ　　॥ ೩೯ ॥

ಏವಂ ಗಣೇಶ್ವರೈಃ ಸರ್ವೈಃ ಪ್ರಾರ್ಥಿತಃ ಪ್ರಾಹ ಸುಂದರಃ ।
ತೂಷ್ಣೀಂ ಭವಂತಸ್ತಿಷ್ಠಂತು ವಿಜೇಷ್ಯಾಮ್ಯಹಮೇವ ತಾಂ　　॥ ೪೦ ॥

ಇತಿ ತಾನ್ನಿರ್ಭಯಾನ್ಕೃತ್ವಾ ತತ್ಪಾಣಿಗ್ರಹಣೋತ್ಸುಕಃ ।
ಗತ್ವಾ ತಟಾತಕಾಂ ಪಶ್ಯನ್ತಸ್ಥೌ ಚಾಪಧರೋ ಮುದಾ　　॥ ೪೧ ॥

ತಸ್ಯ ದರ್ಶನಮಾತ್ರೇಣ ತಸ್ಯಾಸ್ತು ವಿಕೃತಸ್ತನಃ ।
ಅದೃಶ್ಯತಾಂ ದೃಶಾಂ ಪ್ರಾಪದುದಗ್ರೋ ವಿಂಧ್ಯಶೈಲವತ್　　॥ ೪೨ ॥

ನಿಕಟಸ್ಥಾಸ್ಸರ್ವ ಏವ ತಾಂ ದೃಷ್ಟ್ವಾ ವಿಸ್ಮಿತಾಃ ಸ್ಥಿತಾಃ
ಸಾರ್ಧಂ ಗಚ್ಛನ್ಮಹಾಮಂತ್ರೀ ಸುಮತಿಶ್ಚ ಪುರಾತನಃ　　॥ ೪೩ ॥

---

ಬಂದಿರುವಳು. ಅವಳ ಸಂಗಡ ಯುದ್ಧಮಾಡಿದೆವು. ಅಪಜಯವಾಯಿತು. ಅವಳಿಂದ ನಮಗೆ ತೊಂದರೆಯು ಹೆಚ್ಚಾಗಿರುವುದು. ನೀನು ನಮ್ಮನ್ನು ರಕ್ಷಿಸು," ಎಂದು ಹೇಳಿದರು.

೪೦–೪೨. ಸುಂದರೇಶ್ವರನು ಆಗ ತನ್ನ ಸೇನಾನಾಯಕರ ಸಂಗಡ, ನೀವು ಸುಮ್ಮನೆ ಇದ್ದುಬಿಡಿ.'' ಎಂದು ಹೇಳಿ, ಅವರಿಗೆ ಹೆದರಿಕೆಯನ್ನು ತಪ್ಪಿಸಿದನು ತಾನು ಆ ಕನ್ಯೆಯನ್ನು ಸ್ವೀಕರಿಸಬೇಕೆಂಬ ಅಭಿಲಾಷೆಯುಇರುವುದರಿಂದ, ತಾನೇ ಧನುಸ್ಸನ್ನು ಹಿಡಿದುಕೊಂಡು, ಸಂತೋಷದಿಂದ, ಆ ಕನ್ಯೆಯನ್ನು ಕಣ್ಣಿನ ರೆಪ್ಪೆಯನ್ನು ಮುಚ್ಚದೆ ಪ್ರೀತಿಯಿಂದ ನೋಡಲು ಪ್ರಾರಂಭಿಸಿದನು. ಆಗ ನನ್ನ ಎದುರಿಗೆ ವಿಂಧ್ಯಪರ್ವತವು ಅಡಗಿದಂತೆ, ಆ ಕನ್ಯೆಯ ಮೂರನೆಯ ಸ್ತನವು ಅಡಗಿಹೋಯಿತು. ಆ ದೇವಿಯ ಹತ್ತಿರದಲ್ಲಿ ಇದ್ದವರೆಲ್ಲರೂ ಅದನ್ನು ನೋಡಿ ಆಶ್ಚರ್ಯಪಡುತ್ತಿದ್ದರು. ವೃದ್ಧನಾದ ಸುಮತಿ ಎಂಬ ಮಹಾಮಂತ್ರಿಯು ದೇವಿಯನ್ನು ನೋಡಿ," ಇವನೇ ನಿನಗೆ ಪತಿಯಾಗುವನು '' ಎಂದು ರಹಸ್ಯವಾಗಿ ಹೇಳಿದನು.

೪೩–೪೭. **ತಟಾತಕಾ**ದೇವಿಯು ನೋಡಿದಳು. ಅವಳ ಎದುರಿನಲ್ಲಿ ಸುಂದರವಾದ ಮುಖದಿಂದ ಬೆಳಗುತ್ತಿದ್ದ ಸುಂದರೇಶ್ವರನು, ಸುಂದರವಾದ ಕಣ್ಣುಗಳು, ಭುಜಗಳು ಇವುಗಳಿಂದ ಪ್ರಕಾಶಿಸುತ್ತಿರುವುದನ್ನು ನೋಡಿದಳು. ಆಗ ಉಂಟಾಗಿರುವ

ಅಯಮೇವಾನಘೇಭರ್ತಾ ತವೇತ್ಯಕಥಯದ್ರಹಃ ।
ಶ್ರುತ್ವಾ ತಟಾತಕಾ ಕನ್ಯಾ ವಿಲೋಕ್ಯಾತ್ಯಂತಸುಂದರಂ ॥ ೪೪ ॥

ಸುಂದರೇಶಂ ಸುಂದರಾಸ್ಯಂ ಸುಂದರಾಯತಲೋಚನಂ ।
ಸುಂದರಾಭ್ಯಾಂ ಭುಜಾಭ್ಯಾಂ ಚ ಸುಂದರಾವಯವೈಃ ಪರೈಃ ॥ ೪೫ ॥

ಸಮುಜ್ಜ್ವಲಂತಂ ಸರ್ವಜ್ಞಂ ಯುವಾನಂ ಚಂದ್ರಶೇಖರಂ ।
ಅತೀವ ಲೋಭಿತಾ ಭೂತ್ವಾ ಶರಚಾಪೌ ಕರೇ ಸ್ಥಿತೌ ॥ ೪೬ ॥

ವಿಸೃಜ್ಯ ಚ ಮಹತ್ಯಾ ಚ ಲಜ್ಜಯಾ ವಿನತಾನನಾ ।
ಸ್ವಪಾದಾಂಗುಷ್ಠಮನ್ವೀಕ್ಷ್ಯ ಮಲಯಧ್ವಜಕನ್ಯಕಾ ॥ ೪೭ ॥

ನಿಶ್ಚಲಾ ತಿಷ್ಠತಿ ರಥೇ ಪ್ರತಿಮಾ ಚಿತ್ರಗಾ ಯಥಾ ।
ತದಾನೀಂಪವನಾಧೀಶಃ ಪ್ರಾಹ ದೇವೀಂ ತಟಾತಕಾಂ । ॥ ೪೮ ॥

ಅನವದ್ಯಾಖಿಲಾಂಗಿ ತ್ವಾಂ ಸ್ವೀಚಿಕೀರ್ಷುಸ್ಸಮಾಗತಃ ।
ತದರ್ಥಮಾನುಕೂಲ್ಯಂ ಚ ಕುರು ಸದ್ಯಸ್ಸುಕನ್ಯಕೇ ॥ ೪೯ ॥

---

ಯೌವನದಲ್ಲಿ ಆ ಸುಂದರನನ್ನು ನೋಡಿದ ಮಾತ್ರದಿಂದ, ಕನ್ಯೆಯಾದ ತಟಾತಕಾ ದೇವಿಯ ಮನಸ್ಸು, ಸರ್ವಜ್ಞನಾದ ಚಂದ್ರಶೇಖರನಾದ ಅವನಲ್ಲಿ ಮೋಹದಿಂದ ಚಂಚಲವಾಯಿತು. ಆ ದೇವಿಗೆ ಆ ದೇವನ ವಿಷಯದಲ್ಲಿ ಚಿತ್ತಚಾಂಚಲ್ಯವು ಹೆಚ್ಚಿದ ಕಾರಣ ಯುದ್ಧಕ್ಕಾಗಿ ಹಿಡಿದಿದ್ದ ಬಿಲ್ಲು, ಬಾಣಗಳು ಕೈಯ್ಯಿನಿಂದ ಜಾರಿ ಭೂಮಿಗೆ ಬಿದ್ದವು. ಆ ದೇವಿಯ ಮನಸ್ಸಿನಲ್ಲಿ ಶೌರ್ಯಕ್ಕೆ ಬದಲಾಗಿ, ಲಜ್ಜೆಯು ಆವರಿಸಿ ಕೊಂಡಿತು. ಮಲಯಧ್ವಜರಾಜಕುಮಾರಿಯು ತನ್ನ ಮುಖವನ್ನು ತಗ್ಗಿಸಿಕೊಂಡು, ತನ್ನ ಪಾದಾಂಗುಷ್ಠವನ್ನು ನೋಡುತ್ತಾ ತನ್ನ ರಥದಲ್ಲಿ ಸುಮ್ಮನೆ ಚಿತ್ರದಂತೆ ಇದ್ದಳು.

೪೮-೫೨. ಆಗ ಸುಂದರೇಶ್ವರನು ತಟಾತಕಾದೇವಿಯ ಸಂಗಡ, ಎಲೈ ಕನ್ಯೆಯೆ, ನೀನು ಸುಂದರಾಂಗಿಯಾಗಿರುತ್ತೀಯೆ. ಇದರಿಂದ ನಿನ್ನನ್ನು ವರಿಸುವುದ ಕ್ಕಾಗಿ ನಾನು ಇಲ್ಲಿಗೆ ಬಂದಿದ್ದೇನೆ. ಅದಕ್ಕಾಗಿ ತಕ್ಕ ಕಾರ್ಯಗಳನ್ನು ನೀನು ಬೇಗನೆ ಸಿದ್ಧಪಡಿಸು.'' ಎಂದು ಹೇಳಿದನು. ದೇವನ ಮಾತನ್ನು ಕೇಳಿ ರಾಜಪುತ್ರಿಯಾದ ತಟಾತಕಾದೇವಿಯು, ಬುದ್ಧಿವಂತಿಕೆಯಿಂದ ನ್ಯಾಯವಾಗಿರುವ ಮಾತನಾಡಿದಳು. " ಎಲೈ ಪ್ರಭುವೆ, ಪಾಂಡ್ಯದೇಶದಲ್ಲಿ ಮಧುರಾನಗರವಿರುವುದು. ಮಲಯಧ್ವಜರಾಜನ

ಇತಿ ದೇವವಚಃ ಶ್ರುತ್ವಾ ರಾಜಪುತ್ರೀ ತಟಾತಕಾ ।
ಪ್ರಾಹ ಪ್ರಗಲ್ಭವಚನಾ ಯುಕ್ತಿಯುಕ್ತಂ ವಚಸ್ತದಾ ॥ ೫೦ ॥

ಪಾಂಡ್ಯದೇಶೇಽಸ್ತಿ ಮಧುರಾಪುರೀ ಪುರವರಾ ಪ್ರಭೋ ।
ತತ್ರ ತಿಷ್ಠತಿ ಮನ್ಮಾತಾ ಮಲಯಧ್ವಜಭೂಪತೇಃ ॥ ೫೧ ॥

ಮಹಿಳಾ ಮಹತಾ ಯುಕ್ತಾ ತಪಸಾ ದುಷ್ಕೃತೇಣ ಚ ।
ತಸ್ಯಾಃ ಕಾಂಚನಮಾಲಾಯಾಶ್ಚಾಜ್ಞಯಾ ಮತ್ಕರಗ್ರಹಃ ॥ ೫೨ ॥

ಕರ್ತವ್ಯೋ ಭವತಾ ಸ್ವಾಮಿನ್ನಿತಿ ಸಂಪ್ರಾರ್ಥಿತಸ್ತಯಾ ।
ಪ್ರಾಹ ನೀಪವನಾಧೀಶೋ ಮಲಯಧ್ವಜಕನ್ಯಕಾಂ ॥ ೫೩ ॥

ಇತೋಽಷ್ಟಮೇ ತು ದಿವಸೇ ಭವಿಷ್ಯತ್ಸೋಮವಾಸರೇ ।
ಅನುಜ್ಞಯಾ ಚ ತ್ವನ್ಮಾತುಸ್ತ್ವತ್ಪಾಣಿಗ್ರಹಣಂ ಮುದಾ ॥ ೫೪ ॥

ಕನ್ಯಕೇಽಹಂ ಕರಿಷ್ಯಾಮಿ ಗಚ್ಛ ತ್ವಮವಿಲಂಬಿತಂ ।
ಇತ್ಯುಕ್ತ್ವಾ ಪ್ರೇಷಯಿತ್ವಾ ತಾಂ ಕನ್ಯಕಾಂ ಸ್ವಪುರೀಂ ಪ್ರತಿ ॥ ೫೫ ॥

---

ಪತ್ನಿಯು ನನ್ನ ತಾಯಿಯಾಗಿರುವಳು. ಅವಳು ಬಹಳ ತಪಸ್ಸನ್ನು ಮಾಡುತ್ತಿರುವಳು. ನನ್ನ ತಾಯಿಯಾದ ಕಾಂಚನಮಾಲೆಯ ಆಜ್ಞೆಯಂತೆ ನನ್ನ ವಿವಾಹವು ನಡೆಯತಕ್ಕದ್ದಾಗಿರುವುದು. ಪ್ರಭುವಾದ ನೀನು ಆ ದೇಶಕ್ಕೆ ದಯವಿಟ್ಟು ಬಂದು ಅನುಗ್ರಹವನ್ನು ಮಾಡಬೇಕು.''ಎಂದು ಸುಂದರೇಶ್ವರನನ್ನು ಪ್ರಾರ್ಥಿಸಿದಳು.

೫೩–೫೫. ಸುಂದರೇಶ್ವರನು, " ಈ ದಿವಸಕ್ಕೆ ಎಂಟನೆಯ ದಿನವಾದ ಸೋಮವಾರದ ದಿವಸ ನಿನ್ನ ತಾಯಿಯ ಅನುಜ್ಞೆಯಂತೆ ನಿನ್ನನ್ನು ನಾನು ವಿವಾಹಮಾಡಿಕೊಳ್ಳುವೆನು. ಇನ್ನು ನಾನು ಹೋಗುತ್ತೇನೆ. ನೀನೂ ಬೇಗನೆ ನಿನ್ನ ಊರಿಗೆ ಹೋಗು.''ಎಂದು ಮಲಯಧ್ವಜರಾಜಪುತ್ರಿಯ ಸಂಗಡ ಹೇಳಿಕಳುಹಿಸಿ, ಆ ಕನ್ಯೆಯು ತನ್ನ ನಗರಕ್ಕೆ ಹೊರಟನಂತರ ತಾನು ಅದೃಶ್ಯನಾದನು.

ಸ್ವಯಮಂತರ್ದಧೇ ಶಂಭುರ್ಜೀವನ್ಮುಕ್ತಿಪುರೇಶ್ವರಃ ।
ವಿಕೃತೋರೋಜವಿಲಯಾತ್ಸದ್ಭಾವಾನ್ನಾಯಕಸ್ಯ ಚ ॥ ೫೬ ॥

ಅತ್ಯಂತಪ್ರೀತಹೃದಯಾ ಸಹಸಾ ಮಧುರಾಪುರೀಂ ।
ಸಂಪ್ರಾಪ್ಯ ಸರ್ವವೃತ್ತಾಂತಂ ಜನನ್ಯೈ ಪ್ರೋಚ್ಯ ಕನ್ಯಕಾ ॥ ೫೭ ॥

ತಯಾ ಸಂಪ್ರೀತಯಾ ಸಾರ್ಧಮಾಹೂಯ ಸಚಿವೋತ್ತಮಾನ್ ।
ಶಾಸನಂ ಪ್ರೇಷಯಾಮಾಸ ಸದ್ಯಸ್ಸರ್ವಮಹೀಭುಜಾಂ ॥ ೫೮ ॥

ಪುರೀಂ ಸರ್ವತ್ರ ವಿಸ್ತೀರ್ಣಾಂ ಲಾಂಗಲೀಭಿರ್ಮಹೋನ್ನತೈಃ ।
ಪೂಗೈಸ್ಸಾಲೈಃ ಕಾರಯಿತ್ವಾ ವಿತಾನಾದ್ಯೈರಲಂಕೃತಾಂ ॥ ೫೯ ॥

ಸಾ ತು ಸಂಪಾದಯಾಮಾಸ ಸರ್ವೋಪಕರಣಾನಿ ಚ ।
ಅಂಬರಾಣಿ ವಿಚಿತ್ರಾಣಿ ಭೂಷಣಾನ್ಯದ್ಭುತಾನಿ ಚ ॥ ೬೦ ॥

ಪ್ರದದುಃ ಕಲ್ಪವೃಕ್ಷಾಶ್ಚ ರತ್ನಾನಿ ವಿವಿಧಾನಿ ಚ ।
ಹಿರಣ್ಯಾದೀನಿ ಸರ್ವಾಣಿ ದೇವೇಂದ್ರೇಣ ಪ್ರಚೋದಿತಾಃ ॥ ೬೧ ॥

---

೫೬–೫೮. ತಟಾತಕಾದೇವಿಯು ತಾನು ಅವಿವಾಹಿತ ಕನ್ಯೆಯಾಗಿರುವುದರಿಂದ, ತನ್ನ ಶರೀರದಲ್ಲಿ ವಿಕಾರವಾದ ಮೂರನೆಯ ಸ್ತನವು ಅಡಗಿಹೋಗಿ ಪತಿಯು ನಿಶ್ಚಿತನಾದ ಕಾರಣ, ಬಹಳ ಸಂತೋಷವುಳ್ಳವಳಾಗಿ ಮಧುರಾಪುರಕ್ಕೆ ಬೇಗನೆ ಬಂದು ತನ್ನ ತಾಯಿಯು ಸಂಗಡ ನಡೆದಿರುವ ವೃತ್ತಾಂತವೆಲ್ಲವನ್ನೂ ಹೇಳಿದಳು. ಇದೆಲ್ಲವನ್ನೂ ಕೇಳಿ, ಅವಳ ತಾಯಿಯು ಬಹಳ ಸಂತೋಷಪಟ್ಟಳು. ಅನಂತರದಲ್ಲಿ ಆ ತಟಾತಕಾದೇವಿಯು ತನ್ನ ಮಂತ್ರಿಗಳೆಲ್ಲರನ್ನೂ ಕರೆಸಿ, ರಾಜರೆಲ್ಲರಿಗೂ ಮಧುರಾನಗರಕ್ಕೆ ಆ ಕ್ಷಣದಲ್ಲಿಯೇ ಬರುವಂತೆ ಅಪ್ಪಣೆಯನ್ನು ಕಳುಹಿಸಿದಳು.

೫೯–೬೫. ಆ ದೇವಿಯು ಎತ್ತರವಾದ ತೆಂಗಿನ ಮರ, ಅಡಿಕೆಯ ಮರ ಇವುಗಳನ್ನು ತರಿಸಿ ಅವುಗಳಿಂದ ದೊಡ್ಡದಾದ ಚಪ್ಪರಗಳನ್ನು ಹಾಕಿಸಿದಳು. ಆ ಚಪ್ಪರಗಳಿಗೆ ಮೇಲುಕಟ್ಟನ್ನು ಕಟ್ಟಿಸಿ, ಚೆನ್ನಾಗಿ ಅಲಂಕಾರ ಮಾಡಿಸಿದಳು. ವಿವಾಹಕ್ಕಾಗಿ ಬೇಕಾಗುವ ಸಾಮಾನುಗಳೆಲ್ಲವನ್ನೂ ಸಿದ್ಧಪಡಿಸಿದಳು. ಇಂದ್ರನ ಅನುಜ್ಞೆಯಂತೆ ಕಲ್ಪವೃಕ್ಷಗಳು ಅನೇಕ ವಿಧವಾದ ವಸ್ತ್ರಗಳನ್ನೂ ಆಶ್ಚರ್ಯಕರವಾದ ಆಭರಣಗಳನ್ನೂ ಇವಳಿಗೆ ಕೊಟ್ಟವು. ದೇವೇಂದ್ರನು ಈ ದೇವಿಗೆ ಕಾಣಿಕೆಯಾಗಿ ಒಪ್ಪಿಸಿದ್ದ

ಪಯೋದಧಿಘೃತಕ್ಷೌದ್ರಶರ್ಕರಾಪ್ರಮುಖಂ ಚ ಯತ್ ।
ರಸವಸ್ತು ಚ ತತ್ಸರ್ವಂ ಕಾಮಧೇನುಃ ಪ್ರಯಚ್ಛತಿ ॥ ೬೨ ॥

ಚಿಂತಾಮಣಿಶ್ಚ ರತ್ನಾನಿ ವಿವಿಧಾನಿ ಚ ವಸ್ತು ಚ ।
ಭೂಷಣಾದೀನಿ ಸರ್ವಾಣಿ ಗಂಧಮಾಲ್ಯಾನ್ಯನೇಕಶಃ ॥ ೬೩ ॥

ಪ್ರದದಾವಕ್ಷಯಾಣ್ಯಾಶು ದೇವೇಂದ್ರೇಣ ಪುರಾರ್ಪಿತಃ ।
ಏವಂ ಸಮಸ್ತಸಂಭಾರಂ ಕೃತ್ವಾ ಸಂಭೃತಮಾಶು ಚ ॥ ೬೪ ॥

ವರಾಗಮನಮಿಚ್ಛಂತೀ ಮುಹೂರ್ತಾಗಮನಂ ಚ ಸಾ ।
ಮಹಾರಾಜಕುಮಾರೀ ತಾಂ ಮಧುರಾಂ ತೋರಣಾದಿಭಿಃ ॥ ೬೫ ॥

ಪ್ರಪಾಭಿಃ ಪೂರ್ಣಕುಂಭೈಶ್ಚ ಪ್ರತಿದ್ವಾರಮಲಂಕೃತಾಂ ।
ಕಾರಯಿತ್ವಾ ಕದಾ ಯಾತಿ ವರವೇಷಧರೋ ಹರಃ ॥ ೬೬ ॥

ಇತಿ ಸಂಚಿತ್ಯ ಮನಸಾ ಮಾತ್ರಾ ಕಾಂಚನಮಾಲಯಾ ।
ಮಹದೈಶ್ವರ್ಯಸಂಯುಕ್ತೈರ್ಘಂಟಿಪ್ಯೈಃ ಪರಿಮಂಡಿತೇ ॥ ೬೭ ॥

---

ಚಿಂತಾಮಣಿ ರತ್ನವು, ರತ್ನಗಳೇ ಮೊದಲಾದ ಅನೇಕ ಪದಾರ್ಥಗಳನ್ನೂ ಗಂಧ, ಹೂವು,ಆಭರಣ ಇವೇ ಮುಂತಾದುವುಗಳನ್ನೂ ಅಕ್ಷಯವಾಗುವಂತೆ ಕೊಡುತ್ತಿತ್ತು. ಕಾಮಧೇನುವು ಹಾಲು,ಮೊಸರು,ಜೇನು ಮುಂತಾದ ರಸವಸ್ತುಗಳನ್ನು ಕೊಡುತ್ತಿತ್ತು. ಈ ಪ್ರಕಾರದಿಂದ ವಿವಾಹಕ್ಕೆ ಉಚಿತವಾದ ಪದಾರ್ಥಗಳೆಲ್ಲವನ್ನೂ ಬೇಗನೆ ಸಿದ್ಧಪಡಿಸಿ, ವರನು ಬರುವ ಕಾಲವನ್ನೂ, ವಿವಾಹ ಮುಹೂರ್ತವನ್ನೂ ನಿರೀಕ್ಷಿಸುತ್ತಿರುವ ರಾಜ ಕುಮಾರಿಯು. ಮಧುರಾನಗರವೆಲ್ಲವನ್ನೂ, ತೋರಣ, ಚಪ್ಪರಗಳು, ಪ್ರತಿಯೊಂದು ಬಾಗಿಲಿನ ಪ್ರದೇಶದಲ್ಲಿಯೂ ಪೂರ್ಣಕುಂಭಗಳು ಇವುಗಳಿಂದ ಅಲಂಕಾರ ಮಾಡಿಸಿದಳು.

೬೬–೭೦. ತಟಾತಕಾದೇವಿಯ ತಾಯಿಯಾದ ಕಾಂಚನಮಾಲೆಯು,ಪರಮೇಶ್ವರನು ವರನ ವೇಷದಿಂದ ಯಾವಾಗ ಬರುವನು, ಎಂದು ಯೋಚಿಸುತ್ತಿದ್ದಳು. ಕನ್ಯೆಯಾದ ತಟಾತಕಾದೇವಿಯು ಬಹಳ ಐಶ್ವರ್ಯದಿಂದ ಕೂಡಿರುವ, ಧ್ವಜಗಳು, ಬಾವುಟಗಳು, ಮೇಲುಕಟ್ಟನ್ನು ಹಾಕಿ, ಮುತ್ತುಗಳನ್ನು ಬಿಗಿದಿರುವ ಚಪ್ಪರಗಳು, ಇವುಗಳಿಂದ ಅಲಂಕೃತವಾದ ಮಂಗಳಾಸ್ಪದವಾದ ಕನ್ಯಕಾಂತಪುರದಲ್ಲಿ ಸುಖದಿಂದ

ಪತಾಕಾಭಿರ್ಧ್ವಜೈಶ್ಚಿತ್ರೈರ್ಮುಕ್ತಾದಾರುವಿತಾನಕೈಃ ।
ಸರ್ವತ್ರಾಲಂಕೃತೇ ಹರ್ಮ್ಯೇ ಮಹಿತೇ ಮಂಗಲಾಲಯೇ ॥ ೬೮ ॥

ಕನ್ಯಾಪುರೇಶ್ವರೀ ಕನ್ಯಾ ಸುಖೇನಾಸ್ತೇ ತಟಾತಕಾ ।
ಆಯಾತೇ ಸುಮುಹೂರ್ತೇ ತು ಕದಂಬವನನಾಯಕಃ ॥ ೬೯ ॥

ಕಲ್ಯಾಣೋಚಿತಸೌಂದರ್ಯಂ ವಪುಷಾ ಪರಿಗೃಹ್ಯ ಚ ।
ಸರ್ವೈರವಯವೈಸ್ತತ್ತದ್ಭೂಷಣೈರತಿ ಸುಂದರೈಃ ॥ ೭೦ ॥

ಅತ್ಯಂತ ಸುಂದರಾಕಾರೋ ಭಗವಾನ್ ಸೋಮಸುಂದರಃ ।
ಮಹಾವೃಷಭಮಾರುಹ್ಯ ರಜತಾದ್ರಿಮಿವಾಪರಂ ॥ ೭೧ ॥

ಮಕುಟೇನ ಚ ದಂಡೇನ ನವರತ್ನಮಯೇನ ಚ ।
ಸುಶೋಭಿತೇನ ಮಹತಾ ಕುಂಡೋದರಧೃತೇನ ಚ ॥ ೭೨ ॥

---

ಇರುವಾಗ ಕದಂಬವನಾಧಿಪನಾದ ಸುಂದರೇಶ್ವರನು, ಸರಿಯಾದ ಮುಹೂರ್ತವನ್ನು ನೋಡಿಕೊಂಡು, ಮದುವೆಯಾಗುವ ಸುಂದರನಾದ ಪುರುಷನಿಗೆ ತಕ್ಕ ವೇಷವನ್ನು ಧರಿಸಿದನು. ಅವನ ಸೌಂದರ್ಯಕ್ಕೆ ತಕ್ಕಹಾಗೆ ಅವಯುವಗಳೆಲ್ಲವೂ ಬಹಳ ಸೌಂದರ್ಯದಿಂದ ಇದ್ದವು. ಅವುಗಳಿಗೆಲ್ಲಕ್ಕೂ ಉಚಿತವಾದ ಆಭರಣಗಳನ್ನು ಧರಿಸಿದನು.

೭೧–೭೨. ಸುಂದರಾಕಾರವುಳ್ಳ ಸೋಮಸುಂದರೇಶ್ವರನು ಆಭರಣಗಳಿಂದ ಬಹಳ ಸುಂದರನಾಗಿ, ಬೆಳ್ಳಿಯ ಬೆಟ್ಟದಂತೆ ಇರುವ ದೊಡ್ಡ ವೃಷಭವನ್ನು ಏರಿಕೊಂಡು, ವಿವಾಹಕ್ಕಾಗಿ ಹೊರಟನು. ಆಗ ಅವನಿಗೆ ನವರತ್ನಖಚಿತವಾದ ದಂಡದಿಂದಲೂ, ಮೇಲಿನ ಶಿಖರದಿಂದಲೂ ಒಪ್ಪುತ್ತಿರುವ ಛತ್ರಿಯನ್ನು ಕುಂಡೋದರನೆಂಬುವನು ಹಿಡಿದುಕೊಂಡು ಬಂದನು. ಈ ದೇವನ ಮುಂದುಗಡೆಯಲ್ಲಿ ಒಂದೇ ಕಾಲದಲ್ಲಿ ಸಾವಿರ ಶಂಖಗಳನ್ನು ಊದಿ, ಸಾವಿರ ವಾದ್ಯಗಳನ್ನು ಅನೇಕ ವಿಧದಿಂದ ಬಾರಿಸುವ ಸಾವಿರ ಮುಖವುಳ್ಳ ಗಣನಾಯಕನು ಹೊರಟನು. ದೇವನ ಹಿಂದುಗಡೆಯಲ್ಲಿ ತ್ರಿಶೂಲಾಯುಧವನ್ನು ಹಿಡಿದುಕೊಂಡು ಶೂರನಾದ ಕುಂಭೋಧರನೆಂಬ ಗಣನಾಯಕನು ಬರುತ್ತಿದ್ದನು. ಹಾಲಾಸ್ಯೇಶ್ವರನು ವಿವಾಹಕ್ಕಾಗಿ, ಈ ಪ್ರಕಾರ

ಪಾಂಡರೇಣಾತಪತ್ರೇಣ ವಿಚಿತ್ರೇಣ ವಿರಾಜಿತಃ ।
ಪುರೋಗತೇನ ಮಹತಾ ಗಣಾನಾಂ ಪ್ರವರೇಣ ಚ ॥ ೭೩ ॥

ಸಹಸ್ರವದನೈಶ್ಶಂಖಾನ್ ಸಹಸ್ರಂ ಚೈಕಕಾಲತಃ ।
ನಾನಾವಾದ್ಯಧ್ವನಿಸಮಂ ಚಿತ್ರಂ ಸ್ವನಯತಾ ತದಾ ॥ ೭೪ ॥

ಸಹಸ್ರವದನೇನಾಪಿ ಗಣನಾಥೇನ ಸಂಯುತಃ ।
ಶೂಲಾಯುಧಂ ಸ್ವಕೀಯಂ ಚ ಧಾರಯಿತ್ವಾದರೇಣ ಚ ॥ ೭೫ ॥

ಕುಂಭೋದರೇಣ ಬಲಿನಾ ಪೃಷ್ಠಭಾಗಗತೇನ ಚ ।
ಆವಿರ್ಬಭೂವ ಹಾಲಾಸ್ಯೇ ಹಾಲಾಸ್ಯೇಶಃ ಪರಾತ್ಪರಃ ॥ ೭೬ ॥

ಶಂಕುಕರ್ಣಮಹಾಕರ್ಣಘಂಟಾಕರ್ಣಮುಖೈರ್ಗಣೈಃ ।
ಸ್ಥೂಲಕರ್ಣಾದಿಭಿರ್ಭಕ್ತೈಃ ಪಾರ್ಷದೈಃ ಪ್ರಮುಖೈಸ್ತಥಾ ॥ ೭೭ ॥

ಶಿವೇನ ಪ್ರೇಷಿತೈಃ ಜ್ಞಾತ್ವಾ ಶಿವಕಲ್ಯಾಣಮದ್ಭುತಂ ।
ಶ್ರಿಯಾ ಸಾರ್ಧಂ ಮಹಾವಿಷ್ಣುಃ ಸ್ವಕೀಯೈಶ್ಚ ಗಣೈರಪಿ ॥ ೭೮ ॥

---

ದಿಂದ ಪ್ರತ್ಯಕ್ಷವಾಗಿ ಹೊರಟಿರುವುದನ್ನು ನೋಡಿ, ಶಂಕುಕರ್ಣ, ಮಹಾಕರ್ಣ ಘಂಟಾಕರ್ಣ, ಸ್ಥೂಲಕರ್ಣ ಇವರೇ ಮೊದಲಾದ ಭಕ್ತರೂ, ಪರಿವಾರ ದೇವತೆಗಳೂ ಪ್ರಮಥ ಗಣಗಳೂ ಈ ದೇವನ ಜೊತೆಯಲ್ಲಿ ಹೊರಟುಬಂದರು.

೭೮–೮೧. ಪರಮೇಶ್ವರನು ಕಳುಹಿಸಿದವರಿಂದ ಶಿವನಿಗೆ ವಿವಾಹವೆಂದು ತಿಳಿದು ಆಶ್ಚರ್ಯಕರವಾದ ಈ ವಿವಾಹಕ್ಕಾಗಿ, ವಿಷ್ಣುವು ಲಕ್ಷ್ಮಿಯನ್ನು ತನ್ನ ಜೊತೆಯಲ್ಲಿ ಕರೆದುಕೊಂಡು ತನ್ನ ಪರಿವಾರದೊಡನೆ, ತನ್ನ ವಾಹನವಾದ ಗರುಡನನ್ನು ಹತ್ತಿಕೊಂಡು ಬೇಗ ಬಂದನು. ಚತುರ್ಮುಖನಾದ ಬ್ರಹ್ಮನು ಸರಸ್ವತಿಯನ್ನು ಕರೆದುಕೊಂಡು, ತನ್ನ ವಾಹನವಾದ ಹಂಸವನ್ನು ಏರಿಕೊಂಡು, ಶ್ರೇಷ್ಠರಾದ ಮುನಿಗಳೊಡನೆ ಬಂದನು. ಇಂದ್ರನೂ ಕೂಡ, ಶಚೀದೇವಿಯೊಡನೆ, ದೇವತೆಗಳು, ವಿದ್ಯಾಧರರು, ಅಪ್ಸರಸ್ತ್ರೀಯರು, ಲೋಕಪಾಲಕರು ಇವರನ್ನು ಕರೆದುಕೊಂಡು ಬಂದನು. ಮೇರುವೇ ಮೊದಲಾದ ಪರ್ವತಗಳೂ, ಸಪ್ತದ್ವೀಪಗಳೂ, ಸಾಗರಗಳೂ,

ಸಮಾಯಾತಿ ಮಹಾವೇಗಾದ್ವಾಹನೇನ ಗರುತ್ಮತಾ ।
ಪಿತಾಮಹೋಽಪಿ ದೇವ್ಯಾ ಚ ಸರಸ್ವತ್ಯಾ ಸಮನ್ವಿತಃ ॥ ೭೯ ॥

ದಿವ್ಯೈರ್ಮುನಿಗಣೈಃ ಸಾರ್ಧಂ ಹಂಸಯಾನೇನ ಚಾಯಯೌ ।
ದೇವೇಂದ್ರೋಽಪಿ ಶಚೀದೇವ್ಯಾ ದೇವವಿದ್ಯಾಧರಾದಿಭಿಃ ॥ ೮೦ ॥

ಅಪ್ಸರೋಭಿರ್ಲೋಕಪಾಲೈಸ್ಸದ್ಯಸ್ತತ್ರ ಸಮಾಯಯೌ ।
ಮೇರುಮುಖ್ಯಾಃ ಪರ್ವತಾಶ್ಚ ಸಪ್ತದ್ವೀಪಾಶ್ಚ ಸಾಗರಾಃ ॥ ೮೧ ॥

ನದ್ಯೋ ನದಾಶ್ಚ ವಿವಿಧಾಃ ಸ್ಥಾವರಾ ಜಂಗಮಾನಿ ಚ ।
ವಪೂಂಷಿ ಧೃತ್ವಾ ಚಾಯಾಂತಿ ಸೋಪಹಾರಾಶ್ಶಿವೋತ್ಸವೇ ॥ ೮೨ ॥

ದೇವಾಧಿನಾಂ ಕನ್ಯಕಾಶ್ಚ ರತ್ನೈಃ ಸಂಪೂರಿತಾನಿ ಚ ।
ಕನತ್ಕನಕಪಾತ್ರಾಣಿ ಗೃಹೀತ್ವಾ ಕರಪಲ್ಲವೈಃ ॥ ೮೩ ॥

ಶೋಭನಾನಿ ಚ ಗಾಯಂತ್ಯಸ್ತದಾ ತತ್ರ ಸಮಾಯಯುಃ ।
ತಟಾತಕಾಶಂಕರಯೋಃ ಕಲ್ಯಾಣಾರ್ಥಂ ಸಮಾಗತೈಃ ॥ ೮೪ ॥

---

ನದಿ, ನದಗಳೂ, ಅನೇಕವಾದ ಸ್ಥಿರ, ಚರ ಪದಾರ್ಥಗಳೂ, ಆಕಾರವನ್ನೂ ಧರಿಸಿ ಆದರದಿಂದ ಪರಮೇಶ್ವರನ ವಿವಾಹಕ್ಕಾಗಿ ಬಂದವು. ಇವರೆಲ್ಲರೂ ತಮತಮಗೆ ಉಚಿತವಾದ ಕಾಣಿಕೆಗಳನ್ನು ತಾವೆಲ್ಲರೂ ಬರುವಾಗ ತಮ್ಮ ಸಂಗಡಲೇ ತಂದಿದ್ದರು.

೮೩–೮೪. ದೇವಕನ್ಯೆಯರೇ ಮೊದಲಾದವರು ತಮ್ಮ ತಮ್ಮ ಸುಕುಮಾರವಾದ ಹಸ್ತಗಳಿಂದ, ರತ್ನಗಳಿಂದ ತುಂಬಿದ ಪ್ರಕಾಶಿಸುತ್ತಿರುವ ಚಿನ್ನದ ಪಾತ್ರೆಗಳನ್ನು ಹಿಡಿದುಕೊಂಡು. ಮಂಗಳಕರವಾಗಿರುವಂತೆ ಗಾನಮಾಡುತ್ತಾ ಆಗ ಅಲ್ಲಿ ಓಡಾಡುತ್ತಿದ್ದರು. ತಟಾತಕಾ ಮತ್ತು ಶಂಕರ ಇವರ ವಿವಾಹವು ನಡೆಯುವ ಕಾಲದಲ್ಲಿ, ವಿವಾಹಕ್ಕಾಗಿ ಬಂದಿದ್ದ ಮುನಿಗಳೂ ಮತ್ತು ದೇವತೆಗಳೂ ಇವರಿಂದಲೇ ಮಧುರಾ ನಗರವು ತುಂಬಿತ್ತು.

ಮುನಿವೃಂದೈರ್ದೇವವೃಂದೈರ್ನಿಬಿಡಾ ಮಧುರಾಪುರೀ ।
ತಟಾತಕಾಯಾ ರಾಜ್ಞ್ಯಶ್ಚ ಶಾಸನಾದ್ಬಹವೋ ನೃಪಾಃ ॥ ೮೫ ॥

ದೇಶಾಂತರಾತ್ಸಮಾಯಾತಾಸ್ತದಾ ಮಕುಟವರ್ಧನಾಃ ।
ಸ್ವೈರಮಾತ್ಯೈಶ್ಚ ಸಹಿತಾಸ್ಸದ್ಯಃ ಪ್ರಾಪ್ಯ ವೃಷಧ್ವಜಂ ॥ ೮೬ ॥

ಸರ್ವೇ ಪ್ರಣಮ್ಯ ಸಾಷ್ಟಾಂಗಂ ಸರ್ವೈರ್ದೇವೈಸ್ಸಮಾಗತೈಃ ।
ಮಧುರಾಯಾ ನಗರ್ಯಾಸ್ತು ಕಾರಯಿತ್ವಾ ಪ್ರದಕ್ಷಿಣಂ ॥ ೮೭ ॥

ತತಶ್ಚ ಭವನದ್ವಾರಮಾಗತೇ ವೃಷಭಧ್ವಜೇ ।
ವವರ್ಷುಃ ಪುಷ್ಪವೃಷ್ಟಿಂ ಚ ದೇವತಾಃ ಪರಯಾ ಮುದಾ ॥ ೮೮ ॥

ಅವರುಹ್ಯಾಥ ಭಗವಾನ್ವೃಷಭಾದ್ವೃಷಭಧ್ವಜಃ
ನಂದಿಹಸ್ತಂ ಸಮಾಲಂಬ್ಯ ವೇದಿಕಾಮಾರುರೋಹ ಸಃ ॥ ೮೯ ॥

ನವರತ್ನಾಲಂಕೃತಾಯಾಂ ಕಲ್ಪಿತಾಯಾಂ ಚ ಕರ್ಬುರೈಃ ।
ಪಟ್ಟವಸ್ತ್ರಾವೃತಾಯಾಂ ಚ ವೇದಿಕಾಯಾಂ ನಿವೇಶಿತೇ ॥ ೯೦ ॥

---

೮೫–೮೮. ತಟಾತಕಾದೇವಿಯ ಆಜ್ಞೆಯಿಂದ ವಿವಾಹಕ್ಕಾಗಿ ಬಂದಿರುವ ರಾಜರುಗಳೂ, ಅವರವರ ಮಂತ್ರಿಗಳೂ, ಮಧುರಾನಗರವಾಸಿಗಳಲ್ಲಿ ಮುಖ್ಯರಾದವರೂ, ಪಾಂಡ್ಯದೇಶದ ಮಂತ್ರಿಗಳೂ ಇವರೆಲ್ಲರೂ ಸೇರಿ ವರನಾದ (ವೃಷಧ್ವಜನ) ಪರಮೇಶ್ವರನನ್ನು ನೋಡಿ, ಎಲ್ಲರೂ ಸಾಷ್ಟಾಂಗ ನಮಸ್ಕಾರಮಾಡಿ, ಮದುವೆಗಾಗಿ ಬಂದಿರುವ ದೇವತೆಗಳೊಡನೆ, ಮಧುರಾನಗರವನ್ನು ಪ್ರದಕ್ಷಿಣೆ ಮಾಡಿಸಿ, ಅರಮನೆಯ ಹೆಬ್ಬಾಗಿಲಿಗೆ ಕರದುಕೊಂಡು ಬಂದರು. ಆಗ ದೇವತೆಗಳು ಬಹಳ ಹರ್ಷದಿಂದ ಪರಮೇಶ್ವರನಿಗೆ ಪುಷ್ಪವರ್ಷವನ್ನು ಮಾಡಿದರು. (ಹೂವಿನ ಮಳೆಯನ್ನು ಕರೆದರು.)

೮೯–೯೧. ಆಗ ಪೂಜ್ಯನಾದ ಪರಮೇಶ್ವರನು ವೃಷಭದಿಂದ ಇಳಿದು, ನಂದಿಕೇಶ್ವರನ ಹಸ್ತಲಾಘವದಿಂದ ಮಂಗಳವೇದಿಕೆಯನ್ನು ಹತ್ತಿದನು. ನವರತ್ನಗಳಿಂದ ಅಲಂಕೃತವಾದ ನೀರಾಜಿ ವಸ್ತ್ರಗಳನ್ನು ಹಾಸಿರುವ, ವೇದಿಕೆಯಲ್ಲಿ ಪರಮೇಶ್ವರನು ಪಾದಗಳನ್ನು ಇರಿಸಿದಕೂಡಲೆ, ದೇವತಾಸ್ತ್ರೀಯರು ಕಟಕನೂಪುರಗಳಿಂದ ಅಲಂಕೃತವಾದ, ಮಹಾ ತಪಸ್ವಿಗಳೂ ನೋಡಲಶಕ್ಯವಾದ, ಬಹಳ ಕೋಮಲವಾದ

ಕಟಕಾಭ್ಯಾಂ ನೂಪುರಾಭ್ಯಾಂ ಮಂಡಿತೇ ತ್ವತ್ಪದಾಂಬುಜೇ ।
ಮಹತಾ ತಪಸಾ ಚರ್ಯೈರಪ್ಯದೃಶ್ಯೇ ಚ ಕೋಮಲೇ ॥ ೯೧ ॥

ಸಂಕ್ಷಾಲ್ಯ ಹಿಮತೋಯೈಶ್ಚ ಸುಗಂಧೈರನುಲಿಪ್ಯ ಚ ।
ಸಂಪೂಜ್ಯ ನವರತ್ನೈಶ್ಚ ಸೌವರ್ಣೈಶ್ಚ ಪ್ರಸೂನಕೈಃ ॥ ೯೨ ॥

ನೀರಾಜನಾನಿ ಚಿತ್ರಾಣಿ ಸುರಸ್ತ್ರೀಭಿಃ ಕೃತಾನಿ ಚ ।
ತದಾ ಕಾಂಚನಮಾಲಾ ಸಾ ಕುಂಕುಮೋದಕಮಿಶ್ರಿತಾನ್ ॥ ೯೩ ॥

ಮುಕ್ತಾಫಲಾನನರ್ಘ್ಯಾಂಶ್ಚ ಗೃಹೀತ್ವಾಂಜಲಿನಾ ಮುದಾ ।
ದೇವದೇವಪದಾಂಭೋಜೇ ಸಮರ್ಪ್ಯಾಥ ಪ್ರಣಮ್ಯ ಚ ॥ ೯೪ ॥

ಇತಿ ಸಂಪ್ರಾರ್ಥಯಾಮಾಸ ಜೀವನ್ಮುಕ್ತಿಪುರೇಶ್ವರಂ ।
ಭಗವನ್ಮಮ ಪುತ್ರೀಂ ತಾಂ ವಿಧಿನಾಂ ಪ್ರತಿಗೃಹ್ಯ ಚ ॥ ೯೫ ॥

ತ್ವಂ ಚ ಪಾಂಡ್ಯೇಶ್ವರೋ ಭೂತ್ವಾ ರಕ್ಷ ಸರ್ವಾಂ ವಸುಂಧರಾಂ ।
ಮಂದಸ್ಮಿತೇನ ತದ್ವಾಕ್ಯಮಂಗೀಕೃತ್ಯ ದಯಾನಿಧಿಃ ॥ ೯೬ ॥

---

ಆ ಪಾದಗಳನ್ನು ಸುಖಕರವಾದ ನೀರಿನಿಂದ ತೊಳದು, ಸುಗಂಧದ್ರವ್ಯಗಳನ್ನು ಹಚ್ಚಿ, ನವರತ್ನಗಳೂ, ಮತ್ತು ಹೂವುಗಳೂ ಇವುಗಳಿಂದ ಪೂಜಿಸಿ (ನೀರಾಜನವನ್ನು ಮಾಡಿದರು) ಆರತಿಗಳನ್ನು ಬೆಳಗಿದರು.

೯೩-೯೬. ಆಗ ಕಾಂಚನಮಾಲೆಯು, ಕುಂಕುಮದ ನೀರಿನಿಂದ ಕೂಡಿರುವ (ಅನರ್ಘ್ಯವಾದ) ಬಹಳ ಬೆಲೆಬಾಳುವ ಮುತ್ತುಗಳನ್ನು ಬಗಸೆಯಲ್ಲಿ ಹಿಡಿದುಕೊಂಡು ಬಂದು, ಸಂತೋಷದಿಂದ ವರನಾದ ದೇವದೇವನ ಪಾದಕಮಲಗಳನ್ನು ಅವುಗಳಿಂದ ಪೂಜಿಸಿ, ನಮಸ್ಕರಿಸಿ " ಎಲೈ ದೇವದೇವನೆ, ನನ್ನ ಮಗಳನ್ನು ಶಾಸ್ತ್ರಕ್ರಮದಿಂದ ನೀನು ಮದುವೆಮಾಡಿಕೊಂಡು, ನೀನು ಪಾಂಡ್ಯದೇಶಕ್ಕೆ ರಾಜನಾಗಿ ಭೂಮಿಯೆಲ್ಲವನ್ನೂ ರಕ್ಷಿಸು " ಎಂದು ಪ್ರಾರ್ಥಿಸಿದಳು. ದಯಾನಿಧಿಯಾದ ಹಾಲಾಸ್ಯೇಶ್ವರನು ಮಂದಹಾಸದಿಂದ ಆ ಪ್ರಾರ್ಥನೆಯನ್ನು ಅಂಗೀಕರಿಸಿ ತನ್ನ ಎಡ ಬಲ ಭಾಗದಲ್ಲಿರುವ ಬ್ರಹ್ಮ, ವಿಷ್ಣುಗಳ ಕೈಯ್ಯನ್ನು ಹಿಡಿದುಕೊಂಡು ಅತಃಪುರಕ್ಕೆ ಪ್ರವೇಶಿಸಿದನು.

ವಿಧಿವಿಷ್ಣ್ವೋಃ ಪಂಚಶಾಖೌ ತದಾ ಪಾರ್ಶ್ವಗಯೋಃ ಸ್ಪೃಶನ್ ।
ಅಂತಃಪುರಂ ಪ್ರವಿಶ್ಯಾಥ ಮಹಿತೇ ಮಂಟಪೋತ್ತಮೇ ॥ ೯೭ ॥

ರತ್ನೈರ್ವಿಚಿತ್ರಿತೆಹೈಮೇ ಮಹಾಸಿಂಹಾಸನೇ ಶುಭೇ ।
ಉಪವಿಶ್ಯಾಪ್ಸರೋಭಿಸ್ತು ಕೃತಂ ನೃತ್ತಂ ವಿಲೋಕ್ಯ ಚ ॥ ೯೮ ॥

ಸಂವೃತೋ ದೇವವೃಂದೈಶ್ಚ ಸ್ತೂಯಮಾನೋ ಮುನೀಶ್ವರೈಃ ।
ನಾರದಾದ್ಯೈರ್ಗೀಯಮಾನೋ ಯದಾ ನೇತ್ರೋತ್ಸವೋ ಬಭೌ ॥ ೯೯ ॥

ತದಾ ದೇವೀ ಮಹಾಲಕ್ಷ್ಮೀಸ್ಸಮಲಂಕೃತ್ಯ ಕನ್ಯಕಾಂ ।
ಸ್ನಾಪಿತಾಂ ಚ ಪುರಾ ದೇವ್ಯಾ ಸರಸ್ವತ್ಯಾ ತಟಾತಕಾಂ ॥ ೧೦೦ ॥

ಪಾರ್ಶ್ವೇ ನಿವೇಶಯಾಮಾಸ ಕದಂಬವನವಾಸಿನಃ ।
ಬ್ರಹ್ಮಾ ಶಿವಾಜ್ಞಯಾ ಹೋಮಮಕರೋತ್ತಸ್ಯ ಸನ್ನಿಧೌ ॥ ೧೦೧ ॥

ಮಹಾವಿಷ್ಣುರ್ಮಹೀಪಾಲಾ ಮದಂಶಾ ಇತ್ಯುದೀರ್ಯ ಚ ।
ಸ್ವಯಮೇವಾಕರೋದ್ಧಾರಾಂ ಮಾತ್ರಾ ಕಾಂಚನಮಾಲಯಾ ॥ ೧೦೨ ॥

---

೯೭-೯೮. ಅನಂತರದಲ್ಲಿ ಶ್ರೇಷ್ಠವಾದ ಮಂಟಪದಲ್ಲಿರುವ ರತ್ನಖಚಿತವಾದ, ಸುವರ್ಣಮಯವಾದ ಮಂಗಳಕರವಾದ ಮಹಾಸಿಂಹಾಸನದಲ್ಲಿ ವರನು ಕುಳಿತುಕೊಂಡನು. ಆಗ ಅಪ್ಸರಸ್ತ್ರೀಯರು ನಾಟ್ಯವನ್ನು ಮಾಡುತ್ತಿದ್ದರು. ದೇವತೆಗಳೆಲ್ಲರೂ ಆ ದೇವನನ್ನು ಸುತ್ತುವರಿದಿದ್ದರು. ಮುನೀಶ್ವರರು ದೇವನನ್ನು ಸ್ತುತಿಸುತ್ತಿದ್ದರು. ನಾರದನೇ ಮೊದಲಾದವರು ಹೊಗಳುವ ನೋಟವು ಬಹಳ ಅಂದವಾಗಿತ್ತು.

೯೯-೧೦೫. ಸರಸ್ವತಿಯು ಮಂಗಳಸ್ನಾನಮಾಡಿಸಿದ್ದ ಕನ್ಯೆಗೆ ಮಹಾಲಕ್ಷ್ಮಿಯು ಅಲಂಕಾರ ಮಾಡಿ ದೇವದೇವನಾದ ಪರಮೇಶ್ವರನ ಪಾರ್ಶ್ವದಲ್ಲಿ (ತಟಾತಕಾದೇವಿಯನ್ನು) ಕೂರಿಸಿದಳು. ಬ್ರಹ್ಮನು ಹಾಲಾಸ್ಯೇಶ್ವರನ ಆಜ್ಞೆಯಿಂದ ಪುರೋಹಿತನಾಗಿ ಹೋಮಗಳನ್ನು ಮಾಡಿದನು. ರಾಜರೆಲ್ಲರೂ ನನ್ನ ಅಂಶದವರು ಎಂದು ಹೇಳಿ, ವಿಷ್ಣುವು ಕಾಂಚನಮಾಲೆಯಿಂದ ಧಾರಾಜಲವನ್ನು ತಾನೇ ಬಿಡಿಸಿ, ಧಾರೆ ಎರೆದನು. ಧಾರಾಮುಹೂರ್ತವು ಆದಕೂಡಲೆ, ಲೋಕಗಳೆಲ್ಲಕ್ಕೂ ಆದಿ ಮಂಗಳವಾದ ಮಾಂಗಲ್ಯವನ್ನು ಕಂಠಭೂಷಣಗಳಿಂದ ತುಂಬಿರುವ ತಟಾತಕಾದೇವಿಯ ಕಂಠದಲ್ಲಿ ಪರಮೇಶ್ವರನು ಕಟ್ಟಿದನು. ಆಗ ಮಹಾದೇವಿಯು ಹೂವಿ

ಉದಕೇನ ಪ್ರದತ್ತೇನ ಭೃಂಗಾರಾನ್ನಿಸ್ಸೃತೇನ ಚ ।
ಸಮಂತ್ರಂ ಚೈವ ಮಾಂಗಲ್ಯಂ ಸರ್ವಲೋಕಾದಿ ಮಂಗಳಂ ॥ ೧೦೩ ॥

ಬಬಂಧ ಬಂಧುರೇ ಕಂಠೇ ಕಂಠಭೂಷಾನಿರಂತರೇ ।
ತದಾ ರೇಜೇ ಮಹಾದೇವೀ ಲತಾಕುಸುಮಿತಾ ಯಥಾ ॥ ೧೦೪ ॥

ಲಾಜಹೋಮಂ ಚ ಕನ್ಯಾಯಾಃ ಪಾದಾರೋಪಣಮಶ್ಮನಿ ।
ಸಪ್ತಧಾ ಪದವೀಕ್ಷೇಪಂ ಸ್ವಯಮೇವಾಕರೋಚ್ಛಿವಃ ॥ ೧೦೫ ॥

ಅಥ ಕುಂಕುಮಪಂಕೇನ ಸಮಾಲಿಪ್ತೈಃ ಸಮೌಕ್ತಿಕೈಃ ।
ಮುನಿವೃಂದೈರ್ದೇವವೃಂದೈಃ ಕೃತೇಷ್ವಾಶೀರ್ವಚಸ್ಸು ಚ ॥ ೧೦೬ ॥

ಕಳತ್ರಕನ್ಯಾಪುತ್ರಾದಿಸಮನ್ವಿತಸುಪರ್ವಣಾಂ ।
ವಿಷ್ಣ್ವಾದೀನಾಂ ಚ ದಿವ್ಯಾನಿ ಸರ್ವಾಣ್ಯಾಭರಣಾನಿ ಚ ॥ ೧೦೭ ॥

ಅಂಬರಾಣ್ಯಪ್ಯನರ್ಘ್ಯಾಣಿ ದುರ್ಲಭಾನಿ ವರಾಣಿ ಚ ।
ದತ್ವಾ ಸಂಪ್ರೇಷಯಾಮಾಸ ಮಧುರಾಪುರನಾಯಕಃ ॥ ೧೦೮ ॥

---

ನಿಂದ ತುಂಬಿರುವ ಬಳ್ಳಿಯಂತೆ ಪ್ರಕಾಶಿಸುತ್ತಿದ್ದಳು. ಲಾಜಹೋಮ, ಅಶ್ಮಾರೋಪಣ, ಸಪ್ತಪದಿ, ಇದೆಲ್ಲವನ್ನೂ ಶಿವನು ಕ್ರಮವಾಗಿ ನೆರವೇರಿಸಿದನು. ಕುಂಕುಮಕೇಸರಿಯ ಗಂಧದಿಂದ ಕೂಡಿರುವ ಮುತ್ತುಗಳಿಂದ ದೇವತೆಗಳೂ ಋಷಿಗಳೂ ವಧೂವರರನ್ನು ಆಶೀರ್ವದಿಸಿದರು.

೧೦೬–೧೦೮. ಪುತ್ರಕಳತ್ರಾದಿ ಪರಿವಾರಸಹಿತರಾಗಿ ಬಂದಿರುವ ದೇವತೆಗಳಿಗೂ, ವಿಷ್ಣುವೇ ಮೊದಲಾದವರಿಗೂ, ದಿವ್ಯಾಭರಣಗಳು, ವಸ್ತ್ರಗಳು, ಬೆಲೆಬಾಳುವ ಅಪರೂಪವಾದ ವಸ್ತುಗಳು ಇವುಗಳನ್ನು ಮಧುರಾಪುರೇಶ್ವರನಾದ ಪರಮೇಶ್ವರನು ಉಡುಗೊರೆಯನ್ನು ಕೊಟ್ಟು ಕಳುಹಿಸಿದನು.

ದೇವಃ ಪಾಂಡ್ಯೇಶ್ವರೋ ಜಾತೋ ಲೋಕಾನಾಂ ಭಾಗಧೇಯತಃ ।
ತ್ಯಕ್ತ್ವಾ ಶಮ್ಯಾಕಮಾಲಾಂ ಚ ದದೌ ನೀಪಪ್ರಸೂನಕಂ ॥ ೧೦೯ ॥

ಕಪರ್ದಂ ಚ ಶಿರೋಧಾಯ ನವರತ್ನಕಿರೀಟವಾನ್ ।
ಚರ್ಮಾಂಬರಂ ಪರಿತ್ಯಜ್ಯ ಧತ್ತೇ ದಿವ್ಯಾಂಬರಂ ವರಂ ॥ ೧೧೦ ॥

ಭೂಷಣಾನ್ಯಪಿ ಸಂತ್ಯಜ್ಯ ಭುಜಂಗಮಕೃತಾನಿ ಚ ।
ಸ್ವರ್ಣರತ್ನವಿಚಿತ್ರಾಣಿ ದಧಾತ್ಯಾಭರಣಾನಿ ಚ ॥ ೧೧೧ ॥

ಆತ್ಮೀಯಮಂಗರಾಗಂ ಚ ಭಸ್ಮನಾ ಪರಿಕಲ್ಪಿತಂ ।
ವಿಹಾಯ ಗಂಧಪಂಕೇನಾಕರೋದ್ಗಾತ್ರಂ ಸುಶೋಭಿತಂ ॥ ೧೧೨ ॥

ವೃಷಭಾಂಕಧ್ವಜಪಟಂ ಪರಿತ್ಯಜ್ಯ ಸ್ವಲೀಲಯಾ ।
ಸ್ವಯಂ ಮೀನಧ್ವಜೋ ಭೂತ್ವಾ ಬಭೌ ಹಾಲಾಸ್ಯನಾಯಕಃ ॥ ೧೧೩ ॥

ಯಃ ಕಶ್ಚನಾಪಿ ಪುರುಷೋ ಭಾಗ್ಯಾಚ್ಚೇತ್ಪೃಥಿವೀಪತಿಃ ।
ಶಿವಲಿಂಗಾರ್ಚನಾದೇವ ಚಿರೇಣ ಸುಖಮೇಧತೇ ॥ ೧೧೪ ॥

---

೧೦೯–೧೧೨. ಜಗತ್ತುಗಳ ಪುಣ್ಯದಿಂದ ದೇವದೇವನಾದ ಪರಮೇಶ್ವರನು ಪಾಂಡ್ಯದೇಶದ ರಾಜನಾದನು. ಶಮ್ಯಾಕಮಾಲೆಯನ್ನು ಬಿಟ್ಟು ದೇವನು ಕದಂಬ ಹೂವಿನ ಹಾರವನ್ನು ಧರಿಸಿದನು. ಜಟಾಭಾರವನ್ನು ಅಡಗಿಸಿಕೊಂಡು ನವರತ್ನ ಖಚಿತವಾದ ಕಿರೀಟವನ್ನು ಧರಿಸಿದನು. ಆನೆಯ ಚರ್ಮವನ್ನು ಬಿಟ್ಟು ಉತ್ತಮ ವಾದ (ಪಟ್ಟೆಯವಸ್ತ್ರ) ವಸ್ತ್ರಗಳನ್ನು ಹೊದಿಯುತ್ತಿದ್ದನು. ನಾಗಭೂಷಣವನ್ನು ಬಿಟ್ಟು (ಚಿನ್ನ, ರತ್ನದ) ಚಿನ್ನದಿಂದ ಮಾಡಿದ ರತ್ನಾಭರಣಗಳನ್ನು ದೇವನು ಧರಿಸಿ ದನು. ಭಸ್ಮಾಂಗರಾಗವನ್ನು ಬಿಟ್ಟು ಸುಗಂಧದ್ರವ್ಯಗಳಿಂದ ತನ್ನ ಶರೀರವನ್ನು ಅನು ಲೇಪಿಸಿದನು.

೧೧೩–೧೧೪. ದೇವದೇವನಾದ ಪರಮೇಶ್ವರನು ತನ್ನ ವೃಷಭಧ್ವಜವನ್ನು ಬಿಟ್ಟು, ಮೀನಧ್ವಜನಾಗಿ ಪ್ರಕಾಶಿಸುತ್ತಿದ್ದನು. ಯಾವನಾದರೂ ಒಬ್ಬನು ಶಿವಲಿಂಗ ವನ್ನು ಪೂಜಿಸಿದ ಮಾತ್ರದಿಂದಲೇ, ನನ್ನ ಹಾಗೆ ರಾಜನಾಗುವನು. ಎಂದು ಪರಮೇಶ್ವರನು ಮನಸ್ಸಿನಲ್ಲಿ ನಿಶ್ಚಯಿಸಿದನು. ಪಾಂಡ್ಯದೇಶದ ದೊರೆಯಾದ ಸೋಮಸುಂದರೇಶ್ವರನು ಮಧುರಾನಗರದ ಮಧ್ಯಭಾಗದಲ್ಲಿ, ಬಹಳ ಪರಿಶುದ್ಧವಾದ

ಇತಿ ಸಂಚಿತ್ಯ ಮನಸಾ ಪಾಂಡ್ಯರಾಟ್ಸೋಮಸುಂದರಃ
ಮಧುರಾಯಾಂ ಮಧ್ಯಭಾಗೇ ಬ್ರಹ್ಮಸ್ಥಾನೇತಿಪಾವನೇ ॥ ೧೧೫ ॥

ಕರ್ಷಣಾದಿಪ್ರತಿಷ್ಠಾಂತಂ ಕಾರಯಿತ್ವಾ ವಿಧಾನತಃ ।
ಪಶ್ಚಿಮಾಭಿಮುಖಂ ಲಿಂಗಂ ಮಹಾಭೀಷ್ಟಪ್ರದೇಶ್ವರಂ ॥ ೧೧೬ ॥

ಪೂಜಯಾಮಾಸ ದೇವೇಶೋ ರಾಜವೇಷಧರೋ ಹರಃ ।
ತಟಾತಕಾಯಾಃ ಕಲ್ಯಾಣಂ ಯಸ್ಮಿಂಸ್ತು ದಿವಸೇ ಕೃತಂ ॥ ೧೧೭ ॥

ಮಹಾಭೀಷ್ಟಪ್ರದಂ ಶಂಭುಸ್ತದ್ದಿನೇ ಸುಪ್ರತಿಷ್ಠಿತಃ ।
ಆತ್ಮೀಯಮೂಲಲಿಂಗಸ್ಯ ಶ್ರೀಹಾಲಾಸ್ಯೇಶ್ವರಸ್ಯ ಚ ॥ ೧೧೮ ॥

ನಿತ್ಯಪೂಜಾಂ ಚ ಮಹತೀಂ ಮಹೋತ್ಸವಮುಖಾನಿ ಚ ।
ನೈಮಿತ್ತಿಕಾನಿ ಕರ್ಮಾಣಿ ಭವಂತಿ ಚ ಯಥಾ ತಥಾ ॥ ೧೧೯ ॥

ಸುಪ್ರತಿಷ್ಠಿತಲಿಂಗಸ್ಯ ಸದ್ಯೋಽಭೀಷ್ಟಪ್ರದಾಯಿನಃ ।
ಕಾರಯಾಮಾಸ ಸರ್ವಾಣಿ ಮಹಾವಿಭವವಿಸ್ತರೈಃ ॥ ೧೨೦ ॥

---

ಬ್ರಹ್ಮಸ್ಥಾನದಲ್ಲಿ ಕರ್ಷಣಾದಿ ಕ್ರಿಯೆಗಳಿಂದ ಭೂಶುದ್ಧಿಯನ್ನು ಮಾಡಿಸಿ, ಶಾಸ್ತ್ರ ಕ್ರಮದಿಂದ ಪಶ್ಚಿಮಾಭಿಮುಖವಾಗಿರುವ ಹಾಗೆ ಮಹಾಭೀಷ್ಟಪ್ರದೇಶ್ವರನೆಂಬ ಹೆಸರಿನ ಶಿವಲಿಂಗವನ್ನು ಪ್ರತಿಷ್ಠೆ ಮಾಡಿದನು.

೧೧೬–೧೧೯. ಹಾಲಾಸ್ಯೇಶ್ವರನು ರಾಜನ ವೇಷವನ್ನು ಧರಿಸಿ ಪ್ರತಿದಿನವೂ ಆ ಶಿವಲಿಂಗವನ್ನು ಪೂಜಿಸುತ್ತಿದ್ದನು. ತಟಾತಕಾದೇವಿಯನ್ನು ವಿವಾಹಮಾಡಿ ಕೊಂಡ ದಿನದಲ್ಲಿಯೇ ಮಹಾಭೀಷ್ಟಪ್ರದಲಿಂಗವನ್ನು ಪ್ರತಿಷ್ಠೆಮಾಡಿದನು. ಅವನು ಮೂಲಲಿಂಗವಾದ ಹಾಲಾಸ್ಯೇಶ್ವರನಿಗೆ ಮಹೋತ್ಸವವೇ ಮೊದಲಾದ ಬಹಳ ವಿಧ ವಾದಪೂಜೆಯನ್ನೂ ಮತ್ತು ಆಯಾಯ ದಿನಗಳಲ್ಲಿ ನಡೆಯಬೇಕಾದ ನೈಮಿತ್ತಿಕ ಪೂಜೆ ಗಳನ್ನೂ ಬಹಳ ವೈಭವದಿಂದ ಮಾಡಿಸುತ್ತಿದ್ದನು. ತಾನು ಪ್ರತಿಷ್ಠೆಮಾಡಿದ ಶಿವ ಲಿಂಗದ ವಿಷಯದಲ್ಲಿಯೂ ಇದೇ ರೀತಿಯಿಂದಲೇ ಪೂಜಾದಿಗಳನ್ನು ನಡೆಸುತ್ತಿದ್ದನು.

೧೨೦–೧೨೧. ದೇವತೆಗಳೇ ಮೊದಲಾದವರು ಪ್ರತಿಷ್ಠೆಮಾಡಿದ ಶಿವಲಿಂಗದ ಮಹಿಮೆಯು ಪ್ರಾಯಿಕವಾಗಿ ಹೆಚ್ಚಾಗಿರುವುದು. ಶಿವನು ತಾನೇ ಪ್ರತಿಷ್ಠೆಮಾಡಿದ ಶಿವಲಿಂಗದ ಮಹಿಮೆಯನ್ನು ಇಷ್ಟು, ಎಂದು ಹೇಳಲು ಸಾಧ್ಯವಿಲ್ಲ. ಅದನ್ನು

ದೇವಾದ್ಯೈಃ ಸ್ಥಾಪಿತಾನಾಂ ಚ ಲಿಂಗಾನಾಂ ಮಹಿಮಾ ಮಹಾನ್ ।
ಶಿವಸ್ಥಾಪಿತಲಿಂಗಸ್ಯ ಮಹಿಮೋತ್ಕರ್ಷಮುದ್ಭೃತಂ ॥ ೧೨೧ ॥

ಕೋ ವಾ ವರ್ಣಯಿತುಂ ಶಕ್ತಶ್ಶಕ್ತಸ್ತು ಶಿವ ಏವ ಸಃ ।
ಮಹಾಭೀಷ್ಟಪ್ರದೇಶಸ್ಯ ಮಹತೀಂ ಮಹಿಮಾಮಿತಿ ॥ ೧೨೨ ॥

ಬುಧ್ವಾ ನಿತ್ಯಂ ಸೇವತೇ ಯಸ್ಸರ್ವಾಭೀಷ್ಟಮವಾಪ್ನುಯಾತ್ ।
ಲೀಲಾ ತಟಾತಕಾಯಾಶ್ಚ ಕಲ್ಯಾಣಾಖ್ಯಾ ತು ಪಂಚಮೀ ॥ ೧೨೩ ॥

ಮಯಾದ್ಯ ಸಮ್ಯಕ್ಕಥಿತಾ ಸರ್ವಸಂಪತ್ಕರೀ ಶುಭಾ ।
ಸಕೃಚ್ಛ್ರವಣಮಾತ್ರೇಣ ಸರ್ವಕಲ್ಯಾಣಕಾರಿಣೀ ॥ ೧೨೪ ॥
ಸರ್ವೋಪದ್ರವಸಂಹರ್ತ್ರೀ ಶ್ರೋತೄಣಾಂ ಪಠತಾಂ ಸದಾ ।

ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ತಟಾತಕಾಕಲ್ಯಾಣಂ ನಾಮ
ನವಮೋಽಧ್ಯಾಯಃ

---

ಶಿವನೇ ಹೇಳತಕ್ಕದ್ದೇ ಹೊರತು ಇತರರು ಹೇಳಲು ಸಾಧ್ಯವಿಲ್ಲವು. ಮಹಾಭೀಷ್ಟಪ್ರದಲಿಂಗದ ಮಹಿಮೆಯು ಹೀಗೆ ಇರುವುದು ಎಂದು ತಿಳಿದು ಪೂಜಿಸುವವನ ಇಷ್ಟಗಳೆಲ್ಲವೂ ನೆರವೇರುವವು.

೧೨೨-೧೨೪. ಸಮಸ್ತ ವಿಧವಾದ ಸಂಪತ್ತುಗಳನ್ನು ಕೊಡುವ, ಮಂಗಳಕರವಾದ ತಟಾತಕಾ ಕಲ್ಯಾಣವೆಂಬ ಪರಮೇಶ್ವರನ ಐದನೆಯ ಲೀಲೆಯನ್ನು ಈ ವಿಧವಾಗಿ ನಿಮಗೆ ತಿಳಿಸಿರುವೆನು. ಇದನ್ನು ಕೇಳಿದವರಿಗೆ ಎಲ್ಲಾ ವಿಧವಾದ ಮಂಗಳಗಳೂ ಆಗುವವು. ವಿಪತ್ತುಗಳು ನಾಶವಾಗುವವು.

ಸಂಪದ್ಯುಕ್ತವಾದ ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯ
ಮಾಹಾತ್ಮ್ಯದಲ್ಲಿ ತಟಾತಕಾ ಕಲ್ಯಾಣವೆಂದು ಹೆಸರುಳ್ಳ
ಒಂಭತ್ತನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ

## ದಶಮೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ಅನಾದಿಭೂತಮಾತ್ಮೀಯಂ ಪರಮಾನಂದತಾಂಡವಂ ।
ಪಶ್ಯತಾಂ ಸರ್ವಜಂತೂನಾಂ ನಿದಾನಂ ಭೋಗಮೋಕ್ಷಯೋಃ ॥ ೧ ॥

ಹಾಲಾಸ್ಯನಾಥೋ ಭಗವಾನ್ ಸಚ್ಚಿದಾನಂದವಿಗ್ರಹಃ ।
ಪತಂಜಲಿವ್ಯಾಘ್ರಪಾದಪ್ರಮುಖಾನಾಂ ಮಹಾತ್ಮನಾಂ ॥ ೨ ॥

ಭಕ್ತಾನಾಂ ದರ್ಶಯಾಮಾಸ ಲೀಲಯಾ ಚಿತ್ರಯಾ ಯಯಾ ।
ತಾಮಿದಾನೀಮಹಂ ವಕ್ಷ್ಯೇ ಶೃಣುಧ್ವಂ ಮುನಿಪುಂಗವಾಃ ॥ ೩ ॥

---

### ಹತ್ತನೆಯ ಅಧ್ಯಾಯವು.

೧-೩. ಅಗಸ್ತ್ಯಋಷಿಯು ಹೇಳಿದನು :—ಸಚ್ಚಿದಾನಂದ ರೂಪಿನಿಂದ ಇರುವ ಪೂಜ್ಯನಾದ ಪರಮೇಶ್ವರನು, ಆದಿಯಿಲ್ಲದಿರುವ, ತನ್ನ ಆನಂದತಾಂಡವ ನೃತ್ಯವನ್ನು ಪತಂಜಲಿ, ವ್ಯಾಘ್ರಪಾದನೇ ಮೊದಲಾದ ಋಷಿಗಳಿಗೆ ತೋರಿಸಿದನು. ಈ ತಾಂಡವ ವನ್ನು ನೋಡಿದವರಿಗೆ ಭಕ್ತಿಮುಕ್ತಿಗಳು ಸುಲಭದಿಂದ ವಶವಾಗುವುವು. ಈ ಲೀಲೆ ಯನ್ನು ನಾನು ಈಗ ವಿಸ್ತರಿಸಿ ಹೇಳುವೆನು. ಎಲೈ ಮುನಿಶ್ರೇಷ್ಠರೇ ನೀವೆಲ್ಲರೂ ಕೇಳಿರಿ.

ಕಲ್ಯಾಣಾರ್ಥಂ ಸಮಾಯಾತಾ ಭೂಪಾ ಮುಕುಟವರ್ಧನಾಃ ।
ಸೋಮವಂಶಪ್ರಸೂತಾಶ್ಚ ಸೂರ್ಯವಂಶಸಮುದ್ಭವಾಃ ॥ ೪ ॥

ಮುನೀಶ್ವರಾಶ್ಚ ರಾಜೇಂದ್ರಾಶ್ಚಾನ್ಯೇ ಯೇ ಚ ಬುಭುಕ್ಷಿತಾಃ
ತೇ ಸರ್ವೇ ತಸ್ಥಿರೇ ತತ್ರ ಮಂಟಪೇಷು ಯಥಾಸುಖಂ ॥ ೫ ॥

ಮಧ್ಯಂ ಗತೇ ಸಹಸ್ರಾಂಶೌ ಸುಂದರೇಶಮಹೀಭುಜಃ ।
ಅನುಜ್ಞಯಾ ನರೇಂದ್ರಾಸ್ತೇ ಕರ್ತುಂ ಮಾಧ್ಯಾಹ್ನಿಕಕ್ರಿಯಾಂ ॥ ೬ ॥

ಹೇಮಪದ್ಮಾಕರಂ ತೀರ್ಥಂ ಪ್ರಾಪ್ಯ ಸಂಸ್ನಾಯ ಸಾದರಂ ।
ಸ್ನಾನಂ ಸಮಂತ್ರಮಾಗ್ನೇಯಂ ತತಃ ಕೃತ್ವಾ ವಿಧಾನತಃ ॥ ೭ ॥

ತರ್ಪಯಿತ್ವಾ ದೇವತಾದೀನ್ಕುಶಾಕ್ಷತತಿಲೋದಕೈಃ ।
ತೀರಸ್ಥಂ ವಿಘ್ನರಾಜಂ ಚ ನತ್ವಾ ಸಿದ್ಧಿವಿನಾಯಕಂ ॥ ೮ ॥

ದೇವೀಂ ನತ್ವಾ ಸುಮೀನಾಕ್ಷೀಂ ಹಾಲಾಸ್ಯೇಶಂ ಪ್ರಣಮ್ಯ ಚ ।
ತತೋ ಭೂಪಾಲದೇವೇಶಂ ಪ್ರಣಿಪತ್ಯ ತದಾಜ್ಞಯಾ ॥ ೯ ॥

---

೪–೮. ತಟಾತಕಾದೇವಿ ಮತ್ತು ಸೋಮಸುಂದರೇಶ್ವರರ ವಿವಾಹಕ್ಕಾಗಿ ಬಂದಿದ್ದ ಚಂದ್ರವಂಶದ ರಾಜರೂ, ಸೂರ್ಯವಂಶದ ರಾಜರೂ, ಮುನೀಶ್ವರರೂ, ಚಕ್ರವರ್ತಿಗಳೂ ಇತರರು ಎಲ್ಲರೂ ಮಧ್ಯಾಹ್ನಕಾಲದಲ್ಲಿ ಸುಂದರೇಶ್ವರನ ಅನುಜ್ಞೆಯನ್ನು ಹೊಂದಿ, ಹೇಮಪದ್ಮಾಕರ ತೀರ್ಥಕ್ಕೆ ಹೋದರು. ಅಲ್ಲಿ ಸಮಂತ್ರಕವಾಗಿ ಶಾಸ್ತ್ರಕರ್ಮವನ್ನು ಅನುಸರಿಸಿ ಸ್ನಾನವನ್ನು ಮಾಡಿದರು. ತಮ್ಮ ತಮ್ಮ ಆಹ್ನಿಕ ಕೆಲಸಗಳೆಲ್ಲವನ್ನೂ ಮುಗಿಸಿಕೊಂಡು, ಆ ತೀರ್ಥದ ದಡದಲ್ಲಿರುವ ವಿಘ್ನೇಶ್ವರನಿಗೆ ನಮಸ್ಕಾರಮಾಡಿದರು.

೯–೧೧. ಅನಂತರದಲ್ಲಿ ಅವರು ಮೀನಾಕ್ಷೀದೇವಿ, ಹಾಲಾಸ್ಯೇಶ್ವರ, ಇವರುಗಳ ದರ್ಶನವನ್ನು ಮಾಡಿ, ಅವರಿಗೆ ನಮಸ್ಕರಿಸಿದರು. ಆಮೇಲೆ ಸುಂದರೇಶ್ವರ ರಾಜನಿಗೆ ವಂದನೆಮಾಡಿ ಅವನ ಅಪ್ಪಣೆಯನ್ನು ಪಡೆದು, ಭೋಜನಶಾಲೆಗೆ ಹೊರಟರು.

ಸರ್ವೇಷು ತೇಷು ಗಚ್ಛತ್ಸು ಭೋಕ್ತುಂ ಭೋಜನಮುಂಟಪಂ ।
ಪತಂಜಲಿರಿತಿಖ್ಯಾತಃ ಪರಮೇಶ್ವರಭಕ್ತಿಮಾನ್ ॥ ೧೦ ॥

ವ್ಯಾಘ್ರಪಾದೇನ ಮಿತ್ರೇಣ ತದಾ ಸ್ವೇಷ್ಟಂ ವ್ಯಜಿಜ್ಞಪತ್ ।
ಪರಾತ್ಪರಪರೇಶಾನ ಪರಮೇಶ್ವರ ಭಾಸ್ಕರ ॥ ೧೧ ॥

ಪದ್ಮಯೋನಿಶಿರಶ್ಛೇದಪರ್ಯಾಪ್ತಕರಪಂಕಜ ।
ಭಕ್ತಾಭಕ್ತಪರಿಚ್ಛೇದರಹಿತಾಹ್ವಯಪದ್ಧತೇ ॥ ೧೨ ॥

ಚರಾಚರಾಣಾಂ ಭೂತಾನಾಂ ಸೃಷ್ಟಿಸ್ಥಿತ್ಯಂತಕಾರಣ ।
ಕಾಂಚನೇ ಸದಸಿ ಖ್ಯಾತಂ ತೇನ ತಾಂಡವಮನ್ವಹಂ ॥ ೧೩ ॥

ದೃಷ್ಟ್ವಾಹಂ ನಿಯಮೇನೈವ ಭೋಜನಂ ಚ ಕರೋಮ್ಯತಃ ।
ಕಿಂ ಕರ್ತವ್ಯಂ ಮಯೇದಾನೀಮೇವಮುಕ್ತೇ ಪತಂಜಲೌ ॥ ೧೪ ॥

---

ಅವರೆಲ್ಲರೂ ಹೋಗುತ್ತಿರುವಾಗ ಪತಂಜಲಿ ಎಂಬ ಶಿವಭಕ್ತನಾದ ಋಷಿಯು ತನ್ನ ಮಿತ್ರನಾದ ವ್ಯಾಘ್ರಪಾದನನ್ನು ಕರೆದುಕೊಂಡು ಬರುತ್ತಾ, ದಾರಿಯಲ್ಲಿ ಸುಂದರೇಶ್ವರನ ಸನ್ನಿಧಿಯಲ್ಲಿ ವಿಜ್ಞಾಪನೆಯನ್ನು ಮಾಡಿದನು.

೧೨-೧೪. ಎಲೈ ಪರಮೇಶ್ವರನೇ, ನೀನು ಪರಭಾವದಲ್ಲಿರುವವರಿಗೆಲ್ಲರಿಗೂ ಒಡೆಯನಾಗಿರುತ್ತೀಯೆ. ಸೂರ್ಯನಂತೆ ಇರುತ್ತೀಯೆ. ಬ್ರಹ್ಮನ ಶಿರಸ್ಸನ್ನು ನಿನ್ನ ಹಸ್ತಕಮಲದಿಂದ ನಾಶಗೊಳಿಸಿರುತ್ತೀಯೆ. ಇದರಿಂದ ನಿನ್ನ ಹತ್ತಿರದಲ್ಲಿ ಸುಳ್ಳನ್ನು ಹೇಳಲು ಅವಕಾಶವಿಲ್ಲವು. ಗರ್ವಪಡಲು ಅವಕಾಶವಿಲ್ಲವು. ನೀನು ಭಕ್ತರು, ಭಕ್ತರಲ್ಲದವರು ಎಂಬ ಭೇದವನ್ನು ಇರಿಸಿಕೊಂಡು ಅನುಗ್ರಹಮಾಡತಕ್ಕ ಪದ್ಧತಿಯುಳ್ಳವನಾಗಿ ಇಲ್ಲ. ಸ್ಥಿರ, ಚರರೂಪದಿಂದ ಇರುವ ಪ್ರಾಣಿಗಳನ್ನು ಸೃಷ್ಟಿ, ಸ್ಥಿತಿ ಲಯ ಮಾಡುವ (ದಕ್ಕೂ ಕಾರಣನಾಗಿರುವೆ) ವವರಿಗೂ ಕಾರಣಪುರುಷನಾಗಿರುತ್ತೀಯೆ. ನೀನು ಸ್ವರ್ಣಮಯವಾದ ಸಭೆಯಲ್ಲಿ ಪ್ರತಿದಿನವೂ ಆಚರಿಸುವ ತಾಂಡವವನ್ನು ನೋಡಿದನಂತರ ನಾನು ಭೋಜನವನ್ನು ಮಾಡುವ ನಿಯಮವುಳ್ಳವನಾಗಿರುವೆನು. ಆದ್ದರಿಂದ ಈಗ ನಾನು ಭೋಜನಮಾಡುವ ವಿಷಯದಲ್ಲಿ ಹೇಗೆ ಮಾಡಲಿ ಎಂದು ಪತಂಜಲಿ ಋಷಿಯು ದೇವದೇವನಾದ ಈಗ ಪಾಂಡ್ಯರಾಜನಾಗಿರುವ ಸುಂದರೇಶ್ವರನನ್ನು ಪ್ರಶ್ನೆಮಾಡಿದನು.

ಪ್ರಾಹ ಗಂಭೀರಯಾ ವಾಚಾ ಹಾಲಾಸ್ಯೇಶ್ವರ ಈಶ್ವರಃ ।
ಇದಂ ಮದೀಯಂ ಹಾಲಾಸ್ಯಕ್ಷೇತ್ರಮತ್ಯಂತಪಾವನಂ ॥ ೧೫ ॥

ವಿಶ್ವರೂಪವಿಧಾತುಶ್ಚ ದ್ವಾದಶಾಂತಮುದೀರಿತಂ ।
ಚಿದಂಬರಂ ಹೃದಾಕಾಶಂ ವಿಶ್ವರೂಪಸ್ಯ ವೇಧಸಃ ॥ ೧೬ ॥

ತತಶ್ಚಿದಂಬರಾನ್ಮುಖ್ಯಂ ವಿದ್ಧಿ ಕ್ಷೇತ್ರಮಿದಂ ಮುನೇ ।

ಅತ್ರ ನೃತ್ತಮಪಿ ಮುಖ್ಯಮದ್ಭುತಂ ।
ಭುಕ್ತಿಮುಕ್ತಿಕರಮಿಷ್ಟಸಿದ್ಧಿದಂ ।
ದ್ವಾದಶಾಂತಕಕದಂಬಕಾನನೇ ।
ದರ್ಶಯಾಮಿ ಸಹಸಾ ವಿಲೋಕಯ ॥ ೧೭ ॥

ಏವಮುಕ್ತೇ ಜಗನ್ನಾಥೇ ಶ್ರೀಮದ್ಧಾಲಾಸ್ಯನಾಯಕೇ ।
ಪತಂಜಲಿರ್ಭಾಷ್ಯಕರ್ತಾ ಪ್ರಾಹ ತಂ ದೇವನಾಯಕಂ ॥ ೧೮ ॥

॥ ಪತಂಜಲಿರುವಾಚ ॥

ಜೀವನ್ಮುಕ್ತಿಪುರೀನಾಥ ಕರುಣಾಕರ ಶಂಕರ ।
ಹಾಲಾಸ್ಯಂ ದ್ವಾದಶಾಂತಸ್ಥಂ ವಿರಾಡ್ರೂಪಪ್ರಜಾಪತೇಃ ॥ ೧೯ ॥

---

೧೫–೧೭. ಹಾಲಾಸ್ಯೇಶ್ವರನು ಪತಂಜಲಿಯ ಮಾತನ್ನು ಕೇಳಿ ಗಂಭೀರವಾದ ಮಾತಿನ ಶೈಲಿಯಿಂದ, “ಈ ಹಾಲಾಸ್ಯಕ್ಷೇತ್ರವು ನನ್ನದು. ಬಹಳ ಪವಿತ್ರವಾದದ್ದು. ಪ್ರಪಂಚಾತ್ಮಕವಾಗಿರುವ ವಿರಾಡ್ರೂಪದಲ್ಲಿ ಇದು ದ್ವಾದಶಾಂತವೆಂದು ಹೆಸರನ್ನು ಹೊಂದಿರುವುದು. ಚಿದಂಬರಕ್ಷೇತ್ರವು ವಿರಾಡ್ರೂಪದಲ್ಲಿ ಹೃದಯಾಕಾಶವಾಗಿರುವುದು. ಚಿದಂಬರ ಕ್ಷೇತ್ರಕ್ಕಿಂತಲೂ ಈ ಕ್ಷೇತ್ರವು ಮುಖ್ಯವಾದದ್ದು. ಈ ಕ್ಷೇತ್ರದಲ್ಲಿ ನನ್ನ ತಾಂಡವವು ಅತ್ಯದ್ಭುತವಾದದ್ದು. ಅದರ ದರ್ಶನದಿಂದ ಭುಕ್ತಿಮುಕ್ತಿಗಳು ಉಂಟಾಗುವುವು. ಮತ್ತು ಇಷ್ಟಸಿದ್ಧಿಗಳೆಲ್ಲವೂ ತಾಂಡವ ದರ್ಶನದಿಂದ ನೆರವೇರುವುವು. ನಿನ್ನ ಇಷ್ಟದಂತೆ ತಾಂಡವವನ್ನು ನಿನಗೆ ತೋರಿಸುವೆನು. ನೀನು ಬೇಗನೆ ನೋಡು,” ಎಂದು ಹೇಳಿದನು.

೧೮–೨೦. ಜಗತ್ಪತಿಯಾದ ಹಾಲಾಸ್ಯೇಶ್ವರನು ಹೇಳಿದ ಮಾತನ್ನು ಕೇಳಿ ವ್ಯಾಕರಣ ಸೂತ್ರಗಳಿಗೆ ಭಾಷ್ಯವನ್ನು ಮಾಡಿರುವ ಪತಂಜಲಿಋಷಿಯು ಆ ದೇವದೇವನ ಸಂಗಡ ಪುನಃ ಮಾತನಾಡಿದನು. ಪತಂಜಲಿಯು ಹೇಳಿದನು :—ಜೀವನ್ಮುಕ್ತಿಪುರಾಧಿಪನೇ, ದಯಾಶಾಲಿಯಾದ ಶಂಕರನೇ, ಬ್ರಹ್ಮನ ವಿರಾಡ್ರೂಪದಲ್ಲಿ ಈ

ಹೃತ್ಪುಂಡರೀಕಂ ಸಂಪ್ರೋಕ್ತಂ ಪುಂಡರೀಪುರಂ ತ್ವಯಾ ।
ಅನ್ಯಾನಿ ಯಾನಿ ಮುಖ್ಯಾನಿ ಕೈಲಾಸಪ್ರಮುಖಾನಿ ಚ ॥ ೨೦ ॥

ತಾನಿ ತಸ್ಯ ವಿಧಾತುಶ್ಚ ಸಂತ್ಯಾಧಾರೇಷು ಕೇಷುಚಿತ್ ।
ಕೃಪಯಾ ಕಥಯಾಸ್ಮಾಕಂ ಕದಂಬವನಸುಂದರ ॥ ೨೧ ॥

ಇತಿ ತಸ್ಯ ವಚಃ ಶ್ರುತ್ವಾ ಪ್ರಾಹ ಸುಂದರನಾಯಕಃ
ಪತಂಜಲೇ ಮಹಾವಿದ್ವಂಸ್ತ್ವಯಾ ಪೃಷ್ಟಂ ಜಗದ್ಧಿತಂ ॥ ೨೨ ॥

ಕಥಯಾಮಿ ಕ್ರಮೇಣಾಹಂ ಭಾವನಾರ್ಥಂ ಮಹಾತ್ಮನಾಂ
ಬ್ರಹ್ಮಾಂಡಂ ಬ್ರಹ್ಮಣೋ ಗಾತ್ರಂ ಜಾನೀಯಾನ್ಮತಿಮಾನ್ ಜನಃ ॥ ೨೩ ॥

ಕಟ್ಯಧಸ್ಸಪ್ತಪಾತಾಳಂ ತದೂರ್ಧ್ವೇ ಸಪ್ತ ಲೋಕಕಾಃ ।
ಅಂಗುಷ್ಠೇ ಪ್ರಪದೇ ಗುಲ್ಫೇ ಜಂಘಾಯಾಂ ಜಾನುದೇಶಕೇ ॥ ೨೪ ॥

ಊರುಮಧ್ಯೇ ಚೋರುಮೂಲೇ ಪಾತಾಳಾದಿಸ್ಥಿತಾನಿ ಚ ।
ಭೂರಾದಿ ಸಪ್ತಲೋಕಾಶ್ಚ ಮೂಲಾಧಾರಾದಿಷು ಕ್ರಮಾತ್ ॥ ೨೫ ॥

---

ಹಾಲಾಸ್ಯಕ್ಷೇತ್ರವು ದ್ವಾದಶಾಂತಸ್ಥವೆಂತಲೂ, ಪುಂಡರೀಕಪುರವು ವಿರಾಡ್ಬ್ರಹ್ಮನಿಗೆ ಹೃದಯಕಮಲವೆಂತಲೂ ನೀನು ಹೇಳಿರುತ್ತೀಯೆ. ಕೈಲಾಸ ಮೊದಲಾದ ಕ್ಷೇತ್ರಗಳು ವಿರಾಡ್ಬ್ರಹ್ಮನಲ್ಲಿ ಯಾವ ಯಾವ ಆಧಾರದಲ್ಲಿರುವವು ಅದನ್ನು ದಯೆಯಿಂದ ನೀನು ನಮಗೆ ಹೇಳು."

೨೨–೨೭. ಈ ಮಾತನ್ನು ಕೇಳಿ ಸುಂದರೇಶ್ವರನು ಹೇಳಿದನು. "ಎಲೈ ಪತಂಜಲಿಯೆ, ನೀನು ಜಗತ್ತಿನ ಹಿತಕ್ಕಾಗಿ ಈ ಪ್ರಶ್ನೆಯನ್ನು ಕೇಳಿರುತ್ತೀಯೆ. ಮಹಾತ್ಮರಾದವರು ಧ್ಯಾನಮಾಡುವುದಕ್ಕೆ ಅನುಕೂಲವಾಗಿರುವಂತೆ ಕ್ರಮವಾಗಿ ಹೇಳುತ್ತೇನೆ. ಬುದ್ಧಿವಂತನು ಬ್ರಹ್ಮಾಂಡವನ್ನು ಬ್ರಹ್ಮನ ಶರೀರವೆಂದು ಭಾವನೆ ಮಾಡಬೇಕು. ಕಟಿಪ್ರದೇಶಕ್ಕಿಂತ ಕೆಳಭಾಗದಲ್ಲಿ ಏಳು ಪಾತಾಳಲೋಕಗಳಿರುವುವು. ಕಟಿಪ್ರದೇಶದ ಮೇಲುಭಾಗದಲ್ಲಿ ಏಳು ಊರ್ಧ್ವಲೋಕಗಳಿರುವುವು. ಅಂಗುಷ್ಠ, ಪ್ರಪದ ಗುಲ್ಫ, ಜಂಘಾ, ಜಾನು, ಊರುಮಧ್ಯ, ಊರುಮೂಲ, ಈ ಸ್ಥಾನಗಳು ಅಧೋಲೋಕಪ್ರದೇಶಗಳು. ಮೂಲಾಧಾರ ಮೊದಲುಗೊಂಡು, ಬ್ರಹ್ಮರಂಧ್ರದ ಕೊನೆಯುವರೆಗೂ ಏಳು ಸ್ಥಾನಗಳಲ್ಲಿ ಊರ್ಧ್ವಲೋಕಗಳಿರುವುವು. ಮೂಲಾಧಾರದಲ್ಲಿರುವ ಭೂಲೋಕದಲ್ಲಿ ಎಲ್ಲಾ ಲೋಕಗಳಲ್ಲಿಯೂ ಇರುವ ಪರಮೇಶ್ವರನಾದ

**ಆಧಾರಾದಿಷು ತಿಷ್ಠಂತಿ ಬ್ರಹ್ಮರಂಧ್ರಾಂತಕೇಷು ಚ ।**
**ಮೂಲಾಧಾರಸ್ಥಭೂಲೋಕೇ ಸರ್ವಲೋಕಗತಾನಿ ಚ ॥ ೨೬ ॥**

**ಮಲ್ಲಿಂಗಾನಿ ಚ ಮದ್ಭಕ್ತಾನುಗ್ರಹಾರ್ಥಂ ಮದಿಚ್ಛಯಾ ।**
**ಸದಾ ಕುರ್ವಂತಿ ಸಾನ್ನಿಧ್ಯಂ ತಥಾಪಿ ಮತಿರ್ಮಾಜನಃ ॥ ೨೭ ॥**

**ಭೂರಾದಿಸಪ್ತಲೋಕೇಷು ತತ್ತದಾಧಾರಕೇಷು ಚ ।**
**ಭಾವಯೇತ್ತಾನಿ ಲಿಂಗಾನಿ ಸ್ವಶರೀರಗತೇಷು ಚ ॥ ೨೮ ॥**

**ಮೂಲಾಧಾರಂ ವಿರಿಂಚೇಶ್ಚ ಪ್ರಥಿತಂ ಕಮಲಾಲಯಂ ।**
**ಅಹಮೇವ ತ್ಯಾಗರಾಜಸ್ತತ್ರ ತಿಷ್ಠಾಮಿ ಸಾದರಂ ॥ ೨೯ ॥**

**ಸ್ವಾಧಿಷ್ಠಾನಂ ವಿಧಾತುಶ್ಚ ಗಜಾರಣ್ಯಂ ಮಹಾಸ್ಥಲಂ ।**
**ಜಂಬುನಾಥೋ ಹ್ಯಹಂ ತತ್ರ ನಿವಸಾಮಿ ಮುದಾನ್ವಿತಃ ॥ ೩೦ ॥**

**ವಿಶ್ವಸೃಣ್ಮಣಿಪೂರಂ ಚ ಹ್ಯರುಣಾಚಲನಾಮಕಂ ।**
**ಅನಲಾಚಲನಾಥೋಽಹಂ ಭಕ್ತಾನಾಮಿಷ್ಟಸಿದ್ಧಯೇ ॥ ೩೧ ॥**

---

ನನ್ನ ರೂಪಾಂತರವಾದ ಶಿವಲಿಂಗಾಕಾರದಲ್ಲಿ ನನ್ನ ಸಾನ್ನಿಧ್ಯವು ನನ್ನ ಇಚ್ಛೆಯಿಂದ ಇರುವುದು. ಇದರಿಂದ ನನ್ನ ಭಕ್ತರು ಅವುಗಳನ್ನು ಧ್ಯಾನಮಾಡಿ ಆಯಾಯ ಇಷ್ಟ ಸಿದ್ಧಿಗಳನ್ನು ಹೊಂದುವರು.

೨೮–೩೧. ಹೀಗಿದ್ದರೂ ಬುದ್ಧಿವಂತನು ಮೂಲಾಧಾರ ಮೊದಲಾದ ಆಯಾಯ ಆಧಾರಸ್ಥಾನಗಳಲ್ಲಿ ಆಯಾಯ ಶಿವಲಿಂಗಗಳನ್ನು ತನ್ನ ಶರೀರದಲ್ಲಿರುವಂತೆ ಭಾವನೆ ಮಾಡಬೇಕು. ಮೂಲಾಧಾರವು ಬ್ರಹ್ಮನ ಸ್ಥಾನವು. ಇದು ಕಮಲದಂತಿರುವುದು. ಅಲ್ಲಿ ನಾನು ತ್ಯಾಗರಾಜನೆಂದು ಪ್ರಸಿದ್ಧನಾಗಿರುವೆನು. ಸ್ವಾಧಿಷ್ಠಾನವು ಬ್ರಹ್ಮನಿಗೆ ಸಂಬಂಧಪಟ್ಟಿರುವುದು. ಅದು ಗಜಾರಣ್ಯಕ್ಷೇತ್ರವಾಗಿರುವುದು. ಅಲ್ಲಿ ನಾನು ಜಂಬುನಾಥನೆಂಬ ಹೆಸರಿನಿಂದ ಇರುವೆನು. ಮಣಿಪೂರದೇಶವು ಪ್ರಪಂಚವನ್ನು ಸೃಷ್ಟಿಮಾಡತಕ್ಕದ್ದಾಗಿರುವುದು. ಅದು ಅರುಣಾಚಲ ಕ್ಷೇತ್ರವಾಗಿರುವುದು. ಅಲ್ಲಿ ನಾನು ಅನಲಾಚಲನಾಥನೆಂದು ಭಕ್ತರನ್ನು ಅನುಗ್ರಹಿಸುತ್ತಿರುವೆನು.

ಹೃತ್ಪುಂಡರೀಕಂ ಧಾತುಶ್ಚ ಚಿದಂಬರಮುದೀರಿತಂ ।
ಸಭಾಪತಿರಹಂ ತತ್ರ ಪ್ರಯಚ್ಛಾಮಿ ಸದೀಪ್ಸಿತಂ ॥ ೩೨ ॥

ಶ್ರೀಮದ್ದಕ್ಷಿಣಕೈಲಾಸಂ ವಿಶುದ್ಧಿಸ್ಥಾನಮುದ್ಧೃತಂ ।
ಕಾಲಹಸ್ತೀಶ್ವರಸ್ತತ್ರ ತಿಷ್ಠಾಮ್ಯಹಮಭೀಷ್ಟದಃ ॥ ೩೩ ॥

ವಾರಾಣಸೀ ಮಹಾಕ್ಷೇತ್ರಮಾಜ್ಞಾಸ್ಥಾನಂ ಸ್ವಯಂಭುವಃ ।
ವಿಶ್ವನಾಥಾಭಿಧಸ್ತತ್ರ ಸ್ಥಿತ್ವಾ ಮುಕ್ತಿಂ ದದಾಮ್ಯಹಂ ॥ ೩೪ ॥

ಬ್ರಹ್ಮಣೋ ಬ್ರಹ್ಮರಂಧ್ರಂ ತು ಶ್ರೀಕೈಲಾಸಂ ಮಹಾಸ್ಥಲಂ ।
ಶ್ರೀಕಂಠಪರಮೇಶೋಽಹಂ ತತ್ರ ಸಾನ್ನಿಧ್ಯಕೃತ್ಸದಾ ॥ ೩೫ ॥

ಆಧಾರಾತೀತಮವ್ಯಕ್ತಂ ಹಾಲಾಸ್ಯಂ ದ್ವಾದಶಾಂತಗಂ ।
ತತ್ರಾಹಂ ಸುಂದರೇಶಾಖ್ಯಸ್ಸರ್ವಾನುಗ್ರಹತತ್ಪರಃ ॥ ೩೬ ॥

---

೩೨–೩೫. ವಿರಾಡ್ಬ್ರಹ್ಮನ ಹೃದಯಕಮಲವು ಪುಂಡರೀಕಪುರವೆಂದು ಹೆಸರನ್ನು ಹೊಂದಿ ಚಿದಂಬರ ಕ್ಷೇತ್ರವಾಗಿರುವುದು. ಅಲ್ಲಿ ನಾನು ಸಭಾಪತಿ ಎಂದು ಹೆಸರನ್ನು ಹೊಂದಿ, ಇಷ್ಟಾರ್ಥಗಳನ್ನು ಕೊಡುವೆನು. ಆಶ್ಚರ್ಯಕರವಾದ ವಿಶುದ್ಧಿ ಚಕ್ರವೇ ದಕ್ಷಿಣಕೈಲಾಸವು. ಕಾಳಹಸ್ತೀಶ್ವರನೆಂದು ನಾನು ಅಲ್ಲಿ ವಾಸಮಾಡುತ್ತಿರುವೆನು. ಎಲ್ಲರ ಇಷ್ಟಸಿದ್ಧಿಯನ್ನೂ ಕೊಡುವೆನು. ಕಾಶೀಕ್ಷೇತ್ರವು ಆಜ್ಞಾಸ್ಥಾನವಾಗಿರುವುದು. ಅಲ್ಲಿ ವಿಶ್ವನಾಥನೆಂಬ ಹೆಸರಿನಿಂದ ಮುಕ್ತಿಯನ್ನು ಕೊಡುತ್ತಿರುವೆನು. ವಿರಾಡ್ಬ್ರಹ್ಮನ ಬ್ರಹ್ಮರಂಧ್ರವು ಕೈಲಾಸವಾಗಿರುವುದು. ಅಲ್ಲಿ ಶ್ರೀಕಂಠಪರಮೇಶ್ವರನೆಂಬ ಹೆಸರಿನಿಂದ ನಾನು ಯಾವಾಗಲೂ ಸನ್ನಿಹಿತನಾಗಿರುವೆನು.

೩೬–೩೭. ಈ ಹಾಲಾಸ್ಯ ಕ್ಷೇತ್ರವು ಆಧಾರವೆಲ್ಲವನ್ನೂ ಮೀರಿರುವುದು. ಇದರಿಂದ ಇದನ್ನು ಅವ್ಯಕ್ತವೆಂದು ಕರೆಯುವರು. ಪ್ರಸಿದ್ಧವಾದ ಈ ಕ್ಷೇತ್ರವು ದ್ವಾದಶಾಂತವೆನಿಸುವುದು. ಇಲ್ಲಿ ನಾನು ಸುಂದರೇಶ್ವರನೆಂದು ಎಲ್ಲರನ್ನೂ ಅನುಗ್ರಹಿಸುತ್ತಿರುವೆನು. ಇತರ ಸ್ಥಾನಗಳಿಗೆಲ್ಲಕ್ಕೂ ಆದಿಯಾಗಿ, ಎಲ್ಲಕ್ಕಿಂತಲೂ ಹೆಚ್ಚಾದ ಮಹಿಮೆಯನ್ನು ಹೊಂದಿರುವ ಈ ಕ್ಷೇತ್ರವು ಹನ್ನೆರಡು ಸ್ಥಾನಗಳನ್ನು ಮೀರಿ ನನ್ನ

ಸ್ಥಾನಾನಾಮಾದಿಭೂತತ್ವಾದ್ವಿಶಿಷ್ಟಂ ಪರಮಾದ್ಭುತಂ ।
ದ್ವಾದಶಾಂತೇ ಮಮ ಪದೇ ಜೀವನ್ಮುಕ್ತಿಪುರಂ ಸ್ಥಿತಂ　　॥ ೩೭ ॥

ಯಥಾ ಪರಶಿವಶ್ಚಾಹಂ ಜಗತೋ ಮೂಲಕಾರಣಂ
ತಥಾ ಮದೀಯಕ್ಷೇತ್ರಾಣಾಂ ಹಾಲಾಸ್ಯಂ ಮೂಲಕಾರಣಂ　　॥ ೩೮ ॥

ಮದೀಯಾನಾಂ ಚ ಮೂರ್ತೀನಾಂ ಮೂರ್ತಿಸ್ತಾಂಡವಪಂಡಿತಾ ।
ಪರಮಾ ಪಾವನೀ ಪ್ರೋಕ್ತಾ ಸಾಪಿ ಸ್ಥಾನವಿಶೇಷತಃ　　॥ ೩೯ ॥

ಅತ್ಯಂತಮಹತೀ ಶುದ್ಧಾ ವೇದಾಂತೈಃ ಪ್ರತಿ ಪಾದಿತಾ ।
ಆಧಾರಾಣಾಂ ಸಮಸ್ತಾನಾಂ ದ್ವಾದಶಾಂತಂ ಮಹತ್ತರಂ　　॥ ೪೦ ॥

ದ್ವಾದಶಾಂತೇ ಶಿವಕ್ಷೇತ್ರೇ ತಾಂಡವಂಚ ಮಹತ್ತರಂ ।
ದ್ವಾದಶಾಂತಸ್ಥಮವ್ಯಕ್ತಂ ಜ್ಯೋತಿರ್ಮಯಮನಾದಿಮತ್　　॥ ೪೧ ॥

ಯೋಗಿಭಿರ್ಧ್ಯಾನಗಮ್ಯಂ ತಂ ತಾಂಡವಂ ತತ್ರ ಭಾವಯೇತ್ ।
ಏವಂ ಭೂತಂ ಮಹಾನೃತ್ತಂ ತತ್ವಾತೀತಂ ಪರಾತ್ಪರಂ　　॥ ೪೨ ॥

---

ಸ್ಥಾನವಾಗಿರುವುದರಿಂದ ಜೀವನ್ಮುಕ್ತಿಪುರವೆಂದು ಹೆಸರನ್ನು ಹೊಂದಿರುವುದು. ಪರ ಶಿವನಾಗಿ ಜಗತ್ತಿಗೆ ಎಲ್ಲಕ್ಕೂ ನಾನು ಮೂಲ ಕಾರಣವಾಗಿರುವಂತೆ, ನನ್ನ ಈ ಕ್ಷೇತ್ರವು ಇತರ ಕ್ಷೇತ್ರಗಳಿಗೆ ಮೂಲ ಕಾರಣವಾಗಿರುವುದು.

೩೮–೪೨. ನನ್ನ ಮೂರ್ತಿಗಳೆಲ್ಲವೂ ಪವಿತ್ರಕರಗಳಾಗಿರುವುವು. ಅದರಲ್ಲಿಯೂ ತಾಂಡವ ಮೂರ್ತಿಯು ಸ್ಥಾನವಿಶೇಷದಿಂದ (ಪರಮ) ಬಹಳ ಪವಿತ್ರವಾದದ್ದು. ಇದು ಬಹಳ ದೊಡ್ಡದು. ಪರಿಶುದ್ಧವಾದದ್ದು. ಎಂದು ಉಪನಿಷತ್ತುಗಳಲ್ಲಿ ಹೇಳಿರುವುದು. ಎಲ್ಲಾ ಆಧಾರಗಳಿಗಿಂತಲೂ ದ್ವಾದಶಾಂತವಾದ ಈ ಕ್ಷೇತ್ರವು ಬಹಳ ಮಹಿಮೆಯಿಂದ ಕೂಡಿರುವಂತೆ, ನನ್ನ ಇತರ ಮೂರ್ತಿಗಿಂತಲೂ ತಾಂಡವ ಮೂರ್ತಿಯಲ್ಲಿ ಮಹಿಮೆಯು ಬಹಳವಾಗಿರುವುದು. ಯೋಗಿಗಳಾದವರು ಈ ದ್ವಾದಶಾಂತಸ್ಥ ಕ್ಷೇತ್ರವನ್ನು ಜ್ಯೋತಿರ್ಮಯವಾಗಿ, ಆದಿರಹಿತವಾಗಿರುವ ಅವ್ಯಕ್ತವೆಂದು ಭಾವಿಸಬೇಕು. ಅಲ್ಲಿ ಯೋಗಿ ಪ್ರತ್ಯಕ್ಷವಾದ ತಾಂಡವವನ್ನು ಭಾವನೆ ಮಾಡಬೇಕು. ನನ್ನ ತಾಂಡವವು ಈ ಪ್ರಕಾರದ ಮಹಿಮೆಯುಳ್ಳದ್ದಾಗಿ ತತ್ವಗಳನ್ನು ಮೀರಿ

ನಿಷ್ಕಲಂ ಸಕಲಂ ಚಾಸ್ತು ಪಶ್ಯ ಪಶ್ಯ ಪತಂಜಲೇ ।
ಇತ್ಯುಕ್ತ್ವಾ ಸುಂದರಾಧೀಶಶ್ಶಂಭುಸ್ತಾಂಡವತತ್ಪರಃ ॥ ೪೩ ॥

ಪ್ರಾಸಾದಸ್ಯ ಪುರೋ ಭಾಗೇ ರಮ್ಯೇ ಮಹತಿ ಮಂಟಪೇ ।
ಸಭಾಂ ಸಂಕಲ್ಪಮಾತ್ರೇಣ ಕೃತ್ವಾ ರೌಪ್ಯಮಯೀಂ ಶುಭಾಂ ॥ ೪೪ ॥

ರತ್ನೈರ್ವಿಚಿತ್ರವೇದ್ಯಾಂ ತಂ ನವರತ್ನವಿನಿರ್ಮಿತೇ ।
ಸೌವರ್ಣೇ ಭದ್ರಪೀಠೇ ಚ ಪ್ರಭಾಮಂಡಲಮಂಡಿತೇ ॥ ೪೫ ॥

ಕೃತ್ವಾ ಕೋಪಾಪರಕ್ತಾಕ್ಷಮಪಸ್ಮಾರಮಧೋಮುಖಂ ।
ತಸ್ಯೋಪರಿ ಮಹಾದೇವೋ ಲೋಕಾನಾಮಭಯಪ್ರದಂ ॥ ೪೬ ॥

ದಕ್ಷಿಣಂ ಪಾದಮಾಸ್ಥಾಯ ಕಿಂಚಿತ್ಕುಂಚಿತಮುನ್ನತಂ ।
ಅನುಗ್ರಹಕರಂ ವಾಮಪಾದಂ ಕೃತ್ವಾ ದಯಾನಿಧಿಃ ॥ ೪೭ ॥

---

ಉತ್ತಮೋತ್ತಮವಾಗಿರುವುದು. ಇದು ನಿಷ್ಕಲವಾಗಲಿ, ಸಕಲವೇ ಆಗಲಿ, ತಾಂಡವವನ್ನು ನಾನು ತೋರಿಸುತ್ತೇನೆ ನೀನು ನೋಡು." ಎಂದು ಹೇಳಿ ಸುಂದರೇಶ್ವರನು ಪತಂಜಲಿಋಷಿಗೆ ತನ್ನ ತಾಂಡವವನ್ನು ತೋರಿಸಲು ಉದ್ಯುಕ್ತನಾದನು.

೪೪-೪೯. ಆಗ ಸುಂದರೇಶ್ವರನು ಆ ದೇವಸ್ಥಾನದ ಮುಂದುಗಡೆಯಲ್ಲಿರುವ ದೊಡ್ಡ ಮಂಟಪದಲ್ಲಿ ಬೆಳ್ಳಿಯ ಸಭೆಯನ್ನು ಸಂಕಲ್ಪಮಾತ್ರದಿಂದ ತರಿಸಿದನು. ರತ್ನ ಖಚಿತವಾದ ವೇದಿಕೆಯಲ್ಲಿ ಕಾಂತಿ ರಾಶಿಯಿಂದ ಕೂಡಿದ ಸುವರ್ಣದ ಭದ್ರಪೀಠದಲ್ಲಿ, ಕೋಪದಿಂದ ಕೆಂಡಗಣ್ಣಿನ ಅಪಸ್ಮಾರನನ್ನು ಅಧೋಮುಖನನ್ನಾಗಿ ಮಾಡಿಕೊಂಡು, ಅವನಮೇಲೆ ಮಹಾದೇವನು ಭಕ್ತರಿಗೆ ಅಭಯವನ್ನು ಕೊಡುವ ತನ್ನ ಬಲಗಾಲನ್ನು ನೇರವಾಗಿ ಇರಿಸಿ, ಕೊಂಚ ಎತ್ತರವಾಗುವಂತೆ ಎಡಗಾಲನ್ನು ಮಡಿಸಿಕೊಂಡು ನಿಂತನು. ಹೀಗೆ ತಾಂಡವವನ್ನು ಮಾಡುವ ಕಾಲದಲ್ಲಿ ಆ ದೇವನಿಗೆ ಸುಂದರಾಕಾರವೂ, ಹತ್ತು ಭುಜಗಳೂ ಇದ್ದುವು. ಅಭಯ ಹಸ್ತವನ್ನೂ, ಶೂಲಾಯುಧವನ್ನೂ ಧರಿಸಿದ್ದನು.

**ಅತ್ಯಂತಸುಂದರಾಕಾರೋ ದಶದೋರ್ಭಿರ್ವಿರಾಜಿತಃ**
**ಅಭಯಪ್ರದಹಸ್ತಂ ಚ ಕೃತ್ವಾ ಶೂಲೇನ ಶೋಭಿತಂ ॥ ೪೮ ॥**

**ಪ್ರಸೃತಂ ವರದಂ ಪಾಣಿಮಲಂಕೃತ್ವಾಹಿ ಪಾಶತಃ ।**
**ಡಮರುಂ ಚ ಶರಂ ಖಡ್ಗಂ ಪರಶುಂ ದಕ್ಷಿಣೈಃ ಕರೈಃ ॥ ೪೯ ॥**

**ಕೃಶಾನುಂ ಕಾರ್ಮುಕಂ ಖೇಟಂ ದಂಡಂಹಸ್ತೈರದಕ್ಷಿಣೈಃ ।**
**ದಧಾನಸ್ಸನ್ಮಹಾದೇವ ಸ್ತ್ರಿಪುರಾಂತಕಈಶ್ವರಃ ॥ ೫೦ ॥**

**ಗಂಗಾಚಂದ್ರಕಲಾಭ್ಯಾಂ ಚ ವಿರಾಜಿತಕಪರ್ದವಾನ್ ।**
**ನಾಗಯಜ್ಞೋಪವೀತೀ ಚ ತ್ರಿಲೋಚನಧರೋ ಹರಃ ॥ ೫೧ ॥**

**ಶರಚ್ಚಂದ್ರಾಂಶುಧವಲಸ್ಸರ್ವಾಭರಣಭೂಷಿತಃ ।**
**ಧ್ವನಯಂತ್ಯಾ ತದಾ ತಾಲಂ ದೇವ್ಯಾ ಸಾದರಮೀಕ್ಷಿತಃ ॥ ೫೨ ॥**

**ಪತಂಜಲಿಮುಖಾನಾಂ ಚ ಮುನೀಂದ್ರಾಣಾಮ್ಮುಹುರ್ಮುಹುಃ ।**
**ದರ್ಶಯಾಮಾಸ ಭಗವಾನ್ಸುಂದರೇಶಃ ಸ್ವತಾಂಡವಂ ॥ ೫೩ ॥**

---

ವರದ ಹಸ್ತವನ್ನು ನಾಗಾಭರಣದಿಂದ ಅಲಂಕರಿಸಿದ್ದನು. ಡಮರು, ಬಾಣ, ಕತ್ತಿ, ಪರಶು ಇವುಗಳನ್ನು ಬಲಗಡೆಯ ಹಸ್ತಗಳಲ್ಲಿಯೂ, ಅಗ್ನಿ, ಧನಸ್ಸು, ಖೇಟ, ದಂಡಗಳನ್ನು ಎಡಗಡೆಯ ಹಸ್ತಗಳಲ್ಲಿಯೂ ಇರುವಂತೆ ಧರಿಸಿದ್ದನು.

೫೦–೫೨. ತ್ರಿಪುರ ವೈರಿಯಾದ ಪರಮೇಶ್ವರನ ತಾಂಡವ ಕಾಲದಲ್ಲಿ ಅವನ ಶಿರಸ್ಸಿನಲ್ಲಿ ಗಂಗಾ, ಚಂದ್ರಕಳೆಯಿಂದ ಕೂಡಿದ ಜಟಾಮಂಡಲವು ಪ್ರಕಾಶಿಸುತ್ತಿತ್ತು. ನಾಗಯಜ್ಞೋಪವೀತವನ್ನು ಧರಿಸಿ, ಮೂರು ಕಣ್ಣುಗಳಿಂದ ಕೂಡಿ, ಶರತ್ಕಾಲದ ಚಂದ್ರನಂತೆ ಶುಭವರ್ಣವನ್ನು ಹೊಂದಿ, ಸರ್ವಾಭರಣಗಳಿಂದ ಅಲಂಕೃತನಾದ ಈ ದೇವನ ತಾಂಡವಕ್ಕನುಸಾರವಾಗಿ ತಾಳವನ್ನು ಹಾಕುತ್ತಾ ದೇವಿಯು ಆದರದಿಂದ ಸುಂದರೇಶ್ವರನನ್ನು ನೋಡುತ್ತಿದ್ದಳು.

೫೩–೫೪. ಪೂಜ್ಯನಾದ ಸುಂದರೇಶ್ವರನು, ಪತಂಜಲಿಯೇ ಮೊದಲಾದ ಮುನಿಶ್ರೇಷ್ಠರೆಲ್ಲರಿಗೂ ತನ್ನ ತಾಂಡವವನ್ನು ಬಹಳಮಟ್ಟಿಗೆ ತೋರಿಸಿದನು. ಆಗ ಆ ಋಷಿಗಳೆಲ್ಲರಿಗೂ ಆ ತಾಂಡವ ದರ್ಶನದಿಂದ ಶರೀರದಲ್ಲಿ ರೋಮಾಂಚವು ಉಂಟಾ

ದೃಷ್ಟ್ವಾ ಪತಂಜಲಿವ್ಯಾಘ್ರಪಾದಮುಖ್ಯೈರ್ಮುನೀಶ್ವರೈಃ ।
ಪುಲಕಾಂಕಿತಸರ್ವಾಂಗಸ್ಸಾನಂದಜಲಲೋಚನಃ ॥ ೫೪ ॥
ಭಕ್ತ್ಯಾ ಗದ್ಗದಯಾ ವಾಚಾ ಸ್ತೋತ್ರಂ ಚಕ್ರೇ ಮುನೀಶ್ವರಃ ।

॥ ಪತಂಜಲಿರುವಾಚ ॥

ಸುವರ್ಣಪದ್ಮಿನೀತಟಾಂತದಿವ್ಯಹರ್ಮ್ಯವಾಸಿನೇ ।
ಸುವರ್ಣವಾಹನಪ್ರಿಯಾಯ ಸೂರ್ಯಕೋಟಿತೇಜಸೇ ।
ಅಪರ್ಣಯಾವಿಹಾರಿಣೇ ಫಣಾಧರೇಂದ್ರಧಾರಿಣೇ ।
ಸದಾ ನಮಶ್ಶಿವಾಯ ತೇ ಸದಾಶಿವಾಯ ಶಂಭವೇ ॥ ೫೫ ॥

ಸತುಂಗಭಂಗಜಹ್ನುಜಾ ಸುಧಾಂಶುಖಂಡಮೌಲಯೇ ।
ಪತಂಗಪಂಕಜಾಸುಹೃತ್ಕೃಪೀಟಯೋನಿಚಕ್ಷುಷೇ ।
ಭುಜಂಗರಾಜಕುಂಡಲಾಯ ಪುಣ್ಯಶಾಲಿಬಾಂಧವೇ
ಸದಾ ನಮಶ್ಶಿವಾಯ ತೇ ಸದಾಶಿವಾಯ ಶಂಭವೇ ॥ ೫೬ ॥

---

ಯಿತು. ಆನಂದಾಶ್ರುಗಳು ಕಣ್ಣಿನಲ್ಲಿ ತುಂಬಿಬಂದವು. ದೇವ ದೇವನಲ್ಲಿ ಭಕ್ತಿಯು ಬಹಳ ಹೆಚ್ಚಾಯಿತು. ಪತಂಜಲಿಯು ಆನಂದದಿಂದ ಪರವಶನಾಗಿ, ಕಂಠಧ್ವನಿಯು ಗದ್ಗದವಾಗಿದ್ದರೂ ಸ್ತೋತ್ರಮಾಡಲುಪಕ್ರಮಿಸಿದನು.

೫೫. ಪತಂಜಲಿಯು ಹೇಳಿದನು:—ಹೇಮಪದ್ಮಾಕರ ತೀರ್ಥದ ದಡದಲ್ಲಿರುವ ಉತ್ತಮವಾದ ಪ್ರಾಸಾದದಲ್ಲಿ ವಾಸಮಾಡುತ್ತಾ, ಶುಭ್ರವರ್ಣವಾದ ವಾಹನದಲ್ಲಿ ಪ್ರೀತಿಯಿಂದ ಇರುತ್ತಾ, ಕೋಟಿ ಸೂರ್ಯರ ತೇಜಸ್ಸನ್ನು ಧರಿಸಿ, ಶ್ರೇಷ್ಠವಾದ ಸರ್ಪಗಳನ್ನು ಆಭರಣವಾಗಿ ಧರಿಸಿರುವವನಾಗಿ, ಪಾರ್ವತಿಯೊಡನೆ ವಿಹಾರ ಮಾಡುತ್ತಿರುವ ಯಾವಾಗಲೂ ಮಂಗಳಕರನಾದ ಶಿವನಿಗೆ ನಮಸ್ಕಾರವು.

೫೬. ಜಹ್ನುಪುತ್ರಿಯಾದ ಗಂಗೆಯನ್ನೂ, ಚಂದ್ರನನ್ನೂ ಶಿರಸ್ಸಿನಲ್ಲಿ ಧರಿಸಿಕೊಂಡು, ಸೂರ್ಯಚಂದ್ರಾಗ್ನಿಲೋಚನನಾಗಿ ಮೆರೆಯುತ್ತಾ, ನಾಗಕುಂಡಲನಾಗಿ, ಪುಣ್ಯವಂತರಿಗೆ ಬಂಧುವಾಗಿರುವ ದೇವದೇವನಾದ ಶಿವನಿಗೆ ನಮಸ್ಕಾರವು.

**ಚತುರ್ಮುಖಾನನಾರವಿಂದವೇದಗೀತಭೂತಯೇ ।**
**ಚತುರ್ಭುಜಾನುಜಾಶರೀರಶೋಭಮಾನಮೂರ್ತಯೇ ।**
**ಚತುರ್ವಿಧಾರ್ಥದಾನಶೌಂಡತಾಂಡವಸ್ವರೂಪಿಣೇ ।**
**ಸದಾ ನಮಶ್ಶಿವಾಯ ತೇ ಸದಾಶಿವಾಯ ಶಂಭವೇ　　॥ ೫೭ ॥**

**ಶರನ್ನಿಶಾಕರಪ್ರಕಾಶಮಂದಹಾಸಮಂಜುಳಾ ।**
**ಧರಪ್ರವಾಳಭಾಸಮಾನವಕ್ತ್ರಮಂಡಲಶ್ರಿಯೇ ।**
**ಕರಸ್ಫುರತ್ಕಪಾಲಮುಕ್ತರಕ್ತವಿಷ್ಣುಪಾಲಿನೇ ।**
**ಸದಾ ನಮಶ್ಶಿವಾಯ ತೇ ಸದಾಶಿವಾಯ ಶಂಭವೇ　　॥ ೫೮ ॥**

**ಸಹಸ್ರಪುಂಡರೀಕಪೂಜನೈಕಶೂನ್ಯದರ್ಶನಾತ್ ।**
**ಸಹಸ್ರನೇತ್ರಕಲ್ಪಿತಾರ್ಚನಾಚ್ಯುತಾಯ ಭಕ್ತಿತಃ ।**
**ಸಹಸ್ರಭಾನುಮಂಡಲಪ್ರಕಾಶಚಕ್ರದಾಯಿನೇ ।**
**ಸದಾ ನಮಶ್ಶಿವಾಯ ತೇ ಸದಾಶಿವಾಯ ಶಂಭವೇ　　॥ ೫೯ ॥**

---

೫೭. ಚತುರ್ಮುಖನಾದಬ್ರಹ್ಮನ ನಾಲ್ಕು ಮುಖಗಳಿಂದಲೂ ಹೇಳುತ್ತಿರುವ ವೇದಗಳಲ್ಲಿ ಪ್ರಕಟವಾಗುತ್ತಿರುವ ಐಶ್ವರ್ಯವುಳ್ಳವನಾಗಿ, ಚತುರ್ಭುಜನಾದ ವಿಷ್ಣುವಿನ ಸೋದರಿಯಾದ ದೇವಿಯಿಂದ ಪ್ರಕಾಶಿಸುತ್ತಿರುವ ಆಕಾರದಿಂದಕೂಡಿ, ನಾಲ್ಕು ವಿಧವಾದ ಪುರುಷಾರ್ಥಗಳನ್ನೂ ಬೇಕಾದಹಾಗೆ ಕೊಡುತ್ತಿರುವ ಸದಾಶಿವನಿಗೆ ನಮಸ್ಕಾರವು.

೫೮. ಶರಚ್ಚಂದ್ರ ಚಂದ್ರಿಕೆಯಂತೆ ಪ್ರಕಾಶಿಸುತ್ತಿರುವ ಮಂದಹಾಸದಿಂದ ಕೂಡಿರುವ ಅಧರಬಿಂಬದಿಂದ ಮೆರೆಯುವ ಮುಖಕಾಂತಿಯುಳ್ಳವನಾಗಿ, ತನ್ನ ಹಸ್ತದಲ್ಲಿ ಪ್ರಕಾಶಿಸುತ್ತಿರುವ ಕಪಾಲದಿಂದ ಬೀಳುತ್ತಿರುವ ರಕ್ತದಿಂದ ವಿಷ್ಣುವನ್ನು ಪಾಲಿಸುತ್ತಾ, ಯಾವಾಗಲೂ ಮಂಗಳಕರನಾದ ದೇವನಿಗೆ ನಮಸ್ಕಾರವು.

೫೯. ವಿಷ್ಣುವು ನಿನ್ನನ್ನು ಸಾವಿರಕಮಲಗಳಿಂದ ಪೂಜಿಸಲು ಹೂವುಗಳನ್ನೂ ಸಿದ್ಧಪಡಿಸಿ ಪೂಜೆಮಾಡುತ್ತಿರುವಾಗ ಒಂದು ಕಮಲವು ಕಮ್ಮಿಯಾದ ಕಾರಣ ಆ ಹೂವಿಗೆ ಪ್ರತಿಯಾಗಿ ತನ್ನ ಒಂದು ಕಣ್ಣನ್ನು ಕಿತ್ತು ಭಕ್ತಿಯಿಂದ ಪೂಜಿಸಿದನ್ನು,ಆಗ ಅವನಿಗೆ ನೀನು ಪ್ರಸನ್ನನಾಗಿ ಸಾವಿರ ಸೂರ್ಯರ ಹಾಗೆ ತೇಜಸ್ಸುಳ್ಳ ಚಕ್ರವನ್ನು ಅನುಗ್ರಹಿಸಿರುತ್ತೀಯೆ. ಈ ಪ್ರಕಾರದ ಮಹಿಮೆಯಿಂದ ಯಾವಾಗಲೂ ಮಂಗಳಕರನಾದ, ಸದಾಶಿವನೆಂದು ಹೆಸರುಳ್ಳ ನಿನಗೆ ನಮಸ್ಕಾರವು.

ರಸಾರಥಾಯ ರಮ್ಯಪತ್ರಭೃದ್ರಥಾಂಗಪಾಣಯೇ ।
ರಸಾಧರೇಂದ್ರಚಾಪಶಿಂಜಿನೀಕೃತಾನಿಲಾಶಿನೇ ।
ಸ್ವಸಾರಥೀಕೃತಾಜನುನ್ನವೇದರೂಪವಾಜಿನೇ ।
ಸದಾ ನಮಶ್ಶಿವಾಯ ತೇ ಸದಾಶಿವಾಯ ಶಂಭವೇ ॥ ೬೦ ॥

ಅತಿಪ್ರಗಲ್ಭವೀರಭದ್ರಸಿಂಹನಾದಗರ್ಜಿತ ।
ಶ್ರುತಿಪ್ರಭೀತದಕ್ಷಯಾಗಭೋಗಿನಾಕಸದ್ಮನಾಂ ।
ಗತಿಪ್ರದಾಯ ಗರ್ಜಿತಾಖಿಲಪ್ರಪಂಚಸಾಕ್ಷಿಣೇ ।
ಸದಾ ನಮಶ್ಶಿವಾಯ ತೇ ಸದಾಶಿವಾಯ ಶಂಭುವೇ ॥ ೬೧ ॥

ಮೃಕಂಡುಸೂನುಲಕ್ಷಣಾವಧೂತದಂಡಪಾಣಯೇ ।
ಸುಗಂಡಮಂಡಲಸ್ಫುರತ್ಪ್ರಭಾಜಿತಾಮೃತಾಂಶವೇ ।

---

೬೦. ನೀನು ತ್ರಿಪುರವನ್ನು ದಹನಮಾಡುವಾಗ ಭೂಮಿಯೇ ರಥವಾಗಿತ್ತು. ವಿಷ್ಣುವೇ ಬಾಣವಾಗಿ ನಿನ್ನ ಕೈಯ್ಯಿನಲ್ಲಿ ಪ್ರಕಾಶಿಸುತ್ತಿದ್ದನು. ಮೇರುಪರ್ವತವೇ ಧನುಸ್ಸಾಗಿ ಇತ್ತು. ಆದಿಶೇಷನು ಬಿಲ್ಲಿನ ಹಗ್ಗ (ತುರ್ವಿ) ವಾಗಿದ್ದನು. ಬ್ರಹ್ಮನು ಸಾರಥಿಯಾಗಿದ್ದನು. ವೇದಗಳೇ ಕುದುರೆಗಳಾಗಿದ್ದವು. ಈ ಪ್ರಕಾರವಾಗಿ ದೇವೋತ್ತಮರನ್ನು ಯುದ್ಧೋಪಕರಣವಾಗಿ ಉಪಯೋಗಿಸಿಕೊಂಡಿರುವ ಮಹಿಮೆಯುಳ್ಳ ಸದಾಶಿವನಾದ ನಿನಗೆ ನಮಸ್ಕಾರವು.

೬೧. ದಕ್ಷಬ್ರಹ್ಮನ ಯಾಗವನ್ನು ನೀನು ಧ್ವಂಸಮಾಡುವಾಗ ನಿನ್ನ ರೂಪಾಂತರವಾಗಿರುವ ವೀರಭದ್ರನ ಪ್ರೌಢವಾದ ಸಿಂಹನಾದದ ಗರ್ಜನೆಯನ್ನು ಕೇಳಿ, ಯಾಗಕ್ಕೆ ಬಂದಿದ್ದ ದೇವತೆಗಳೆಲ್ಲರೂ ಓಡಿಹೋದರು. ನಿನಗೆ ವಿರುದ್ಧವಾದ ಕೆಲಸವನ್ನು ಮಾಡಿದ ದೇವತೆಗಳಿಗೆ ಹಿಂದಿನ ಹಾಗೆಯೇ ಅವರವರಿಗೆ ತಕ್ಕ ಹವಿರ್ಭಾಗಗಳನ್ನು ಅವರವರೇ ಹೊಂದುವಂತೆ ಅನುಗ್ರಹವನ್ನು ಮಾಡಿ ನಿನಗೆ ಎದುರು ಬಿದ್ದು ಗರ್ಜಿಸುವ ಪ್ರಪಂಚಕ್ಕೆ ಸಾಕ್ಷಿಯಂತೆ (ಉದಾಸೀನನಾಗಿರುವ) ದಯಾಶಾಲಿಯಾದ ಸದಾಶಿವನಾದ ನಿನಗೆ ನಮಸ್ಕಾರವು.

೬೨. ಮೃಕಂಡುಋಷಿಯ ಮಗನಾದ ಮಾರ್ಕಂಡೇಯನನ್ನು ರಕ್ಷಿಸುವುದಕ್ಕಾಗಿ ಯಮನನ್ನು ನೀನು ತಿರಸ್ಕರಿಸಿರುತ್ತೀಯೆ. ಸುಂದರವಾದ ಕಪೋಲದ ಕಾಂತಿ

**ಅಖಂಡಭೋಗಸಂಪದರ್ಥಲೋಕಭಾವಿತಾತ್ಮನೇ ।**
**ಸದಾ ನಮಶ್ಶಿವಾಯ ತೇ ಸದಾಶಿವಾಯ ಶಂಭವೇ ॥ ೬೨ ॥**

**ಮಧುರಿಪುವಿಧಿಶಕ್ರಮುಖ್ಯದೇವೈರಪಿ ।**
**ನಿಯಮಾರ್ಚಿತಾ ಪಾದಪಂಕಜಾಯ ।**
**ಕನಕಗಿರಿಶರಾಸನಾಯ ತುಭ್ಯಂ ।**
**ರಜತಸಭಾಪತಯೇ ನಮಶ್ಶಿವಾಯ ॥ ೬೩ ॥**

**ಹಾಲಾಸ್ಯನಾಥಾಯ ಮಹೇಶ್ವರಾಯ ।**
**ಹಾಲಾಹಲಾಲಂಕೃತಕಂಧರಾಯ ।**
**ಮೀನೇಕ್ಷಣಾಯಾಃ ಪತಯೇ ಶಿವಾಯ ।**
**ನಮೋ ನಮಸ್ಸುಂದರತಾಂಡವಾಯ ॥ ೬೪ ॥**

---

ಯಿಂದ ಚಂದ್ರನನ್ನು ಜಯಿಸಿರುತ್ತೀಯೆ. ಪರಿಪೂರ್ಣವಾದ ಭೋಗವನ್ನು ಹೊಂದುವುದಕ್ಕಾಗಿ ನಿನ್ನನ್ನು ಭಾವನೆಮಾಡುವ ಜನರ ಇಷ್ಟಸಿದ್ಧಿಗಳನ್ನು ಕೊಡುತ್ತಿರುವ ಮಂಗಳಕರಮೂರ್ತಿಯಾದ ನಿನಗೆ ನಮಸ್ಕಾರವು.

೬೩. ವಿಷ್ಣು, ಬ್ರಹ್ಮ, ಇಂದ್ರ ಇವರೇ ಮೊದಲಾದವರೂ ನಿನ್ನ ಪಾದಗಳನ್ನು ನಿಯಮದಿಂದ ಪೂಜಿಸುವರು. ಚಿನ್ನದ ಪರ್ವತವನ್ನು ಧನುಸ್ಸಾಗಿ ಉಪಯೋಗಿಸಿಕೊಂಡು ರಜತಸಭಾಪತಿಯಾಗಿ ನಿರ್ಮಿಸಿ ಪ್ರಕಾಶಿಸುತ್ತಿರುವ ಶಿವನಾದ ನಿನಗೆ ನಮಸ್ಕಾರವು.

೬೪. ಹಾಲಾಸ್ಯಕ್ಷೇತ್ರಕ್ಕೆ ನೀನು ಅಧಿಪತಿಯಾಗಿರುತ್ತೀಯೆ. ಎಲ್ಲಕ್ಕೂ ಅಧಿಪತಿಯಾಗಿ ಮಹೇಶ್ವರನಾಗಿರುತ್ತೀಯೆ. ಲೋಕವನ್ನು ರಕ್ಷಿಸುವುದಕ್ಕಾಗಿ ಹಾಲಾಹಲವೆಂಬ ವಿಷವನ್ನು ಪಾನಮಾಡಿದ್ದರಿಂದ ಅದರ ಜ್ವಾಲೆಯು ನಿನ್ನ ಕಂಠದಲ್ಲಿ ಅಲಂಕಾರವಾಗಿರುವುದು. ಮೀನಾಕ್ಷೀದೇವಿಗೆ ಪತಿಯಾಗಿ ಇರುವ ಈ ಪ್ರಕಾರ ಮಹಿಮೆಯುಳ್ಳ ಸುಂದರವಾಗಿ ತಾಂಡವಮಾಡುವ, ಸುಂದರ ತಾಂಡವನೆಂದು ಹೆಸರುಳ್ಳ ನಿನಗೆ ನಮಸ್ಕಾರವನ್ನು ನಾನು ಮಾಡುವೆನು. "

ಇತಿ ಸ್ತುತ್ವಾ ಮಹಾದೇವಂ ಸೋಮಸುಂದರತಾಂಡವಂ ।
ದಂಡವತ್ಸನ್ನಿಧೌ ನತ್ವಾ ಭಕ್ತ್ಯಾ ಪರವಶೋಽಭವತ್ ॥ ೬೫ ॥

ತತಸ್ತಾಂಡವಮೂರ್ತಿಸ್ತಂ ಶಿವಃ ಪ್ರಾಹ ಮುನೀಶ್ವರಂ ।
ಉತ್ತಿಷ್ಠೋತ್ತಿಷ್ಠ ಮದ್ಭಕ್ತ ವರಂ ಯತ್ತ್ವದಭೀಪ್ಸಿತಂ ॥ ೬೬ ॥

ತತ್ಪ್ರಯಚ್ಛಾಮ್ಯಹಂ ಸದ್ಯಃಪ್ರಾರ್ಥಯ ತ್ವಂ ಪತಂಜಲೇ ।
ಇತಿ ಶ್ರುತ್ವಾ ಸುಂದರೇಶವಚನಂ ಸ ಪತಂಜಲಿಃ ॥ ೬೭ ॥

ಅವಿಲಂಬಿತಮುತ್ಥಾಯ ಪ್ರಾರ್ಥಯಾಮಾಸ ಸಾಂಜಲಿಃ ।
ಭಗವನ್ದೇವದೇವೇಶ ತ್ವದೀಯಮಿದಮದ್ಭುತಂ । ॥ ೬೮ ॥

ತಾಂಡವಂ ಚ ಸದಾ ಕಾಲಂ ದ್ರಷ್ಟುಮಿಚ್ಛಾಮಿ ಶಂಕರ ।
ಅಂತರ್ಧಾನಂ ವಿಹಾಯಾತ್ರ ಸಾನ್ನಿಧ್ಯಂ ದಯಯಾ ಕುರು ॥ ೬೯ ॥

ಪುಂಡರೀಕಪುರೇ ಪೂರ್ವಂ ವ್ಯಾಘ್ರಪಾದಯುತಸ್ತ್ವಹಂ ।
ಸಂಸ್ನಾಯ ಶಿವಗಂಗಾಯಾಂ ನಿತ್ಯಕೃತ್ಯಂ ವಿಧಾಯ ಚ ॥ ೭೦ ॥

---

೬೫-೬೬. ಪತಂಜಲಿ ಋಷಿಯು ತಾಂಡವವನ್ನು ಮಾಡಿರುವ ಸೋಮಸುಂದರೇಶ್ವರನನ್ನು ಈ ಪ್ರಕಾರದಿಂದ ಸ್ತುತಿಮಾಡಿ, ದಂಡದಂತೆ ನಮಸ್ಕಾರಮಾಡಿ, ಆ ದೇವನಲ್ಲಿ ತನಗೆ ಉಂಟಾಗಿರುವ ಭಕ್ತಿಯಿಂದ ನಿಶ್ಚೇಷ್ಟಿತನಾಗಿದ್ದನು. ಆಗ ತಾಂಡವಮೂರ್ತಿಯಾಗಿರುವ ಸೋಮಸುಂದರೇಶ್ವರನು "ನನ್ನ ಭಕ್ತನಾದ ಪತಂಜಲಿಯೆ, ಮೇಲಕ್ಕೆ ಎದ್ದು ನಿನಗೆ ಬೇಕಾದ ವರವನ್ನು ಕೇಳು. ಅದು ನೆರವೇರುವಂತೆ ನಾನು ಅನುಗ್ರಹಿಸುವೆನು." ಎಂದು ಹೇಳಿದನು. ಸೋಮಸುಂದರೇಶ್ವರನ ಈ ಮಾತನ್ನು ಕೇಳಿ ಪತಂಜಲಿಯು ಬೇಗನೆ ಮೇಲಕ್ಕೆ ಎದ್ದು ನಿಂತು ಪ್ರಾರ್ಥಿಸಿದನು.

೬೭-೬೯. ಪತಂಜಲಿಯು ಹೇಳಿದನು :—"ಎಲೈ ದೇವದೇವನೆ! ಭಗವಂತನಾದ ಸೋಮಸುಂದರೇಶ್ವರನೇ! ನಾನು ಈಗ ನೋಡಿದಂತೆ ನಿನ್ನ ಬಹಳ ಆಶ್ಚರ್ಯಕರವಾದ ತಾಂಡವವನ್ನು ಯಾವಾಗಲೂ ನೋಡಲು ಅಪೇಕ್ಷಿಸುತ್ತೇನೆ. ಆದರೆ ನೀನು ನನ್ನಲ್ಲಿ ದಯೆಯಿಂದ ಅದೃಶ್ಯನಾಗಿ, ಇಲ್ಲಿ ನಿನ್ನ ಸನ್ನಿಧಿಯು ನನಗೆ ಯಾವಾಗಲೂ ಇರುವಂತೆ ಅನುಗ್ರಹಿಸು.

೭೦-೭೧. ಪೂರ್ವದಲ್ಲಿ ನಾನು ನನ್ನ ಮಿತ್ರನಾದ ವ್ಯಾಘ್ರಪಾದನೊಡನೆ, ಪುಂಡರೀಕಪುರಕ್ಕೆ ಬಂದು (ಚಿದಂಬರದಲ್ಲಿ) ಶಿವಗಂಗೆಯಲ್ಲಿ ಸ್ನಾನಾಹ್ನಿಕಗಳನ್ನು

ಮೂಲನಾಥಂ ಮಹಾಲಿಂಗಂ ಪರಿಪೂಜ್ಯ ಸುಭಕ್ತಿತಃ ।
ಸಭಾನಾಥಂ ಹೃದಾಕಾಶೇ ಚಿರಂ ಧ್ಯಾತ್ವಾ ಸುಖಂಸ್ಥಿತಃ ॥ ೭೧ ॥

ತತ್ಪುಣ್ಯಪರಿಪಾಕೇನ ತತ್ತಾಂಡವಮಿದಂ ವರಂ ।
ವ್ಯಾಘ್ರಪಾದೇನ ಮಿತ್ರೇಣ ಚಾನ್ಯೈರಪಿ ಮುನೀಶ್ವರೈಃ ॥ ೭೨ ॥

ಮಯಾ ದೃಷ್ಟಮಭೂದ್ಯಸ್ಮಾತ್ಕೃತಾರ್ಥೋಽಸ್ಮಿ ನ ಸಂಶಯಃ ।
ಇತಿ ವಿಜ್ಞಾಪಿತೋ ದೇವೋ ಭಗವಾನ್ಭಕ್ತವತ್ಸಲಃ ॥ ೭೩ ॥
ಕೃಪಯಾ ವೀಕ್ಷ್ಯ ಭಕ್ತಂ ತಂ ಪತಂಜಲಿಮಭಾಷತ ।

॥ ಈಶ್ವರ ಉವಾಚ ॥

ತ್ವಯಾ ಯತ್ಪ್ರಾರ್ಥಿತಂ ವಿದ್ವಂಸ್ತತ್ತಥೈವ ಭವಿಷ್ಯತಿ ॥ ೭೪ ॥

ಸದಾ ಮದ್ಭಕ್ತಿಯುಕ್ತಸ್ತ್ವಂ ಭಕ್ತಾನಾಮಗ್ರಣೀರ್ಭವ ।
ಯದ್ಯದಿಚ್ಛಂತಿ ಮೇ ಭಕ್ತಾಸ್ತ್ರೈಲೋಕ್ಯೇಽಪಿ ಚ ದುರ್ಲಭಂ ॥ ೭೫ ॥

---

ನೆರವೇರಿಸಿಕೊಂಡು, ಭಕ್ತಿಯಿಂದ ಮೂಲವಿಗ್ರಹವಾಗಿರುವ ಮಹಾಲಿಂಗವನ್ನು ಭಕ್ತಿಯಿಂದ ಪೂಜಿಸಿ, ನನ್ನ ಹೃದಯದಲ್ಲಿ ಆ ದೇವನನ್ನು ಬಹಳಕಾಲದವರಿಗೂ ಧ್ಯಾನಮಾಡುತ್ತಾ ಸುಖದಿಂದ ಇದ್ದೆನು.

೭೨–೭೩. ಆ ಪುಣ್ಯದ ಪರಿಪಾಕದಿಂದ ಉತ್ತಮೋತ್ತಮವಾದ ನಿನ್ನ ತಾಂಡವವನ್ನು ನಾನು ದರ್ಶನ ಮಾಡಿದೆನು. ನನ್ನ ಜೊತೆಯಲ್ಲಿರುವ ಮಿತ್ರರೂ ಇತರ ಮುನೀಶ್ವರರೂ ತಾಂಡವವನ್ನು ದರ್ಶನಮಾಡುವ ಸಮಯವು ದೊರಕಿತು. ಇದರಿಂದ ನಾನು ಕೃತಾರ್ಥನಾಗಿರುವೆನು.'' ಎಂದು ಪತಂಜಲಿಯು ವಿಜ್ಞಾಪನೆ ಮಾಡುತ್ತಿರುವುದನ್ನು ಕೇಳಿ, ಭಕ್ತವತ್ಸಲನಾದ ಸುಂದರೇಶ್ವರನು ತನ್ನ ಭಕ್ತನಾದ ಅವನನ್ನು ದಯೆಯಿಂದ ನೋಡಿ ಅವನ ಸಂಗಡ ಮಾತನಾಡಿದನು.

೭೪–೭೬. ಸುಂದರೇಶ್ವರನು ಹೇಳಿದನು :—"ಎಲೈ ಜ್ಞಾನಿಯೇ! ನೀನು ಪ್ರಾರ್ಥಿಸಿದಂತೆಯೇ ನಿನಗೆ ತಾಂಡವದರ್ಶನವು ಯಾವಾಗಲೂ ಆಗುವುದು. ನಿನಗೆ ನನ್ನಲ್ಲಿ ಭಕ್ತಿಯು ಸ್ಥಿರವಾಗಿರಲಿ. ನನ್ನ ಭಕ್ತರಲ್ಲಿ ನೀನು ಶ್ರೇಷ್ಠನಾಗಿರು. ಮೂರು ಲೋಕಗಳಲ್ಲಿಯೂ ಹೊಂದಲಶಕ್ಯವಾದದ್ದನ್ನು ನನ್ನ ಭಕ್ತರು ಅಪೇಕ್ಷಿಸಿದರೆ ನಾನು ಅದನ್ನೂ ಆ ಕ್ಷಣದಲ್ಲಿಯೇ ದೊರಕಿಸಿಕೊಡುವೆನು. ಇದು ಯಾವಾಗಲೂ ನಾನು

ತತ್ರತ್ಸದ್ಯಸ್ಸಾಧಯಿಷ್ಯೇ ವ್ರತಮೇತತ್ಸದಾ ಮಮ ।
ಮದೀಯಾಂ ಮಹತೀಮೇತಾಂ ಮೂರ್ತಿಂ ತಾಂಡವತತ್ಪರಾಂ ॥ ೭೬ ॥

ದ್ವಾದಶಾಂತೇ ಪದೇ ಧ್ಯಾತ್ವಾ ತಿಷ್ಠ ತ್ವಂ ಮಮ ಸನ್ನಿಧೌ ।
ಹಿರಣ್ಯಗರ್ಭಃಪರಮಸ್ಸರ್ವೇಷಾಂ ಜಗತಾಂ ಮುನೇ ॥ ೭೭ ॥

ಬ್ರಹ್ಮಣಶ್ಚ ಪರೋ ವಿಷ್ಣುರ್ವಿಷ್ಣೋರಪಿ ಹರಃ ಪರಃ ।
ಈಶ್ವರಸ್ತು ಹರಾಚ್ಛ್ರೇಷ್ಠ ಈಶ್ವರಾಚ್ಚ ಸದಾಶಿವಃ ॥ ೭೮ ॥

ಸದಾಶಿವಾತ್ಪರೋ ಬಿಂದುರ್ಬಿಂದೋರ್ನಾದಃಪರಃ ಸ್ಮೃತಃ ।
ಪರಾ ನಾದಾತ್ಪರಾಶಕ್ತಿಃಪರಾ ಶಕ್ತೇಃ ಪರಶ್ಶಿವಃ ॥ ೭೯ ॥

ಏತಾನಿ ನವ ತತ್ತ್ವಾನಿ ಲೀಯಂತೇ ಯತ್ರ ವಸ್ತುನಿ ।
ತದ್ವಸ್ತು ದ್ವಾದಶಾಂತಸ್ಥಂ ಪರಮಾನಂದತಾಂಡವಂ ॥ ೮೦ ॥

---

ಸಂಕಲ್ಪಿಸಿರುವ ನನ್ನ ವ್ರತವಾಗಿರುವುದು. ಪೂಜ್ಯವಾದ ನನ್ನ ತಾಂಡವಮೂರ್ತಿಯ ದರ್ಶನವನ್ನು ಮಾಡುತ್ತಾ ದ್ವಾದಶಾಂತವಾದ ಈ ಪ್ರದೇಶದಲ್ಲಿ ಅದನ್ನು ಧ್ಯಾನ ಮಾಡುತ್ತಾ ನನ್ನ ಸನ್ನಿಧಿಯಲ್ಲಿ ನೀನು ವಾಸವಾಗಿರು.

೭೭-೮೦. ಹಿರಣ್ಯಗರ್ಭನು ಎಲ್ಲಾ ಜಗತ್ತಿಗಿಂತಲೂ ಶ್ರೇಷ್ಠನಾಗಿರುವನು. ಬ್ರಹ್ಮನಿಗಿಂತಲೂ ವಿಷ್ಣುವೂ, ವಿಷ್ಣುವಿಗಿಂತ ಹರನೂ, ಹರನಿಗಿಂತ ಈಶ್ವರನೂ, ಶ್ರೇಷ್ಠರಾಗಿರುವರು. ಈಶ್ವರನಿಗಿಂತ ಸದಾಶಿವನು ಶ್ರೇಷ್ಠನು. ಸದಾಶಿವನಿಗಿಂತ ಬಿಂದುವು ಉತ್ತಮವು. ಬಿಂದುವಿಗಿಂತ ನಾದವು ಉತ್ತಮವು. ನಾದಕ್ಕಿಂತ ಪರಾ ಶಕ್ತಿಯು ಉತ್ತಮವು. ಪರಾಶಕ್ತಿಗಿಂತ ಶಿವನು ಶ್ರೇಷ್ಠನಾಗಿರುವನು. ಹಿರಣ್ಯ ಗರ್ಭ, ವಿಷ್ಣು, ರುದ್ರ, ಈಶ್ವರ, ಸದಾಶಿವ, ಬಿಂದು, ನಾದ, ಶಕ್ತಿ, ಶಿವ, ಎಂಬ ಒಂಭತ್ತು ತತ್ವಗಳಿಗೂ ಆಧಾರವಾಗಿರುವ ಪದಾರ್ಥವೇ ಆನಂದತಾಂಡವಮೂರ್ತಿಯು. ಅದನ್ನು ದ್ವಾದಶಾಂತಸ್ಥವೆಂದು ಹೇಳುವರು.

ತಸ್ಮಾತ್ತಾಂಡವಮೂರ್ತೇಸ್ತು ಪರಂ ಕಿಂಚಿನ್ನ ರಿಹಿ ಧ್ರುವಂ ।
ಇತಿ ಸಂಚಿತ್ಯ ಮತಿಮಾನನ್ಯತ್ಸರ್ವಂ ವಿಹಾಯ ಚ ॥ ೮೧ ॥

ಭಾವಯೇದ್ಭೋಗಮೋಕ್ಷಾರ್ಥಂ ಮೂರ್ತಿಂ ತಾಂಡವತತ್ಪರಾಂ ।
ಸೂಕ್ಷ್ಮಪಂಚಾಕ್ಷರಾಖ್ಯಸ್ಯ ಪ್ರಣವಸ್ಯ ಮಹಾಮನೋಃ ॥ ೮೨ ॥

ಮಹಾತಾಂಡವಮೂರ್ತೇಶ್ಚ ಪಂಚಕೃತ್ಯವಿಧಾಯಿನಃ ।
ವಾಚ್ಯವಾಚಕಸಂಬಂಧೋ ನಿತ್ಯ ಏವ ನ ಸಂಶಯಃ ॥ ೮೩ ॥

ತಸ್ಮಾತ್ಸಮಷ್ಟಿಭೂತಸ್ಯ ವೇದಮೂಲಮಹಾಮನೋಃ ।
ಅರ್ಥೋಹಮೇವ ವ್ಯಷ್ಟೇಶ್ಚ ಬ್ರಹ್ಮಾದ್ಯಾ ದೇವತಾಃ ಸ್ಮೃತಾಃ ॥ ೮೪ ॥

ದ್ವಾದಶಾಂತೇ ಮಮ ಪದೇ ಮಮೇದಂ ತಾಂಡವಂ ಕ್ಷಣಂ ।
ಯೇ ಧ್ಯಾಯಂತಿ ಚ ತೇ ಸರ್ವೇ ಜೀವನ್ಮುಕ್ತಾ ನ ಸಂಶಯಃ ॥ ೮೫ ॥

ಯೋ ವಾ ಕೋ ವಾ ಪುಣ್ಯಯೋಗಾನ್ಮಧ್ಯೇ ಜನ್ಮಸಕೃಜ್ಜನಃ ।
ದರ್ಶಯೇದ್ಯದಿ ಮನ್ನೃತ್ತಂ ಭುಕ್ತಿಮುಕ್ತ್ಯೋಃ ಸ ಭಾಜನಂ ॥ ೮೬ ॥

---

೮೧-೮೨. ತಾಂಡವಮೂರ್ತಿಗಿಂತಲೂ ಶ್ರೇಷ್ಠವಾದ ವಸ್ತುವು ಇನ್ನೊಂದು ಇಲ್ಲವು. ತಾಂಡವವನ್ನು ಮಾಡಲು ಚಿದಾನಂದಾಭಿವ್ಯಕ್ತಿಯು ಈ ಮೂರ್ತಿಯಲ್ಲಿ ನಿರತಿಶಯವಾಗಿ ಉಂಟಾಗುವುದೇ, ಇದರ ಉತ್ತಮತ್ವಕ್ಕೆ ಕಾರಣವು. ಈ ವಿಷಯ ವನ್ನು ತಿಳಿದುಕೊಂಡು ಬುದ್ಧಿವಂತನಾಗಿ ಬೇರೆ ಯೆಲ್ಲವನ್ನೂ ಬಿಟ್ಟು ಭುಕ್ತಿ ಮುಕ್ತಿ ಗಳಿಗಾಗಿ ತಾಂಡವಮೂರ್ತಿಯನ್ನು ಧ್ಯಾನಮಾಡಬೇಕು.

೮೩-೮೭. ಪ್ರಣವವು ಸೂಕ್ಷ್ಮವಾದ ಪಂಚಾಕ್ಷರಮಂತ್ರವೆಂಬ ಹೆಸರಿನಿಂದ ಇರುವುದು. ಈ ಪ್ರಣವಕ್ಕೂ ತಾಂಡವಮೂರ್ತಿಗೂ ವಾಚ್ಯ, ವಾಚಕ ಸಂಬಂಧವು ನಿತ್ಯವಾಗಿರುವುದು. ತಾಂಡವಮೂರ್ತಿಯು, ಸೃಷ್ಟಿ, ಸ್ಥಿತಿ, ಲಯ, ಅನುಗ್ರಹ, ತಿರೋಧಾನ, ವೆಂಬ ಪಂಚಕೃತ್ಯಗಳನ್ನು ಮಾಡುತ್ತಿರುವುದು. ವೇದಕ್ಕೂ ಮೂಲ

ತ್ವಯಾ ಕೃತಮಿದಂ ಸ್ತೋತ್ರಂ ಯಃ ಪಠೇದ್ಭಕ್ತಿಸಂಯುತಃ ।
ತಸ್ಯಾಯುರ್ದೀರ್ಘಮಾರೋಗ್ಯಂ ಸಂಪದಶ್ಚ ದದಾಮ್ಯಹಂ ॥ ೮೭ ॥

ಮಾಸೋತ್ತಮೇ ಮಾರ್ಗಶೀರ್ಷೇ ಮನ್ನಕ್ಷತ್ರೇ ಚ ಪುಣ್ಯದೇ ।
ಯಃ ಕಶ್ಚಿತ್ಸ್ವರ್ಣಪದ್ಮಿನ್ಯಾಂ ಭಾಸ್ಕರೇನುದಿತೇ ಸತಿ ॥ ೮೮ ॥

ಸಂಸ್ನಾಯ ದರ್ಶಯೇದತ್ರ ಮಮ ಸುಂದರತಾಂಡವಂ ।
ಸರ್ವಪಾಪವಿನಿರ್ಮುಕ್ತಸ್ಸರ್ವೈಶ್ವರ್ಯಸಮನ್ವಿತಃ ॥ ೮೯ ॥

ಇಹ ಭುಕ್ತ್ವಾಖಿಲಾನ್ಭೋಗಾನಂತೇ ಸಾಯುಜ್ಯಮಾಪ್ನುಯಾತ್ ।
ಹೇಮಪದ್ಮಾಕರೇ ತೀರ್ಥೇ ಸಂಸ್ನಾಯ ಪ್ರತಿವಾಸರಂ ॥ ೯೦ ॥

---

ವಾಗಿ, ಸಮಷ್ಟಿರೂಪದಿಂದ ಇರುವ ಈ ಮಹಾಮಂತ್ರಕ್ಕೆ ಸಮಷ್ಟಿಯಾಗಿರುವ ಅರ್ಥವು ನಾನೇ ಆಗಿರುವೆನು. ಬ್ರಹ್ಮನೇ ಮೊದಲಾದ ದೇವತೆಗಳು ವ್ಯಷ್ಟಿಯಾದ ಅರ್ಥವಾಗಿರುವರು. ದ್ವಾದಶಾಂತವಾದ ನನ್ನ ಈ ಸ್ಥಾನದಲ್ಲಿ ತಾಂಡವಮೂರ್ತಿಯನ್ನು ಧ್ಯಾನಮಾಡುವವರು ಜೀವನ್ಮುಕ್ತನಾಗಿರುವುದರಲ್ಲಿ ಸಂಶಯವಿಲ್ಲವು. ಯಾವನಾದರೂ ಒಬ್ಬನು ತನ್ನ ಪುಣ್ಯವಶದಿಂದ ತನ್ನ ಜನ್ಮಮಧ್ಯದಲ್ಲಿ ಈ ತಾಂಡವವನ್ನು ದರ್ಶನಮಾಡಿದರೆ ಅವನೂ ಭುಕ್ತಿ ಮುಕ್ತಿಗಳನ್ನು ಹೊಂದುವನು. ನೀನು ಮಾಡಿರುವ ನನ್ನ ಸ್ತೋತ್ರವನ್ನು ಭಕ್ತಿಯಿಂದ ಪಠಿಸುವವರಿಗೆ ಧೀರ್ಘಾಯುಷ್ಯವನ್ನೂ ಸಂಪತ್ತನ್ನೂ ಆರೋಗ್ಯವನ್ನೂ ನಾನು ಅನುಗ್ರಹಿಸುವೆನು.

೮೮–೮೯. ಮಾಸಗಳಿಗೆ ಶ್ರೇಷ್ಠವಾದ ಮಾರ್ಗಶಿರಮಾಸದಲ್ಲಿ, ಪುಣ್ಯಕರವಾದ ಆರ್ದ್ರಾನಕ್ಷತ್ರದ ದಿವಸ, ಸೂರ್ಯೋದಯಕ್ಕೆ ಮುಂಚಿತವಾಗಿ ಹೇಮಪದ್ಮಿನಿಯಲ್ಲಿ ಸ್ನಾನಮಾಡಿ, ನನ್ನ ಸುಂದರವಾದ ತಾಂಡವವನ್ನು ದರ್ಶನಮಾಡುವವನು ಎಲ್ಲಾ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವನು. ಸಕಲವಿಧವಾದ ಸಂಪತ್ತುಗಳನ್ನೂ ಹೊಂದುವನು. ಈ ಲೋಕಗಳಲ್ಲಿ ಬಹಳ ಭೋಗಗಳನ್ನು ಅನುಭವಿಸುವನು. ಕೊನೆಯಲ್ಲಿ ಅವನು ನನ್ನಲ್ಲಿ ಸಾಯುಜ್ಯವನ್ನು ಹೊಂದುವನು.

೯೦–೯೩. ಹೇಮಪದ್ಮಾಕರ ತೀರ್ಥದಲ್ಲಿ ಪ್ರತಿದಿನವೂ ಸ್ನಾನಮಾಡಿ, ಮೀನಾಕ್ಷೀಮಹಾದೇವಿಯನ್ನೂ, ಹಾಲಾಸ್ಯೇಶ್ವರಲಿಂಗವನ್ನೂ, ದರ್ಶನಮಾಡಿ

**ಸುಮೀನಾಕ್ಷೀಂ ಮಹಾದೇವೀಂ ಮಹಾಲಿಂಗಂ ಮದೀಯಕಂ ।**
**ಪ್ರದಕ್ಷಿಣನಮಸ್ಕಾರ ಸ್ತೋತ್ರೈಃ ಸಂತೋಷ್ಯ ಭಕ್ತಿಮಾನ್ ॥ ೯೧ ॥**

**ಸಭಾಂ ತೌಷ್ಯಮಯೀಂ ಪ್ರಾಪ್ಯ ಮಹಾಮಂಟಪಮಧ್ಯಗಾಂ ।**
**ಮದೀಯಾಂ ಮಹತೀಂ ನಿತ್ಯಾಂ ಮೂರ್ತಿಂ ತಾಂಡವಪಂಡಿತಾಂ ॥ ೯೨ ॥**

**ಪ್ರಣಿಪತ್ಯ ಚ ಮನ್ಮಂತ್ರಮಷ್ಟೋತ್ತರಸಹಸ್ರಕಂ ।**
**ಮದಗ್ರತೋ ಜಪೇದ್ಯಸ್ತು ಸಮುಕ್ತಸ್ಸರ್ವಪಾತಕೈಃ ॥ ೯೩ ॥**

**ಧನುರ್ಮಾಸಗತಾದ್ರಾರ್ಯಾಂ ಸಮಾರಭ್ಯ ವಿಶುದ್ಧಧೀಃ ।**
**ಸ್ನಾನಾದ್ಯಂ ನಿಯಮಂ ಸರ್ವಂ ವತ್ಸರಾಂತೇ ಸಮಾಪಯೇತ್ ॥ ೯೪ ॥**

**ವಿದ್ಯಾರ್ಥೀ ಲಭತೇ ವಿದ್ಯಾಂ ಕನ್ಯಾರ್ಥೀ ಕನ್ಯಕಾಂ ಲಭೇತ್ ।**
**ಪುತ್ರಾರ್ಥೀ ಪುತ್ರವಾನ್ರೋಗೀ ಲಭೇದಾರೋಗ್ಯಮುತ್ತಮಂ ॥ ೯೫ ॥**
**ಯಂ ಯಂ ಕಾಮಮಭಿಧ್ಯಾಯನ್ಸಂವತ್ಸರಮಹಾ ವ್ರತಂ ।**
**ಕರೋತಿ ನಿಯಮೇನೈವ ತಂ ತಂ ಕಾಮಂ ಲಭೇನ್ನರಃ ॥ ೯೬ ॥**

---

ನನ್ನನ್ನು ಪ್ರದಕ್ಷಿಣ, ನಮಸ್ಕಾರ, ಸ್ತೋತ್ರಗಳಿಂದ ಸಂತೋಷಪಡಿಸಿ, ಮಹಾಮಂಟಪದ ಮಧ್ಯದ ರಜತಸಭೆಯಲ್ಲಿ ಇರುವ, ಮಹಿಮೆಯುಳ್ಳದ್ದಾದ, ಮತ್ತು ಶಾಶ್ವತವಾದ, ನನ್ನ ತಾಂಡವಮೂರ್ತಿಯನ್ನು ದರ್ಶನಾದಿಗಳಿಂದ ಸಂತೋಷಪಡಿಸಿ, ನನ್ನ ಎದುರಿನಲ್ಲಿ ಇದ್ದು ನನ್ನ ಮೂಲಮಂತ್ರವನ್ನು ಸಾವಿರದಎಂಟುಸಾರಿ ಜಪಮಾಡಿದವನು ಎಲ್ಲಾ ಪಾತಕಗಳಿಂದಲೂ ಮುಕ್ತನಾಗುವನು.

೯೪-೯೬. ಧನುರ್ಮಾಸದ ಆರ್ದ್ರಾನಕ್ಷತ್ರದ ದಿವಸ ವ್ರತವನ್ನು ಪ್ರಾರಂಭಿಸಿ ಪರಿಶುದ್ಧನಾಗಿ ತನ್ನ ವ್ರತದ ಸ್ನಾನವೇ ಮೊದಲಾದ ನಿಯಮಗಳನ್ನು ಒಂದು ವರ್ಷದ ಕೊನೆಗೆ ಮುಗಿಸತಕ್ಕದ್ದು. ಈ ವ್ರತಾಚರಣೆಯಿಂದ ವಿದ್ಯಾರ್ಥಿಗೆ ವಿದ್ಯೆಯು ಬೇಗನೆ ಬರುವುದು. ಕನ್ಯೆಯನ್ನು ಅಪೇಕ್ಷಿಸುವವನಿಗೆ ಕನ್ಯಾಪ್ರಾಪ್ತಿಯಾಗುವುದು. ಪುತ್ರರಿಲ್ಲದವರು ಈ ವ್ರತಾಚರಣೆಯಿಂದ ಪುತ್ರರನ್ನು ಪಡೆಯುವರು. ರೋಗಿಯಾದವನು ಸಂವತ್ಸರ ವ್ರತಾಚರಣೆಯಿಂದ ರೋಗವಿಲ್ಲದವನಾಗುವನು. ನಿಯಮದಿಂದ ಇರುತ್ತಾ ಒಂದು ಸಂವತ್ಸರ ಈ ವ್ರತಾಚರಣೆ ಮಾಡಿದರೆ ಅವರವರಿಗೆ ಬೇಕಾಗುವ ಇಷ್ಟಸಿದ್ಧಿಗಳೆಲ್ಲವನ್ನೂ ಅವರವರು ಪಡೆಯುವರು

ತ್ವಮನ್ಯತ್ರ ಚಿರಂ ಕಾಲಂ ಮತ್ಪುರೇ ಮಧುರಾಪುರೇ ।
ಅನುಭೂಯಾತುಲಂ ಸೌಖ್ಯಂ ತತೋ ಮುಕ್ತೋ ಭವಿಷ್ಯಸಿ ॥ ೯೭ ॥

ಅತಿರಹಸ್ಯಮಿದಂ ಮಮ ತಾಂಡವಂ ।
ಭವಮಹೋದಧಿತಾರಣಕಾರಣಂ ।
ಶಿವಕರಂ ಚ ಸಕೃತ್ಪರಿಪಶ್ಯತಾ ।
ಮಿಹ ಸದಾ ಪರಿದೃಶ್ಯಮಭೂತ್ತ್ವಯಾ ॥ ೯೮ ॥

ಇತಿ ವಾಚಾ ಕೃಪಾದೃಷ್ಟ್ಯಾಪ್ಯನುಗೃಹ್ಯ ಪತಂಜಲಿಂ ।
ಸರ್ವಾನ್ಸಂಪ್ರೇಷಯಾಮಾಸ ಭೋಜನಾಯ ಮುನೀಶ್ವರಾಃ ॥ ೯೯ ॥

ತದಾ ಪ್ರಭೃತಿ ಹಾಲಾಸ್ಯೇ ತಾಂಡವಂ ಮಹದದ್ಭುತಂ ।
ರೌಪ್ಯಸಂಸದಿ ಸುವ್ಯಕ್ತಮಭೂತ್ಸಚ್ಚಿತ್ಸುಖಾತ್ಮಕಂ ॥ ೧೦೦ ॥

---

೯೭. ಎಲೈ ಪತಂಜಲಿಯೇ, ನೀನೂಕೂಡ ಈ ಮಧುರಾನಗರದಲ್ಲಿ ಬಹಳ ಕಾಲದವರೆಗೂ ಯಾರೂ ಹೊಂದಲಶಕ್ಯವಾದ ಸುಖಗಳನ್ನು ಅನುಭವಿಸಿದನಂತರ ನನ್ನಲ್ಲಿಯೇ ಸಾಯುಜ್ಯವನ್ನು ಹೊಂದುತ್ತೀಯೆ.

೯೮-೯೯. ನನ್ನ ತಾಂಡವವನ್ನು ದರ್ಶನಮಾಡುವುದು ಬಹಳ ರಹಸ್ಯಕರವಾದದ್ದು. ಇದರಲ್ಲಿ ಸಂಸಾರಸಾಗರವನ್ನು ದಾಟಿಸುವ ಸಾಮರ್ಥ್ಯವು ಇರುವುದು. ಇವೆಲ್ಲವನ್ನೂ ಒಂದುಸಾರಿ ದರ್ಶನದ ಮಾತ್ರದಿಂದಲೇ ನೋಡಿದವರಿಗೆ ಶಿವಭಾವವುಂಟಾಗುವುದು. ಆದ್ದರಿಂದ ಇಷ್ಟು ಮಹಿಮೆಯುಳ್ಳ ತಾಂಡವವನ್ನು ನೀನು ಇಲ್ಲಿದ್ದುಕೊಂಡು ಯಾವಾಗಲೂ ನೋಡುತ್ತಾ ಸುಖವಾಗಿ ಇರು.'' ಎಂದು ಸುಂದರೇಶ್ವರನು ಹೇಳಿ ಪತಂಜಲಿಋಷಿ ಮತ್ತು ಇತರ ಋಷಿಗಳೆಲ್ಲರಿಗೂ ಅನುಗ್ರಹವನ್ನು ಮಾಡಿ ಎಲ್ಲರನ್ನೂ ಭೋಜನಮಾಡಲು ಕಳುಹಿಸಿದನು.

೧೦೦-೧೦೧. ಆ ಕಾಲವನ್ನು ಪ್ರಾರಂಭಿಸಿ, ಹಾಲಾಸ್ಯಕ್ಷೇತ್ರದ ರಜತ ಸಭೆಯಲ್ಲಿ ಬಹಳ ಆಶ್ಚರ್ಯಕರವಾದ ತಾಂಡವವು ಎಲ್ಲರಿಗೂ ವ್ಯಕ್ತವಾಗಲು

**ಇತಿ ಹಾಲಾಸ್ಯನಾಥಸ್ಯ ಷಷ್ಠೀಲೀಲಾ ಪ್ರಕೀರ್ತಿತಾ ।**
**ಶ್ರೋತ್ರೂಣಾಂ ಪಠತಾಂ ಪುಂಸಾಂ ಸರ್ವಾಭೀಷ್ಟಪ್ರದಾಯಿನೀ ॥ ೧೦೧ ॥**

**ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ**
**ಹಾಲಾಸ್ಯಮಾಹಾತ್ಮ್ಯೇ ನೃತ್ತದರ್ಶನಂ ನಾಮ**
**॥ ದಶಮೋಽಧ್ಯಾಯಃ ॥**

---

ಪ್ರಾರಂಭವಾಯಿತು. ಹಾಲಾಸ್ಯೇಶ್ವರನಾದ ಸೋಮಸುಂದರೇಶ್ವರನು ಆಚರಿಸಿದ ಲೀಲೆಗಳಲ್ಲಿ ಆರನೆಯದಾದ ಈ ಪ್ರಕಾರವಾದ ಲೀಲೆಯನ್ನು ವಿವರವಾಗಿ ಹೇಳಿರುವೆನು.

ಸಂಪದ್ಯುಕ್ತವಾದ ಸ್ಕಾಂದಪುರಾಣದಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯ
ಮಹಿಮೆಯಲ್ಲಿ ತಾಂಡವ ದರ್ಶನವೆಂಬ ಹೆಸರುಳ್ಳ
ಹತ್ತನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ

## ಏಕಾದಶೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

**ಅಥ ಹಾಲಾಸ್ಯನಾಥಸ್ಯ ಲೀಲಯಾ ಚಿತ್ರಯಾ ಯಯಾ ।**
**ಕುಂಡೋದರೋ ಹ್ರಸ್ವಭೂತಃಸರ್ವಾಣ್ಯಂಧೋಮುಖಾನಿ ಚ ॥ ೧ ॥**

**ಪಕ್ವಾಪಕ್ವಾನಿ ವಸ್ತೂನಿ ಸಹಸಾ ಸಮಭಕ್ಷಯತ್ ।**
**ತಾಂ ಲೀಲಾಂ ಕಥಯಾಮ್ಯಾರ್ಯಾಃ ಶೃಣುಧ್ವಂ ಶೋಭನಪ್ರದಾಂ ॥ ೨ ॥**

---

### ಹನ್ನೊಂದನೆಯ ಅಧ್ಯಾಯವು

೧–೨. ಅಗಸ್ತ್ಯಋಷಿಯು ಹೇಳಿದನು :—ಕುಂಡೋದರನೆಂಬ ಭೂತವು ಸಣ್ಣ ಆಕಾರವುಳ್ಳವನಾಗಿದ್ದರೂ ಪಕ್ವವಾದ ಮತ್ತು ಪಕ್ವವಾಗದೆ ಇರುವ ಆಹಾರ ಪದಾರ್ಥಗಳೆಲ್ಲವನ್ನೂ ಬೇಗನೆ ಭೋಜನಮಾಡಿದನು. ಹ್ರಸ್ವವಾಗಿ ಇರುವ ಶರೀರ ದಿಂದ ಬಹಳ ಪದಾರ್ಥಗಳನ್ನು ಭೋಜನಮಾಡುವಷ್ಟು ಸಾಮರ್ಥ್ಯವು ಬಹಳ ಉಂಟಾಗಲು ಹಾಲಾಸ್ಯೇಶ್ವರನು ಅನುಗ್ರಹಮಾಡಿದ ಆಶ್ಚರ್ಯಕರವಾದ ಲೀಲೆಯು ಕಾರಣವಾಗಿರುವುದು. ಕೇಳಿದವರಿಗೆ ಶ್ರೇಯಸ್ಸನ್ನುಂಟುಮಾಡುವ ಈ ಲೀಲೆ ಯನ್ನು ಈಗ ವಿಸ್ತಾರವಾಗಿ ಹೇಳುವೆನು. ಮುನಿಶ್ರೇಷ್ಠರೆಲ್ಲರೂ ಕೇಳಿರಿ.

ಪತಂಜಲಿಮುಖಾಸ್ಸರ್ವೇ ಶಿವಜ್ಞಾನವಿಶಾರದಾಃ ।
ಮುನೀಂದ್ರಾಶ್ಚ ನರೇಂದ್ರಾಶ್ಚ ಫಣೀಂದ್ರಾಶ್ಚ ಜನಾಃ ಪರೇ ॥ ೩ ॥

ಯೇ ಚಾನ್ಯೇ ಪ್ರಥಿತಾಸ್ಸಂತೋ ಭೋಕ್ತುಂ ಯೋಗ್ಯಾಸ್ತದುತ್ಸವೇ ।
ಉಪವಿಷ್ಟಾಶ್ಚಾಸನೇಷು ಯಥಾರ್ಹಂ ಕಲ್ಪಿತೇಷು ಚ ॥ ೪ ॥

ಸೌವರ್ಣೇಷು ಚ ಪಾತ್ರೇಷು ಪ್ರತ್ಯೇಕಂ ಸ್ಥಾಪಿತೇಷು ಚ ।
ಸಮರ್ಪಿತಾನಿ ಸರ್ವಾಣಿ ಸುಪಕ್ವಾನಿ ಫಲಾನಿ ಚ ॥ ೫ ॥

ರಸವಂತಿ ಸುಗಂಧೀನಿ ಸಿತಾಪೂಪಾದಿಕಾನಿ ಚ ।
ಪಾಯಸಾದೀನಿ ಭಕ್ಷ್ಯಾಣಿ ಸುಭೋಜ್ಯಾನಿ ಬಹೂನಿ ಚ ॥ ೬ ॥

ಘೃತಕ್ಷೌದ್ರಪಯೋಭಿಶ್ಚ ಷಡ್ರಸೈಶ್ಚ ಸಮನ್ವಿತಂ ।
ಭುಕ್ತ್ವಾ ಕರ್ಪೂರತಾಂಬೂಲಂ ಲಬ್ಧ್ವಾ ಸಂತುಷ್ಟಮಾನಸಾಃ ॥ ೭ ॥

ಸುಗಂಧಾಲಿಪ್ತಗಾತ್ರಾಶ್ಚ ಸುಂದರೇಶಂ ಪ್ರಣಮ್ಯ ಚ ।
ಸ್ವಂ ಸ್ವಂ ನಿವೇಶಂ ಪ್ರಾಪುಸ್ತೇ ಸತ್ಕೃತಾ ಭೂಷಣಾಂಬರೈಃ ॥ ೮ ॥

---

೩–೪. ಶಿವಜ್ಞಾನನಿಪುಣರಾದ ಪತಂಜಲಿಯೇ ಮುಂತಾದ ಋಷಿಗಳೂ, ರಾಜರೂ, ನಾಗಶ್ರೇಷ್ಠರೂ, ಇತರ ಜನಗಳೂ, ಆ ಉತ್ಸವದಲ್ಲಿ ಭೋಜನಮಾಡಲು ಯೋಗ್ಯರಾದವರೆಲ್ಲರೂ ಆಗ ಭೋಜನಶಾಲೆಯಲ್ಲಿ ತಮ್ಮ ತಮ್ಮ ಯೋಗ್ಯತೆಗೆ ಅನುಸಾರವಾಗಿ ಸಿದ್ಧಪಡಿಸಿದ ಆಸನಗಳಲ್ಲಿ ಕೂತುಕೊಂಡರು.

೫–೬. ಆಗ ಅಲ್ಲಿರುವ ಜನರು ಅವರೆಲ್ಲರಿಗೂ ಬೇರೆ ಬೇರೆಯಾಗಿ ಚಿನ್ನದ ಪಾತ್ರೆಗಳನ್ನು ಇರಿಸಿದರು. ಚೆನ್ನಾಗಿ ಹಣ್ಣಾಗಿರುವ ನಾನಾ ವಿಧವಾದ ಹಣ್ಣುಗಳನ್ನೂ ಬಡಿಸಿದರು. ಸುವಾಸನೆಯನ್ನು ಹೊಂದಿ ಬಹಳ ರುಚಿಯಾಗಿರುವಂತೆ ಮಾಡಿರುವ ಸಿಹಿಯಾದ ಪದಾರ್ಥಗಳನ್ನೂ, ಅನೇಕ ವಿಧವಾದ ಅನ್ನಗಳನ್ನೂ ಭಕ್ಷ್ಯಭೋಜ್ಯಗಳನ್ನೂ ಬೇಕಾದಹಾಗೆ ಬಡಿಸಿದರು.

೭–೮. ಆಗ ಭೋಜನಕ್ಕಾಗಿ ಬಂದಿದ್ದವರೆಲ್ಲರೂ ತುಪ್ಪ, ಜೇನು, ಹಾಲು ಇವುಗಳಿಂದಲೂ ಮಧುರ, ಆಮ್ಲ, ಕಟು, ತಿಕ್ತವೇ ಮೊದಲಾದ ಆರು ವಿಧವಾದ ರಸಗಳಿಂದಲೂ ಕೂಡಿರುವ ಅನೇಕ ವಿಧವಾದ ಪದಾರ್ಥಗಳನ್ನೂ ಊಟಮಾಡಿದರು. ಅನಂತರದಲ್ಲಿ ಅವರು ಎಲ್ಲರೂ ಕರ್ಪೂರದಿಂದ ಕೂಡಿರುವ ತಾಂಬೂಲವನ್ನು

ತತಸ್ತೇಷು ಚ ಸರ್ವೇಷು ಗತೇಷು ಸ್ವಾಲಯಂ ಪ್ರತಿ ।
ಐಶ್ವರ್ಯಸ್ಮಯಸಂಯುಕ್ತಾ ಮುದಿತಾಶಾ ಮಹೋತ್ಸವಾತ್ ॥ ೯ ॥

ಪ್ರದ್ಯೋತನಕರಸ್ಪರ್ಶಫುಲ್ಲಪದ್ಮಸಮಾನನಾ ।
ಮಹಾರಾಜಕುಮಾರೀ ಸಾ ಮಧುರಾನಾಯಕೇಶಿತುಃ ॥ ೧೦ ॥

ತಟಾತಕಾ ಧರ್ಮಪತ್ನೀ ಮಹಿತೇ ಮಣಿಮಂಟಪೇ ।
ಸುಪ್ರೀತಯಾ ಜನನ್ಯಾ ಚ ಸಹಿತಾಸ್ತೇಽತಿಸುಂದರೀ ॥ ೧೧ ॥

ತದಾ ಮಹಾನಸಾಧ್ಯಕ್ಷಾಃ ಸಮಾಗತ್ಯ ಪ್ರಣಮ್ಯ ಚ ।
ಸರ್ವೇ ವಿಜ್ಞಾಪಯಾಮಾಸುಸ್ಸಮರ್ಥಾಸ್ಸರ್ವಕರ್ಮಸು ॥ ೧೨ ॥

ಚಂದ್ರಾನ್ವಯಸಮಾಶ್ವಾಸಹೇತುಭೂತೇ ಶುಭಾಕೃತೇ ।
ಝುಷಕೇತನಶಾಸ್ತುಶ್ಚ ಸಮ್ಮೋಹನತನುಪ್ರಭೇ । ॥ ೧೩ ॥

---

ಸ್ವೀಕರಿಸಿ, ಸುಗಂಧದಿಂದ ಅನುಲಿಪ್ತರಾಗಿ, ಮಾಲ್ಯಾಲಂಕೃತರಾಗಿ, ಅವರೆಲ್ಲರೂ ಸುಂದರೇಶ್ವರನಿಗೆ ವಂದಿಸಿದನಂತರ ತಮ್ಮ ತಮ್ಮ ಯೋಗ್ಯತಾನುಸಾರವಾಗಿ ಭೂಷಣಾಂಬರಗಳನ್ನು ಹೊಂದಿ, ತಮ್ಮ ತಮ್ಮ ವಾಸಸ್ಥಾನಗಳಿಗೆ ಹೊರಟುಹೋದರು.

೯-೧೧. ಅವರೆಲ್ಲರೂ ಹೊರಟುಹೋದನಂತರ, ಆಗ ಅರಳಿದ ಕಮಲದಂತಿರುವ ಮುಖವುಳ್ಳವಳಾದ, ಮಹಾರಾಜಕುಮಾರಿಯೂ, ಸುಂದರಪಾಂಡ್ಯೇಶ್ವರನ ಧರ್ಮಪತ್ನಿಯೂ ಆಗಿರುವ ತಟಾತಕಾದೇವಿಯು, ವಿವಾಹಮಹೋತ್ಸವದ ಸಂತೋಷವನ್ನು ಅನುಭವಿಸುತ್ತಾ ಬಹಳ ಸಂತೋಷದಿಂದ ಇದ್ದಳು. ಆದರೆ ಈ ದೇವಿಗೆ ತನ್ನ ಐಶ್ವರ್ಯದ ವಿಷಯದಲ್ಲಿ ಕೊಂಚಮಟ್ಟಿಗೆ ಗರ್ವವು ಉಂಟಾಗಿತ್ತು. ಅತಿ ಸುಂದರಿಯಾದ ಆ ದೇವಿಯು ಅಲಂಕೃತವಾದ ರತ್ನಖಚಿತವಾದ ಸಭಾಮಂಟಪದಲ್ಲಿ ತನ್ನ ತಾಯಿಯೊಡನೆ ಸುಖವಾಗಿರುತ್ತಿದ್ದಳು.

೧೨-೧೬. ಆಗ ಪಾಕಶಾಲೆಯಲ್ಲಿ ಬುದ್ಧಿವಂತಿಕೆಯಿಂದ ಕೆಲಸಗಳನ್ನು ನಡೆಸುವವರಲ್ಲಿ ಮುಖ್ಯಸ್ಥರಾದವರು ಬಂದು, ದೇವಿಗೆ ನಮಸ್ಕರಿಸಿ ವಿಜ್ಞಾಪಿಸಿದರು. “ ಚಂದ್ರವಂಶವು ಉಳಿಯುವುದರಲ್ಲಿ ಕಾರಣಳಾಗಿ, ಮಂಗಳಕರವಾದ ಅಂಗಗಳನ್ನು ಧರಿಸಿರುವ ತಟಾತಕಾದೇವಿಯೆ, ನೀನು ಕಾಮನನ್ನು ಭಸ್ಮಮಾಡಿದ ಪರಮೇಶ್ವರನನ್ನು ಮೋಹಗೊಳಿಸುವ ಪರಮ ಸುಂದರಿಯಾಗಿರುತ್ತೀಯೆ. ಎಲೈ ದೇವಿಯೇ ನಿನ್ನ ಆಜ್ಞೆಯಂತೆ ನಾವೆಲ್ಲರೂ ನಾನಾವಿಧವಾದ ಆಹಾರ ಪದಾರ್ಥಗಳನ್ನೂ ಬಹಳ

**ಅನ್ನಂ ಬಹುವಿಧಂ ಚಾತಿ ಬಹುಳಂ ತ್ವದನುಜ್ಞಯಾ ।**
**ವಯಂ ಪಚಾಮಹೇ ದೇವಿ ಸವ್ಯಂಜನಮನುತ್ತಮಂ ॥ ೧೪ ॥**

**ಅನೇಕಧಾಪಿ ಭಕ್ತಂ ತತ್ಪುರುಷೈರಪ್ಯಖಂಡಿತಂ ।**
**ಆಗಮಿಷ್ಯತಿ ಭೂತೇಶೋ ಭೂತಸಂಘಸಮಾವೃತಃ ॥ ೧೫ ॥**

**ತೇಷಾಮಭ್ಯವಹಾರಾರ್ಥಂ ಭಕ್ತಂ ಸರ್ವಮಖಂಡಿತಂ ।**
**ಉಚ್ಛ್ರಿತಂ ವಿವಿಧಂ ಚಾನ್ನಂ ಸರ್ವೋಪಸ್ಕರಸಂಯುತಂ ॥ ೧೬ ॥**

**ಸಂತಿ ಕಿಂ ಭೋಕ್ತುಮಾಯಾತಾಃ ಕತಿಚಿತ್ಪುರುಷಾಃ ಪುನಃ ।**
**ತಚ್ಛ್ರುತ್ವಾ ವಚನಂ ತೇಷಾಂ ಪ್ರಹರ್ಷೋಲ್ಲಸಿತಾನನಾ ॥ ೧೭ ॥**

**ಉತ್ಥಾಯ ಸಹಸಾ ದೇವೀ ಸಖೀಭಿಶ್ಚ ಸಮಾವೃತಾ ।**
**ಸಂಪಾದಿತಂ ಸರ್ವಭೂತಭುಕ್ತ್ಯೈ ಭಕ್ತಂ ವಿಲೋಕ್ಯ ಚ ॥ ೧೮ ॥**

**ಭರ್ತಾರಮುಪಗಮ್ಯಾಥ ಸುವಿನೀತಾ ಸುಮಧ್ಯಮಾ ।**
**ವಾಚಾ ಮಧುರಯಾ ಪ್ರಾಹ ದೇವೀ ದೇವಂ ತಟಾತಕಾ ॥ ೧೯ ॥**

---

ಮಟ್ಟಿಗೆ ಸಿದ್ಧಮಾಡಿದೆವು. ಅವೆಲ್ಲವೂ ವ್ಯಂಜನಪದಾರ್ಥಗಳೊಡನೆ ಉತ್ತಮೋತ್ತಮವಾಗಿರುವವು. ಬಹಳ ಜನರು ಭೋಜನ ಮಾಡಿದರೂ ಅದು ಮುಗಿದಿಲ್ಲ. ಭೂತಪತಿಯಾದ ಪರಮೇಶ್ವರನು ಭೂತಗಳ ಹಿಂಡಿನೊದನೆ ಬರುವನಾದ್ದರಿಂದ ಆ ಭೂತಗಳ ಭೋಜನಕ್ಕಾಗಿ ಅವೆಲ್ಲವನ್ನೂ ಹಾಗೆಯೇ ಇರಿಸಿರುವೆವು. ಬಹಳ ಶ್ರೇಷ್ಠವಾದ ಅನ್ನವೆಲ್ಲವೂ ವ್ಯಂಜನಸಹಿತವಾಗಿ ಹಾಗೆಯೇ ಇರುವುದರಿಂದ ಇನ್ನೂ ಯಾರಾದರೂ ಭೋಜನಕ್ಕಾಗಿ ಬರುವವರು ಇದ್ದಲ್ಲಿ ಅವರು ಬರಬಹುದು."

೧೭–೧೮. ಎಂದು ಹೇಳಿದ ಅವರ ಮಾತನ್ನು ಕೇಳಿ ತಟಾತಕಾದೇವಿಯು ಸಂತೋಷದಿಂದ ತನ್ನ ಸಖಿಯರೊಡನೆ ಪಾಕಶಾಲೆಗೆ ಬಂದು ಭೂತಗಳ ಭೋಜನಕ್ಕಾಗಿ ಸಿದ್ಧವಾಗಿ ಅಲ್ಲಿರುವ ಪದಾರ್ಥಗಳೆಲ್ಲವನ್ನೂ ತಾನೇ ನೋಡಿದಳು.

೧೯–೨೨. ಅನಂತರದಲ್ಲಿ ಆ ದೇವಿಯು ತನ್ನ ಪತಿಯಾದ ಸುಂದರೇಶ್ವರನ ಸಮೀಪಕ್ಕೆ ಬಂದಳು. ಅವಳು ದೇವನ ಸನ್ನಿಧಿಯಲ್ಲಿ ವಿನಯದಿಂದ ಮೃದುವಾಗಿ ಮಾತನಾಡಿದಳು. "ನೀನು ಪರಮಾತ್ಮನಾಗಿರುತ್ತೀಯೆ, ಭೂತಗಳೆಲ್ಲವೂ ನಿನ್ನ

ಆತ್ಮನಾಯಕಭೂತೇಶ ಸರ್ವಲೋಕೇಶ್ವರೇಶ್ವರ ।
ಮನ್ಮನೋ ಭ್ರಮರಸ್ಯಾಸ್ಯ ಮಕರಂದಪ್ರವಾಹದ ॥ ೨೦ ॥

ಕೃಪಯಾ ಮಮ ವಿಜ್ಞಪ್ತಿಂ ಶೃಣು ಕಲ್ಯಾಣಸುಂದರ ।
ಮುನೀಂದ್ರಾದ್ಯಾಶ್ಚ ತೇ ಸರ್ವೇ ಭುಕ್ತ್ವೇದಾನೀಂ ಗತಾ ಮುದಾ ॥ ೨೧ ॥

ಭೂತಾನಾಂ ಚ ಗಣಾನಾಂ ಚ ತ್ವದೀಯಾನಾಂ ಚ ಭುಕ್ತಯೇ ।
ಅನ್ನಂ ಬಹುವಿಧಂ ಪಕ್ವಂ ಸ್ವಾಮಿರ್ಕೇಭ್ಯಃ ಪ್ರದೀಯತೇ ॥ ೨೨ ॥

ಕ್ಷಣಾತ್ತದನ್ನಮಖಿಲಂ ವೈಗಂಧ್ಯಂ ಹಿ ಸಮಾವಹೇತ್ ।
ತಟಾತಕಾಚಚಶ್ರುತ್ವಾ ಶಂಕರಸ್ಸೋಮಸುಂದರಃ ॥ ೨೩ ॥

ಪ್ರಾಹೇದಾನೀಂ ಮದೀಯಸ್ತು ಜನೋ ನಾಸ್ತಿ ಬುಭುಕ್ಷಿತಃ ।
ತನ್ಮೈಶ್ವರ್ಯಪ್ರಭಾವೇಣ ಭಕ್ತಂ ಸೋಪಸ್ಕರಂ ಬಹು ॥ ೨೪ ॥

---

ಅಧೀನದಲ್ಲಿರುವುವು. ಎಲ್ಲಾ ಲೋಕೇಶರಿಗೂ ನೀನು ಅಧಿಪತಿಯಾಗಿರುತ್ತೀಯೆ. ಮತ್ತು ನನ್ನ ಮನಸ್ಸೆಂಬ ದುಂಬಿಯ ಆನಂದಪ್ರವಾಹವು ನಿನ್ನ ದರ್ಶನದಿಂದ ಹೆಚ್ಚು ತ್ತಿರುವುದು. ಎಲೈ ಕಲ್ಯಾಣಸುಂದರದೇವನೆ ನೀನು ನನ್ನ ವಿಜ್ಞಾಪನೆಯನ್ನು ದಯೆಯಿಂದ ಲಾಲಿಸಬೇಕು. ಮುನೀಂದ್ರರೇ ಮೊದಲಾದವರೆಲ್ಲರೂ ಭೋಜನವನ್ನು ನೆರವೇರಿಸಿಕೊಂಡು ಸಂತೋಷದಿಂದ ಪ್ರಯಾಣಮಾಡಿದರು. ನಿನ್ನ ಕಡೆಯುವರಾದ ಭೂತಗಳೂ, ಗಣಗಳೂ ಇವೆಲ್ಲಕ್ಕೂ ತೃಪ್ತಿಯಾಗುವಂತೆ ಭೋಜನಮಾಡಿಸಲು ಬಹಳ ವಿಧವಾದ ಅನ್ನವೇ ಮೊದಲಾದುವುಗಳನ್ನು ಸಿದ್ಧಪಡಿಸಿರುವುದರಿಂದ ಅವು ಗಳನ್ನು ಯಾರಿಗೆ ಕೊಡಲಿ. ಎಲೈ ಪ್ರಭುವೆ, ಇನ್ನೊಂದು ಕ್ಷಣವು ನಿಧಾನಮಾಡಿದರೆ ಅವೆಲ್ಲವೂ ಕೆಟ್ಟುಹೋಗುವವು " ಎಂದು ಹೇಳಿದಳು.

೨೩–೨೬. ಸೋಮಸುಂದರೇಶ್ವರನೆಂದು ಹೆಸರಿನಿಂದ ಇರುವ ಶಂಕರನು ತಟಾತಕಾದೇವಿಯ ಮಾತನ್ನು ಕೇಳಿ, "ನನ್ನ ಕಡೆಯವರಿಗೆ ಯಾರಿಗೂ ಹಸಿವೆಯೇ ಇಲ್ಲ. ನೀನು ನಿನ್ನ ಐಶ್ವರ್ಯದ ಮಹಿಮೆಯಿಂದ ಬಹಳವಾಗಿ ಪದಾರ್ಥಗಳನ್ನು ಸಿದ್ಧಮಾಡಿದ್ದರೆ ನಾನು ಯಾರನ್ನು ಭೋಜನಕ್ಕೆ ಕಳುಹಿಸಲಿ," ಎಂದು ಹೇಳುತ್ತಾ, ಸರ್ವಾಂತರ್ಯಾಮಿಯಾದ ದೇವದೇವನು ತನ್ನ ಹತ್ತಿರದಲ್ಲಿ ಕೂತಿದ್ದ ಕುಂಡೋದರ ನೆಂಬ ಭೂತವನ್ನು ನೋಡಿದನು. ಮತ್ತು ಆ ಭೂತದ ಜಠರಾಗ್ನಿಯು ಸಮುದ್ರ

**ಸಂಪಾದಿತಂ ಚೇದ್ಭುಕ್ತ್ಯೈ ಚ ಮಯಾ ಕಸ್ಮೈ ಪ್ರದೀಯತೇ ।**
**ಇತ್ಯುಕ್ತ್ವಾ ದೇವದೇವಸ್ತು ಸರ್ವಸ್ಸರ್ವಾಂತರಸ್ಥಿತಃ ॥ ೨೫ ॥**

**ಕುಂಡೋದರಂ ಸಮಾಲೋಕ್ಯ ದಹನಂ ತಸ್ಯ ಚೌದರಂ ।**
**ಸದ್ಯಸ್ಸಂವರ್ಧಯಾಮಾಸ ಬಡವಾನಲಸನ್ನಿಭಂ ॥ ೨೬ ॥**

**ತದಾ ಕುಂಡೋದರೋ ಭೂತೋ ಜಾಠರಾಗ್ನಿಪ್ರಪೀಡಿತಃ ।**
**ಪಿಪಾಸಿತಶ್ಚ ಕ್ಷುಧಿತಃ ಕ್ಷೀಣದೇಹೋ ಮಹಾಬಲಃ ॥ ೨೭ ॥**

**ಸುಂದರೇಶ ಜಗನ್ನಾಥ ಮಹ್ಯಮಾಹಾರಮಾಶು ಚ ।**
**ದೇಹಿ ದೇಹೀತಿ ಸಂಜಲ್ಪನ್ಸಮಾಗತ್ಯಾವಿಲಂಬಿತಂ ॥ ೨೮ ॥**

**ಪ್ರಣಿಪತ್ಯ ಮಹಾದೇವಂ ಪ್ರಾರ್ಥಯಾಮಾಸ ಸಾದರಂ ।**
**ಕಲ್ಯಾಣೋಚಿತಸೌಂದರ್ಯ ಕಲ್ಯಾಣಾದ್ರಿಧನುರ್ಧರ ॥ ೨೯ ॥**

**ಕಲ್ಯಾಣಾರ್ಥಂ ತ್ವಯಿ ಪ್ರಾಪ್ತೇ ನಿರ್ಧೂತವಿಧಿಕಂಧರೇ ।**
**ತ್ವದೀಯಮಾತಪತ್ರಂ ಚ ಗೃಹೀತ್ವಾತಿಬಲೇನ ಚ ॥ ೩೦ ॥**

---

ಮಧ್ಯದಲ್ಲಿದ್ದುಕೊಂಡು, ಆ ನೀರನ್ನು ಹೀರುತ್ತಿರುವ ಬಡಬಾಗ್ನಿಯಂತೆ ಇರುವಹಾಗೆ ಹೆಚ್ಚು ಮಾಡಿದನು. ಆಗ ಕುಂಡೋದರನಿಗೆ ಹೊಟ್ಟೆಯು ಹಸಿವಾಗಲು ಪ್ರಾರಂಭವಾಯಿತು, ಮತ್ತು ಬಾಯಾರಿಕೆಯೂ ಹೆಚ್ಚಾಯಿತು.

೨೭-೩೦. ಬಹಳ ಬಲವುಳ್ಳ ಆ ಭೂತವು ಹಸಿವು ಬಾಯಾರಿಕೆಗಳಿಂದ ಆಕ್ಷಣದಲ್ಲಿ ಸಂಕಟಪಡುತ್ತಾ "ಎಲೈ ಜಗತ್ಪತಿಯೆ, ಸುಂದರೇಶ್ವರನೆ, ನನಗೆ ಬೇಗ ಆಹಾರವನ್ನು ಕೊಡು." ಎಂದು ಹೇಳುತ್ತಾ ಮಹಾದೇವನಿಗೆ ನಮಸ್ಕರಿಸಿತು. ಮಂಗಳಕರನಾಗಿ ಯಾವಾಗಲೂ ಸುಂದರನಾಗಿರುವವನೂ, ಮಂಗಳಕರವಾದ ಮೇರುಪರ್ವತವನ್ನು ಧನುಸ್ಸಾಗಿ ಹಿಡಿದುಕೊಂಡಿರುವವನೂ, ಬ್ರಹ್ಮನ ಶಿರಸ್ಸನ್ನು ನಾಶಮಾಡಿದವನೂ ಆಗಿರುವ, ಮಹಿಮೆಯುಳ್ಳ ನೀನು, ವಿವಾಹಕ್ಕೆ ಬರುವಾಗ ನಾನು ನನ್ನ ಶಕ್ತಿಯೆಲ್ಲವನ್ನೂ, ಉಪಯೋಗಿಸಿಕೊಂಡು ನಿನಗೆ ಛತ್ರಿಯನ್ನು ಹಿಡಿದು ಕೊಂಡು ಬಂದೆನು.

ಶ್ರೀಮತ್ಸುಂದರಪಾಂಡ್ಯೇಶ ವೇಗಾತ್ತ್ವದನುಧಾವನಾತ್ ।
ಅಥವಾ ಹೇತುನಾನ್ಯೇನ ನಾನುಭೂತಾ ಮಯಾ ಪುರಾ ॥ ೩೧ ॥

ಮಹತೀ ಕ್ಷುಚ್ಚ ಸಂಜಾತಾ ಶ್ರಾಂತ್ಯಾ ಚಾತುಲಯಾ ಸಹ ।
ಕೃಪಯಾ ಪರಯಾ ಶಂಭೋ ಮಾಂ ಭುಂಕ್ಷ್ವೇತಿ ಸಮಾದಿಶ ॥ ೩೨ ॥

ಇತಿ ಕುಂಡೋದರವಚಃ ಶ್ರುತ್ವಾ ಹಾಲಾಸ್ಯಸುಂದರಃ ।
ಸ್ಮೃತ್ವಾ ತಸ್ಯಾಃ ಪ್ರಭುತ್ವಂ ಚ ಮಹದೈಶ್ವರ್ಯಸಂಯುತಂ ॥ ೩೩ ॥

ತಥಾ ಕುರ್ವಿತಿ ದೇವೇಶಃ ಕಟಾಕ್ಷೇಣಾನ್ವಯುಂಜ್ಯತಂ ।
ಇತ್ಯಾಜ್ಞಾಂ ದೇವದೇವಸ್ಯ ಲಬ್ಧ್ವಾ ಕುಂಡೋದರೋ ಬಲೀ ॥ ೩೪ ॥

ಭೂತಾನಾಮುಗ್ರಗಣ್ಯಶ್ಚ ವಾಮನೋ ಜಾನುಮಾತ್ರಕಃ
ಧೂಮ್ರವರ್ಣೋಽತಿರಕ್ತಾಕ್ಷೋ ದಂಷ್ಟ್ರಾಭ್ಯಾಂ ಚ ವಿರಾಜಿತಃ ॥ ೩೫ ॥

---

೩೧–೩೨. ಎಲೈ ಸುಂದರಪಾಂಡ್ಯರಾಜನೇ, ನಿನಗೆ ಛತ್ರಿಯನ್ನು ಹಿಡಿದುಕೊಂಡು ಬರುವಾಗ ವೇಗದಿಂದ ಬರುವ ನಿನ್ನನ್ನು ಅನುಸರಿಸಿ ಬರುವುದರಿಂದಲೋ, ಅಥವಾ ಬೇರೆಯು ಕಾರಣದಿಂದಲೋ, ಬಹಳ ಆಯಾಸವುಳ್ಳ ನನಗೆ ತುಂಬಾ ಹಸಿವು ಉಂಟಾಗುತ್ತಾ ಇದೆ. ಈ ಪ್ರಕಾರವಾದ ಹಸಿವೆಯನ್ನು ಯಾವಾಗಲೂ ಅನುಭವಿಸದೇ ಇರುವ ನನಗೆ ನೀನು ನನ್ನಲ್ಲಿ ಹೆಚ್ಚಿನ ದಯೆಯಿಂದ ಭೋಜನಕ್ಕೆ (ಅವಕಾಶವನ್ನು ಕೊಡು) ಅಪ್ಪಣೆಯನ್ನು ಕೊಡು, ಎಂದು ಕುಂಡೋದರನು ಬೇಡಿಕೊಂಡನು.

೩೩–೩೬. ಹಾಲಾಸ್ಯಪ್ರಭುವಾದ ಸುಂದರೇಶ್ವರನು, ಕುಂಡೋದರನು ಹೇಳಿದ ಮಾತನ್ನು ಕೇಳಿದನು. ತಟಾತಕಾದೇವಿಯು ಹೇಳಿದ ಮಹದೈಶ್ವರ್ಯ, ಹೆಮ್ಮೆ ಇವುಗಳನ್ನು ಸೂಚಿಸುವ ಮಾತುಗಳು ಆ ದೇವನಿಗೆ ಆ ಕಾಲಕ್ಕೆ ಸರಿಯಾಗಿ ನೆನಪಿಗೆ ಬಂದವು. ಆಗ ಅವನು "ನೀನು ಭೋಜನಕ್ಕೆ ಹೋಗು" ಎಂದು ಕುಂಡೋದರನಿಗೆ ತನ್ನ ಕಟಾಕ್ಷದಿಂದ (ಸೂಚಿಸಿದನು) ಸಮ್ಮತಿಯನ್ನು ಕೊಟ್ಟನು. ಬಲಿಷ್ಠನಾದ ಕುಂಡೋದರನಿಗೆ ದೇವದೇವನ ಆಜ್ಞೆಯು ದೊರಕಿತು. ಆಗ ಅವನು ಒಂದು ಆಳಿನ ಮಂಡಿಯುದ್ದ ಎತ್ತರವಿರುವ ಗುಜ್ಜಾರಿಯಾಗಿದ್ದನು. ಅವನು ಧೂಮುವರ್ಣದ ದೇಹಕಾಂತಿಯುಳ್ಳವನಾಗಿ, ಕೆಂಪಾದ ಕಣ್ಣುಗಳುಳ್ಳವನಾಗಿ, ಕೋರೆಯ ಹಲ್ಲುಗಳಿಂದ ಪ್ರಕಾಶಿಸುತ್ತಿದ್ದನು. ಇವನು

ಭ್ರೂವಿಕಾರಂ ಸದಾ ಕುರ್ವನ್ಪಶ್ಯತಾಂ ಚ ಭಯಂಕರಃ ।
ತಟಾತಕಾಯಾ ದೇವ್ಯಾಶ್ಚ ಕಟಾಕ್ಷಕೃತಯ್ಯಾಜ್ಞಯಾ ॥ ೩೬ ॥

ಮಹಾನಸಮಥ ಪ್ರಾಪ್ಯ ಮಹಾವೇಗಸಮನ್ವಿತಃ
ಭೂತೋ ಭೋಕ್ತುಂ ಸಮುದ್ಯುಕ್ತಸ್ಸಂಪ್ರಾಪ್ಯಾಂತಿಕಮಂಧಸಾಂ ॥ ೩೭ ॥

ಸಪಾದಲಕ್ಷಶೈಲೈಶ್ಚ ಹಿಮಾಚಲಮಿವಾವೃತಂ ।
ಸ್ವಶೋಭಾಪಾಂಡರೈಃ ಶೈಲೈಃ ಕೈಲಾಸಮಿವ ಚಾಪರಂ ॥ ೩೮ ॥

ಅನ್ನರಾಶಿಂ ತಮಖಿಲಂ ಸಮಾಲೋಕ್ಯ ಸುವಿಸ್ಮಿತಃ ।
ಸಂಹಾರಕಾಲೇ ರುದ್ರಸ್ತು ಬಹ್ಮಾಂಡಾನ್ಯಖಿಲಾನಿ ಚ ॥ ೩೯ ॥

ಪಾಣಿಭ್ಯಾಂ ಚ ಸಮಾದಾಯ ಕ್ಷಣೇನಾಭಕ್ಷಯದ್ಯಥಾ ।
ತಥಾ ಭೂತೋಪಿ ಪಾಣಿಭ್ಯಾಂ ಕಬಲೀಕೃತ್ಯ ರಂಹಸಾ ॥ ೪೦ ॥

ಆನನಂ ವಿಕೃತಂ ಕೃತ್ವಾ ಮಹಾಗಹ್ವರಸನ್ನಿಭಂ ।
ಭಕ್ತರಾಶಿಮಶೇಷಂ ಚ ಭಕ್ಷಯಾಮಾಸ ತತ್ಕ್ಷಣಾತ್ ॥ ೪೧ ॥

---

ಹುಬ್ಬುಗಳನ್ನು ವಿಕಾರವಾಗಿ ಹಾರಿಸುತ್ತಾ ನೋಡುವವರಿಗೆ ಭಯವನ್ನು ಉಂಟು ಮಾಡುತ್ತಿದ್ದನು. ಹೀಗಿರುವ ಇವನನ್ನು ನೋಡಿ ತಟಾತಕಾದೇವಿಯು ತಾನೂ ಕಟಾಕ್ಷದಿಂದಲೇ ಅವನಿಗೆ ಭೋಜನಕ್ಕೆ ಅವಕಾಶವನ್ನು ಕೊಟ್ಟಳು.

೩೭–೩೯. ಅನಂತರದಲ್ಲಿ ಅವನು ಅಡಿಗೆಮನೆಗೆ ಹೋಗಿ ಅತಿವೇಗದಿಂದ ಭೋಜನಮಾಡಲು ಉದ್ಯುಕ್ತನಾದನು. ಪಾಕಶಾಲೆಯಲ್ಲಿ ಒಂದೂಕಾಲು ಲಕ್ಷ ಪರ್ವತಗಳಿಂದ ಕೂಡಿದ ಹಿಮವಂತನಂತೆಯೂ, ತನ್ನ ಕಾಂತಿಯನ್ನು ಅನುಸರಿಸಿರುವ ಶಿಖರಗಳಿಂದ ಕೂಡಿದ ಕೈಲಾಸಪರ್ವತದಂತೆಯೂ, ಇರುವ ಅನ್ನದರಾಶಿಗಳನ್ನು ಆಗ ಅವನು ನೋಡಿ ಆಶ್ಚರ್ಯಪಟ್ಟನು.

೪೦–೪೨. ಪ್ರಳಯಕಾಲದಲ್ಲಿ ರುದ್ರನು ಬ್ರಹ್ಮಾಂಡಗಳೆಲ್ಲವನ್ನೂ ತನ್ನ ಹಸ್ತಗಳಲ್ಲಿ ಧರಿಸಿಕೊಂಡು ಒಂದು ಕ್ಷಣದಲ್ಲಿ ನುಂಗಿಬಿಡುವ ಹಾಗೆ, ಭೂತನಾದ ಕುಂಡೋದರನು ತನ್ನ ಹಸ್ತಗಳಿಂದ (ಕಬಳಗಳನ್ನು) ತುತ್ತುಗಳನ್ನು ಮಾಡಿಕೊಂಡು, ದೊಡ್ಡ ಸಮುದ್ರದಹಾಗೆ ಬಾಯನ್ನು ತೆರದುಕೊಂಡು, ಬೇಗಬೇಗನೆ ತಿನ್ನುತ್ತಾ

ಸೂಪಶಾಕಘೃತಕ್ಷೀರ ದಧಿಕ್ಷೌದ್ರಾದಿಕಾನಿ ಚ ।
ವಸ್ತೂನಿ ತತ್ತತ್ಪಾತ್ರೈಶ್ಚ ಭಕ್ಷಿತಾನ್ಯಖಿಲಾನಿ ಚ ॥ ೪೩ ॥

ಪುನಸ್ತ್ವಕೃತಪಕ್ವಾನಿ ಕೂಶ್ಮಾಂಡಾದಿಫಲಾನಿ ಚ ।
ಸರ್ವಾಣಿ ಸದ್ಯಸ್ಸಂಜಗ್ಧ್ವಾ ಕಿಂಚಿತ್ತೃಪ್ತಿಂ ಚ ನಾಯಯೌ ॥ ೪೩ ॥

ವಿವಿಧಾನಾಂ ತಂಡುಲಾನಾಂ ರಾಶಿಂ ಚ ಬಹುಧಾ ಸ್ಥಿತಂ ।
ಗೋಧೂಮಮುದ್ಗಮಾಷಾದಿರಾಶಿಂ ಚಾಭಕ್ಷಯತ್ಪುನಃ ॥ ೪೪ ॥

ನಾನಾವಿಧಂ ಧಾನ್ಯರಾಶಿಂ ಮಹಾಂತಃಪುರಮಧ್ಯಗಂ ।
ತತ್ಸರ್ವಂ ಭಕ್ಷಯಿತ್ವಾಪಿ ಭೂತಶ್ಚಾಭೂದಭುಕ್ತವತ್ ॥ ೪೪ ॥

ಅತ್ಯದ್ಭುತಂ ಹ್ರಸ್ವಭೂತಕೃತಂ ಕರ್ಮ ವಿಲೋಕ್ಯ ಚ ।
ಅಂತಃಪುರಗತಾಸ್ಸರ್ವೇ ವಿಸ್ಮಿತಾಶ್ಚಾಭವನ್ಜನಾಃ ॥ ೪೬ ॥

---

ಒಂದು ಕ್ಷಣದಲ್ಲಿ ಅಲ್ಲಿದ್ದ ಅನ್ನದ ರಾಶಿಗಳೆಲ್ಲವನ್ನೂ ತಿಂದು ಮುಗಿಸಿದನು. ಸೂಪ (ತೊವ್ವೆ) ತುಪ್ಪ, ಹಾಲು, ಮೊಸರು, ಜೇನು ಇವೇ ಮೊದಲಾದವುಗಳನ್ನು ಆಯಾಯ ಪಾತ್ರೆಗಳಿಂದಲೇ ಎಲ್ಲವನ್ನೂ ಅವನು ತಿಂದನು.

೪೩–೪೬. ಬೇಯಿಸದೇ ಇರುವ ಕುಂಬಳಕಾಯಿಯೇ ಮೊದಲಾದ ತರಕಾರಿಗಳೆಲ್ಲವನ್ನೂ ತಿಂದರೂ ಅವನಿಗೆ ಕೊಂಚವೂ ತೃಪ್ತಿಯಾಗಲಿಲ್ಲ. ಅಕ್ಕಿ, ಗೋಧಿ, ಹೆಸರು, ಉದ್ದು ಇವುಗಳ ರಾಶಿಗಳು ಬಹಳವಾಗಿದ್ದವು. ಅವು ಇದ್ದಹಾಗೆಯೇ ಅವೆಲ್ಲವನ್ನೂ ತಿಂದು ಮುಗಿಸಿದನು. ಅಂತಃಪುರದ ಮಧ್ಯದಲ್ಲಿ ಬಹಳ ವಿಧವಾದ ಧಾನ್ಯರಾಶಿಗಳನ್ನು ಉಗ್ರಾಣದಲ್ಲಿ ಇರಿಸಿದ್ದರು. ಅದೆಲ್ಲವನ್ನೂ ಆ ಕುಂಡೋದರನು ತಿಂದು ಮುಗಿಸಿದನು. ಇಷ್ಟೆಲ್ಲವನ್ನೂ ತಿಂದರೂ ಅವನಿಗೆ ಊಟಮಾಡಿದ ಹಾಗೆ ಆಗಲೇ ಇಲ್ಲ. (ಬಹಳ ಕುಳ್ಳನ) ಬಹಳಮಟ್ಟಿಗೆ ವಾಮನರೂಪದಿಂದ ಇರುವ ಆ ಕುಂಡೋದರನೆಂಬ ಭೂತವು ನಡೆಸಿದ ಆಶ್ಚರ್ಯಕರವಾದ ಕೆಲಸವನ್ನು ನೋಡಿ ಅಂತಃಪುರದಲ್ಲಿದ್ದ ಜನರೆಲ್ಲರಿಗೂ ಆಶ್ಚರ್ಯವಾಯಿತು.

ತಟಾತಕಾ ಪ್ರಿಯಾಯುಕ್ತಾ ಮಹತಾ ವಿಸ್ಮಯೇನ ಚ ।
ಭರ್ತುಸ್ಸಮೀಪಮಾಗತ್ಯ ಸ್ಥಿತಾsಭೂದ್ವಿನತಾನನಾ　　॥ ೪೭ ॥

ಅಥ ನೀಪಾಟವೀನಾಥಸ್ಸರ್ವಜ್ಞಃ ಶಂಕರಃ ಪ್ರಭುಃ ।
ಸ್ವಯಂ ತದ್ಭೂತವೃತ್ತಾಂತಮಜ್ಞಾತ ಇವ ಭಾವಯನ್　　॥ ೪೮ ॥

ದೇವೀವದನಮಾಲೋಕ್ಯ ಲಜ್ಜಾವಿಸ್ಮಯಸಂಯುತಂ ।
ಪ್ರಾಹ ಪ್ರಗಲ್ಭಯಾ ವಾಚಾ ಕಿಂಚಿನ್ನೋಕ್ತಾಂ ತಟಾತಕಾಂ　　॥ ೪೯ ॥

ಮಹಾರಾಜ್ಞ್ಯಾ ಭವತ್ಯಾಶ್ಚ ಮಂದಿರೇ ಮಂಗಲಾಲಯೇ ।
ಬಹ್ವನ್ನಮಸ್ತೀತ್ಯಜ್ಞಾಯ ಸಮಸ್ತೋಪಸ್ಕರಾನ್ವಿತಂ　　॥ ೫೦ ॥

ನಾಹೂತೋ ವಿವಿಧೋ ದೇವಿ ಭೂತಾನಾಂ ತು ಗಣೋ ಮಯಾ ।
ಆತಪತ್ರಂ ಚ ಮೇ ಧೃತ್ವಾ ಕಶ್ಚಿದ್ಭೂತಸ್ಸಮಾಯಯೌ　　॥ ೫೧ ॥

---

೪೭. ಆಗ ತಟಾತಕಾದೇವಿಯು ಸಖಿಯೊಡನೆ ಆಶ್ಚರ್ಯಪಡುತ್ತಾ ತನ್ನ ಪತಿಯಾದ ಸುಂದರೇಶ್ವರನ ಹತ್ತಿರಕ್ಕೆ ಹೋಗಿ ಮುಖವನ್ನು ತಗ್ಗಿಸಿಕೊಂಡು ನಿಂತುಕೊಂಡಳು.

೪೮-೪೯. ಕದಂಬವನಾಧಿಪನಾದ ಶಂಕರನು ಭೂತನಾದ ಆ ಕುಂಡೋದರನು ಊಟಮಾಡಿದ ವೃತ್ತಾಂತವನ್ನು ಕೊಂಚವೂ ತಿಳಿಯದಂತೆ ಇದ್ದನು. ತಟಾತಕಾದೇವಿಯ ಮುಖವನ್ನು ನೋಡಿದನು. ಆಗ ಅವನು ಆ ದೇವಿಯ ಮುಖದಲ್ಲಿ ಆಶ್ಚರ್ಯವೂ, ನಾಚಿಕೆಯೂ ಇರುವ ಚಿಹ್ನೆಗಳನ್ನು ನೋಡಿ ಪ್ರೌಢವಾದ ಮಾತುಗಳನ್ನು ಆಡಿದನು. ಅದಕ್ಕೆ ಆ ದೇವಿಯು ಉತ್ತರವನ್ನು ಕೊಡಲಿಲ್ಲ.

೫೦-೫೨. ಪ್ರಭುವಾದ ಶಂಕರನು "ಎಲೈ ತಟಾತಕಾದೇವಿಯೇ, ನೀನು ಮಹಾರಾಜನ ಪುತ್ರಿಯಾಗಿರುತ್ತೀಯೆ. ನಿನ್ನ ಮನೆಯಲ್ಲಿ ಬಹಳ ಐಶ್ವರ್ಯವು ತುಂಬಿ ಇರುವುದು. ಇದನ್ನು ನಾನು ತಿಳಿದುಕೊಳ್ಳದೆ ಇದ್ದ ಕಾರಣ ಭೂತ ಗಣಗಳನ್ನು ನನ್ನ ಸಂಗಡ ಕರೆದುಕೊಂಡು ಬರಲಿಲ್ಲ. ನನ್ನ ಛತ್ರಿಯನ್ನು ಹಿಡಿದುಕೊಂಡು

ತದ್ಭೂತಭುಕ್ತಶೇಷಂ ಚ ಭೋಕ್ತುಂ ಭೂತಗಣಾನ್ಬಹೂನ್ ।
ಆಸಯಿಷ್ಯಾಮಿ ಸಹಸಾ ತವ ಪ್ರೀತ್ಯೈ ತಟಾತಕೇ ॥ ೫೨ ॥

ಇತಿ ಭರ್ತೃರ್ವಚಃ ಶ್ರುತ್ವಾ ಮಂದಸ್ಮಿತಮನೋಹರಾ ।
ದೇವೀ ವಿಜ್ಞಾಪಯಾಮಾಸ ಜಿತಕೋಕಿಲಕೂಜಿತಾ ॥ ೫೩ ॥

ಭಗವಂಸ್ತ್ವಂತು ಸರ್ವಜ್ಞಸ್ತಥಾಪಿ ಕಿಮಿದಂ ವಚಃ ।
ಅಕಾರಣಂ ತು ಭೂತಾನಾಂ ಮಾಸ್ತು ಮಾಸ್ತು ಕೃಪಾನಿಧೇ ॥ ೫೪ ॥

ಹ್ರಸ್ವಭೂತಚರಿತ್ರಂ ಚ ವಿಚಿತ್ರಂ ಪಶ್ಯತಾಮಭೂತ್ ।
ಪುನರ್ಭೂತಗಣಾಶ್ಚಾನ್ಯೇ ಸಮಾಯಾಸ್ಯಂತಿ ಚೇದಿಹ ॥ ೫೫ ॥

ಸಂಹಾರರುದ್ರ ಇತ್ಯಾಖ್ಯಾ ತವ ಸಾರ್ಥವತೀ ಭವೇತ್ ।
ತದ್ಭೂತಕೃತ್ಯಮಖಿಲಂ ಜ್ಞಾತಮೇವ ಯತಸ್ತ್ವಯಾ ॥ ೫೬ ॥

---

ಯಾವುದೋ ಒಂದು ಭೂತವು ಮಾತ್ರ ಬಂದಿತು ಅದು ಊಟಮಾಡಿ ಮಿಕ್ಕದ್ದನ್ನು ಊಟಮಾಡವುದಕ್ಕಾಗಿ ಬಹಳ ಭೂತಗಣಗಳನ್ನು ಬೇಗ ಬರುವಂತೆ ಹೇಳಿಕಳಿಸಿ ಕರೆಯಿಸುತ್ತೇನೆ. ಇದರಿಂದ ನಿನಗೆ ಸಂತೋಷವುಂಟಾಗುವುದು" ಎಂದು ಹೇಳಿದನು.

೫೩–೫೬. ಆಗ ಪತಿಯ ಮಾತನ್ನು ಕೇಳಿ, ತಟಾತಕಾದೇವಿಯು ಮಂದಹಾಸದಿಂದ ಮನೋಹರಳಾಗಿ ಕೋಕಿಲ ಕಂಠದಿಂದ "ಎಲೈಪೂಜ್ಯನೆ ನೀನು ಸರ್ವಜ್ಞನಾಗಿ ಎಲ್ಲವನ್ನೂ ತಿಳಿದು ಇರುತ್ತೀಯೆ. ಹೀಗಿದ್ದರೂ ನೀನು ಯಾತಕ್ಕಾಗಿ ಹೀಗೆ ಮಾತನಾಡುತ್ತೀಯೆ. ಭೂತಗಳು ನಿಷ್ಕಾರಣವಾಗಿ ಇಲ್ಲಿ ಬರಬೇಕಾಗಿಲ್ಲ. ಎಲೈ ದಯಾಶಾಲಿಯೆ, ಭೂತಗಳು ಇಲ್ಲಿಗೆ ಬರದಂತೆ ಮಾಡು. ಗುಜ್ಜಾರಿಯ ಆಕಾರದಿಂದ ಇರುವ ಒಂದು ಭೂತದ ಕೆಲಸವನ್ನು ನೋಡಿದವರೆಲ್ಲರಿಗೂ ಈಗ ಆಶ್ಚರ್ಯವಾಗಿರುವುದು. ಎಲ್ಲಾ ಭೂತಗಳೂ ಇಲ್ಲಿಗೆ ಬಂದರೆ ಆಗ ನಿನಗೆ ಸಂಹಾರ ರುದ್ರನೆಂದು ಹೆಸರು ಸಾರ್ಥಕವಾಗುವುದು. ನೀನು ಕಳುಹಿಸಿರುವ ಭೂತವು ಮಾಡಿರುವ ಕೆಲಸವೆಲ್ಲವೂ ನಿನಗೆ ತಿಳಿದೇ ಇರುವುದು. ಆದ್ದರಿಂದ ಆ ಭೂತವೇ ತನ್ನ ಕೆಲಸವನ್ನು ನಿನ್ನ ಸಂಗಡ ಹೇಳುವುದು. ನಾನು ಅದನ್ನು ಹೇಳಬೇಕಾಗಿಲ್ಲ" ಎಂದು ವಿಜ್ಞಾಪನೆ ಮಾಡಿಕೊಂಡಳು.

ತತಶ್ಚಾಹಂ ನ ವಕ್ಷ್ಯಾಮಿ ಭೂತ ಏವ ಪ್ರವಕ್ಷ್ಯತಿ ।
ಇತ್ಯುದೀರ್ಯ ಮಹಾರಾಜಕುಮಾರೀ ಸಾ ತಟಾತಕಾ ॥ ೫೭ ॥

ಕುಂಡೋದರಸ್ಯ ಭೂತಸ್ಯ ಕಥಂ ತೃಪ್ತಿರ್ಭವಿಷ್ಯತಿ ।
ಚಿಂತಯಂತೀ ಮುಹುರ್ಭರ್ತುರ್ಮುಖಮಾಲೋಕ್ಯ ತಿಷ್ಠತಿ ॥ ॥ ೫೮ ॥

ತದ್ದೃಷ್ಟ್ವಾಸ್ಯ ಚ ಕರ್ಮ ದೇಹ ಮತುಲಂ ನಿಮ್ನೋದರಂ ಸಾಂಪ್ರತಂ ।
ಸಾಶ್ಚರ್ಯಂ ಪುರವಾಸಿನಸ್ಸಮವದನ್ ಸರ್ವೇ ಜನಾಸ್ಸಂಗತಾಃ ॥
ಭೂತಃ ಕಶ್ಚನ ಭೂತಕೃತ್ಯ ಮಕರೋ ಚ್ಛಂಭೋಃ ಪ್ರಭಾವಾ ದಯಂ
ಭೂತೋ ನ್ಯೋಽಪಿ ಸಮಾಗತೋ ಯದಿ ಭವೇತ್ಸರ್ವೋ ಜನೋ
ಭಕ್ಷಿತಃ ॥ ೫೯ ॥

ಇಯಂ ತು ಸಪ್ತಮೀ ಲೀಲಾ ಸುಂದರೇಶಸ್ಯ ಧೂರ್ಜಟೇಃ ।
ಸಕೃಚ್ಛ್ರವಣಮಾತ್ರೇಣ ಸರ್ವಾಪತ್ಪರಿಹಾರಿಣೀ ॥ ೬೦ ॥

---

೫೭-೫೮. ರಾಜಕುಮಾರಿಯಾದ ತಟಾತಕಾದೇವಿಯು ಪತಿಯ ಸಂಗಡ ಹೀಗೆ ಹೇಳಿದ ನಂತರ ಈ ಭೂತನಾದ ಕುಂಡೋದರನಿಗೆ ತೃಪ್ತಿಯು ಹೇಗೆ ಆಗುವುದು, ಎಂದು ಯೋಚಿಸುತ್ತಾ, ಪತಿಯಾದ ಸುಂದರೇಶ್ವರನ ಮುಖವನ್ನು ನೋಡುತ್ತಾ ನಿಂತಳು.

೫೯. ಆಗ ಭೋಜನಶಾಲೆಯಲ್ಲಿದ್ದವರು ಎಲ್ಲರೂ ಆ ಭೂತದ ಶರೀರವು ಬಹಳ ಹ್ರಸ್ವವಾಗಿ ಇದ್ದರೂ ಅಷ್ಟು ಪದಾರ್ಥಗಳು ಮುಗಿದಾಗ್ಯೂ ಅದರ ಹೊಟ್ಟೆಯು ಮಾತ್ರ ಒಣಗಿಹೋಗಿರುವುದನ್ನು ನೋಡಿದರು.

ಆದ್ದರಿಂದ ಅವರಿಗೆ ಆಶ್ಚರ್ಯವುಂಟಾಯಿತು. ಆದರಿಂದ ಅವರೆಲ್ಲರೂ ಸೇರಿ, ಯಾವುದೋ ಒಂದು ಭೂತವು ಶಿವನ ಮಹಿಮೆಯಿಂದ ಯಾರೂ ಮಾಡಲಾರದ ಕೆಲಸವನ್ನು ಮಾಡಿತು. ಇದರ ಜೊತೆಗೆ ಇನ್ನೊಂದು ಭೂತವು ಬಂದರೆ, ಎಲ್ಲಾ ಜನರನ್ನೂ ತಿಂದುಬಿಡುವುದು. ಎಂದು ಮಾತನಾಡಿಕೊಳ್ಳುತ್ತಿದ್ದರು.

೬೦. ಧೂರ್ಜಟಿಯಾದ ಪರಮೇಶ್ವರನು ಮಾಡಿದ ಏಳನೆಯ ಲೀಲೆಯು ಈ ಪ್ರಕಾರವಾಗಿರುವುದು. ಇದನ್ನು ಒಂದುಸಾರಿ ಕೇಳಿದಮಾತ್ರದಿಂದ ವಿಪತ್ತುಗಳೆಲ್ಲವೂ ನಾಶವಾಗುವುವು.

**ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ**
**ಹಾಲಾಸ್ಯಮಾಹಾತ್ಮ್ಯೇ ಕುಂಡೋದರಭುಕ್ತಿ**
**ರ್ನಾಮೈಕಾದಶೋಽಧ್ಯಾಯಃ**

---

ಸಂಪದ್ಯುಕ್ತವಾದ ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯ
ಮಾಹಾತ್ಮ್ಯದಲ್ಲಿ ಕುಂಡೋದರನ ಭೋಜನವೆಂಬ
ಹನ್ನೊಂದನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ

## ದ್ವಾದಶೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ಅನ್ನಗರ್ತಾನಾಪಗಾಂ ಚ ಯಯಾ ಜನಯತೀಶ್ವರಃ ।
ತಾಂ ಲೀಲಾಂ ಸಂಪ್ರವಕ್ಷ್ಯಾಮಿ ಶ್ರವಣಾದಘಹಾರಿಣೀಂ ॥ ೧ ॥

ಕುಂಡೋದರಸ್ಯ ಭೂತಸ್ಯ ಭುಕ್ತ್ವೈವಂ ಬಹೂನಿ ಚ ।
ಮಹತೀ ಕ್ಷುನ್ನ ನಷ್ಟಾಭೂತ್‌ಬಡಬಾಗ್ನಿರ್ಯಥಾ ತಥಾ ॥ ೨ ॥

ಜಜ್ವಾಲಾ ಸ್ಯೋದರಸ್ಯಾಂತಸ್ಥೋ ವಿಭಾವಸುರನರ್ಗಲಃ ।
ತತ್ಸಮಾಪನ್ನಸಂತಾಪದೀನಾನನತನುಚ್ಛವಿಃ ॥ ೩ ॥

---

### ಹನ್ನೆರಡನೆಯ ಅಧ್ಯಾಯವು

೧–೩. ಅಗಸ್ತ್ಯಋಷಿಯು ಹೇಳಿದನು :—ಪರಮೇಶ್ವರನು ಅನ್ನದಿಂದ ತುಂಬಿರುವ ಹಳ್ಳಗಳನ್ನೂ, ಕುಡಿಯುವ ನೀರಿನ ನದಿಯನ್ನೂ ಕುಂಡೋದರನಿಗಾಗಿ ಆ ಕ್ಷಣದಲ್ಲಿ ತರಿಸಿದ ಪಾಪನಾಶಕವಾದ ಲೀಲೆಯನ್ನು ಹೇಳುವೆನು. ಭೂತನಾದ ಕುಂಡೋದರನಿಗೆ ಎಷ್ಟೇ ಆಹಾರವನ್ನು ತಿಂದಾಗ್ಯೂ ಬಡಬಾಗ್ನಿಯು ಹೆಚ್ಚುತ್ತಿರುವಂತೆ ಹಸಿವು ಬಹಳವಾಗಿ ಹೆಚ್ಚುತ್ತಲೇ ಇತ್ತು. ಕುಂಡೋದರನು ತನ್ನ ಹೊಟ್ಟೆಯೊಳಗೆ ಯಾವ ತಡೆಯೂ ಇಲ್ಲದಂತೆ ಬಹಳ ವೇಗವಾಗಿ ಹೆಚ್ಚುತ್ತಿರುವ ಹಸಿವಿನ ಸಂಕಟದಿಂದ, ಮುಖವನ್ನು ಸಪ್ಪಗೆ ಮಾಡಿಕೊಂಡು, ಶರೀರದಲ್ಲಿ ಕಾಂತಿಯಿಲ್ಲದವನಾಗಿ ಇದ್ದನು.

ಹಾಲಾಸ್ಯನಾಯಕಂ ದೇವಂ ಸಂಪ್ರಾಪ್ಯ ಪ್ರಣಿಪತ್ಯ ಚ ।
ಅತಿನಿರ್ವ್ಯೋದರೋ ಭೂತಃ ಪ್ರಾರ್ಥಯಾಮಾಸ ಭೂತಪಂ ॥ ೪ ॥

ದೇವದೇವ ಕೃಪಾರಾಶೇ ಸರ್ವಾನುಗ್ರಹತತ್ಪರ ।
ಮದೀಯಾಂ ಶೃಣು ವಿಜ್ಞಪ್ತಿಂ ಮಹಾರಾಜ ಮಹೇಶ್ವರ ॥ ೫ ॥

ಅದ್ಯ ಸಂವರ್ಧಿತಾ ಕ್ಷುನ್ಮೇ ಭೂತೇಶಾತ್ಯಲ್ಪಭೋಜನಾತ್ ।
ಯಥಾ ತೂಲಸ್ಯ ಸಂಪಾತೋ ಜ್ವಲಿತಸ್ಯ ವಿಭಾವಸೋಃ ॥ ೬ ॥

ಉದರ್ಚಿಷಃ ಕೃಶಾನೋಶ್ಚ ಯಥಾ ತೈಲಸ್ಯ ಬಿಂದವಃ ।
ತಥಾ ಭವತಿ ಯೋ ಭುಕ್ತ ಅನ್ನರಾಶಿರಹೋ ಮಯಾ ॥ ೭ ॥

ಪುನಶ್ಚ ತಂಡುಲಾದ್ಯಾನಿ ಭಕ್ಷಿತಾನಿ ಮಯಾದ್ಯ ಚ ।
ತಥಾಪಿ ತೃಪ್ತಿರ್ನಾಭೂನ್ಮೇ ನ ಜಾನೇ ತಸ್ಯ ಕಾರಣಂ ॥ ೮ ॥

ಮಮ ಜಾಠರವಹ್ನೇಶ್ಚ ಮಹತ್ಯಾ ಜ್ವಾಲಯಾಧುನಾ ।
ಇಂದ್ರಿಯಾಣ್ಯಪಿ ದಹ್ಯಂತೇ ವನಾನೀವ ದವಾಗ್ನಿನಾ ॥ ೯ ॥

---

೪–೮. ಆಗ ಅವನು ಹಾಲಾಸ್ಯಪ್ರಭುವಾದ ಸೋಮಸುಂದರೇಶ್ವರನ ಹತ್ತಿರಕ್ಕೆ ಬಂದು ನಮಸ್ಕಾರ ಮಾಡಿ, ಬೆನ್ನಿಗೆ ಹತ್ತಿಕೊಂಡಿರುವ ಉದರವುಳ್ಳವನಾಗಿ, ಭೂತಗಳಿಗೆ ಎಲ್ಲಕ್ಕೂ ರಕ್ಷಕನಾದ ದೇವದೇವನಿಗೆ ವಿಜ್ಞಾಪಿಸಿಕೊಂಡನು. “ ಎಲೈ ದಯಾಶಾಲಿಯೇ, ದೇವದೇವನೇ, ಎಲ್ಲರಿಗೂ ಅನುಗ್ರಹವನ್ನು ಮಾಡುವುದರಲ್ಲಿ ಆಸಕ್ತನಾಗಿರುವ ಮಹಾಪ್ರಭುವೇ, ಮಹೇಶ್ವರನೇ, ನನ್ನ ವಿಜ್ಞಾಪನೆಯನ್ನು ಲಾಲಿಸು. ನನಗೆ ಈಗ ಹಸಿವು ಬಹಳವಾಗಿ ಹೆಚ್ಚುತ್ತಾ ಇದೆ. ಈ ಹಸಿವಿಗೆ ಕೊಂಚ ಅನ್ನವನ್ನು ಹಾಕಿದ್ದರಿಂದ ಇನ್ನೂ ಹೆಚ್ಚಾಯಿತು. ಉರಿಯುತ್ತಿರುವ ಬೆಂಕಿಗೆ ಹತ್ತಿಯನ್ನು ಹಾಕಿದಂತೆಯೂ, ಎಣ್ಣೆಯನ್ನು ಸುರಿದಂತೆಯೂ, ನಾನು ತಿಂದ ಅನ್ನದ ರಾಶಿಯು ಬೇಗನೆ ಹಸಿವಿನಿಂದ ಜೀರ್ಣವಾಯಿತು. ನಾನು ಅಕ್ಕಿಯೇ ಮೊದಲಾದ ಬೇಯದಿರುವುದನ್ನೆಲ್ಲಾ ತಿಂದೆನು. ಆದರೂ ಹಸಿವು ಹೆಚ್ಚಾಗಿ ಸಂಕಟವಾಗುತ್ತಿದೆ. ಇದಕ್ಕೆ ಕಾರಣವೇನೋ ತಿಳಿಯದು.

೯–೧೦. ನನ್ನ ಜಠರಾಗ್ನಿಯು ಈಗ ತನ್ನ ವೇಗದಿಂದ ನನ್ನ ಇಂದ್ರಿಯಗಳೆಲ್ಲವನ್ನೂ ಸುಡುತ್ತಿರುವುದು. ಕಾಡುಕಿಚ್ಚು ಕಾಡುಗಳನ್ನು ಸುಡುವಂತೆಯೂ,

ಪುರಾ ಸಾಯಕಸಂಪಾತಾತ್ತ್ರಿಪುರಂ ತು ಯಥಾ ತವ ।
ತಥೈವ ಮಮ ಕುಕ್ಷಿಸ್ಥವಹ್ನಿನಾ ಪೀಡಿತೋಽಸ್ಮ್ಯಹಂ
ರಕ್ಷ ರಕ್ಷ ಮಹಾದೇವ ರಕ್ಷ ರಕ್ಷ ಕೃಪಾನಿಧೇ ।
ರಕ್ಷ ರಕ್ಷ ಪುರಾರಾತೇ ರಕ್ಷ ಮಾಂ ಸುಂದರೇಶ್ವರ ॥ ೧೦ ॥

ಕ್ರೋಶತ್ಯೇವಂ ಕುಂಡಕುಕ್ಷಾವತಿಪರ್ಯಾಕುಲಾತ್ಮನಿ
ತದಾ ತಟಾತಕಾ ದೇವೀ ಮಹಿಳಾ ಮಾರವೈರಿಣಃ ॥ ೧೧ ॥

ವಾಮನಂ ಭೂತಮಾಲೋಕ್ಯ ಮಹಾಕ್ಷುತ್ಪರಿಪೀಡಿತಂ ।
ಪರಿಮ್ಲಾನಮುಖಂ ನಿಮ್ನಕುಕ್ಷಿಂ ಭಕ್ಷಣವರ್ಜಿತಂ ॥ ೧೨ ॥

ಪ್ರಾರ್ಥಯಾಮಾಸ ಭರ್ತಾರಂ ತದ್ಭೂತಕ್ಷುನ್ನಿವೃತ್ತಯೇ ।
ಸ್ವಾಮಿನ್ ಮನ್ನಾಥ ಭೂತೇಶ ಲೋಕಾನುಗ್ರಹತತ್ಪರ ॥ ೧೩ ॥

ಯೇನ ಕೇನಾಪ್ಯುಪಾಯೇನ ಕ್ಷುದ್ಬಾಧಾಶಾಂತಿರಸ್ಯ ತು ।
ಭವತೀಹ ತಥಾ ಸದ್ಯಃ ಕುರು ಕರ್ಮ ಮಹಾದ್ಭುತಂ ॥ ೧೪ ॥

---

ನಿನ್ನ ಬಾಣಗಳಿಂದ ತ್ರಿಪುರವು ಸುಟ್ಟು ಹೋಗುತ್ತಿದ್ದಂತೆಯೂ, ನನ್ನ ಹೊಟ್ಟೆಯ ಹಸಿವು ನನ್ನನ್ನು ಪೀಡಿಸುತ್ತಿರುವುದು. ಎಲೈ ತ್ರಿಪುರವೈರಿಯೇ, ಮಹಾದೇವನೇ, ಕೃಪಾನಿಧಿಯೇ, ಸುಂದರೇಶ್ವರನೇ, ನನ್ನನ್ನು ರಕ್ಷಿಸು ! ರಕ್ಷಿಸು ! " ಎಂದು ಕುಂಡೋದರನು ಹಸಿವಿನ ಸಂಕಟದಿಂದ ಕೂಗಿಕೊಳ್ಳಲು ಪ್ರಾರಂಭಿಸಿದನು.

೧೧–೧೪. ಬಹಳ ಹಸಿವಿನಿಂದ ಕೂಗಿಕೊಳ್ಳುತ್ತಿರುವ, ಬಾಡಿದ ಮುಖದಿಂದ ಇರುವ, ಹ್ರಸ್ವಾಕಾರದ, ಕುಂಡೋದರನ ಹಸಿವಿನ ಸಂಕಟವನ್ನೂ, ಅವನ ಹೊಟ್ಟೆಯನ್ನೂ ನೋಡಿ, ಕಾಮವೈರಿಯಾದ ಪರಮೇಶ್ವರನ ಪತ್ನಿಯಾದ, ಮಹಾರಾಜಕುಮಾರಿಯಾದ ತಟಾತಕಾದೇವಿಯು ಆ ಭೂತದ ತೃಪ್ತಿಗಾಗಿ ತನ್ನ ಪತಿಯನ್ನು ಬೇಡಿಕೊಂಡಳು. " ಎಲೈ ಭೂತಪತಿಯೇ, ನನ್ನ ಪ್ರಭುವೆ, ಲೋಕಾನುಗ್ರಹದಲ್ಲಿ ಅನುರಕ್ತನೆ, ಯಾವುದಾದರೂ ಒಂದು ಉಪಾಯದಿಂದ ಈ ಭೂತಕ್ಕೆ ತೃಪ್ತಿಯುಂಟಾಗುವಂತೆ, ಎಲ್ಲರಿಗೂ ಆಶ್ಚರ್ಯಕರವಾದ ಕಾರ್ಯವನ್ನು ಮಾಡು," ಎಂದು ಪ್ರಾರ್ಥಿಸಿದಳು.

ಇತಿ ದೇವ್ಯಾ ಪ್ರಾರ್ಥಿತಸ್ಸನ್ಮಧುರಾಪುರನಾಯಕಃ ।
ಸುಂದರೇಶಃ ಸುರಾಧೀಶೋ ಭಕ್ತಾಧೀನೋ ಭವಾರ್ತಿಹಾ ॥ ೧೫ ॥

ಸ್ವಾಭಿನ್ನಾಮನ್ನಪೂರ್ಣಾಂ ಚ ಸ್ಮೃತ್ವಾ ಶಕ್ತಿಂ ಸದಾಶಿವಃ ।
ಕದಾಚಿದಕ್ಷಯಂ ಸ್ವಾಸ್ವಾನ್ನದಧಿಮಿಶ್ರಾನ್ನಪೂರಿತಾನ್ ॥ ೧೬ ॥

ಪುರತಶ್ಚಾನ್ನಗರ್ತಾಂಶ್ಚ ದೃಷ್ಟ್ವಾಥ ಚತುರಃ ಕ್ಷಣಾತ್ ।
ಅತಿನಿಮ್ನಂ ಕುಕ್ಷಿದೇಶಂ ದರ್ಶಯಿತ್ವಾ ಪುರಸ್ಸ್ಥಿತಂ ॥ ೧೭ ॥

ಕುಂಡೋದರಂ ಸಮಾಹೂಯ ಭಕ್ಷಯೇತಿ ಸಮಾದಿಶತ್ ।
ಇತ್ಯಾಜ್ಞಾಂ ದೇವದೇವಸ್ಯ ಲಬ್ಧ್ವಾ ಖರ್ವತರಾಕೃತಿಃ ॥ ೧೮ ॥

ಸಮೀಪಮನ್ನಗರ್ತಾನಾಂ ಸಂಪ್ರಾಪ್ಯ ಸಹಸಾ ಬಲೀ ।
ಸುಪ್ರೀತಶ್ಚ ಸುಖಾಸೀನೋ ಭೂತೋ ಭೋಕ್ತುಂ ಸಮುದ್ಯತಃ ॥ ೧೯ ॥

---

೧೫-೧೭. ತಟಾತಕಾದೇವಿಯು ಪ್ರಾರ್ಥನೆಯಂತೆ ಮಧುರಾಪುರೀಶ್ವರನಾದ ಸುಂದರೇಶ್ವರನು ತನ್ನ ಭಕ್ತರ ಸಂಕಟಗಳನ್ನು ಪರಿಹರಿಸುವುದರಲ್ಲಿ ನಿಪುಣನಾದ್ದರಿಂದ ಸ್ವಾಭೇಧದಿಂದ ತನ್ನ ಈಶ್ವರ ಭಾವಾದಿ ಗುಣಗಳಿಂದ ತನ್ನಲ್ಲಿಯೇ ಅಧೀನಳಾಗಿ ಮಹಿಮೆಯನ್ನು ಹೊಂದಿರುವ'' ಅನ್ನಪೂರ್ಣಾದೇವಿ ಎಂಬ ಶಕ್ತಿಯನ್ನು ಸ್ಮರಿಸಿದನು. ಸದಾಶಿವಭಾವದಿಂದ ಅನ್ನಪೂರ್ಣಾದೇವಿಯನ್ನು ಸ್ಮರಿಸಿದ ಮಾತ್ರದಿಂದಲೇ ಯಾವಾಗಲೂ ಅಕ್ಷಯವಾಗಿರುವ, ದಧ್ಯನ್ನಪೂರಿತವಾದ ಅನ್ನದ ಭಾವಿಗಳಂತೆ ಇರುವ ಹಳ್ಳಗಳು ತನ್ನ ಎದುರಿಗೆ ಕಂಡುಬಂದುವು. ಬಹಳ ಚತುರನಾದ ಶಿವನು ಆ ಕ್ಷಣದಲ್ಲಿಯೇ ನಿಮ್ನೋದರನಾಗಿ ಇರುವ ಕುಂಡೋದರನ ಮುಂದೆ ಇರುವ ಅದನ್ನು ಅವನಿಗೆ ತೋರಿಸಿ, "ಇದನ್ನು ನೀನು ಭೋಜನಮಾಡು" ಎಂದು ಅಪ್ಪಣೆ ಮಾಡಿದನು.

೧೮-೨೨. ಬಹಳ ಹ್ರಸ್ವವಾದ ಆಕಾರವುಳ್ಳ ಕುಂಡೋದರನು ದೇವದೇವನ ಅನುಜ್ಞೆಯನ್ನು ಹೊಂದಿದಕೂಡಲೆ ಅನ್ನದ ಹಳ್ಳಗಳ ಹತ್ತಿರಕ್ಕೆ ಹೋಗಿ ಸಂತೋಷದಿಂದ ಕುಳಿತುಕೊಂಡು ಊಟಮಾಡಲುದ್ಯುಕ್ತನಾದನು. ಆಗ ಅವನು ಬಾಯನ್ನು ವಿಕಾರವಾಗಿ ತೆರೆದುಕೊಂಡು ತನ್ನಹಸ್ತಗಳಿಂದ ಬೆಟ್ಟದಂತಿರುವ ನಾಲ್ಕು ಕಬಳಗಳನ್ನು ಮಾಡಿಕೊಳ್ಳುತ್ತಾ ಆ ಮೊಸರಿನಅನ್ನವೆಲ್ಲವನ್ನೂ ಉಳಿಯದಂತೆ ಭೋಜನಮಾಡಿದನು. ಇದರಿಂದ ಅವನಿಗೆ ಹಸಿವು ಸಮಾಧಾನವಾಯಿತು. ಆದರೆ ಆಗ ಬಾಯಾ

ಆಸ್ಯಂ ತು ವಿವೃತಂ ಕೃತ್ವಾ ತ್ವರಿತಃ ಪರ್ವತೋಪಮಃ ।
ಚತುರ್ಭಿಃ ಕಬಲೈಃ ಸ್ವಸ್ಯ ಪಾಣಿಭ್ಯಾಂ ಪರಿಕಲ್ಪಿತೈಃ ॥ ೨೦ ॥

ತದನ್ನಮಖಿಲಂ ಭುಕ್ತ್ವಾ ಭೂತಃ ಪಶ್ಚಾತ್ತೃಷಾನ್ವಿತಃ ।
ತಟಾಕಾನಾಂ ಚ ವಾಪೀನಾಂ ಕೂಪಾದೀನಾಂ ಚ ಶಂಬರಂ ॥ ೨೧ ॥

ಪೀತ್ವಾಪಿ ಭೂಯಸ್ತೃಷಿತೋ ವಾರಿ ವಾರೀತಿ ಶಂಕರಂ ।
ಭೂತ ಸ್ಸಂಪ್ರಾರ್ಥಯಾಮಾಸ ಭೂತೇಶಂ ಸುಂದರೇಶ್ವರಂ ॥ ೨೨ ॥

ತದಾ ಸುಂದರಪಾಂಡ್ಯೇಶ ಸ್ಸರ್ವಜ್ಞ ಸ್ಸರ್ವದಃ ಪ್ರಭುಃ ।
ಸರ್ವಭೂತಾನುಕಂಪೀಶ ಸ್ಸರ್ವಸಾಕ್ಷೀ ಪರಾತ್ಪರಃ ॥ ೨೩ ॥

ಶಕ್ತಃ ಕರ್ತುಮಕರ್ತುಂ ಚ ಹ್ಯನ್ಯಥಾ ಕರ್ತುಮೀಶ್ವರಃ ।
ವಿನಾ ನದೀಪ್ರವಾಹೇಣ ನಾನ್ಯತೃಟ್ಛಮನಂ ಭವೇತ್ ॥ ೨೪ ॥

ಲೋಕಾನಾಂ ತು ಸುಖಂ ನ ಸ್ಯಾನ್ಮಧುರಾದೇಶವಾಸಿನಾಂ ।
ಇತಿ ನಿಶ್ಚಿತ್ಯ ಮನಸಾ ಶರಣಾಗತವತ್ಸಲಃ ॥ ೨೫ ॥

---

ರಿಕೆಯು ಉಂಟಾಗಿ ಕುಡಿಯುವ ನೀರನ್ನು ಹುಡುಕಿಕೊಂಡು ಅವನು ಕೆರೆ, ಕೊಳ, ಬಾವಿ, ಇವುಗಳೆಲ್ಲದರ ನೀರನ್ನು ಕುಡಿದನು. ಇದರಿಂದ ನೀರಡಿಕೆಯು ಶಾಂತವಾಗ ಲಿಲ್ಲ. ಆಗ ಭೂತಪತಿಯಾದ ಸುಂದರೇಶ್ವರನನ್ನು, ತನ್ನ ಬಾಯಾರಿಕೆಯು ಹೋಗುವುದಕ್ಕಾಗಿ ನೀರನ್ನು ತರಿಸಿಕೊಡಲು ಬೇಡಿಕೊಂಡನು.

೨೩–೨೫. ಆಗ ಪಾಂಡ್ಯದೇಶದ ರಾಜನಾಗಿರುವ ಸುಂದರೇಶ್ವರನು, ಸರ್ವಜ್ಞನು. ಭಕ್ತರಿಗೆ ಸರ್ವಸ್ವವನ್ನು ಕೊಡತಕ್ಕವನು., ಎಲ್ಲಾ ಪ್ರಾಣಿಗಳಲ್ಲಿಯೂ ದಯೆಯುಳ್ಳವನು, ಸರ್ವಕ್ಕೂ ಸಾಕ್ಷಿಯಾದ ಪರಬ್ರಹ್ಮರೂಪಿನಿಂದ ಇರುವವನು. ಹೊಸದಾಗಿ ನಿರ್ಮಿಸುವುದೂ, ನಿರ್ಮಿಸದೆ ಇರುವುದೂ, ಸೃಷ್ಟಿಯಾದದ್ದನ್ನು ಬೇರೆಯ ವಿಧವಾಗಿ ಸೃಷ್ಟಿ ಮಾಡುವುದೂ, ಎಂಬ ಮಹಿಮೆಯನ್ನು ಹೊಂದಿರುವುದ ರಿಂದ, ಈ ಕುಂಡೋದರನ ಬಾಯಾರಿಕೆಯು ನದೀಪ್ರವಾಹವಿಲ್ಲದಿದ್ದರೆ, ಅಡಗುವುದಿಲ್ಲ, ಮಧುರಾಪುರದಲ್ಲಿ ವಾಸಮಾಡುವವರಿಗೆ ನದಿಯಿಲ್ಲದಿದ್ದರೆ ಸುಖವಾಗುವುದಿಲ್ಲ, ಎಂದು ನಿಶ್ಚಯ ಮಾಡಿದನು.

ಸರ್ವಲೋಕೋಪಕಾರಾಯ ಕುಂಡೋದರಹಿತಾಯ ಚ ।
ಸ್ವಶಿಪರ್ದಸ್ಥಿತಾಂ ಗಂಗಾಂ ಪವಿತ್ರಾಂ ಪಾಪಹಾರಿಣೀಂ ॥ ೨೬ ॥

ಏವಂ ಪ್ರಾಹ ಮಹೇಶಾನೋ ದೇವದೇವಸ್ತ್ರಿಯಂಬಕಃ ।
ಹೇ ದೇವಿ ಗಂಗೇ ಸುಭಗೇ ಮತ್ಪ್ರಿಯೇ ಸರ್ವಮಂಗಲೇ ॥ ೨೭ ॥

ಮಹಾಪ್ರವಾಹರೂಪೇಣ ಮದಿಯೇ ಮಧುರಾಪುರೇ ।
ಸಮಾಗಚ್ಛ ಮಹಾವೇಗಾತ್ಸದ್ಯಸ್ತ್ವಂ ಲೋಕಪಾವನೇ ॥ ೨೮ ॥

ಇತಿ ದೇವವಚಃ ಶ್ರುತ್ವಾ ಗಂಗಾದೇವೀ ಸರಸ್ವತೀ ।
ಪ್ರಾರ್ಥಯಾಮಾಸ ದೇವೇಶಂ ಶ್ರೀಮದ್ಧಾಲಾಸ್ಯನಾಯಕಂ ॥ ೨೯ ॥

ಭಗೀರಥಪ್ರಾರ್ಥನಯಾ ಪುರಾ ಭಗವತಾ ತ್ವಯಾ ।
ಪ್ರವರ್ತಿತಾಽಹಂ ಲೋಕೇಽಸ್ಮಿನ್ಮಹಾಪಾಪಪ್ರಶಾಂತಯೇ ॥ ೩೦ ॥

---

೨೬–೨೭. " ಶರಣುಬಂ ವರ ವಿಷಯದಲ್ಲಿ ಪ್ರೀತಿಯುಳ್ಳ ಆ ದೇವದೇವನು ತನ್ನ ಮನೋ ನಿಶ್ಚಯದಿಂದ ಕುಂಡೋದರನಿಗೆ ಹಿತವನ್ನುಂಟುಮಾಡುವುದಕ್ಕೂ, ಲೋಕೋಪಕಾರವನ್ನು ಮಾಡುವುದಕ್ಕೂ ಆಸಕ್ತಿಯಿಂದ, ತಾನು ತ್ರಿಯಂಬಕನಾದ ಮಹೇಶ್ವರನೂ, ದೇವದೇವನೂ, ಆಗಿರುವುದರಿಂದ ತನ್ನ ಜಟೆಯಲ್ಲಿರುವ ಪವಿತ್ರಳಾದ ಪಾಪಹಾರಿಣಿಯಾದ ಗಂಗೆಯನ್ನು ಕರೆದು ಮುಂದೆ ಹೇಳುವ ಮಾತನ್ನು ಹೇಳಿದನು.

೨೮–೨೯. " ನನಗೆ ಪ್ರೀತಿಪಾತ್ರಳಾದ, ಸರ್ವಮಂಗಳೆಯಾದ ಗಂಗೆಯೇ, ಲೋಕಪಾವನೆಯಾದ, ನೀನು ನನ್ನ ಮಧುರಾನಗರದಲ್ಲಿ ಬಹಳ ಪ್ರವಾಹರೂಪದಿಂದ ಬಹಳ ವೇಗವಾಗಿ ಈಗಲೇ ಪ್ರವಹಿಸು. " ಎಂದು ಹೇಳಿದ ಪರಮೇಶ್ವರನ ಮಾತನ್ನು ಕೇಳಿ ನದೀ ಶ್ರೇಷ್ಠಳಾದ ಗಂಗೆಯು, ಹಾಲಾಸ್ಯ ನಾಯಕನಾದ ದೇವದೇವನನ್ನು ಪ್ರಾರ್ಥಿಸಿಕೊಂಡಳು.

೩೦–೩೩. " ನಾನು ಪೂರ್ವದಲ್ಲಿ ನಿನ್ನ ಆಜ್ಞೆಯಂತೆ ಭಗೀರಥನ ಪ್ರಾರ್ಥನೆಯನ್ನು ನೆರವೇರಿಸುವುದಕ್ಕಾಗಿ ಈ ಲೋಕಕ್ಕೆ ಬಂದು ಪ್ರವಹಿಸುತ್ತಿರುವೆನು. ಮತ್ತು ಜನಗಳ ಮಹಾಪಾಪಗಳನ್ನು ಪರಿಹರಿಸುತ್ತಿರುವೆನು. ಈಗಲೂ ಕೂಡ ಪ್ರಾಣಿಗಳನ್ನು ಅನುಗ್ರಹಿಸುವುದಕ್ಕಾಗಿಯೂ, ಎಲ್ಲಾ ಪ್ರಾಣಿಗಳ ಹಿತಕ್ಕಾಗಿಯೂ, ಇಲ್ಲಿ ಪ್ರವಹಿಸುವಂತೆ ನಿನ್ನ ಅನುಜ್ಞೆಯು ಆಗಿರುವುದು. ನಾನು ಎಲ್ಲಾ ಕಡೆಯಲ್ಲಿಯೂ ಎಲ್ಲರ ಮಹಾ

**ಇದಾನೀ ಮಪಿ ಭೂತೇಶ ಭೂತಾನುಗ್ರಹಹೇತವೇ ।**
**ಅಹಮಾಜ್ಞಾಪಿತಾ ಚಾಸ್ಮಿ ಭೂಯ ಸ್ಸರ್ವಹಿತಾಯ ಚ ॥ ೩೧ ॥**

**ಮಹಾಪಾಪಹರಾ ಚಾಸ್ಮಿ ಸರ್ವತ್ರಾಹಂ ತ್ವಯಾ ಜ್ಞಯಾ ।**
**ತಥಾಪಿ ಕಾಶ್ಯಾಂ ಪ್ರಥಿತಾ ತವ ಸಾರೂಪ್ಯದಾಸ್ಮ್ಯಹಂ ॥ ೩೨ ॥**

**ದುರ್ಲಭಂ ತವ ಸಾಯುಜ್ಯಂ ದಾತುಂ ಶಕ್ತಾ ಯಥಾ ಕ್ರತುಃ ।**
**ಬ್ರಹ್ಮಹತ್ಯಾದಿಪಾಪಘ್ನೀ ತಥಾ ಮೇ ಕುರ್ವನುಗ್ರಹಂ**
**ಇತಿ ಸಂಪ್ರಾರ್ಥಿತೋ ದೇವ್ಯಾ ಗಂಗಯಾ ಸೋಮಸುಂದರಃ ॥ ೩೩ ॥**

**ಪ್ರಾಹ ಗಂಭೀರಯಾ ವಾಚಾ ಸರ್ವಾನುಗ್ರಹತತ್ಪರಃ**
**ಸಾಧು ಸಾಧು ಮಹಾಪ್ರಾಜ್ಞೇ ತ್ವಯಾ ಪ್ರೋಕ್ತಮಿದಂ ವಚಃ ॥ ೩೪ ॥**

**ಶೃಣು ಕಲ್ಯಾಣಿ ಮದ್ವಾಕ್ಯಂ ಸಂಸಾರೋತ್ತಾರಣಕ್ಷಮಂ**
**ಸಮಷ್ಟಿವಿದ್ಯಾನಗರೇ ಸರ್ವಾಜ್ಞಾನತಮೋಸುದೇ ॥ ೩೫ ॥**

**ಸರ್ವತ್ರ ದೃಷ್ಟಮಾತ್ರೇಣ ಸರ್ವ ಪಾಪಹರಾ ಭವ ।**
**ಸ್ನಾನಮಾತ್ರೇಣ ಸರ್ವೇಷಾಂ ಸರ್ವಸೌಭಾಗ್ಯದಾ ಭವ ।**
**ಪ್ರಯಚ್ಛ ಪಾನಮಾತ್ರೇಣ ವಿದ್ಯಾಮಜ್ಞಾನಹಾರಿಣೀಂ ॥ ೩೬ ॥**

---

ಪಾಪಗಳನ್ನೂ ಪರಿಹರಿಸುವ ಮಹಿಮೆಯನ್ನು ಹೊಂದಿ ಇರುವೆನು. ಹೀಗಿದ್ದಾಗ್ಯೂ ಕಾಶಿಯಲ್ಲಿ ಪ್ರಸಿದ್ಧಳಾಗಿ ನಿನ್ನ ಸಾರೂಪ್ಯವನ್ನು ಕೊಡುತ್ತಿರುವೆನು. ಈ ಪ್ರದೇಶದಲ್ಲಿ ದ್ದುಕೊಂಡು ನಿನ್ನ ಸಾಯುಜ್ಯವನ್ನು ಕೊಡುವ ಮಹಿಮೆಯನ್ನೂ, ಬ್ರಹ್ಮಹತ್ಯವೇ ಮೊದಲಾದ ಪಾತಕಗಳನ್ನು ನಾಶಮಾಡುವ ಮಹಿಮೆಯನ್ನೂ ನನಗೆ ಅನುಗ್ರಹಿಸು." ಎಂದು ಗಂಗೆಯು ದೇವನನ್ನು ಪ್ರಾರ್ಥಿಸಿದಳು. ಆಗ ಸೋಮಸುಂದರನು ಗಂಗೆಯ ಮಾತನ್ನು ಕೇಳಿ ಎಲ್ಲರಿಗೂ ಅನುಗ್ರಹ ಮಾಡುವುದರಲ್ಲಿ ಆಸಕ್ತನಾಗಿರುವುದರಿಂದ ಗಂಭೀರವಾದ ಮಾತನ್ನು ಹೇಳಿದನು.

೩೪-೩೬. " ಎಲೈ ಮಂಗಳಕರಳೆ, ಎಲ್ಲರಿಗೂ ಶ್ರೇಯಸ್ಸನ್ನುಂಟುಮಾಡುವ ವನ್ನ ಮಾತನ್ನು ಕೇಳು. ಎಲ್ಲರ ಅಜ್ಞಾನವನ್ನೂ ನಾಶಪಡಿಸುವ ಈ ಸಮಷ್ಟಿವಿದ್ಯಾ ನಗರಿಯಲ್ಲಿ ಎಲ್ಲಾ ಕಡೆಯಲ್ಲಿಯೂ ನೀನು ದರ್ಶನಮಾತ್ರದಿಂದಲೇ ಎಲ್ಲರ ಪಾತಕ ಗಳನ್ನೂ ನಾಶಮಾಡುತ್ತಾ ಇರು. ನಿನ್ನಲ್ಲಿ ಸ್ನಾನಮಾಡಿದವರಿಗೆ ಶ್ರೇಯಸ್ಸು ಉಂಟಾಗಲಿ. ನಿನ್ನ ನೀರನ್ನು ಪಾನಮಾಡಿದವರಿಗೆ ಅಜ್ಞಾನವು ಹೋಗಿ ಜ್ಞಾನವು ವೃದ್ಧಿಯಾಗುತ್ತಿರಲಿ.

ಪುನರ್ಮೇ ಮೂಲಲಿಂಗಸ್ಯ ಸ್ವಯಂ ಭೂತೋತ್ತಮಸ್ಯ ಚ
ಹಾಲಾಸ್ಯೇಶ್ವರಸಂಜ್ಞಸ್ಯ ಸಾಂಬಸ್ಯ ಕರುಣಾನಿಧೇಃ । ॥ ೩೭ ॥

ಸನ್ನಿಧಿಂ ಪ್ರಾಪ್ಯ ಸರ್ವೇಷಾಂ ಜನಾನಾಂ ದೃಷ್ಟಮಾತ್ರತಃ ।
ದಾತುಂ ಧರ್ಮಾಂಶ್ಚ ಕಾಮಾಂಶ್ಚ ಶಕ್ತಾ ಭವ ಸರಿದ್ವರೇ ॥ ೩೮ ॥

ಸ್ನಾನಮಾತ್ರೇಣ ಸಾಯುಜ್ಯಂ ಮದೀಯಂ ದಾತುಮರ್ಹಸಿ ।
ತ್ವತ್ತೀರೇ ಯಾನಿ ಕರ್ಮಾಣಿ ವಿಧ್ಯುಕ್ತಾನಿ ಕೃತಾನಿ ಹ ॥ ೩೯ ॥

ತಾನಿ ಸಾಯುಜ್ಯಮುಕ್ತೇಶ್ಚ ಕಾರಣಾನಿ ನ ಸಂಶಯಃ ।
ಕಾಶ್ಯಾಂ ವಿಶ್ವೇಶ್ವರಾಖ್ಯಸ್ಯ ಮಮಾಗ್ರೇ ಸ್ನಾನತಸ್ತ್ವಯಿ ॥ ೪೦ ॥

ಯತ್ಫಲಂ ಚಾತ್ರ ಹಾಲಾಸ್ಯೇ ತತೋಧಿಕಫಲಂ ಪರಂ ।
ಇತಿ ದತ್ವಾ ವರಂ ತಸ್ಯೈ ಗಂಗಾಯೈ ವೃಷಭಧ್ವಜಃ ॥ ೪೧ ॥

ಪುನರಾಜ್ಞಾಪಯಾಮಾಸ ಸಮಾಗಚ್ಛಾತಿಸತ್ವರಂ ।
ಇತ್ಯಾಜ್ಞಾಂ ದೇವದೇವಸ್ಯ ಲಬ್ಧ್ವಾ ಚಾಮರನಿಮ್ನಗಾ ॥ ೪೨ ॥

---

೩೭–೪೧. ದಯಾನಿಧಿಯಾದ ಹಾಲಾಸ್ಯೇಶ್ವರನ ಸ್ವಯಮುದ್ಭೂತವಾದ ಶಿವಲಿಂಗದ ಸನ್ನಿಧಿಯಲ್ಲಿ ನೀನು ಇದ್ದುಕೊಂಡು ದರ್ಶನಮಾಡಿದವರೆಲ್ಲರಿಗೂ ಧರ್ಮಕಾಮಗಳನ್ನು ಅನುಗ್ರಹಿಸುತ್ತಾ ಇರು. ಸ್ನಾನ ಮಾಡಿದವರಿಗೆ ನನ್ನ ಸಾಯುಜ್ಯವನ್ನುಂಟುಮಾಡುತ್ತಿರು. ನಿನ್ನ ತೀರದಲ್ಲಿ ಆಚರಿಸಿದ ಶಾಸ್ತ್ರೋಕ್ತವಾದ ಕರ್ಮಗಳೆಲ್ಲವೂ ಸಾಯುಜ್ಯಮುಕ್ತಿಗೆ ಕಾರಣವಾಗಿರಲಿ. ಕಾಶಿಯಲ್ಲಿ ವಿಶ್ವೇಶ್ವರನೆಂದು ಹೆಸರಿನಿಂದ ಪ್ರಸಿದ್ಧನಾಗಿರುವ ನನ್ನ ಸನ್ನಿಧಿಯಲ್ಲಿ ಇರುವ ನಿನ್ನ ನೀರಿನಲ್ಲಿ ಸ್ನಾನಮಾಡಿದವರಿಗಿಂತಲೂ ಹಾಲಾಸ್ಯಕ್ಷೇತ್ರದಲ್ಲಿ ಸ್ನಾನ ಮಾಡಿದವರಿಗೆ ಹೆಚ್ಚಾದ ಫಲವನ್ನು ಅನುಗ್ರಹಿಸು, ಎಂದು ವೃಷಭಧ್ವಜನಾದ ಪರಮೇಶ್ವರನು ಗಂಗೆಗೆ ಈ ಪ್ರಕಾರವಾಗಿ ವರವನ್ನು ಕೊಟ್ಟು, " ಬೇಗನೆ ಪ್ರವಾಹವುಬರಲಿ, " ಎಂದು ಅಪ್ಪಣೆ ಮಾಡಿದನು.

೪೨–೪೬. ದೇವದೇವನ (ಆಜ್ಞೆಯನ್ನು ಹೊಂದಿದ) ಅಪ್ಪಣೆಯಂತೆ ಗಂಗಾನದಿಯು ಬಹಳ ಹೆಚ್ಚಾದ ಪ್ರವಾಹದಿಂದ ವೇಗದಿಂದ ಎಲ್ಲರಿಗೂ ಆಶ್ಚರ್ಯವನ್ನುಂಟುಮಾಡುತ್ತಾ ಎತ್ತರವಾದ ತನ್ನ ಅಲೆಗಳಿಂದ ಪಕ್ಕದಲ್ಲಿರುವ ಮರಗಳನೆಲ್ಲವನ್ನೂ ಕಿತ್ತುಕೊಂಡು ನೀರಿನಲ್ಲಿ ತರುತ್ತಾ ಹರಿಯಲು ಪ್ರಾರಂಭವಾಯಿತು. ಈ ನದಿಯು

ಮಹಾಪ್ರವಾಹವೇಗಾಭ್ಯಾಂ ಮಹಾದ್ಭುತವತೀ ಸತೀ ।
ತುಂಗೈ ಸ್ತರಂಗಹಸ್ತೈಶ್ಚ ಪುಷ್ಪಿತಾನ್ಪಾ ರ್ಶ್ವಗಾನ್ದ್ರುಮಾನ್ || ೪೩ ।

ಉತ್ಪಾಟ್ಯ ಭ್ರಾಮಯಿತ್ವಾ ತಾನ್ಸಮಾಯಾತಿ ತರಂಗಿಣೀ ।
ಸ್ವಯಂ ಸ್ವಭಾವತ ಶ್ಶುಭ್ರಾ ಗಂಗಾ ಸರ್ವಸರಿದ್ವರಾ || ೪೪ ||

ಪ್ರವಾಹವೇಗಾದಾಕೃಷ್ಟಫೇನೋಪರಿನಿವಾಸಿನಾಂ ।
ಪನ್ನಗಾನಾಂ ಪ್ರಭಾಭಿಶ್ಚ ತತ್ಫಣಾಮಣಿದೀಪ್ತಿಭಿಃ
ಸರಸ್ವತ್ಯಾ ಯಮುನಯಾ ಸಂಗತೇವ ವಿರಾಜಿತಾ ।
ತೀರದ್ರುಮೇಭ್ಯಃ ಪತಿತೈಃ ಪುಷ್ಪೈರ್ನಿಬಿಡಿತಾ ಸತೀ || ೪೫ ||

ದ್ಯೌರಿವ ಪ್ರಬಭೌ ಸಾ ಚ ಜ್ಯೋತಿರ್ಗಣವಿರಾಜಿತಾ ।
ತೀರೋಭಯ ವಿಸಂಸರ್ಪಿಪುಷ್ಪದ್ರುಮನಿಪಾತಿತೈಃ || ೪೬ ||

ಸುಮನೋಭಿ ಸ್ಸುಗಂಧಾಭಿಃ ವಾಸಿತಾ ಶೀತಲಾನಿಲೈಃ ।
ಪೂಗಪುನ್ನಾಗಮಾಲಾದಿಸಂಪತ್ತಿಸ್ಪರ್ಶಸೌರಭ್ಯೈಃ || ೪೭ ||

ಫೇನಿಲಾ ಭೀಷಣಸ್ವಾನಾ ಕೂಲಘ್ನೀ ದೃಶ್ಯತೇ ಸ್ವನಾ ।
ತದಾ ಸುಂದರಪಾಂಡ್ಯೇಶಸ್ಸರ್ವಭೂತಹಿತೇ ರತಃ || ೪೮ ||

---

ಸ್ವಭಾವದಿಂದಲೂ ಶುಭ್ರವಾದದ್ದು. ಹೀಗಿದ್ದರೂ ಹರಿಯುವ ಪ್ರವಾಹದ ನೊರೆಯ ಮೇಲುಭಾಗದಲ್ಲಿ ಹಾವಿನ ಹೆಡೆಗಳ ರತ್ನಕಾಂತಿಗಳು ಪ್ರಕಾಶಿಸುತ್ತಿದ್ದವು. ಅದರಿಂದ ಯಮುನಾ, ಸರಸ್ವತೀ, ನದಿಗಳಿಂದ ಕೂಡಿರುವ ಹಾಗೆ ಅದು ಕಾಣುತ್ತಿತ್ತು. ದಡದಲ್ಲಿರುವ ಮರಗಳ ಹೂವುಗಳಿಂದ ತುಂಬಿರುವ ಪ್ರವಾಹವು ನಕ್ಷತ್ರಗಳಿಂದ ಕೂಡಿದ ಅಂತರಿಕ್ಷದಂತೆ ಕಾಣುತ್ತಿತ್ತು.

೪೭–೪೮. ನದಿಯ ಎರಡು ದಡಗಳಲ್ಲಿಯೂ ಇರುವ ಹೂವಿನ ಮರಗಳ ಸುವಾಸನೆಯಿಂದಲೂ, ಅಡಕೆ, ಪುನ್ನಾಗ ಮರಗಳಮೇಲೆ ಬೀಸಿಕೊಂಡು ಬರುವ ಸುಗಂಧವುಳ್ಳ ತಂಗಾಳಿಯಿಂದಲೂ, ಕೂಡಿರುವ ಈ ನದಿಯ ಪ್ರವಾಹವು ನೊರೆಯುಳ್ಳದ್ದಾಗಿಯೂ, ಭಯವನ್ನುಂಟುಮಾಡುವ ಧ್ವನಿಯುಳ್ಳದ್ದಾಗಿಯೂ, ದಡಗಳನ್ನು ನಾಶಪಡಿಸುವುದಾಗಿಯೂ ಕಾಣುತ್ತಿತ್ತು.

ಕುಂಡೋದರಂ ಸಮಾಲೋಕ್ಯ ಕಿಂಚಿತ್ಸ್ಮಿತ್ವಾ ಕಟಾಕ್ಷತಃ ।
ಪ್ರೇಷಯಾಮಾಸ ಪಾತುಂ ಚ ಪ್ರವಾಹಂ ತಂ ನದೀಭವಂ ॥ ೪೯ ॥

ತದಾ ವಿಸ್ಮಯಮಾಪನ್ನೋ ಭೂತಃ ಕುಂಡೋದರೋ ಬಲೀ ।
ನಮಸ್ಕೃತ್ಯ ಮಹಾದೇವ ಮುತ್ಪ್ಲುತ್ಯೋ ತ್ಪ್ಲುತ್ಯವೇಗತಃ ॥ ೫೦ ॥

ಗತ್ವಾ ನದೀಪ್ರವಾಹಂ ಚ ಪುರಸ್ಕೃತ್ಯ ಸ್ವಯಂ ಸ್ಥಿತಃ ।
ಮಹತಾ ವಪುಷಾ ತೇನ ಜನಯನ್ಜನವಿಸ್ಮಯಂ ॥ ೫೧ ॥

ವಿವೃತಂ ವದನಂ ಕೃತ್ವಾ ಮಹಾಗಹ್ವರಸನ್ನಿಭಂ ।
ಬಾಹುಭ್ಯಾಂ ವಿಸ್ತೃತಾಭ್ಯಾಂ ಚ ನೀರಂಧ್ರಂ ತಾಂ ನಿರುಧ್ಯ ಚ ॥ ೫೨ ॥

ಕ್ಷಣಾತ್ಸವಾಲುಕಾಶೇಷಂ ಪಪೌ ಸ್ಫೀತಂ ನದೀಜಲಂ ।
ವ್ಯಸ್ಮಯಂತಸ್ತದಾ ಸರ್ವೇ ದೃಷ್ಟ್ವಾ ಭೂತವಿಚೇಷ್ಟಿತಂ ॥ ೫೩ ॥

ಸೋಽಪ್ಯುತ್ಥಾಯ ನದೀಂ ಪೀತ್ವಾ ಮಹತ್ಪೂರತರಂಗಿಣೀಂ ।
ಸದ್ಯಸ್ಸನ್ನಿಧಿಮಾಗತ್ಯ ಸರ್ವಭೂತಾಧಿಪಸ್ಯ ಚ ॥ ೫೪ ॥

---

೪೯–೫೩. ಆಗ ಸುಂದರಪಾಂಡ್ಯಭೂಪನು, ಕೊಂಚ ಮಂದಹಾಸದಿಂದಕೂಡಿ, ಕುಂಡೋದರನನ್ನು ನೋಡಿ, ಆ ಹೊಳೆಯ ನೀರನ್ನು ಕುಡಿಯಲು ಕಟಾಕ್ಷದಿಂದ ಅನುಜ್ಞೆಯನ್ನು ಕೊಟ್ಟನು. ಭೂತನಾದ ಕುಂಡೋದರನು ದೇವನಿಗೆ ನಮಸ್ಕರಿಸಿ ಬಲಿಷ್ಠನಾಗಿರುವುದರಿಂದ, ಆಶ್ಚರ್ಯವುಳ್ಳವನಾಗಿ, ವೇಗವಾಗಿ ಹಾರಿಕೊಂಡು ಈ ನದಿಯ ಸಮೀಪಕ್ಕೆ ಹೋಗಿ ಪ್ರವಾಹಕ್ಕೆ ಎದುರಾಗಿ ನಿಂತುಕೊಂಡನು. ಆಗ ಅವನ ಶರೀರದ ಆಕಾರವನ್ನು ನೋಡಿದ ಜನರೆಲ್ಲರೂ ಆಶ್ಚರ್ಯಪಟ್ಟರು. ದೊಡ್ಡ ಬಿಲದಂತೆ ಇರುವ ಬಾಯನ್ನು ವಿಕಾರವಾಗಿ ತೆರದುಕೊಂಡು, ತನ್ನ ತೋಳುಗಳನ್ನು ಪ್ರವಾಹಕ್ಕೆ ಅಡ್ಡಲಾಗಿಟ್ಟು, ಒಂದು ಹನಿಯ ನೀರೂ ಹೊರಗಡೆ ಹೋಗದಂತೆ ತಡೆದು ನೀರೆಲ್ಲವನ್ನೂ ಅವನು ಪಾನಮಾಡಿದನು. ಆಗ ಆ ನದಿಯಲ್ಲಿ ನೀರಿಲ್ಲದೆ ಮರಳು ಕಾಣುತಿತ್ತು. ಭೂತದ ಕಾರ್ಯವನ್ನು ನೋಡಿ, ಜನರೆಲ್ಲರೂ ಆಶ್ಚರ್ಯಪಟ್ಟರು

೫೪–೫೫. ಕುಂಡೋದರನು ಬಹಳ ಪ್ರವಾಹದಿಂದ ಇರುವ ನದಿಯ ಜಲವನ್ನೆಲ್ಲವನ್ನೂ ಕುಡಿದು ದೇವದೇವನಾದ ಪರಮೇಶ್ವರನ ಹತ್ತಿರಕ್ಕೆ ಬಂದು,

**ಕುಂಡೋದರತ್ವಂ ಸಂತ್ಯಜ್ಯ ದರ್ಶಯನ್ನು ಸ್ವತೋದರಂ ।**
**ವಿದ್ಯಯಾ ವಾಪ್ತಯಾ ಸ್ಸದ್ಯ ಸ್ಸರಿನ್ಮ್ಯಖ್ಯಾಂಬುಪಾನತಃ ॥ ೫೫ ॥**
**ತುಷ್ಟಾವ ಸಾಂಜಲಿರ್ಭೂತ್ವಾ ಭೂತೇಶಂ ಮುದಿತಾಶಯಃ ।**

**॥ ಕುಂಡೋದರ ಉವಾಚ ॥**

**ಶೈಲಾಧೀಶಸುತಾಸಹಾಯ ಸಕಲಾಮ್ನಾಯಾಂತವೇದ್ಯ ಪ್ರಭೋ ।**
**ಶೂಲಾಸ್ತ್ರಾಗ್ರವಿದಾರಿತಾಂಧಕಸುರಾರಾತೀಂದ್ರವಕ್ಷಸ್ಸ್ಥಲಾ ।**
**ಕಾಲಾತೀತ ಕಲಾವಿಲಾಸಕುಶಲ ತ್ರಾಯೇತ ತೇ ಸಂತತಂ ।**
**ಹಾಲಾಸ್ಯೇಶ ಕೃಪಾಕಟಾಕ್ಷಲಹರೀ ಮಾ ಮಾ ಪದಾಮಾಸ್ಪದಂ ॥ ೫೬ ॥**

**ಕೋಲಾಚ್ಛಚ್ಛದರೂಪ ಮಾಧವಸುರಜ್ಯೇಷ್ಠಾತಿದೂರಾಂಘ್ರಿಕ ।**
**ನೀಲಾರ್ಧಾಂಗನಿವೇಶ ನಿರ್ಜರಧುನೀಭಾಸ್ವಜ್ಜಟಾಮಂಡಲ ।**

---

ತನ್ನ ಹ್ರಸ್ವಾಕಾರವನ್ನು ಬಿಟ್ಟು, ನಿಜರೂಪವನ್ನು ಧರಿಸಿ, ಗಂಗಾನದಿಯ ನೀರಿನ ಪಾನದಿಂದ ಉಂಟಾದ ಜ್ಞಾನಾಭಿವೃದ್ಧಿಯುಳ್ಳವನಾಗಿ, ಸಂತೋಷದಿಂದ ಕೈಕಟ್ಟಿ ಕೊಂಡು ಹಾಲಾಸ್ಯೇಶ್ವರನಾದ ಸುಂದರಪಾಂಡ್ಯರಾಜನನ್ನು ಸ್ತೋತ್ರಮಾಡಿದನು.

೫೬. ಕುಂಡೋದರನು ಹೇಳಿದನು :—ಎಲೈ ಪ್ರಭುವೇ, ಪರ್ವತರಾಜ ಪುತ್ರಿಯಾದ ಪಾರ್ವತಿಯು ನಿನಗೆ ಸಹಾಯಕಳಾಗಿರುವಳು. ನಿನ್ನ ಮಹಿಮೆಯನ್ನೂ ಸ್ವರೂಪವನ್ನೂ ಉಪನಿಷತ್ತುಗಳಿಂದ ತಿಳಿಯಬೇಕಾಗಿರುವುದು. ನೀನು ತ್ರಿಶೂಲವೇ ಮುಂತಾದ ಆಯುಧಗಳ ತುದಿಯಿಂದ ಅಂಧಕಾಸುರನೇ ಮುಂತಾದ ದೇವಶತ್ರುಗಳ ಹೃದಯವನ್ನು ಭೇದಿಸಿರುತ್ತೀಯೆ. ನೀನು ಕಾಲವನ್ನು ಮೀರಿ ಇರುವವನು ಎಲ್ಲಾ ವಿಧವಾದ ಕಲೆಗಳಲ್ಲಿಯೂ ನಿಪುಣನಾಗಿ ಇರುವವನು. ಎಲೈ ಹಾಲಾಸ್ಯ ಪ್ರಭುವೇ, ನಿನ್ನ ದಯಾಪೂರ್ಣವಾದ ಕಟಾಕ್ಷಪ್ರವಾಹವು ವಿಪತ್ತಿಗೆ ಸಿಕ್ಕಿರುವ ನನ್ನನ್ನು ಯಾವಾಗಲೂ ಖಂಡಿತವಾಗಿ ಕಾಪಾಡುತ್ತಿರುವುದು

೫೭. ನೀನು ಶ್ವೇತವರಾಹಮೂರ್ತಿಯ ದೇಹಕಾಂತಿಯಂತಿರುವ ಕಾಂತಿಯನ್ನು ಧರಿಸಿರುತ್ತೀಯೆ. ವಿಷ್ಣುವೇ ಮೊದಲಾದ ದೇವತೆಗಳಿಗೂ ನಿನ್ನ ಪಾದದರ್ಶನವಾಗುವುದು ಕಷ್ಟವಾಗಿರುವುದು. ಕೊಂಚ ಕಪ್ಪಾಗಿರುವ ಶರೀರದ ಅರ್ಧಭಾಗದಿಂದ ನೀನು ಪ್ರಕಾಶಿಸುತ್ತಿರುವೆ. ಗಂಗಾನದಿಯ ಪ್ರವಾಹದಿಂದ ಕೂಡಿರುವ ಜಟಾಸಮೂಹ

ಕೈಲಾಸಾಚಲವಾಸಕಾರ್ಮುಕ ಹರ ತ್ರಾಯೇತ ತೇ ಸಂತತಂ ।
ಹಾಲಾಸ್ಯೇಶ ಕೃಪಾಕಟಾಕ್ಷಲಹರೀ ಮಾಮಾ ಪದಾಮಾಸ್ಪದಂ ॥ ೫೭ ॥

ಫಾಲಾಕ್ಷಿಪ್ರಭವಪ್ರಭಂಜನಸಖಪ್ರೋದ್ಯತ್‌ಸ್ಫುಲಿಂಗಚ್ಛಟಾ ।
ತೂಲಾನಂಗಕಚಾರುಸಂಹನನ ಸನ್ಮೀನೇಕ್ಷಣಾವಲ್ಲಭ ।
ಶೈಲಾದಿಪ್ರಮುಖೈರ್ಗಣೈಸ್ಸ್ತುತಗುಣ ತ್ರಾಯೇತ ತೇ ಸಂತತಂ ।
ಹಾಲಾಸ್ಯೇಶ ಕೃಪಾಕಟಾಕ್ಷಲಹರೀ ಮಾಮಾಪದಾಮಾಸ್ಪದಂ ॥ ೫೮ ॥

ಮಾಲಾಕಲ್ಪಿತಮಾಲುಧಾನಫಣಸನ್ಮಾಣಿಕ್ಯಭಾಸ್ವತ್ತನೋ ।
ಮೂಲಾಧಾರಜಗತ್ತ್ರಯಸ್ಯ ಮುರಜಿನ್ನೇತ್ರಾರವಿಂದಾರ್ಚಿತ ।

---

ವನ್ನು ನೀನು ಹೊಂದಿರುತ್ತೀಯೆ. ನೀನು ಕೈಲಾಸಪರ್ವತವನ್ನು ವಾಸಸ್ಥಳವನ್ನಾಗಿ ಮಾಡಿಕೊಂಡು ಇರುತ್ತೀಯೆ. ನಿನಗೆ ಮೇರುಪರ್ವತವೇ ಧನುಸ್ಸಾಗಿ ಇತ್ತು. ನೀನು ಜಗತ್ತನ್ನು ಸಂಹರಿಸುವನಾದ್ದರಿಂದ ನಿನಗೆ ಹರನೆಂದು ಹೆಸರು ಪ್ರಸಿದ್ಧವಾಗಿರುವುದು. ಎಲೈ, ಹರನೇ, ನಿನ್ನ ದಯೆಯಿಂದ ಪೂರ್ಣವಾದ ಕಟಾಕ್ಷ ಪರಂಪರೆಯು ವಿಪತ್ತಿಗೆ ಅಧೀನನಾಗುತ್ತಿರುವ ನನ್ನನ್ನು ಯಾವಾಗಲೂ ರಕ್ಷಿಸುತ್ತಿರುವುದು.

೫೮. ನಂದಿಯೇ ಮೊದಲಾದ ಪ್ರಮಥಗಣಗಳು ನಿನ್ನನ್ನು ಸ್ತುತಿಮಾಡುತ್ತಿರುವರು. ಆ ಗಣಗಳಿಂದ ಕೂಡಿರುವ ಎಲೈ ಪ್ರಭುವೇ, ನಿನ್ನ ಹಣೆಗಣ್ಣಿನಲ್ಲಿ ಹುಟ್ಟಿದ ಅಗ್ನಿಯಿಂದುಂಟಾದ ಕಿಡಿಗಳಲ್ಲಿ ಮನ್ಮಥನ ಮನೋಹರವಾದ ಶರೀರವನ್ನು ನೀನು ಸುಟ್ಟಿರುತ್ತೀಯೆ. ನೀನು ಸುಂದರಾಂಗಿಯಾದ ಮೀನಾಕ್ಷೀದೇವಿಗೆ ಪ್ರೀತಿಪಾತ್ರನಾದ ಪತಿಯಾಗಿರುತ್ತೀಯೆ. ನಿನ್ನ ದಯೆಯಿಂದ ಪೂರ್ಣವಾದ ಕಟಾಕ್ಷ ಪರಂಪರೆಯು ವಿಪತ್ತಿಗೆ ಈಡಾಗುತ್ತಿರುವ ನನ್ನನ್ನು ಯಾವಾಗಲೂ ರಕ್ಷಿಸುತ್ತಿರುವುದು.

೫೯. ಎಲೈ ಗಿರೀಶನಾದ ದೇವನೇ, ನೀನು ಮಾಲೆಯಾಗಿ ಧರಿಸಿರುವ ಸರ್ಪಗಳ ಹೆಡೆಯಲ್ಲಿರುವ ರತ್ನಗಳ ಕಾಂತಿಯಿಂದ ನಿನ್ನ ಶರೀರವು ಪ್ರಕಾಶಿಸುತ್ತಿರುವುದು. ನೀನು ಮೂರು ಲೋಕಗಳಿಗೂ ಮೂಲಾಧಾರವಾಗಿರುತ್ತೀಯೆ. ನೀನು ವಿಷ್ಣುವಿನ ನೇತ್ರಕಮಲದಿಂದ ಪೂಜೆಯನ್ನು ಹೊಂದಿರುತ್ತೀಯೆ. ಮತ್ತಿಯ

ಸಾಲಾಕಾರಭುಜಾಸಹಸ್ರ ಗಿರಿಶ ತ್ರಾಯೇತ ತೇ ಸಂತತಂ ।
ಹಾಲಾಸ್ಯೇಶ ಕೃಪಾಕಟಾಕ್ಷಲಹರೀ ಮಾಮಾ ಪದಾಮಾಸ್ಪದಂ ॥ ೫೯ ॥

ಬಾಲಾದಿತ್ಯಸಹಸ್ರಕೋಟಿಸದೃಶ ಉದ್ಯದ್ವೇಗವತ್ಯಾಪಗಾ ।
ವೇಲಾಭೂಮಿವಿಹಾರನಿಷ್ಠ ವಿಬುಧಸ್ರೋತಸ್ವಿನೀಶೇಖರ ।
ಬಾಲಾವರ್ಣ್ಯಕವಿತ್ವಭೂಮಿಸುಖದ ತ್ರಾಯೇತ ತೇ ಸಂತತಂ ।
ಹಾಲಾಸ್ಯೇಶ ಕೃಪಾಕಟಾಕ್ಷಲಹರೀ ಮಾಮಾ ಪದಾಮಾಸ್ಪದಂ ॥ ೬೦ ॥

ಕೀಲಾಲಾವನಿಪಾವಕಾನಿಲನಭಶ್ಚಂದ್ರಾರ್ಕಯಜ್ವಾಕೃತೇ ।
ಕೀಲಾನೇಕಸಹಸ್ರಸಂಕುಲಶಿಖಿಸ್ತಂಭಸ್ವರೂಪಾಮಿತ ।
ಜೋಳಾದೀಷ್ಟಗೃಹಾಂಗನಾವಿಭವದ ತ್ರಾಯೇತ ತೇ ಸಂತತಂ ।
ಹಾಲಾಸ್ಯೇಶ ಕೃಪಾಕಟಾಕ್ಷಲಹರೀ ಮಾಮಾ ಪದಾಮಾಸ್ಪದಂ ॥ ೬೧ ॥

---

ಮರದಂತೆ ಇರುವ ಸಾವಿರ ಭುಜಗಳನ್ನು ಧರಿಸಿರುವ ನೀನು ನಿನ್ನ ದಯೆಯಿಂದ ಪೂರ್ಣವಾದ ಕಟಾಕ್ಷಪ್ರವಾಹದಿಂದ ವಿಪತ್ತಿಗೆ ಆಸ್ಪದನಾಗಿರುವ ನನ್ನನ್ನು ಯಾವಾಗಲೂ ರಕ್ಷಿಸುತ್ತಿರುವುದು ಆಶ್ಚರ್ಯವಾಗಿರುತ್ತದೆ.

೬೦. ಎಲೈ ಪ್ರಭುವೇ, ನೀನು ಉದಯಿಸುತ್ತಿರುವ ಸಾವಿರ ಸೂರ್ಯರ ಕಾಂತಿಯನ್ನು ಹೊಂದಿರುತ್ತೀಯೆ. ನೀನು ವೇಗದಿಂದ ಪ್ರವಹಿಸುತ್ತಿರುವ ವೇಗ ವತಿಯ ತೀರದಲ್ಲಿ ವಿಲಾಸದಿಂದ ವಿಹಾರವನ್ನು ಮಾಡುತ್ತಿರುತ್ತೀಯೆ. ನೀನು ದೇವನದಿಯಾದ ಗಂಗೆಯನ್ನೂ ಶಿರಸ್ಸಿನಲ್ಲಿ ಧರಿಸಿಕೊಂಡಿರುತ್ತೀಯೆ. ಬಾಲಾ ಎಂಬ ದೇವತೆಯು ನಿನ್ನ ಮಹಿಮೆಯನ್ನು ಕವನಮಾಡಿ ವರ್ಣಿಸುವಳು. ದೇವತಾ ವರ್ಣ್ಯವಾದ ಮಹಿಮೆಯಿಂದಲೂ ಕೂಡಿ ಸುಖವನ್ನು ಉಂಟುಮಾಡುತ್ತಿರುವ ನಿನ್ನ ದಯೆಯಿಂದ ಪೂರ್ಣವಾದ ಕಟಾಕ್ಷಪರಂಪರೆಯು ವಿಪತ್ತಿಗೆ ಸಿಕ್ಕುತ್ತಿರುವ ನನ್ನನ್ನು ಯಾವಾಗಲೂ ಕಾಪಾಡುತ್ತಿರುವುದು.

೬೧. ನೀರು, ಭೂಮಿ, ಅಗ್ನಿ, ವಾಯು, ಅಂತರಿಕ್ಷ, ಚಂದ್ರ, ಸೂರ್ಯ, (ಯಜಮಾನ) ಯಾಗ ಮಾಡುವವನು ಎಂಬ ಎಂಟು ವಿಧವಾದ ಆಕಾರಗಳಿಂದ ಇರುವ ಎಲೈ ಹಾಲಾಸ್ಯೇಶ್ವರನೇ, ಅನೇಕ ಸಾವಿರ ಶಿಖರಗಳಿಂದ ಕಿಕ್ಕಿರಿದಿರುವ ಮೂಲಪರ್ವತದ ರೂಪದಿಂದಿರುವ ಅಪ್ರಮೇಯವಾದ ರೂಪವನ್ನು ನೀನು ಧರಿಸಿರುತ್ತೀಯೆ. ಚೋಳದೇಶದ ಪತಿವ್ರತಾಸ್ತ್ರೀಯರಿಗೆ ಐಶ್ವರ್ಯವನ್ನು ಅನುಗ್ರಹಿಸುತ್ತಿರುವ ನಿನ್ನ ನಯೆಯಿಂದ ಪೂರ್ಣವಾದ ಕಟಾಕ್ಷಪರಂಪರೆಯು ವಿಪತ್ತುಗಳಿಗೆ ಆಸ್ಪದವಾಗಿರುವ ನನ್ನನ್ನು ಯಾವಾಗಲೂ ಕಾಪಾಡುತ್ತಿರುವುದು.

ಲೀಲಾಧಾರ್ಾಂಜಲಿ ಮೇಕಮೇವ ಚರತಾಂ ಸಾಮ್ರಾಜ್ಯಲಕ್ಷ್ಮೀಪ್ರದ ।
ಸ್ಥೂಲಾಶೇಷಚರಾಚರಾತ್ಮಕಜಗತ್ಸ್ಥೂಣಾಷ್ಟಮೂರ್ತೇ ಗುರೋ ।
ತಾಲಾಂಕಾನುಜ ಫಲ್ಗುನಪ್ರಿಯಕರ ತ್ರಾಯೇತ ತೇ ಸಂತತಂ ।
ಹಾಲಾಸ್ಯೇಶ ಕೃಪಾಕಟಾಕ್ಷಲಹರೀ ಮಾಮಾ ಪದಾಮಾಸ್ಪದಂ ॥ ೬೨ ॥

ಹಾಲಾಸ್ಯಾಗತದೇವದೈತ್ಯಮುನಿಸಂಗೀತಾಪದಾನಕ್ಷಣ ।
ಸ್ಥೂಲಾಕೋಟಿಮನೋಹರಾಂಘ್ರಿಕಮಲಾನಂದಾಪವರ್ಗಪ್ರದ ।
ಶ್ರೀಲೀಲಾಕರಪದ್ಮನಾಭವರದ ತ್ರಾಯೇತ ತೇ ಸಂತತಂ ।
ಹಾಲಾಸ್ಯೇಶ ಕೃಪಾಕಟಾಕ್ಷಲಹರೀ ಮಾಮಾ ಪದಾಮಾಸ್ಪದಂ ॥ ೬೩ ॥

ಲೀಲಾನಾದರಮೋಹತಃ ಕಪಟತೋ ಯದ್ವಾ ಕದಂಬಾಟವೀ ।
ಹಾಲಾಸ್ಯಾಧಿಪತೀಷ್ಟ ಮಷ್ಟಕ ಮಿದಂ ಸರ್ವೇಷ್ಟಸಂದೋಹನಂ ।

---

೬೨. ಎಲೈ ಹಾಲಾಸ್ಯೇಶ್ವರನೇ, ನೀನು ಅಂಜಲಿಯನ್ನು ತೋರಿಸಿ ಬೇಡುವವರಿಗೆ ಸಾಮ್ರಾಜ್ಯ ಲಕ್ಷ್ಮಿಯನ್ನು ಲೀಲೆಯಿಂದ ಅನುಗ್ರಹಿಸುತ್ತಿರುತ್ತೀಯೆ. ಚರ, ಸ್ಥಿರಾತ್ಮಕವಾದ ಜಗತ್ತಿಗೆ ಮೂಲಾಧಾರವಾದ ಅಷ್ಟಮೂರ್ತಿಗಳ ಆಕಾರವನ್ನು ಹೊಂದಿ ಪ್ರಪಂಚಕ್ಕೆಲ್ಲಕ್ಕೂ ಗುರುವಾಗಿ ಇರುತ್ತೀಯೆ. ಬಲರಾಮನಿಗೆ ತಮ್ಮನಾಗಿ, ಅರ್ಜುನನಿಗೆ ಪ್ರೀತಿಪಾತ್ರನಾದ ಕೃಷ್ಣನಿಗೆ ಹಿತವನ್ನು ಮಾಡುತ್ತಿರುವ, ನಿನ್ನ ದಯೆಯಿಂದ ಪೂರ್ಣವಾದ ಕಟಾಕ್ಷ ಪರಂಪರೆಯು ವಿಪತ್ತುಗಳಿಗೆ ಆಸ್ಪದನಾದ ನನ್ನನ್ನು ಯಾವಾಗಲೂ ರಕ್ಷಿಸುತ್ತಿರುವುದು.

೬೩. ಎಲೈ ಹಾಲಾಸ್ಯೇಶ್ವರನೇ, ಈ ಹಾಲಾಸ್ಯಕ್ಷೇತ್ರಕ್ಕೆ ಬಂದು, ನಿನ್ನನ್ನು ಸೇವಿಸುವ ದೇವತೆಗಳೂ, ದೈತ್ಯರೂ, ಮುನಿಗಳೂ, ಇವರುಗಳು ಗಾನಮಾಡುವ ನಿನ್ನ ಮಹಿಮೆಯ ಕೊಂಚಮಟ್ಟಿನ ಧ್ವನಿಯನ್ನು ಕೇಳಿದವರಿಗೆ, ಅಷ್ಟು ಮಾತ್ರದಿಂದಲೇ ಭುಕ್ತಿ ಮುಕ್ತಿಗಳನ್ನು ಅನುಗ್ರಹಿಸುತ್ತಾ ಇರುತ್ತೀಯೆ. ಲಕ್ಷ್ಮಿಗೆ ಆನಂದವನ್ನುಂಟುಮಾಡುವ ವಿಷ್ಣುವನ್ನು ಅನುಗ್ರಹಿಸುವ, ನಿನ್ನ ದಯೆಯಿಂದ ಪೂರ್ಣವಾದ ಕಟಾಕ್ಷಪರಂಪರೆಯು ವಿಪತ್ತಿಗೆ ಆಸ್ಪದನಾದ ನನ್ನನ್ನು ಯಾವಾಗಲೂ ರಕ್ಷಿಸುತ್ತಿರುವುದು.

೬೪. ಲೀಲೆಯಿಂದಲಾಗಲಿ, ತಿರಸ್ಕಾರದಿಂದಲಾಗಲಿ, ಅಜ್ಞಾನದಿಂದಲಾಗಲಿ, ಮೋಸದಿಂದಲೇ ಆಗಲಿ, ಇನ್ನೂ ಯಾವ ವಿಧವಾದ ಕಾರಣದಿಂದಲೇ ಆಗಲಿ, ನಿನ್ನ

ಆಲಾಪಾನಫಲಾನ್ವಿಹಾಯ ಸತತಂ ಸಂಕೀರ್ತಯಂತೀಹ ಯೇ ।
ತೇ ಲಾಕ್ಷಾದ್ರ್ರಪದಾಬಲಾಭಿ ರಖಿಲಾನ್ಭೋಗಾನ್ಲಭಂತೇ ಸದಾ ॥ ೬೪ ॥

ಏವಂ ಸ್ತೋತ್ರೇಣ ಸಂತೋಷ್ಯ ಸ ಭೂತೋ ಭೂತನಾಯಕಂ ।
ಶಿರಸ್ಯಂಜಲಿಮಾದಾಯ ಶಿವಸ್ಯ ಚರಣಾಬ್ಜಯೋಃ ॥ ೬೫ ॥

ನಿಧಾಯ ವಿಮಲೇ ನೇತ್ರೇ ತೂಷ್ಣೀಂ ತಿಷ್ಠತಿ ಭಕ್ತಿತಃ ।
ದೇವತಾಸಾರ್ವಭೌಮಶ್ಚ ತದಾ ಸುಂದರನಾಯಕಃ ॥ ೬೬ ॥

ಭೂತಮಾಲೋಕ್ಯ ಸುಪ್ರೀತಃ ಪ್ರಾಹ ಗಂಭೀರಯಾ ಗಿರಾ ।
ಕುಂಡೋದರ ಪ್ರಸನ್ನೋಽಸ್ಮಿ ಭಕ್ತ್ಯಾ ಸ್ತುತ್ಯಾ ಚ ತೇಽಧುನಾ ॥ ೬೭ ॥

ಮಮ ಭೂತಗಣಾನಾಂ ಚ ತ್ವಮೇಕೋಽಧಿಪತಿರ್ಭವ ।
ತ್ವನ್ನಾಮಸ್ಮರಣಾತ್ ನೄಣಾಂ ಕ್ಷುತ್ತೃಡ್ಬಾಧಾ ವಿನಶ್ಯತು ॥ ೬೮ ॥

ತ್ವಂ ತು ಮತ್ಸನ್ನಿಧೌ ನಿತ್ಯಂ ತಿಷ್ಠ ಸರ್ವಗಣಾಗ್ರಣೀಃ ।
ಇತ್ಯುಕ್ತ್ವಾ ಪ್ರೇಷಯಿತ್ವಾ ತಂ ಕುಂಡೋದರ ಮುಮಾಧವಃ ॥ ೬೯ ॥

---

ಈ ಸ್ತೋತ್ರದ ಎಂಟು ಶ್ಲೋಕಗಳನ್ನೂ ಕೇಳುವವರೂ, ಭಕ್ತ್ಯಾದರಗಳಿಂದ ಕೂಡಿ ಇತರ ವಿಧವಾದ ಗಾನಾಲಾಪಗಳನ್ನು ಬಿಟ್ಟು, ಇಷ್ಟಾರ್ಥಪ್ರದವಾದ ಈ ಸ್ತೋತ್ರವನ್ನು ಪಠಿಸುವವರೂ, ಸುಂದರ ಸ್ತ್ರೀಯರ ಸಂಗಡ ಸಕಲ ಭೋಗಗಳನ್ನೂ ಯಾವಾಗಲೂ ಹೊಂದುವರು.

೬೫. ಕುಂಡೋದರನು ಭೂತಪತಿಯಾದ ಪರಮೇಶ್ವರನನ್ನು ಹೀಗೆ ಸ್ತುತಿಸಿ, ತನ್ನ ಶಿರಸ್ಸಿನಲ್ಲಿ ಅಂಜಲಿಯನ್ನು ಇರಿಸಿಕೊಂಡು ದೇವದೇವನ ಪಾದಕಮಲಗಳಲ್ಲಿ ದೃಷ್ಟಿಯನ್ನು ಇರಿಸಿ ಭಕ್ತಿಯಿಂದ ಸುಮ್ಮನೆ ನಿಂತುಕೊಂಡನು.

೬೬-೬೯. ಆಗ ದೇವಶ್ರೇಷ್ಠನಾದ ಸುಂದರೇಶ್ವರನು, ಭೂತನಾದ ಕುಂಡೋದರನಲ್ಲಿ ಸಂತೋಷದಿಂದ ಗಂಭೀರವಾದ ಧ್ವನಿಯಿಂದ ಮಾತನಾಡಿದನು. "ಎಲೈ ಕುಂಡೋದರನೆ, ನಿನ್ನ ಭಕ್ತಿಯಿಂದಲೂ, ಸ್ತುತಿಯಿಂದಲೂ ನಾನು ನಿನ್ನವಿಷಯದಲ್ಲಿ ಸಂತೋಷದಿಂದ ಇರುವೆನು. ನನ್ನ ಭೂತಗಳಿಗೆಲ್ಲಕ್ಕೂ ನೀನು ಒಬ್ಬನೇ ಅಧಿಪತಿಯಾಗಿ ಇರು. ನಿನ್ನ ಹೆಸರನ್ನು ಹೇಳುವ ಜನರಿಗೆಲ್ಲರಿಗೂ ಹಸಿವು ಬಾಯಾರಿಕೆಗಳ ತೊಂದರೆಯು ನಾಶವಾಗಲಿ, ನೀನು ನನ್ನ ಹತ್ತಿರದಲ್ಲಿಯೇ ಯಾವಾಗಲೂ ಇರು" ಎಂದು ಹೇಳಿ ಆ ಕುಂಡೋದರನನ್ನು ಕಳುಹಿಸಿದನು.

ತಟಾತಕಾಖ್ಯಯಾ ದೇವ್ಯಾಸುಮೀನಾಕ್ಷ್ಯಾ ಸಮನ್ವಿತಃ ।
ತೌರ್ಯತ್ರಿಕವಿನೋದೇನ ಸುಖೇನಾಸ್ತೇ ಸುಖಂ ಸದಾ ॥ ೭೦ ॥

ಏವಂ ನಿರ್ವರ್ತ್ಯ ಕಲ್ಯಾಣಂ ದೇವೇಶಃ ಪಾಂಡ್ಯಭೂಪತಿಃ ।
ರಾಜ್ಯಂ ಚಕಾರ ಸುಪ್ರೀತ್ಯಾ ವಿಧಿವನ್ನೀತಿತತ್ಪರಃ ॥ ೭೧ ॥

ಇತಿ ನದ್ಯಾ ವೇಗವತ್ಯಾಸ್ಸಮುತ್ಪತ್ತಿಃ ಪ್ರಕೀರ್ತಿತಾ ।
ಶಿವಗಂಗೇತಿ ತಾಂ ಪ್ರಾಹುಃ ಕೇಚಿತ್ತು ಮುನಿಪುಂಗವಾಃ ॥ ೭೨ ॥

ಅನ್ಯೇ ವೇಗವತೀತ್ಯೇಕೇ ಶಿವಜ್ಞಾನನದೀತಿ ಚ ।
ವಿಲಂಬಿತೇತಿ ಚ ಪ್ರಾಜ್ಞಾಃ ಕೃತಮಾಲೇತಿ ಚೇತರೇ ॥ ೭೩ ॥

ಸರಿತಾಂ ಪ್ರವರಾಮೇವಂ ವರ್ಣಯಂತಿ ವಿಚಕ್ಷಣಾಃ ।
ಯೋ ವಾ ಕೋ ವಾ ಸಕೃತ್ಸ್ನಾತಃ ಶಿವಜ್ಞಾನನದೀಜಲೇ ॥ ೭೪ ॥

ಶಿವಜ್ಞಾನಂ ಸುಖಂ ಲಬ್ಧ್ವಾ ಸದ್ಯಸ್ಸಂಸಾರಸಾಗರಂ ।
ತೀರ್ತ್ವಾ ಶಂಕರಸಾಯುಜ್ಯಂ ಲಭತೇ ನಾತ್ರ ಸಂಶಯಃ ॥ ೭೫ ॥

---

೭೦–೭೨. ಮೀನಾಕ್ಷೀದೇವಿಯ (ಅವತಾರವಾದ) ರೂಪಾಂತರವಾದ ತಟಾತಕಾದೇವಿಯೊಡನೆ ಸುಂದರೇಶ್ವರನು ಸಂಗೀತ ಮೊದಲಾದ ವಿಹಾರಗಳಿಂದ ಸುಖವಾಗಿದ್ದನು. ದೇವಾಧಿಪನಾದ ಪರಮೇಶ್ವರನು ವಿಹಾರವನ್ನು ಮಾಡಿಕೊಂಡು ಪಾಂಡ್ಯದೇಶದ ರಾಜನಾಗಿ ನೀತಿಯನ್ನು ಅನುಸರಿಸಿ, ರಾಜ್ಯವನ್ನು ಆದರದಿಂದ ಪರಿಪಾಲಿಸುತ್ತಿದ್ದನು. ವೇಗವತೀನದಿಯು ಉತ್ಪತ್ತಿಯಾದ ಕ್ರಮವನ್ನು ಹೇಳಿದೆನು. ಈ ನದಿಯನ್ನೇ "ಶಿವಗಂಗೆ" ಯೆಂದು ಕರೆಯುವರು. ಕೆಲವರು ಈ ನದಿಯನ್ನು "ಶಿವಜ್ಞಾನ ನದೀ" ಎಂತಲೂ, "ವೇಗವತೀ" ಎಂತಲೂ ಕರೆಯುವರು. "ವಿಳಂಬಿತಾ ನದೀ" ಎಂತಲೂ, "ಕೃತಮಾಲಾನದೀ" ಎಂತಲೂ ಇದನ್ನು ಕರೆಯುವರು. ಈ ಶ್ರೇಷ್ಠವಾದ ನದಿಗೆ ಈ ಹೆಸರುಗಳೆಲ್ಲವೂ ಬಂದಿರುವವು.

೭೩–೭೫. ಈ ಶಿವಜ್ಞಾನ ನದಿಯಲ್ಲಿ ಯಾವನಾದರೂ ಒಂದು ಸಾರಿ ಸ್ನಾನ ಮಾಡಿದ ಮಾತ್ರದಿಂದ, ಶಿವಜ್ಞಾನವನ್ನು ಸುಖವಾಗಿ ಹೊಂದಿ, ಸಂಸಾರಸಾಗರವನ್ನು ದಾಟಿ, ಶಿವಸಾಯುಜ್ಯವನ್ನು ಹೊಂದುವುದರಲ್ಲಿ ಸಂಶಯವಿಲ್ಲವು.

ಭುಕ್ತ್ವಾ ತದನ್ನಮಖಿಲಂ ಕಬಳೈಶ್ಚತುರ್ಭಿಃ ।
ಕುಂಡೋದರೇ ಸಪದಿ ತತ್ರ ಪಿಪಾಸಯಾರ್ತೇ ।
ಆಹೂಯತೇ ಸ್ಮ ವರವೇಗವತೀಪ್ರವಾಹಃ ।
ಯೇನೈವ ದಾಹಶಮನಾಯ ಶಿವ ಸ್ಸ ನೋವ್ಯಾತ್ ॥ ೭೬ ॥

ಇತಿ ಲೀಲಾ ಮಷ್ಟಮೀಂ ಚ ಯಃ ಶೃಣೋತಿ ಸಕೃನ್ನರಃ ।
ಕ್ಷುತ್ತೃದ್ಬಾಧಾವಿನಿರ್ಮುಕ್ತಃ ಸರ್ವಸೌಭಾಗ್ಯ ಮಾಪ್ಯ ಸಃ ॥ ೭೭ ॥
ಭುಕ್ತ್ವಾತ್ರ ವಿಪುಲಾನ್ಭೋಗಾನ್ಪ್ರಾಪ್ನೋತ್ಯಂತೇ ಪರಾಂ ಗತಿಂ ।

ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ಅನ್ನಗರ್ತಾಪಗಾನಯನಂ ನಾಮ
ದ್ವಾದಶೋಽಧ್ಯಾಯಃ

---

೭೬–೭೭. ನಾಲ್ಕು ಕವಳಗಳಿಂದಲೇ ಅನ್ನವೆಲ್ಲವನ್ನೂ ಭೋಜನಮಾಡಿದ ಕುಂಡೋದರನ ನೀರಡಿಕೆಯನ್ನು ನಿವಾರಿಸುವುದಕ್ಕಾಗಿ ವೇಗವತೀನದಿಯನ್ನೇ ಆ ಪ್ರದೇಶಕ್ಕೆ ತರಿಸಿರುವ ಪರಶಿವನು ನಿಮ್ಮನ್ನು ರಕ್ಷಿಸಲಿ. ಶಿವನ ಎಂಟನೇ ಲೀಲೆಯನ್ನ ಒಂದು ಸಾರಿಯಾದರೂ ಕೇಳಿದವನು ಹಸಿವು ಬಾಯಾರಿಕೆಗಳ ತೊಂದರೆಯಿಲ್ಲದೆ ಸಕಲ ವಿಧವಾದ ಶ್ರೇಯಸ್ಸನ್ನೂ ಹೊಂದಿ, ಇಲ್ಲಿ ಬಹಳ ಸುಖಗಳನ್ನು ಅನುಭವಿಸಿ, ಕೊನೆಯಲ್ಲಿ ಉತ್ತಮವಾದ ಗತಿಯನ್ನು ಹೊಂದುವನು.

ಸಂಪದ್ಯುಕ್ತವಾದ ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯ
ಮಾಹಾತ್ಮ್ಯೆಯಲ್ಲಿ ಅನ್ನಗರ್ತಾನಯನವೆಂಬ ಹೆಸರುಳ್ಳ
ಹನ್ನೆರಡನೆಯ ಅಧ್ಯಾಯವು ಮುಗಿದುದು.



॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ

## ತ್ರಯೋದಶೋಽಧ್ಯಾಯಃ

**॥ ಅಗಸ್ತ್ಯ ಉವಾಚ ॥**

**ಸಾಗರಾಣಾಂ ಚ ಸಪ್ತಾನಾಮಾಹ್ವಾನಂ ಮಧುರಾಪುರೇ ।**
**ಅಕರೋಚ್ಚ ಯಯಾ ಶಂಭುಸ್ತಾಂ ಲೀಲಾಂ ಕಥಯಾಮ್ಯಹಂ ॥ ೧ ॥**

**ಪ್ರಶಾಸತಿ ಮಹೀಂ ತಸ್ಮಿನ್ಪಾಂಡ್ಯೇಶೇ ಸೋಮಸುಂದರೇ ।**
**ಸ್ವಕಾಲವರ್ಷೀ ಪರ್ಜನ್ಯಃ ಪೃಥಿವೀ ಸಸ್ಯಶಾಲಿನೀ ॥ ೨ ॥**

**ಸರ್ವೇ ಜನಾ ಧರ್ಮರತಾಃ ಪಾಪಲೇಶವಿವರ್ಜಿತಾಃ ।**
**ವಿಪ್ರಾಃ ಸ್ವಧರ್ಮನಿರತಾಃ ವೇದವೇದಾಂಗಪಾರಗಾಃ ॥ ೩ ॥**

---

### ಹದಿಮೂರನೆಯ ಅಧ್ಯಾಯವು.

೧-೫. ಅಗಸ್ತ್ಯಋಷಿಯು ಹೇಳಿದನು:—ಪರಮೇಶ್ವರನು ಮಧುರಾನಗರಕ್ಕೆ ಏಳು ಸಾಗರಗಳನ್ನು ಒಟ್ಟಿಗೆ (ತರಿಸಿದ) ಬರುವಂತೆ ಮಾಡಿದ ಲೀಲೆಯನ್ನು ಹೇಳುವೆನು. ಪಾಂಡ್ಯದೇಶದ ರಾಜನಾದ ಸೋಮಸುಂದರೇಶ್ವರನು ಧರ್ಮದಿಂದ ರಾಜ್ಯವನ್ನು ರಕ್ಷಿಸುತ್ತಿರುವಾಗ ಭೂಮಿಯಲ್ಲಿ ಕಾಲಕ್ಕೆ ಅನುಗುಣವಾಗಿ ಮಳೆಯು ಬರುತ್ತಿತ್ತು. ಭೂಮಿಯು ಬೆಳೆಗಳಿಂದ ತುಂಬಿ ಇತ್ತು. ಜನರೆಲ್ಲರೂ ಪಾಪ ಸಂಬಂಧವಿಲ್ಲದವರಾಗಿ ತಮ್ಮ ತಮ್ಮ ಧರ್ಮಗಳನ್ನು ಆಚರಿಸುತ್ತಿದ್ದರು. ಬ್ರಾಹ್ಮಣರು ಧರ್ಮಕ್ಕನುಗುಣವಾಗಿ ವೇದವೇದಾಂಗಗಳನ್ನು ಚೆನ್ನಾಗಿ ಅಭ್ಯಾಸಮಾಡುತ್ತಿದ್ದರು. ಮತ್ತು ಇವರು ಬಹಳ ಭಕ್ತಿಯಿಂದ ಶಿವಲಿಂಗವನ್ನು ಪೂಜಿಸುತ್ತಾ, ಯಜನಾದಿ

ಶಿವಲಿಂಗಾರ್ಚನಪರಾಃ ಭಕ್ತ್ಯಾ ಪರಮಯಾ ಯುತಾಃ
ಯಜನಾದೀನಿ ಕರ್ಮಾಣಿ ಕುರ್ವಂತಿ ಪರಿನಿಷ್ಠಿತಾಃ । ॥ ೪ ॥

ನ ನಿರ್ಜಿತಾಶ್ಚ ಕಾಮಾದ್ಯೈರಂತಸ್ಥೈಃ ಪರಿಪಂಥಿಭಿಃ ।
ಶಿವಸ್ವರೂಪಜ್ಞಾನಾಯ ವೇದಾಂತಶ್ರವಣಾದಿಭಿಃ ॥ ೫ ॥

ಯಮಾದ್ಯಷ್ಟಾಂಗಯೋಗೈಶ್ಚ ಯತಂತೇ ವಿಜಿತೇಂದ್ರಿಯಾಃ ।
ಕ್ಷತ್ರಿಯಾದ್ಯಾ ಸ್ತಥಾ ಚಾನ್ಯೇ ಸ್ವ ಸ್ವ ಧರ್ಮರತಾಸ್ಸದಾ ॥ ೬ ॥

ಸರ್ವೇ ಸಂತುಷ್ಟಹೃದಯಾ ಸ್ಸರ್ವಸೌಭಾಗ್ಯಸಂಯುತಾಃ ।
ಭೂಲೋಕಶಿವಲೋಕೇ ತು ನಿವಸಂತಿ ಸುಖೇನ ಚ ॥ ೭ ॥

ಅತಿವೃಷ್ಟಿರನಾವೃಷ್ಟಿರಾಧಯೋ ವ್ಯಾಧಯೋಽಪಿ ನ ।
ನ ಕಸ್ಯಚಿತ್ಪುತ್ರಮೃತಿಃ ನಾಪಮೃತ್ಯುಶ್ಚ ಬಾಧತೇ ॥ ೮ ॥

ಅಂತ್ಯಕಾಲೇ ಜನಾಸ್ಸರ್ವೇ ಗಚ್ಛಂತಿ ಶಿವಮಂದಿರಂ ।
ವಾರ್ತಾಪಿ ಯಮಲೋಕಸ್ಯ ನಾಸ್ತಿ ತತ್ರ ಮಹೀತಲೇ ॥ ೯ ॥

---

ಕರ್ಮಗಳಿಂದ ಸಂತೋಷವಾಗಿದ್ದರು. ಇವರು ಮನೋದೂಷಕಗಳಾದ ಕಾಮಾದಿಗಳಿಂದ ದೂಷಿತರಾಗಿರಲಿಲ್ಲ. ಇಂದ್ರಿಯ ಜಯವನ್ನು ಹೊಂದಿ ವೇದಾಂತ ಶಾಸ್ತ್ರ ಶ್ರವಣಾದಿಗಳಿಂದ ಶಿವನಸ್ವರೂಪವನ್ನು ತಿಳಿದು, ಯಮನಿಯಮವೇ ಮೊದಲಾದ ಅಷ್ಟಾಂಗ ಯೋಗಗಳಿಂದ ಶಿವಭಾವವನ್ನು ಹೊಂದಲು ಯತ್ನಮಾಡುತ್ತಿದ್ದರು.

೬–೯. ಕ್ಷತ್ರಿಯರೇ ಮೊದಲಾದವರೂ, ಇತರರೂ ಅವರವರ ಧರ್ಮಾಚರಣೆಯಲ್ಲಿ ಆಸಕ್ತರಾಗಿ ಎಲ್ಲರೂ ಸಂತೋಷದಿಂದ ಎಲ್ಲಾ ವಿಧವಾದ ಶ್ರೇಯಸ್ಸನ್ನು ಹೊಂದಿದ್ದರು. ಭೂಲೋಕ, ಶಿವಲೋಕವಾದ ಮಧುರಾನಗರದಲ್ಲಿ ಎಲ್ಲರೂ ಸುಖವಾಗಿದ್ದರು. ಆ ಕಾಲದಲ್ಲಿ ಅತಿವೃಷ್ಟಿಯೂ, ಅನಾವೃಷ್ಟಿಯೂ, ಮನೋರೋಗವೂ, ಇತರ ವಿಧವಾದ ರೋಗವೂ ಇರಲಿಲ್ಲ. ಯಾರಿಗೂ ಪುತ್ರಶೋಕವಾಗಲೀ, ಅಪಮೃತ್ಯುವಾಗಲೀ ಉಂಟಾಗುತ್ತಿರಲಿಲ್ಲ. ಅಂತ್ಯಕಾಲದಲ್ಲಿ ಎಲ್ಲರೂ ಶಿವನ ವಾಸಸ್ಥಾನವಾದ ಶಿವಲೋಕಕ್ಕೆ ಹೋಗುತ್ತಿದ್ದರು. ಆಗ ಭೂಮಿಯಲ್ಲಿ ಯಮಲೋಕದ ಹೆಸರೂ ಕೂಡ ಇರಲಿಲ್ಲ.

ಪರಸ್ಯ ಶಿವಲೋಕಸ್ಯ ಶ್ರೀಹಾಲಾಸ್ಯೇಶ್ವರಸ್ಯ ಚ ।
ತಸ್ಯಾಶ್ಚ ರಾಜಧಾನ್ಯಾಶ್ಚ ಭೇದೋ ನಾಸ್ತಿ ಮುನೀಶ್ವರಾಃ ॥ ೧೦ ॥

ಸದಾ ಸಾನ್ನಿಧ್ಯತಶ್ಶಂಭೋ ಶ್ಶಂಕರಸ್ಯಾಂಬಿಕಾಪತೇಃ ।
ನಂದೀಶಪ್ರಮುಖಾಸ್ಸರ್ವೇ ಮಾನುಷಂ ಚ ವಪುರ್ಧೃತಾಃ ॥ ೧೧ ॥

ಪಾಂಡ್ಯೇಶ್ವರಸ್ಯ ಸೇವಾರ್ಥಂ ವರ್ತಂತೇ ಚ ಮುದಾನ್ವಿತಾಃ ।
ನವರತ್ನಮಯೇ ಭದ್ರಪೀಠೇ ತ್ವಾಸೀನ ಈಶ್ವರಃ ॥ ೧೨ ॥

ಧೃತ್ವಾ ಮಣಿಮಯಂ ಮೌಳಿಂ ಕೃತ್ವಾ ರಾಜ್ಯ ಮಕಂಟಕಂ ।
ಅನುಗ್ರಹಂ ಕರೋತ್ಯೇವ ಲೋಕಾನಾಂ ಭಕ್ತವತ್ಸಲಃ ॥ ೧೩ ॥

ತಟಾತಕಾ ಧರ್ಮಪತ್ನೀ ಪಾಂಡ್ಯೇಶಸ್ಯ ಮಹೀಶಿತುಃ ।
ಪಾತಿವ್ರತ್ಯಸ್ಯ ಧರ್ಮಸ್ಯ ನ ಲೇಭೇ ವಿಚ್ಯುತಿಂ ತದಾ ॥ ೧೪ ॥

ತಸ್ಯಾಃ ದೇವ್ಯಾಶ್ಚ ಜನನೀ ವಿಶೇಷಜ್ಞಾ ತಪಸ್ವಿನೀ ।
ಸದಾ ಕಾಂಚನಮಾಲಾ ಸಾ ಪುರಾಣಶ್ರವಣೋತ್ಸುಕಾ ॥ ೧೫ ॥

---

೧೦–೧೩. ಸರ್ವೋತ್ತಮವಾದ ಶಿವಲೋಕಕ್ಕೂ, ಹಾಲಾಸ್ಯೇಶ್ವರನ ರಾಜಧಾನಿಯಾದ ಮಧುರಾನಗರಿಗೂ ಭೇದವೇ ಇರುತ್ತಿರಲಿಲ್ಲ. ಶಿವನ ಸನ್ನಿಧಾನವು ಯಾವಾಗಲೂ ಇರುವುದೇ ಇದಕ್ಕೆ ಕಾರಣವಾಗಿತ್ತು. ನಂದೀಶ್ವರನೇ ಮೊದಲಾದವರು ಎಲ್ಲರೂ ಮನುಷ್ಯರ ಆಕಾರವನ್ನು ಧರಿಸಿ, ಪಾಂಡ್ಯದೇಶದ ದೊರೆಯಾದ ಸೋಮಸುಂದರೇಶ್ವರನ ಸೇವೆಗಾಗಿ ಬಂದು ಅಲ್ಲಿಯೇ ಸಂತೋಷದಿಂದ ಇದ್ದರು. ಭಕ್ತವತ್ಸಲನಾದ ಪರಮೇಶ್ವರನು ನವರತ್ನಖಚಿತವಾದ ಭದ್ರಪೀಠದಲ್ಲಿ ಸುಖಾಸೀನನಾಗಿ ರತ್ನಖಚಿತವಾದ ಕಿರೀಟವನ್ನು ಧರಿಸಿ, ನಿಷ್ಕಂಟಕವಾಗಿ ರಾಜ್ಯಪರಿಪಾಲನೆಯನ್ನು ಮಾಡುತ್ತಾ ಜನರಿಗೆಲ್ಲರಿಗೂ ಅನುಗ್ರಹವನ್ನು ಮಾಡುತ್ತಿದ್ದನು.

೧೪–೧೫. ಪಾಂಡ್ಯದೇಶದ ದೊರೆಯಾದ ಮಹೇಶ್ವರನ ಧರ್ಮಪತ್ನಿಯಾದ ತಟಾತಕಾದೇವಿಯು, ತನ್ನ ಪಾತಿವ್ರತ್ಯದ ವಿಷಯದಲ್ಲಿ ಕೊಂಚವೂ ತಪ್ಪುತ್ತಿರಲಿಲ್ಲ. ಆ ದೇವಿಯ ತಾಯಿಯಾದ ಕಾಂಚನಮಾಲೆಯು ತಿಳುವಳಿಕೆಯುಳ್ಳವಳಾದ್ದರಿಂದ ತಪಸ್ಸನ್ನು ಆಚರಿಸುತ್ತಾ ಪುರಾಣಗಳನ್ನು ಕೇಳುವುದರಲ್ಲಿ ಆಸಕ್ತಳಾಗಿ ಇದ್ದಳು.

ಯೇ ಯೇ ಮುನೀಶ್ವರಾ ಸ್ತತ್ರ ತಂ ದ್ರಷ್ಟುಂ ದೇವಸಾಯಕಂ ।
ಸಮಾಗಚ್ಛಂತಿ ತೇಭ್ಯಶ್ಚ ಪುರಾಣಾನಿ ಶೃಣೋತಿ ಸಾ ॥ ೧೬ ॥

ಕದಾಚಿ ದ್ಗೌತಮಃ ಪ್ರಾಜ್ಞಃ ಸರ್ವಶಾಸ್ತ್ರನಿಧಿ ರ್ಮುನಿಃ ।
ಕಲ್ಯಾಣಶೈಲಧನುಷಃ ಕದಂಬವನವಾಸಿನಃ ॥ ೧೭ ॥

ಸೇವಾರ್ಥಮಾಗತೋ ಮುಖ್ಯೈ ರ್ಮುನೀಂದ್ರೈರಪಿ ಸಂವೃತಃ ।
ತದಾ ಕಾಂಚನಮಾಲಾ ಸಾ ಗೌತಮಂ ಮುನಿಪುಂಗವಂ ॥ ೧೮ ॥
ಆಹೂಯ ಭಕ್ತ್ಯಾ ಸಂಪೂಜ್ಯ ಪ್ರಾರ್ಥಯಾಮಾಸ ಸಾದರಂ ।

॥ ಕಾಂಚನಮಾಲಾ ಉವಾಚ ॥

ಭಗವನ್ಸರ್ವಧರ್ಮಜ್ಞ ಸರ್ವಶಾಸ್ತ್ರವಿಶಾರದ ।
ಸದ್ಯಃ ಶ್ರೇಯಸ್ಕರಾ ಧರ್ಮಾಃಕಥಯಾದ್ಯ ಮುನೀಶ್ವರ ॥ ೧೯ ॥

ಇತಿ ಪೃಷ್ಟಸ್ತಯಾ ವಿದ್ವಾನ್ಗೌತಮೋ ಮುನಿಸತ್ತಮಃ
ಪ್ರಾಹ ಗಂಭೀರಯಾ ವಾಚಾ ಧರ್ಮಾಃಸರ್ವಪುರಾಣಗಾನ್ ॥ ೨೦ ॥

---

೧೬-೧೯. ಕಾಂಚನಮಾಲೆಯು, ದೇವದೇವನಾದ ಪರಮೇಶ್ವರನ ದರ್ಶನಕ್ಕಾಗಿ ಬಂದ ಋಷಿಗಳನ್ನು ಕರೆಸಿ ಅವರಿಂದ ಪುರಾಣಗಳನ್ನು ಕೇಳುತ್ತಿದ್ದಳು. ಹೀಗಿರುವಾಗ ಶಾಸ್ತ್ರಗಳೆಲ್ಲವನ್ನೂ ತಿಳಿದು ಇರುವ ಬುದ್ಧಿವಂತನಾದ ಗೌತಮಋಷಿಯು, ತನ್ನ ಜೊತೆಯಲ್ಲಿ ಋಷಿಗಳನ್ನು ಕರೆದುಕೊಂಡು, ಮೇರುಪರ್ವತವನ್ನು ಧನುಸ್ಸಾಗಿ ಮಾಡಿಕೊಂಡಿರುವ ಕದಂಬವನಾಧೀಶನಾದ ಹಾಲಾಸ್ಯೇಶ್ವರನ ದರ್ಶನಕ್ಕಾಗಿ ಬಂದನು. ಆಗ ಕಾಂಚನಮಾಲೆಯು. ಮುನಿಶ್ರೇಷ್ಠನಾದ ಗೌತಮಮುನಿಯನ್ನು ಕರೆಸಿ, ಭಕ್ತಿಯಿಂದಲೂ, ಆದರದಿಂದಲೂ, ಅವನನ್ನು ಪೂಜಿಸಿದಳು. ಅನಂತರ ಅವಳು, "ಎಲ್ಲಾ ಶಾಸ್ತ್ರಗಳನ್ನೂ ಎಲ್ಲಾ ಧರ್ಮಗಳನ್ನೂ ತಿಳಿದಿರುವ ಎಲೈ ಪೂಜ್ಯನಾದ ಋಷೀಶ್ವರನೇ, ಒಂದು ಕ್ಷಣಕಾಲ ಆಚರಿಸಿದ ಮಾತ್ರದಿಂದಲೇ ಶ್ರೇಯಸ್ಸು ಉಂಟಾಗುವ ಧರ್ಮಗಳನ್ನು ನನಗೆ ಉಪದೇಶಮಾಡು." ಎಂದು ಪ್ರಾರ್ಥಿಸಿದಳು.

೨೦. ಧರ್ಮಗಳನ್ನು ಚೆನ್ನಾಗಿ ತಿಳಿದಿರುವ ಗೌತಮಋಷಿಯು ಕಾಂಚನಮಾಲೆಯ ಪ್ರಶ್ನೆಯನ್ನು ಕೇಳಿ, ಎಲ್ಲಾ ಪುರಾಣಗಳಲ್ಲಿಯೂ ಹೇಳಿರುವ ಧರ್ಮಗಳನ್ನುಗಂಭೀರವಾದ ಮಾತಿನ ಶೈಲಿಯಿಂದ ಹೇಳಲು ಉಪಕ್ರಮಿಸಿದನು.

॥ ಗೌತಮ ಉವಾಚ ॥

ಮಲಯಧ್ವಜಭೂಪಾಲಧರ್ಮಪತ್ನಿ ತಪಸ್ವಿನಿ ।
ತಟಾತಕಾಯಾ ದೇವ್ಯಾಶ್ಚ ಜನಯಿತ್ರಿ ಯಶಸ್ವಿನಿ ॥ ೨೧ ॥

ಸರ್ವೇ ಧರ್ಮಾ ಸ್ತ್ವಯಾ ಜ್ಞಾತಾ ಸ್ತಥಾಪಿ ಕಥಯಾಮಿ ತಾನ್ ।
ತ್ರಿವಿಧಾ ಏವ ವರ್ಣ್ಯಂತೇ ಧರ್ಮಾ ವೇದಾಂತವೇದಿಭಿಃ ॥ ೨೨ ॥

ಮಾನಸಾ ವಾಚಿಕಾ ಶ್ಚೈವ ಕಾಯಿಕಾಶ್ಚ ಯಥಾ ಕ್ರಮಂ ।
ಸತ್ಯಂ ಕ್ಷಮಾ ಶಿವಧ್ಯಾನ ಮಿಂದ್ರಿಯಾಣಾಂ ಚ ನಿಗ್ರಹಃ ॥ ೨೩ ॥

ಸರ್ವಭೂತದಯಾ ತುಷ್ಟಿರಾರ್ಜವಂ ಧರ್ಮಚಿಂತನಂ ।
ರಾಗಾದಿಭ್ಯೋ ಮನಶ್ಶುದ್ಧಿ ರ್ಮಾನಸಾ ಇತಿ ಕೀರ್ತಿತಾಃ ॥ ೨೪ ॥

ಶ್ರೇಯಸ್ಕಂಚಾಕ್ಷರಮನೋ ರ್ಮನನಂ ಮಾನಸೇಷು ಚ ।
ಧರ್ಮೇಷು ಪ್ರವರೋ ಧರ್ಮೋ ಮನಶ್ಶುದ್ಧೇಶ್ಚ ಕಾರಣಂ ॥ ೨೫ ॥

---

೨೧–೨೪. ಗೌತಮಋಷಿಯು ಹೇಳಿದನು:—“ಮಲಯಧ್ವಜರಾಜನ ಪತ್ನಿಯೂ ತಟಾತಕಾದೇವಿಯ ಜನನಿಯೂ, ಯಶಸ್ವಿನಿಯೂ, ತಪಸ್ಸನ್ನು ಆಚರಿಸುವವಳೂ ಆದ ಕಾಂಚನಮಾಲೆಯೇ ಕೇಳು, ನೀನು ಧರ್ಮಗಳೆಲ್ಲವನ್ನೂ ತಿಳಿದಿರುತ್ತೀಯೆ. ಆದಾಗ್ಯೂ ನಾನು ಅವುಗಳನ್ನು ಹೇಳುವೆನು. ವೇದಾಂತವನ್ನು ತಿಳಿದಿರುವ ಜ್ಞಾನಿಗಳು ಕಾಯಿಕ, ವಾಚಿಕ, ಮಾನಸಿಕ ಎಂದು ಮೂರು ವಿಧವಾದ ಧರ್ಮಗಳನ್ನು ಹೇಳುವರು. ನಿಜವನ್ನು ಹೇಳುವುದು, ಸಹನೆ ಗುಣದಿಂದ ಇರುವುದು, ಶಿವನನ್ನು ಧ್ಯಾನಮಾಡುವುದು. ಇಂದ್ರಿಯಗಳನ್ನು ನಿಗ್ರಹಮಾಡಿಕೊಂಡು ಇರುವುದು, ಎಲ್ಲಾ ಪ್ರಾಣಿಗಳಲ್ಲಿಯೂ ದಯೆಯಿಂದ ಇರುತ್ತಾ ಅವುಗಳನ್ನು ಸಂತೋಷದಿಂದ ಇರಿಸುವುದು, ವಂಚನೆ, ಮೋಸ, ಇವುಗಳಿಲ್ಲದೆ ಇರುವುದು, ಧರ್ಮಗಳನ್ನು ಯೋಚಿಸುತ್ತಾ ಇರುವುದು, ಮನಸ್ಸನ್ನು ಕೆಡಿಸುವ ಕಾಮಕ್ರೋಧಾದಿಗಳಿಗೆ ಅಧೀನವಾಗದೆ ಮನಶ್ಶುದ್ಧಿಯನ್ನು ಹೊಂದುವುದು, ಇವೆಲ್ಲವೂ ಮಾನಸಧರ್ಮಗಳಾಗಿ ಇರುವುವು.

೨೫–೨೬. ಶ್ರೇಯಸ್ಕರವಾದ ಪಂಚಾಕ್ಷರೀ ಮಂತ್ರವನ್ನು ಮನನಮಾಡುತ್ತಾ ಇರುವುದು, ಮನೋಧರ್ಮಗಳಲ್ಲಿ ಉತ್ತಮವಾದ ಧರ್ಮವು. ಮನಶುದ್ಧಿಗೆ ಇದು

ಮನಶ್ಶುದ್ಧ್ಯಾ ಯಥಾ ಭೋಗಮೋಕ್ಷಾ ಸದ್ಯಶ್ಚ ಸಿದ್ಧ್ಯತಃ ।
ತಥಾ ಚಾನ್ಯೇನ ವಿಧಿನಾ ಕಾಲೇನಾಪಿ ನ ಸಿದ್ಧ್ಯತಃ　　॥ ೨೬ ॥

ಶ್ರೀಮತೋ ನಮಕಸ್ಯಾಪಿ ಚಮಕಸ್ಯ ತಮುಷ್ಪುಹೋಃ ।
ಹಂಸಸ್ಯ ತ್ರಿಸುಪರ್ಣಸ್ಯ ಪಂಚಬ್ರಹ್ಮ ಮಹಾಮನೋಃ　　॥ ೨೭ ॥

ಶ್ರೀಮತ್ಪುರುಷಸೂಕ್ತಸ್ಯ ಪಂಚಶಾಂತಿಮುಖಸ್ಯ ಚ ।
ವೈದಿಕಸ್ಯ ಚ ಮಂತ್ರಸ್ಯ ತಾಂತ್ರಿಕಸ್ಯ ಮನೋರಪಿ　　॥ ೨೮ ॥

ವಿವಿಧಾನಾಂ ಸ್ತುತೀನಾಂ ಚ ಜಪೋಧರ್ಮಾಸ್ತು ವಾಚಿಕಾಃ ।
ಶಂಭೋರ್ಲಿಂಗಾರ್ಚನಂ ಚೈವ ಪ್ರದಕ್ಷಿಣನಮಸ್ಕೃತೀ　　॥ ೨೯ ॥

ಪುಷ್ಪಾಭಿಷೇಕತೋಯಾದಿಸಂಗ್ರಹಃಸ್ಥಲಮಾರ್ಜನಂ ।
ಉಪಲೇಪನ ಮಿಜ್ಯಾರ್ಥಂ ಪುಷ್ಪವಾಟೀಪ್ರಕಲ್ಪನಂ　　॥ ೩೦ ॥

ಶಿವಕ್ಷೇತ್ರೇಷು ಗಮನಂ ತೀರ್ಥಯಾತ್ರಾದಿಕಾಃ ಕ್ರಿಯಾಃ
ಧರ್ಮಾಸ್ತು ಕಾಯಿಕಾಃ ಪ್ರೋಕ್ತಾ ಸ್ಸರ್ವಧರ್ಮವಿದಾಂ ವರೈಃ　　॥ ೩೧ ॥

---

ಮುಖ್ಯ ಕಾರಣವಾಗಿರುವುದು. ಮನಶ್ಶುದ್ಧಿಯಿಂದ ಭೋಗಮೋಕ್ಷಗಳು ಬೇಗನೆ ಸಿದ್ಧಿಯಾಗುವ ಹಾಗೆ ಕಾಲಾನುಸಾರವಾಗಿ ಆಚರಿಸಿದ ಇತರ ವಿಧಿ, ನಿಯಮಗಳಿಂದ ಅವು ಸಿದ್ಧವಾಗುವುದಿಲ್ಲ.

೨೭–೨೮. ನಮಕ, ಚಮಕ, ತಮುಷ್ಪುಹಿಸೂಕ್ತ, ಪಂಚಶಾಂತಿಮಂತ್ರಗಳು, ವೇದಸಂಬಂಧವಾದ ಮಂತ್ರಗಳು, ತಂತ್ರೋಕ್ತವಾದ ಮಂತ್ರಗಳು, ಅನೇಕ ವಿಧವಾದ ಸ್ತೋತ್ರಗಳು, ಇವುಗಳನ್ನು ಜಪಿಸುವುದು ವಾಚಕಧರ್ಮವೆನಿಸುವುದು.

೨೯–೩೧. ಶಿವಲಿಂಗವನ್ನು ಪೂಜಿಸುವುದು, ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡುವುದು, ಪುಷ್ಪಗಳನ್ನೂ, ಅಭಿಷೇಕಕ್ಕಾಗಿ ನೀರನ್ನೂ ತರುವುದು, ಪೂಜೆಯು ನಡೆಯುವ ಸ್ಥಳವನ್ನು ಪರಿಶುದ್ಧವಾಗಿ ಇರಿಸುವುದು, ಶಿವಪೂಜೆಗಾಗಿ ಗಂಧವನ್ನು ಅರೆಯುವುದು, ಪೂಜೆಗಾಗಿ ಹೂವಿನತೋಟವನ್ನು ಬೆಳೆಸುವುದು, ಶಿವಕ್ಷೇತ್ರಗಳಿಗೆ ಹೋಗುವುದು, ತೀರ್ಥಯಾತ್ರೆಗಳನ್ನು ಮಾಡುವುದು, ಇವುಗಳನ್ನು ಧರ್ಮಜ್ಞರು ಕಾಯಿಕ, ಧರ್ಮಗಳೆಂದು ಹೇಳುವರು.

ಏವಂ ಚ ತ್ರಿವಿಧಾನಾಂ ಚ ಧರ್ಮಾಣಾಮಾಶು ಸಿದ್ಧಿದಾ ।
ತೀರ್ಥಯಾತ್ರ್ಯಾತಿಮಹತೀ ಸರ್ವಧರ್ಮೋತ್ತಮೋತ್ತಮಾ ॥ ೩೨ ॥

ಮಹಾಪಾಪಪ್ರಶಮನೀ ಮಹದೈಶ್ವರ್ಯದಾಯಿನೀ ।
ಇಂದ್ರಿಯಾಣಾಂ ನಿಗ್ರಹಾದ್ಯೈರ್ಮಹಾಯತ್ನೈರ್ಮಹಾತ್ಮನಾಂ ॥ ೩೩ ॥

ಅತ್ಯಂತದುರ್ಲಭಾ ಯಾ ಚ ಮುಕ್ತೇಸ್ಸಾಯುಜ್ಯಕಾರಣಂ ।
ತಸ್ಮಾತ್ತು ಸದ್ಯಃ ಶ್ರೇಯೋಥೀ ತೀರ್ಥಯಾತ್ರಾಂ ಪ್ರಯತ್ನತಃ ॥ ೩೪ ॥

ಕುರ್ಯಾದ್ಭುಕ್ತ್ಯೈ ಚ ಮುಕ್ತ್ಯೈ ಚ ಸರ್ವಕಾಮಪ್ರಸಿದ್ಧಯೇ ।
ಗಂಗಾದಿಸರ್ವತೀರ್ಥಾತ್ಮರೂಪೀ ದೇವ ಉಮಾಪತಿಃ ॥ ೩೫ ॥

ಅನುಗೃಹ್ಣಾತಿ ಸರ್ವಾಂಶ್ಚ ಜನಾನ್ವಿಷಯಮೋಹಿತಾನ್ ।
ಗಂಗಾದಿಸರ್ವತೀರ್ಥೇಷು ಸ್ನಾತುಂ ಕೋಪಿ ನ ಹಿ ಕ್ಷಮಃ ॥ ೩೬ ॥

ಸರ್ವತೀರ್ಥಫಲಾವಾಪ್ತ್ಯೈ ಸಾಗರಸ್ನಾನಮೀರಿತಂ ।
ಮಹಾಮೇರೋಶ್ಚ ಪರಿತೋ ಯಾನಿ ತೀರ್ಥಾನಿ ಸುವ್ರತೇ ॥ ೩೭ ॥

---

೩೨–೩೫. ಈಗ ಹೇಳಿದ ಮೂರು ವಿಧವಾದ ಧರ್ಮಗಳಿಗಿಂತಲೂ, ತೀರ್ಥ ಯಾತ್ರೆಯನ್ನು ಮಾಡುವುದು ಬೇಗನೆ ಸಿದ್ಧಿಯನ್ನುಂಟುಮಾಡುವುದಾಗಿ ಇರುವುದು. ಮತ್ತು ಎಲ್ಲಾ ಧರ್ಮಗಳಿಗಿಂತಲೂ ಬಹಳ ಉತ್ತಮವಾಗಿರುವುದು. ತೀರ್ಥಯಾತ್ರೆ ಮಾಡುವುದರಿಂದ ಪಾಪಗಳು ನಾಶವಾಗುವುವು. ಬಹಳವಾದ ಐಶ್ವರ್ಯವು ಉಂಟಾ ಗುವುದು. ಇಂದ್ರಿಯ ನಿಗ್ರಹವುಳ್ಳ ಮಹಾತ್ಮರಿಗೂ ದೊರಕಲಸಾಧ್ಯವಾದ ತೀರ್ಥ ಯಾತ್ರೆಯು ಮುಕ್ತಿಗೂ ಮೂಲಕಾರಣವಾಗಿರುವುದು. ಆದ್ದರಿಂದ ಬೇಗನೆ ಶ್ರೇಯ ಸ್ಸನ್ನು ಅಪೇಕ್ಷಿಸುವವರು ಪ್ರಯತ್ನಪೂರ್ವಕವಾಗಿ ತೀರ್ಥಯಾತ್ರೆಯನ್ನು ಮಾಡ ಬೇಕು. ಗಂಗಾದಿ ಸಕಲವಿಧವಾದ ತೀರ್ಥರೂಪದಿಂದ ಇರುವ ಉಮಾಪತಿಯಾದ ಪರಮೇಶ್ವರನು ತೀರ್ಥಯಾತ್ರೆಯನ್ನು ವಿಷಯ ಭೋಗಾಭಿಲಾಷೆಯಿಂದ ಆಚರಿಸು ವವರಿಗೆ ಭುಕ್ತಿಮುಕ್ತಿಗಳನ್ನು ಕೊಡುವುದರ ಮೂಲಕವಾಗಿ ಅನುಗ್ರಹವನ್ನು ಮಾಡುವನು.

೩೬–೪೦. ಗಂಗೆಯೇ ಮೊದಲಾದ ತೀರ್ಥಗಳಲ್ಲಿ ಸ್ನಾನಮಾಡಲು (ಅಸ ಮರ್ಥ) ಅಶಕ್ತರಾದವರು, ಸಮುದ್ರಸ್ನಾನಮಾಡುವುದರಿಂದ ಎಲ್ಲಾ ತೀರ್ಥಸ್ನಾನದ

**ನದೀನದಾದಿರೂಪೇಣ ತಾನಿ ಸರ್ವಾಣಿ ಸಾಗರೇ ।**
**ಸರ್ವೇಷು ಪುಣ್ಯತೀರ್ಥೇಷು ಸಾಗರಸ್ನಾನಮುತ್ತಮಂ ॥ ೩೮ ॥**

**ತತ್ಕಾರಿಣಾಂ ಜನಾನಾಂ ಚ ಭೃಶಂ ಪುಣ್ಯಂ ಭವಿಷ್ಯತಿ ।**
**ಸಾಗರೇ ತ್ವಂ ಚ ಸಂಸ್ನಾಯ ಸರ್ವತೀರ್ಥಫಲಾನಿ ಚ ॥ ೩೯ ॥**

**ಲಬ್ಧ್ವಾ ಭರ್ತ್ರಾ ಚ ಸಹಿತಾ ಶಿವಲೋಕಂ ಗಮಿಷ್ಯಸಿ ।**
**ಏವಂ ಮುನೇರ್ವಚಃ ಶ್ರುತ್ವಾ ತಂ ಸತ್ಕೃತ್ಯಾಂಬರಾದಿಭಿಃ ॥ ೪೦ ॥**

**ತತಃ ಕಾಂಚನಮಾಲಾ ಸಾ ಸಾಗರಸ್ನಾನಕಾಂಕ್ಷಿಣೀ**
**ಅವೋಚದಭಿಲಾಷಂ ಸ್ವಂ ಪುತ್ರ್ಯೈ ಪುಣ್ಯನಿಧೇ ಸುತೇ ॥ ೪೧ ॥**

**ಸಾಗರಸ್ನಾನಪುಣ್ಯಾಗ್ನಿನಿರ್ದಗ್ಧಕಲುಷಾಹ್ಯಹಂ ।**
**ಭರ್ತ್ರಾ ಸಹ ಗಮಿಷ್ಯಾಮಿ ಶಿವಲೋಕಂ ಪರಾತ್ಪರಂ ॥ ೪೨ ॥**

---

ಫಲವನ್ನು ಹೊಂದುವರೆಂದು ಹೇಳಿರುವುದು. ಮಹಾಮೇರುವಿನ ಸುತ್ತಲೂ ಇರುವ ನದೀ ನದರೂಪವಾದ ತೀರ್ಥಗಳೆಲ್ಲವೂ ಸಮುದ್ರರೂಪದಿಂದ ಸೇರಿ ಇರುವವು. ಆದ್ದರಿಂದ ಎಲ್ಲಾ ಪುಣ್ಯತೀರ್ಥಗಳಲ್ಲಿ ಸ್ನಾನಮಾಡುವುದಕ್ಕಿಂತಲೂ ಸಾಗರ ಸ್ನಾನ ಮಾಡುವುದು ಉತ್ತಮವು. ಸಾಗರದಲ್ಲಿ ಸ್ನಾನಮಾಡುವವರಿಗೆ ಬಹಳ ಪುಣ್ಯವು ಉಂಟಾಗುವುದು. ನೀನು ಸಾಗರದಲ್ಲಿ ಸ್ನಾನವನ್ನು ಮಾಡಿ, ಎಲ್ಲಾ ತೀರ್ಥಗಳ ಸ್ನಾನದ ಫಲವನ್ನೂ ಹೊಂದಿ, ನಿನ್ನ ಪತಿಯೊಡನೆ ಶಿವಲೋಕವನ್ನು ಹೊಂದುತ್ತೀಯೆ.'' ಕಾಂಚನಮಾಲೆಯು ಗೌತಮಮುನಿಯು ಹೀಗೆ ಹೇಳಿದ್ದನ್ನು ಕೇಳಿ, ವಸ್ತ್ರಾದಿಗಳಿಂದ ಸತ್ಕಾರಮಾಡಿ ಆ ಋಷಿಯನ್ನು ಕಳುಹಿಸಿಕೊಟ್ಟಳು.

೪೧. ಅನಂತರದಲ್ಲಿ ಕಾಂಚನಮಾಲೆಯು, ಸಾಗರದಲ್ಲಿ ಸ್ನಾನಮಾಡುವ ಇಚ್ಛೆಯುಳ್ಳವಳಾಗಿ ತನ್ನ ಮಗಳ ಸಂಗಡ "ಎಲೈ ಪುಣ್ಯನಿಧಿಯಾದ ಪುತ್ರಿಯೆ, ನಾನು ಸಾಗರದಲ್ಲಿ ಸ್ನಾನವನ್ನು ಮಾಡಿ ಪಾಪರಹಿತಳಾಗಿ ನನ್ನ ಗಂಡನೊಡನೆ ಬಹಳ ಶ್ರೇಷ್ಠವಾದ ಶಿವಲೋಕಕ್ಕೆ ಹೋಗುತ್ತೇನೆ.'' ಎಂದು ಹೇಳಿದಳು. ತಟಾತಕಾ ದೇವಿಗೆ ತನ್ನ ತಾಯಿಯ ಮಾತನ್ನು ಕೇಳಿ ಯೋಚನೆಯು ಉಂಟಾಯಿತು.

೪೨–೪೪. ತಟಾತಕಾದೇವಿಯು ಬಹಳಕಾಲದವರೆಗೂ ಪತಿಯ ಸೇವೆಯನ್ನು ಮಾಡುತ್ತಾ, ತನ್ನ ಪತಿಯಾದ ಚಂದ್ರಶೇಖರನಾದ ಶಿವನು ಸಂತೋಷದಿಂದ ಇರುವ

ಇತಿ ಮಾತೃವಚಃ ಶ್ರುತ್ವಾ ಬಹುಚಿಂತಾಕುಲಾಽಭವತ್ ।
ಚಿರಂ ಶುಶ್ರೂಷಯಾ ಪ್ರೀತೇ ಶಂಕರೇ ಚಂದ್ರಶೇಖರೇ ॥ ೪೩ ॥

ತಟಾತಕಾ ಕದಾಚಿತ್ಸಾ ರಹಸೀಶ ಮಯಾಚತ ।
ಜನನೀ ಸಾಗರೇ ಸ್ನಾನಂ ಕರ್ತುಮಿಚ್ಛತಿ ಮೇ ಪ್ರಭೋ ॥ ೪೪ ॥

ಕಿಂ ಕರ್ತವ್ಯ ಮತೋ ಬ್ರೂಹಿ ಸರ್ವಾಭೀಷ್ಟಪ್ರದಾಯಕ ।
ಈಶ್ವರ ಸ್ತದ್ವಚಃ ಶ್ರುತ್ವಾ ನಿರೀಕ್ಷ್ಯಾಸ್ಯಾ ಮುಖಂ ತತಃ ॥ ೪೫ ॥

ಏಕಸ್ಮಿನ್ಸಾಗರೇ ಸ್ನಾತುಂ ತವ ಮಾತಾ ಹಿ ವಾಂಛತಿ ।
ಆನಯಿಷ್ಯಾಮ್ಯಹಂ ಸಪ್ತಸಾಗರಾಂಶ್ಚ ವರಾನನೇ ॥ ೪೬ ॥

ಉಕ್ತ್ವಾಽತಿಕೃಪಯಾ ವಿಷ್ಟಮಾನಸೋ ಮದನಾಂತಕಃ ।
ಅಥ ತಸ್ಯಾಃ ಪ್ರಿಯಂ ಕರ್ತುಂ ಯುಗಪತ್ಸ ಪ್ತಸಾಗರಾನ್ ॥ ೪೭ ॥

ಈಶ ಆಕಾರಯಾಮಾಸ ಸ್ವಯಾ ಶಕ್ತ್ಯಾ ಕ್ಷಣೇನ ಚ ।
ಮಹಾಸತ್ವಸಮುದ್ರಿಕ್ತಾ ನ್ವೀಚೀಮಾಲಾದಿಭೂಷಿತಾನ್ ॥ ೪೮ ॥

---

ಕಾಲವನ್ನು ನಿರೀಕ್ಷಿಸಿ, " ನನ್ನ ತಾಯಿಯು ಸಾಗರದಲ್ಲಿ ಸ್ನಾನಮಾಡುವ ಇಚ್ಛೆಯುಳ್ಳವಳಾಗಿರುವಳು. ನೀನು ಎಲ್ಲರ ಇಷ್ಟವನ್ನೂ ನೆರವೇರಿಸಿಕೊಡುವ ಪ್ರಭುವಾಗಿರುತ್ತೀಯೆ. ಇದಕ್ಕಾಗಿ ಯಾವ ಕೆಲಸವನ್ನು ಮಾಡಬೇಕು. ಅದನ್ನು ಹೇಳು " ಎಂದು ರಹಸ್ಯವಾಗಿ ಪ್ರಶ್ನೆ ಮಾಡಿದಳು.

೪೫-೫೦. ಆಗ ಈಶ್ವರನು ಆ ದೇವಿಯ ಮಾತನ್ನು ಕೇಳಿ, ಆ ದೇವಿಯ ಮುಖವನ್ನು ನೋಡಿ " ನಿಮ್ಮ ತಾಯಿಯು ಒಂದು ಸಾಗರದಲ್ಲಿ ಸ್ನಾನ ಮಾಡಬೇಕೆಂದು ಇಚ್ಛೆಯನ್ನು ಮಾಡಿರುವಳು. ನಾನು ಸಪ್ತ ಸಾಗರಗಳನ್ನು ಇಲ್ಲಿಗೆ ಬರಮಾಡುವೆನು. " ಎಂದು ಹೇಳಿದನು. ಮದನ ವೈರಿಯಾದ ದಯಾಶಾಲಿಯಾದ ಪರಮೇಶ್ವರನು ಕಾಂಚನಮಾಲೆಯ ವಿಷಯದಲ್ಲಿ ದಯೆಯುಳ್ಳವನಾಗಿ, ಅವಳ ಇಷ್ಟವನ್ನು ನೆರವೇರಿಸಲು, ಒಟ್ಟಿಗೆ ಏಳು ಸಾಗರಗಳೂ ಬರುವಂತೆ ಸಂಕಲ್ಪ ಮಾಡಿದನು. ಆಗ ಪರಮೇಶ್ವರನ ಸಾಮರ್ಥ್ಯದಿಂದ ಆ ಕ್ಷಣದಲ್ಲಿಯೇ ಸಪ್ತ ಸಾಗರಗಳೂ ಅಲ್ಲಿಗೆ ಬಂದುವು. ಅವುಗಳು ಬಹಳ ತೆರೆಗಳಿಂದ ತುಂಬಿ ಇದ್ದುವು. ಬಲಿಷ್ಠವಾದ ಜಲ

ಸರ್ವರತ್ನಸಮಾಕೀರ್ಣಾನ್ಸಮಸ್ತಶಫರಾವಿಲಾನ್ ।
ವಿಷಕ್ತವಿದ್ರುಮಲತಾನ್ ಶೈವಾಲಪರಿಶೋಭಿತಾನ್ ॥ ೪೯ ॥

ಆವರ್ತವೇಗಭ್ರಮಿತ ಭೂಭೃಚ್ಛತ ಸಮನ್ವಿತಾನ್ ।
ಮಹಾನಾಗಮುಖೋಚ್ಛ್ವಾಸದ್ವಿಗುಣೀಕೃತವೀಚಿಕಾನ್ ॥ ೫೦ ॥

ಕಲ್ಲೋಲಫೇನನಿಚಿತಾನ್ದೃಷ್ಟ್ವಾಬ್ಧೀನ್ಸ್ಫೋಷಸಂಯುತಾನ್ ।
ಸರ್ವೇ ಜನಾವ್ಯಸ್ಮಯಂತ ಮಧುರಾಪುರವಾಸಿನಃ ॥ ೫೧ ॥

ಅಸ್ತಿ ದೇವಪುರೋಭಾಗೇ ಸರೋಜಲಧಿವತ್ಪುರಾ ।
ತಜ್ಜಲೇನಾ ಬ್ಧಿಸಲಿಲಂ ಸಂಗತಂ ಪಾಮರಾಜನಾಃ ॥ ೫೨ ॥

ಅಷ್ಟಾಬ್ಧಯ ಸ್ಸಮಾಯಾತಾ ಇತ್ಯಶಂಸನ್ನಿತಸ್ತತಃ ।
ದೇವದೇವಸ್ಯ ಪುರತ ಸ್ತದಾ ಪ್ರಭೃತಿ ಭೂತಲೇ ॥ ೫೩ ॥

ಸಪ್ತಸಾಗರಸಾನ್ನಿಧ್ಯಾ ತ್ಸಪ್ತಾಬ್ಧಿರಿತಿ ತತ್ಸರಃ ।
ವಿವೃದ್ಧಿಂ ಕುರುತೇ ತಸ್ಮಿನ್ಪ್ರತ್ಯಕ್ಷಂ ಯಾದಸಾಂ ಪತಿಃ ॥ ೫೪ ॥

---

ಚರಪ್ರಾಣಿಗಳು ಅವುಗಳಲ್ಲಿ ಇದ್ದುವು. ತೆರೆಯ ಪರಂಪರೆಯಿಂದ ಅಲಂಕೃತವಾಗಿದ್ದವು. ಆ ಸಾಗರಗಳಲ್ಲಿ ಹವಳದ ಲತೆಗಳೂ, ಹಸುರು ಪಾಚಿಗಳೂ ತುಂಬಿ ಇದ್ದುವು. ಅವುಗಳಲ್ಲಿರುವ ಸುಳಿಗಳಲ್ಲಿ ಬೆಟ್ಟಗಳು ತಿರುಗುತ್ತಿದ್ದವು. ದೊಡ್ಡ ದೊಡ್ಡ ಸರ್ಪಗಳ ಉಶ್ವಾಸದಿಂದ ತೆರೆಗಳು ಎರಡರಷ್ಟಾಗಿ ಹೊರಡುತ್ತಿದ್ದವು. ತೆರೆಗಳೂ, ನೊರೆಗಳೂ, ಇವುಗಳ ವೇಗದಿಂದ ಮೊರೆಯುತ್ತಿರುವ ಸಪ್ತ ಸಾಗರಗಳನ್ನೂ ಮಧುರಾಪುರವಾಸಿಗಳಾದ ಜನರು ನೋಡಿ ಆಶ್ಚರ್ಯಪಡುತ್ತಿದ್ದರು.

೫೧–೫೪. ದೇವಾಲಯದ ಮುಂದುಗಡೆಯಲ್ಲಿ ಸಮುದ್ರದಂತೆ ನೀರುಳ್ಳ ಸರೋವರದ ನೀರಿನ ಜೊತೆಗೆ ಸಪ್ತ ಸಮುದ್ರಗಳ ನೀರು ಸೇರಿ ಎಂಟು ಸಾಗರವಾಗಿರುವುದು, ಎಂದು ತಿಳಿಯದವರಿಗೆ ಹೇಳುತ್ತಾ ಮಧುರಾಪುರಿಯ ನಿವಾಸಿಗಳು ತಿರುಗಾಡುತ್ತಿದ್ದರು. ಆ ಕಾಲಮೊದಲುಗೊಂಡು ದೇವಾಲಯದ ಮುಂದುಗಡೆಯಲ್ಲಿರುವ ಸರೋವರಕ್ಕೆ ಸಪ್ತ ಸಾಗರವು ಸೇರಿದ ಕಾರಣ ಸಪ್ತಾಬ್ಧಿ ಎಂದು ಹೆಸರು ಪ್ರಸಿದ್ಧವಾಗಿರುವುದು. “ ಆ ಸರೋವರದಲ್ಲಿ ಪ್ರತ್ಯಕ್ಷವಾಗಿ ಸಮುದ್ರವೂ ವೃದ್ಧಿಯನ್ನು ಹೊಂದು

ವಸಂತಿ ತಸ್ಮಿನ್ದೇವಾದ್ಯಾ ಶ್ಚೇತಿ ಪ್ರಾಹು ರ್ಮನೀಕ್ಷಣಃ ।
ಸಪ್ತಾಬ್ಧಿತೀರ್ಥಸಲಿಲೇ ಯಸ್ಸ್ನಾನಂ ಕುರುತೇ ಜನಃ ॥ ೫೫ ॥

ಇಹ ನಿರ್ದಗ್ಧಪಾಪಸ್ತು ಸಂಸಾರಾಬ್ಧಿಂ ತರೇತ್ತು ಸಃ
ಪರ್ವಾದಿಪುಣ್ಯಕಾಲೇಷು ಸ್ನಾತ್ವಾ ಯ ಸ್ಸಪ್ತಸಾಗರೇ ॥ ೫೬ ॥

ದೇವಾದೀನಾಂ ತು ತೃಪ್ತ್ಯರ್ಥಂ ತರ್ಪಣಾದಿಕರೋತಿ ಚೇತ್ ।
ಋಣತ್ರಯಾದ್ವಿನಿರ್ಮುಕ್ತಸ್ಸರ್ವಾ ಕಾಮಾನ್ ಅವಾಪ್ನುಯಾತ್ ॥ ೫೭ ॥

ಹಾಲಾಸ್ಯೇಶ್ವರದೇವಸ್ಯ ಲೀಲೇಯಂ ನವಮೀ ಶುಭಾ ।
ಶ್ರುತಾ ಚೇದ್ಯೇನ ಕೇನಾಪಿ ಭೋಗಮೋಕ್ಷಪ್ರದಾಯಿನೀ ॥ ೫೮ ॥

ಯಸ್ಸಪ್ತಸಿಂಧೂ ಸ್ವಪುರಸ್ತಟಾಕೇ
ದೇವಸ್ಸಮಾಹೂಯ ಮುದಂ ಚಕಾರ
ತಟಾತಕಾಯಾ ಮಧುರಾಪುರೀಶಃ
ಪಾಯಾತ್ಸ ವಃ ಸುಂದರಪಾಂಡ್ಯ ಈಶಃ ॥ ೫೯ ॥

---

ತ್ತಿರುವುದು. ದೇವತೆಗಳೇ ಮೊದಲಾದವರು ಅಲ್ಲಿ ವಾಸ ಮಾಡುವರೆಂದು ಬುದ್ಧಿವಂತರು ಹೇಳುವರು ಸಪ್ತಾಬ್ಧಿ ತೀರ್ಥದ ಜಲದಲ್ಲಿ ಸ್ನಾನ ಮಾಡುವವರು ಈ ಲೋಕದಲ್ಲಿ ಪಾಪಗಳನ್ನು ಕಳೆದುಕೊಂಡು ಸಂಸಾರವನ್ನು ದಾಟುವರು.

೫೫. ಪರ್ವಕಾಲವೇ ಮೊದಲಾದ ಪುಣ್ಯಕಾಲದಲ್ಲಿ ಸಪ್ತಾಬ್ಧಿತೀರ್ಥದಲ್ಲಿ ಸ್ನಾನಮಾಡಿ ತರ್ಪಣಾದಿಗಳನ್ನು ಮಾಡುವವರು ಋಣತ್ರಯದಿಂದ ಮುಕ್ತರಾಗಿ ಇಷ್ಟಾರ್ಥಗಳನ್ನು ಹೊಂದುವರು.

೫೬–೫೯. ಹಾಲಾಸ್ಯೇಶ್ವರನು ಮಾಡಿದ ಶ್ರೇಯಸ್ಕರವಾದ ಒಂಭತ್ತನೆಯ ಲೀಲೆಯನ್ನು ಕೇಳುವ ಮನುಷ್ಯನಿಗೆ ಭುಕ್ತಿ ಮುಕ್ತಿಗಳು ಉಂಟಾಗುವುವು. ತಟಾತಕಾ ದೇವಿಗೂ ಮಧುರಾನಗರಿಗೂ ಪತಿಯಾದ ಸುಂದರಪಾಂಡ್ಯಭೂಪನು ತಟಾತಕಾ ದೇವಿಯ ಸಂತೋಷಕ್ಕಾಗಿ ಒಂದು ಸರೋವರಕ್ಕೆ ಸಪ್ತ ಸಾಗರಗಳನ್ನು ತರಿಸಿ ಮಧುರಾನಗರದಲ್ಲಿರುವವರಿಗೆ ಸಂತೋಷವನ್ನುಂಟುಮಾಡಿದನು. ಆದ್ದರಿಂದ ಅವನ ಎಲ್ಲರಲ್ಲಿಯೂ ಸಮನಾದ ಅನುಗ್ರಹದಿಂದ ನಮ್ಮೆಲ್ಲರನ್ನೂ ರಕ್ಷಿಸಲಿ.

**ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ ಮಾಹಾತ್ಮ್ಯೇ ಸಪ್ತಸಾಗರಾವಿರ್ಭಾವೋ ನಾಮ ತ್ರಯೋದಶೋಽಧ್ಯಾಯಃ**

---

ಸಂಪದ್ಯುಕ್ತವಾದ ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯ ಮಾಹಾತ್ಮ್ಯೆಯಲ್ಲಿ ಸಪ್ತಸಾಗರಾವಿರ್ಭಾವವೆಂದು ಹೆಸರುಳ್ಳ ಹದಿಮೂರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯ ಮಾಹಾತ್ಮ್ಯಂ



## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಚತುರ್ದಶೋಽಧ್ಯಾಯಃ

॥ ಋಷಯ ಊಚುಃ ॥

ಏವ ಮಬ್ಧಿ ಷ್ವಾಗತೇಷು ದೇವದೇವೇನ ಶಂಭುನಾ ।
ತತಃ ಕೃತಂ ಕಿಮಭವನ್ನೋ ಬ್ರೂಹಿ ಮುನಿಪುಂಗವ ॥ ೧ ॥

॥ ಅಗಸ್ತ್ಯ ಉವಾಚ ॥

ಮಲಯಧ್ವಜಭೂಪಾಲಂ ಮಹೇಂದ್ರಾಸನಸುಸ್ಥಿತಂ ।
ಆಹೂಯ ದರ್ಶಯಾಮಾಸ ಶಂಕರೋ ಲೀಲಯಾ ಯಯಾ ॥ ೨ ॥

ತಾಂ ಲೀಲಾ ಮಥ ವಕ್ಷ್ಯಾಮಿ ದೇವದೇವಸ್ಯ ಧೂರ್ಜಟೇಃ ।
ಕಲ್ಯಾಣಶೈಲಧನುಷಃ ಕದಂಬವನವಾಸಿನಃ ॥ ೩ ॥

### ಹದಿನಾಲ್ಕನೆಯ ಅಧ್ಯಾಯವು.

೧. ಋಷಿಗಳು ಹೇಳಿದರು:—ದೇವದೇವನಾದ ಪರಮೇಶ್ವರನು ಸಪ್ತ ಸಾಗರಗಳನ್ನು ಬರಮಾಡಿದ ನಂತರ ಏನು ಮಾಡಿದನು? ಎಲೈ ಮುನಿಶ್ರೇಷ್ಠನೆ, ಅದನ್ನು ನೀನು ನಮಗೆ ತಿಳಿಸು.

೨-೩. ಅಗಸ್ತ್ಯಋಷಿಯು ಹೇಳಿದನು;—ಧೂರ್ಜಟಿಯಾದ, ಮೇರು ಪರ್ವತವನ್ನೇ ಧನುಸ್ಸಾಗಿ ಮಾಡಿಕೊಂಡಿರುವ, ಕದಂಬವನಾಧಿಪನಾದ ಶಂಕರನು, ಇಂದ್ರನ ಆಸನದಲ್ಲಿ ಸುಖವಾಗಿದ್ದ ಮಲಯಧ್ವಜರಾಜನನ್ನು ಕರೆಸಿ ಕಾಂಚನಮಾಲೆಗೂ ತಟಾತಕಾದೇವಿಗೂ ತೋರಿಸಿದ ಲೀಲೆಯನ್ನು ಹೇಳುವೆನು.

ಸಮುದ್ರೇಷ್ವಾಗತೇಷ್ವಂತಃಪುರೇ ಪಾಂಡ್ಯೇಶ್ವರ ಶ್ಶಿವಃ ।
ಘೋಷಂ ತೇಷಾಂ ಚ ಸಪ್ತಾನಾಂ ದೇವಃ ಶೃತ್ವಾ ದಯಾನಿಧಿಃ ॥ ೪ ॥

ಅಂತಃಪುರಾ ದ್ವಿನಿರ್ಗತ್ಯ ತಯಾ ದೇವ್ಯಾ ಸಮನ್ವಿತಃ ।
ನಂದ್ಯಾದಿಗಣನಾಥೈಶ್ಚ ರಾಜವೇಷಧರೋ ಹರಃ ॥ ೫ ॥

ತಟಾಕತೀರಂ ಸಂಪ್ರಾಪ್ಯ ಪೂಗಪುನ್ನಾಗಶೋಭಿತಂ ।
ವಿಲೋಕ್ಯ ಸಿಂಧೂನ್ಸಹಸಾ ಸ್ವಶಕ್ತ್ಯಾ ಸಮುಪಾಗತಾನ್ ॥ ೬ ॥

ತಟಾತಕಾಂ ತದಾ ಕಾಂತಃ ಪ್ರೀತಿಪೂರ್ವ ಮುವೋಚತ ।
ಆಗತಾನಬ್ಧಿಸಂಘಾತಾ ಪಶ್ಯಕಾಂತೇ ಮನೋಹರೇ ॥ ೭ ॥

ತವ ಪ್ರಿಯಂ ಕರೋಮೀತಿ ಮನೀಷಾಸ್ತಿ ಸದಾ ಮಮ ।
ಸ್ನಾಹೀತಿ ಸಾಗರೇಷ್ವಾಶು ಜನನೀಂ ತೇ ತಟಾತಕೇ ॥ ೮ ॥

---

೪-೮. ಪಾಂಡ್ಯದೇಶಕ್ಕೆ ಅಧಿಪತಿಯಾದ ದಯಾಶಾಲಿಯಾದ ಪರಮೇಶ್ವರನಿಗೆ ಸಪ್ತ ಸಾಗರಗಳು ಬಂದಿರುವುದರಿಂದ ಉಂಟಾಗುತ್ತಿರುವ ಆರ್ಭಟ ಧ್ವನಿಯು ಅಂತಃಪುರದಲ್ಲಿಯೇ ಕೇಳಿಸಿತು. ರಾಜನ ವೇಷದಿಂದಲೇ ಅವನೂ ತಟಾತಕಾದೇವಿಯೂ, ನಂದಿಯೇ ಮೊದಲಾದ ಗಣನಾಥರೂ ಇವರುಗಳೂ ಅಂತಃಪುರದಿಂದ ಹೊರಗಡೆಗೆ ಬಂದು, ಅಡಕೆ ಮರ, ಪುನ್ನಾಗ ವೃಕ್ಷ ಇವುಗಳಿಂದ ಪ್ರಕಾಶಿಸುತ್ತಿರುವ ಸರೋವರದ ತೀರವನ್ನೂ ತನ್ನ ಶಕ್ತಿಯಿಂದ ಅಲ್ಲಿಗೆ ಬಂದಿರುವ ಸಪ್ತಸಾಗರಗಳನ್ನೂ ನೋಡಿದರು. ಆ ದೇವನು ಸಂತೋಷದಿಂದ ತಟಾತಕಾದೇವಿಯ ಸಂಗಡ ಪ್ರೀತಿ ಪೂರ್ವಕವಾಗಿ "ಎಲೈ ಪ್ರಿಯಳೆ ಮನೋಹರಳೆ, ಬಂದಿರುವ ಸಾಗರಗಳ ಸಮೂಹವನ್ನು ನೋಡು. ನಿನಗೆ ಹಿತವನ್ನುಉಂಟುಮಾಡುವುದರಲ್ಲಿಯೇ ನನಗೆ ಯಾವಾಗಲೂ ಆಶೆಯಿರುವುದು. ನಿನ್ನ ತಾಯಿಗೆ ಸಾಗರಗಳು ಇಲ್ಲಿಗೆ ಬಂದಿರುವುದನ್ನು ತಿಳಿಸು. ತಟಾತಕಾದೇವಿಯೆ, ನಿನ್ನ ತಾಯಿಯು ಸಾಗರದಲ್ಲಿ ಸ್ನಾನವನ್ನುಮಾಡುವಂತೆ ಹೇಳು. ಸ್ನಾನ ಮಾಡಿದನಂತರ ನೀನು ನನಗೆ ತಿಳಿಸು" ಎಂದು ಹೇಳಿದನು.

ಉಕ್ತ್ವಾ ಸ್ನಾತಾಂ ಸಮಾಲೋಕ್ಯ ತತ ಆಗಚ್ಛ ಮೇಽಂತಿಕಂ ।
ಇತೀಶೋಽಭೀಷ್ಟದಸ್ತಸ್ಯಾಃ ಪ್ರೇಷಯಿತ್ವಾ ಚ ತಾಂ ತತಃ ॥ ೯ ॥

ಸಮುದ್ರಾಣಾಂ ಮಹಾವೇಗಂ ಸ್ತಂಭಯಿತ್ವಾ ಸ್ವಶಕ್ತಿತಃ ।
ತತ್ತೀರಪುಷ್ಪವಾಟೀಷು ಪುಷ್ಪಾಣಿ ಸುರಭೀಣಿ ಚ ॥ ೧೦ ॥

ಸಮಾಹೃತ್ಯ ಸಮಾಘ್ರಾಯ ವಂದಿಭಿಃ ಪರಿನಂದಿತಃ ।
ಪುನ್ನಾಗಪೂಗಮಂದಾರಲಾಂಗಲೀಚೂತಸಂವೃತೇ । ॥ ೧೧ ॥

ಸುಚ್ಛಾಯೇ ಸುಸಮೇ ದೇಶೇ ಮಂದಮಾರುತಸೇವಿತೇ ।
ಕಾಲಕ್ಷೇಪಂ ಚ ಕುರ್ವಾಣ ಶ್ಚಚಾರ ಪರಯಾ ಮುದಾ ॥ ೧೨ ॥

ತಟಾತಕಾ ಚ ಲೋಕಾನಾಂ ಜನನೀ ಸರ್ವಮಂಗಳಾ ।
ಶಿವಾಜ್ಞಾಂ ಶಿರಸಾ ಧೃತ್ವಾ ಮಹಾಪ್ರೀತಿಸಮನ್ವಿತಾ ॥ ೧೩ ॥

---

೯–೧೨. ಈಶ್ವರನು ತಟಾತಕಾದೇವಿಯ ಇಷ್ಟವನ್ನು ನೆರವೇರಿಸಿ ಕೊಡುವವನಾಗಿ ಹೀಗೆ ಹೇಳಿ, ಆ ದೇವಿಯನ್ನು ಅವಳ ತಾಯಿಯ ಹತ್ತಿರಕ್ಕೆ ಕಳುಹಿಸಿದನು. ಅನಂತರ ದೇವನಾದ ಪರಮೇಶ್ವರನು ತನ್ನ ಶಕ್ತಿಯಿಂದ ಆ ಸಾಗರಗಳ ವೇಗವನ್ನು ತಡೆದು ನಿಲ್ಲಿಸಿ, ಆ ಸರೋವರದ ಹೂವಿನ ಗಿಡಗಳಲ್ಲಿರುವ ಸುವಾಸನೆಯಾದ ಹೂವುಗಳನ್ನು ಪರಿಜನರಿಂದ ತರಿಸಿಕೊಂಡು, ಅವುಗಳ ಪರಿಮಳವನ್ನು ಆಘ್ರಾಣಿಸುತ್ತಾ ಅಡಿಕೆ, ಪುನ್ನಾಗ, ಮಂದಾರ, ಮಾವು, ಲಾಂಗಲೀಮರ, ಈ ವೃಕ್ಷಗಳಿಂದ ಅಲಂಕೃತವಾದ ತುಂಬಾ ನೆರಳು ಇರುವ, ಒಂದೇ ಸಮನಾಗಿ ಮಂದಮಾರುತವು ಬೀಸುತ್ತಿರುವ ಉದ್ಯಾನವನದಲ್ಲಿಯೇ ಸಂತೋಷದಿಂದ ಸಂಚರಿಸುತ್ತಿದ್ದನು.

೧೩–೧೫. ಲೋಕಗಳೆಲ್ಲಕ್ಕೂ ಜನನಿಯಾದ, ಸರ್ವಮಂಗಳೆಯಾದ ತಟಾತಕಾದೇವಿಯು ಶಿವನ ಆಜ್ಞೆಯನ್ನು ಶಿರಸಾವಹಿಸಿ, ಬಹಳ ಸಂತೋಷದಿಂದ ಹಾಗೆಯೇ ಮಾಡುತ್ತೇನೆಂದು ಪತಿಯ ಸಂಗಡ ಹೇಳಿದಳು. ಆ ದೇವಿಯು ಆ ಕ್ಷಣದಲ್ಲಿಯೇ ತನ್ನ ತಾಯಿಯ ಹತ್ತಿರಕ್ಕೆ ಹೋಗಿ, “ ಎಲೈ ತಾಯಿಯೆ, ನೀನು ಒಂದು

**ತಥಾ ಕರಿಷ್ಯ ಇತ್ಯುಕ್ತ್ವಾ ಸದ್ಯಸ್ಸಂಪ್ರಾಪ್ಯ ಮಾತರಂ ।**
**ಏವಂ ಪ್ರೋವಾಚ ತನ್ವಂಗೀ ಜಿತಕೋಕಿಲಕೂಜಿತಾ ॥ ೧೪ ॥**

**ಮಾತ ಸ್ತ್ವಂ ಸಾಗರೇ ಸ್ನಾತು ಮೇಕಸ್ಮಿನ್ನನು ವಾಂಛಸಿ ।**
**ದೇವಪ್ರಸಾದಾತ್ ಸರ್ವೇತ್ರ ಸಾಗರಾ ಆಗತಾಃ ಕ್ಷಣಾತ್ ॥ ೧೫ ॥**

**ಯಥೇಚ್ಛಮೇಷು ಸ್ನಾಹೀತಿ ತದ್ವಾಕ್ಯಂ ತ್ವಮೃತೋಪಮಂ ।**
**ಶ್ರವಣಾಂಜಲಭಿಃ ಪೀತ್ವಾ ಪುತ್ರೀಂ ದೇವೀಂ ತಟಾತಕಾಂ ॥ ೧೬ ॥**

**ಸಮಾಲಿಂಗ್ಯ ಸಮಾಘ್ರಾಯ ಮಂಜುಳಂ ಮುಖಮಂಡಲಂ ।**
**ಪ್ರೀತಾ ಕಾಂಚನಮಾಲಾ ಸೀತ್ಕೃತಾರ್ಥಾ ಸ್ಮೀತಿ ನೈ ಧಿಯಾ ॥ ೧೭ ॥**

**ಪುನಃ ಪೌರಾಣಿಕಾ ಸರ್ವಾ ಸಮಾಹೂಯ ಚ ಪೃಚ್ಛತಿ ।**
**ಸಮುದ್ರಸ್ನಾನನಿಯಮಂ ಕಥಯಂತು ವಿಚಕ್ಷಣಾಃ ॥ ೧೮ ॥**

---

ಸಾಗರದಲ್ಲಿ ಸ್ನಾನ ಮಾಡುವ ಇಚ್ಛೆಯನ್ನು ಹೊಂದಿರುತ್ತೀಯೆ. ದೇವರ ಅನುಗ್ರಹದಿಂದ ಸಪ್ತಸಾಗರಗಳೂ ಒಂದು ಕ್ಷಣದಲ್ಲಿ ಇಲ್ಲಿಗೆ ಬಂದಿರುತ್ತವೆ. ನಿನ್ನ ಇಚ್ಛಾನುಸಾರವಾಗಿ ಇವುಗಳಲ್ಲಿ ಸ್ನಾನವನ್ನು ಮಾಡು." ಎಂದು ಹೇಳಿದಳು.

೧೬-೧೭. ಆಗ ಕಾಂಚನಮಾಲೆಯು, ಅಮೃತಕ್ಕೆ ಸಮನಾದ ಆ ಮಾತನ್ನು ಕೇಳಿ, ಮಗಳಾದ ತಟಾತಕೆಯನ್ನು ತಬ್ಬಿಕೊಂಡು, ನೆತ್ತಿಯನ್ನು ಆಘ್ರಾಣಿಸಿ, ಸುಂದರವಾದ ಅವಳ ಮುಖವನ್ನು ನೋಡಿ, ಸಂತೋಷದಿಂದ ಉಬ್ಬಿದವಳಾಗಿ ತನ್ನನ್ನು ಕೃತಾರ್ಥಳೆಂದು ತಿಳಿದುಕೊಂಡಳು.

೧೮-೨೦. ಅನಂತರದಲ್ಲಿ ಕಾಂಚನಮಾಲೆಯು ಪುರಾಣ ಹೇಳುವವರೆಲ್ಲರನ್ನೂ ಕರೆಸಿ ಸಮುದ್ರ ಸ್ನಾನವನ್ನು ಮಾಡುವ ನಿಯಮವನ್ನು ಹೇಳಿರಿ, ಎಂದು ಕೇಳಿದಳು. ಶಾಸ್ತ್ರಗಳನ್ನು ತಿಳಿದ ಅವರೆಲ್ಲರೂ ಕಾಂಚನಮಾಲೆಯ ಮಾತನ್ನು ಕೇಳಿ, ಶಾಸ್ತ್ರವನ್ನು ಚೆನ್ನಾಗಿ ವಿಚಾರ ಮಾಡಿ "ಸಹಾಯಕರು ಇಲ್ಲದಿರುವ ವಿತಂತುವಾದ ಸ್ತ್ರೀಯು, ಸಾಗರದಲ್ಲಿ ಸ್ನಾನ ಮಾಡಲು ಅವಕಾಶವಿಲ್ಲವು. ಮಗನೊಡನೆಯಾಗಲಿ, ಸಹೋದರರೊಡನೆ ಯಾಗಲಿ ಸ್ನಾನವನ್ನು ಮಾಡಬೇಕು. ಇವರು ಇಲ್ಲ

ಇತಿ ತೇ ತದ್ವಚಃ ಶ್ರುತ್ವಾ ಶಾಸ್ತ್ರಾರ್ಥಂ ಚ ವಿಚಾರ್ಯ ಚ ।
ಏವಂ ವದಂತಿ ಸರ್ವೇ ತೇ ಸರ್ವಶಾಸ್ತ್ರವಿಚಕ್ಷಣಾಃ ॥
ವಿತಂತುರಸಹಾಯಾ ನೋ ಸಾಗರೇ ಸ್ನಾತು ಮರ್ಹತಿ ।
ಸಹಾತ್ಮಜೇನ ಭರ್ತ್ರಾ ವಾ ಸ್ನಾತುಮರ್ಹತಿ ನಾನ್ಯಥಾ ॥ ೧೯ ॥

ಸರ್ವಾಭಾವೇ ತು ಗೋವತ್ಸಂ ಸ್ನಾಯಾದಾದಾಯ ಸಾಗರೇ ।
ಇತಿ ತೇಷಾಂ ವಚಃ ಶ್ರುತ್ವಾ ಪುನರತ್ಯಂತದುಃಖಿತಾ ॥ ೨೦ ॥

ತಟಾತಕಾಮುಖಂ ವೀಕ್ಷ್ಯ ಕಿಂ ಕರ್ತವ್ಯಂ ಮಯೇತಿ ಚ ।
ಉಕ್ತ್ವಾ ಕಾಂಚನಮಾಲಾ ಸಾ ತೂಷ್ಣೀಂ ಶೋಕೇನ ತಿಷ್ಠತಿ ॥ ೨೧ ॥

ಶ್ರುತ್ವಾ ತಟಾತಕಾ ದೇವೀ ಶೋಕಯುಕ್ತಂ ಚ ತದ್ವಚಃ ।
ಜನನೀಶೋಕನಾಶಾಯ ದೇವೇಶಂ ಪ್ರಾಪ್ಯ ಸತ್ವರಂ ॥ ೨೨ ॥

ವಾಚಾ ಮಧುರಯಾ ಪ್ರಾಹ ನಾಥಂ ಸೋಮವಿಭೂಷಣಂ ।
ಪುತ್ರೇಣ ಭರ್ತ್ರಾ ತ್ವಥವಾ ಸಾಗರೇ ಸ್ನಾನಮೀರಿತಂ ॥ ೨೩ ॥

---

ದಿದ್ದರೆ, ಹಸುವಿನ ಕರುವನ್ನು ಮುಂಚಿತವಾಗಿ ಸ್ನಾನ ಮಾಡಿಸಿದ ನಂತರ ವಿತಂತು ಸ್ತ್ರೀಯು ಸಮುದ್ರದಲ್ಲಿ ಸ್ನಾನ ಮಾಡಲು ಯೋಗ್ಯತೆಯನ್ನು ಹೊಂದಿರುವಳು." ಎಂದು ಹೇಳಿದರು.

೨೧. ಕಾಂಚನಮಾಲೆಯು ಅವರ ಮಾತನ್ನು ಕೇಳಿ, ತನಗೆ ಪುತ್ರರೂ ಸಹೋದರರೂ ಯಾರೂ ಇಲ್ಲದ ಕಾರಣ ಬಹಳ ದುಃಖವುಳ್ಳವಳಾಗಿ, ಮಗಳಾದ ತಟಾತಕಾದೇವಿಯ ಮುಖವನ್ನು ನೋಡಿ "ಈಗ ನಾನು ಏನು ಮಾಡಲಿ." ಎಂದು ಯೋಚಿಸುತ್ತಾ ದುಃಖದಿಂದ ಸುಮ್ಮನಿದ್ದಳು.

೨೨-೨೩. ಆಗ ತಟಾತಕಾದೇವಿಯು ತನ್ನ ತಾಯಿಯು ಹೇಳಿದ ದುಃಖದಿಂದ ಕೂಡಿದ ಮಾತನ್ನು ಕೇಳಿ. ತನ್ನ ತಾಯಿಯ ದುಃಖವನ್ನು ಹೋಗಲಾಡಿಸುವುದಕ್ಕಾಗಿ, ಬೇಗನೆ ದೇವ ದೇವನಾದ ತನ್ನ ಪತಿಯ ಸಮೀಪಕ್ಕೆ ಹೋಗಿ, ಅವನ ಸಂಗಡ ವಿನಯದಿಂದ "ಎಲೈ ಸೋಮವಿಭೂಷಣನೆ, ಸ್ತ್ರೀಯು ಪುತ್ರನೊಡನೆ ಅಥವಾ ಪತಿಯೊಡನೆ ಸಾಗರದಲ್ಲಿ ಸ್ನಾನಮಾಡತಕ್ಕದ್ದು, ಎಂದು ಪೌರಾಣಿಕರು ಹೇಳುವರು. ನನ್ನ ತಾಯಿಗೆ ಪತಿಯು ಇಲ್ಲ. ಆದ್ದರಿಂದ ಈಗ ಅವಳು ಸಾಗರದಲ್ಲಿ

ಪೌರಾಣಿಕೈರ್ನಿತಂತಂತೂನಾಮಿತಿ ಪ್ರೋಕ್ತಂ ಪುರಾತನೈಃ ।
ಪುತ್ರೋ ಜನನ್ಯಾ ಮೇ ನಾಸ್ತಿ ಭರ್ತಾ ಸ್ವರ್ಗಂ ಗತಃ ಪುರಾ ॥ ೨೪ ॥

ಕಿಂ ಕರ್ತವ್ಯಂ ತಯೋ ದಾನೀಂ ವದೋಪಾಯಜ್ಞ ಶಂಕರ ।
ತಟಾತಕಾಯಾ ಸ್ತದ್ವಾಕ್ಯಂ ಸರ್ವಶಾಸ್ತ್ರಾರ್ಥತತ್ತ್ವವಿತ್ ॥ ೨೫ ॥

ಸರ್ವಜ್ಞೋ ದೇವದೇವೇಶಃ ಶ್ರುತ್ವಾ ಯುಕ್ತಮಿತಿ ಬ್ರುವನ್ ।
ಕ್ಷಣಮಾತ್ರಂ ವಿಚಿಂತ್ಯಾಥ ಭಕ್ತಚಿಂತಾರ್ತಿಭಂಜನಃ ॥ ೨೬ ॥

ನಿಜಕರ್ಮಾನುರೂಪಾತ್ತಸ್ವರೂಪಾದ್ಭುತತೇಜಸಂ ।
ದಿವಿಷ್ಠ ಮಪಿ ತತ್ರಾತ ಮಿಂದ್ರಸ್ಯಾ ರ್ಧಾಸನೇ ಸ್ಥಿತಂ ।
ಮಲಯಧ್ವಜಭೂಪಾಲಂ ಸಸ್ಮಾರ ಸಹಸಾ ಶಿವಃ ॥ ೨೭ ॥

ತದಾನೀ ಮವಶೋ ಭೂತ್ವಾ ಮಲಯಧ್ವಜಭೂಪತಿಃ ।
ವಿಮಾನಮ ಧಿರುಹ್ಯಾ ಶು ಸ್ವಕೀಯ ಮತಿನಿರ್ಮಲಂ ॥ ೨೮ ॥

---

ಸ್ನಾನ ಮಾಡಬೇಕಾದರೆ ಅದಕ್ಕೆ ತಕ್ಕ ಉಪಾಯವನ್ನು ನೀನು ಹೇಳು. ನೀನು ಈ ಕಾರ್ಯವು ನೆರವೇರುವ ಉಪಾಯವನ್ನು ತಿಳಿದು ಇರುತ್ತೀಯೆ. '' ಎಂದು ಮೃದುವಾಗಿ ಹೇಳಿದಳು.

೨೬-೩೭. ಸರ್ವಜ್ಞನಾದ ದೇವೇಶ್ವರನು ಆ ಮಾತನ್ನು ಕೇಳಿ '' ಇದು ಯುಕ್ತವಾದದ್ದು. '' ಎಂದು ಹೇಳುತ್ತಾ ಒಂದು ಕ್ಷಣದವರೆಗೂ ಆಲೋಚಿಸಿದನು. ಅನಂತರದಲ್ಲಿ ಭಕ್ತರ ದುಃಖವನ್ನೂ, ಸಂಕಟವನ್ನೂ ಪರಿಹರಿಸುವ ದೇವ ದೇವನು ತನ್ನ ಕರ್ಮಕ್ಕೆ ಅನುರೂಪವಾದ ಆಕಾರವನ್ನು ಧರಿಸಿ, ಆಶ್ಚರ್ಯಕರವಾದ ತೇಜಸ್ಸಿನಿಂದ ಸ್ವರ್ಗದಲ್ಲಿ ಇಂದ್ರನ ಅರ್ಧಾಸನದಲ್ಲಿರುವ ತಟಾತಕಾದೇವಿಯ ತಂದೆಯಾದ ಮಲಯಧ್ವಜರಾಜನನ್ನು ಬೇಗ ಬರುವಂತೆ ಸ್ಮರಿಸಿದನು.

೨೮-೩೧. ಮಲಯಧ್ವಜರಾಜನು, ಶಿವನ ಆಜ್ಞೆಯನ್ನು ಅನುಸರಿಸಿ, ತನ್ನ ನಿರ್ಮಲವಾದ ವಿಮಾನದಲ್ಲಿ ಕುಳಿತುಕೊಂಡು, ಆಶ್ಚರ್ಯದಿಂದ ಜನರೆಲ್ಲರೂ ನೋಡುತ್ತಿರುವಂತೆ ಸ್ವಲ್ಪ ಸ್ವಲ್ಪವಾಗಿ ಕೆಳಗಡೆಗೆ ಬರುತ್ತಾ ಒಂದು ಕ್ಷಣದ ಒಳಗೆ ಸುಂದರೇಶ್ವರನ ಹತ್ತಿರಕ್ಕೆ ಬಂದು ನಮಸ್ಕರಿಸಿದನು. ಆಗ ಸುಂದರೇಶ್ವರನು '' ನೀನು

ವ್ಯೋಮ್ನಿ ಸಂದೃಶ್ಯಮಾನಸ್ಸರ್ವೈ ಜನೈಸ್ಸರ್ವೈ ಸ್ಸುವಿಸ್ಮಿತೈಃ ।
ಅಧೋಧಃ ಕ್ಷಣತಃ ಪ್ರಾಪ್ಯ ಕ್ರಮಾದ್ದೇವಾಂತಿಕಂ ಗತಃ ॥ ೨೯ ॥

ದೇವೋಽಪ್ಯಭಿಮುಖಂ ಗತ್ವಾ ಪ್ರಣಾಮಂ ತೇನ ವೈ ಕೃತಂ ।
ವಾಚಾ ನಿರುಧ್ಯ ಚೋತ್ಥಾಪ್ಯ ಹ್ಯಾಲಿಂಗ್ಯಾತಿಪ್ರಿಯೇಣ ಚ ॥ ೩೦ ॥

ತಟಾತಕಾಯಾಃ ಪುತ್ರ್ಯಾಶ್ಚ ದರ್ಶಯಿತ್ವಾ ಮಹೌಜಸಂ ।
ಜನಕಂ ಚ ತಯಾ ತಸ್ಮೈ ಕಾರಯಿತ್ವಾ ನಮಸ್ಕ್ರಿಯಾಂ ॥ ೩೧ ॥

ಶ್ವಶ್ರೂಂ ಕಾಂಚನಮಾಲಾ ಚ ಮಲಯಧ್ವಜಭೂಭುಜಾ ।
ಶ್ವಶುರೇಣ ಚ ಸಂಯೋಜ್ಯ ವಿಧಿನಾ ಸಪ್ತಸಾಗರೇ ॥ ೩೨ ॥

ಸ್ನಾನಂ ಚ ಕಾರಯಾಮಾಸ ತತ್ಕ್ಷಣಾತ್ತೌ ಚ ದಂಪತೀ ।
ದಿವ್ಯಾಂಬರಧರೌ ದಿವ್ಯಗಂಧಸ್ರಗ್ಭೂಷಣೋಜ್ವಲೌ ॥ ೩೩ ॥

ಸಾರೂಪ್ಯಂ ಶಿವಯೋರ್ಲಬ್ಧ್ವಾ ಶಿವಲೋಕಾತ್ಸಮಾಗತಂ ।
ವಿಮಾನಂ ಚ ಸಮಾರುಹ್ಯ ಹಾಲಾಸ್ಯೇಶಶಿವಾಜ್ಞಯಾ ॥ ೩೪ ॥

---

ನಮಸ್ಕಾರ ಮಾಡಬೇಡ. '' ಎಂದು ಅವನಿಗೆ ಹೇಳಿ, ಅವನನ್ನು ಮೇಲಕ್ಕೆ ಎಬ್ಬಿಸಿ, ಪ್ರೀತಿಯಿಂದ ಆಲಿಂಗಿಸಿಕೊಂಡು, ಅವನ ಮಗಳಾದ ತಟಾತಕಾದೇವಿಗೆ ತೇಜಶ್ಶಾಲಿಯಾದ ಆವನನ್ನು ತೋರಿಸಿದನು. ಆಗ ತಟಾತಕಾದೇವಿಯು ಅವನಿಗೆ ನಮಸ್ಕಾರವನ್ನು ಮಾಡಿದಳು.

೩೨-೩೬. ಪಾಂಡ್ಯರಾಜನಾದ ಸುಂದರೇಶ್ವರನು, ತನ್ನ ಅತ್ತೆಯಾದ ಕಾಂಚನಮಾಲೆಯೊಡನೆ ಮಲಯಧ್ವಜರಾಜನು ಸಾಗರ ಸ್ನಾನವನ್ನು ಶಾಸ್ತ್ರಕ್ರಮದಿಂದ ನೆರವೇರಿಸುವಂತೆ ಹೇಳಿ, ಆ ದಂಪತಿಗಳಿಂದ ಸಾಗರ ಸ್ನಾನವನ್ನು ಮಾಡಿಸಿದನು. ಅವರಿಬ್ಬರೂ ಸಾಗರ ಸ್ನಾನವನ್ನು ಮಾಡಿದ ಕೂಡಲೆ ಉತ್ತಮವಾದ ಗಂಧ, ಮಾಲ್ಯ, ವಸ್ತ್ರ, ಆಭರಣ ಇವೇ ಮೊದಲಾದವನ್ನು ಧರಿಸಿದರು. ಶಿವನ ಸಾರೂಪ್ಯವು ಅವರಿಗೆ ಉಂಟಾಯಿತು. ಹಾಲಾಸ್ಯೇಶ್ವರನ ಆಜ್ಞೆಯಿಂದ ಬಂದ ವಿಮಾನವನ್ನು ಏರಿ ಅವರಿಬ್ಬರೂ ಚಿನ್ನದ ಕಂಬದಿಂದ ಪ್ರಕಾಶಿಸುತ್ತಿರುವ, ದರ್ಶನ ಮಾತ್ರದಿಂದ

ಪ್ರಾಸಾದಂ ಮೂಲಲಿಂಗಸ್ಯ ಹೈಮಸ್ತಂಬವಿರಾಜಿತಂ ।
ದರ್ಶನಾದ್ಭಕ್ತಿದಂ ಪುಂಸಾಂ ಮುಕ್ತಿದಂ ಸರ್ವಸಿದ್ಧಿದಂ ॥ ೩೫ ॥

ಪುನಃಪುನಶ್ಚ ಸಂವೀಕ್ಷ್ಯ ನಮಸ್ಕೃತ್ವಾದರೇಣ ಚ ।
ಬ್ರಹ್ಮಾಂಡೋರ್ಧ್ವಗತಂ ನಿತ್ಯಂ ಶಿವಲೋಕಂ ಚ ಜಗ್ಮತುಃ ॥ ೩೬ ॥
ತದಾ ತಟಾತಕಾ ಹೃಷ್ಟಾ ತುಷ್ಟಾ ವಾತ್ಮೇಷ್ಟದಂ ಶಿವಂ ।

॥ ತಟಾತಕೋವಾಚ ॥

ಮನ್ನಾಥ ಜಗತಾಂ ನಾಥ ಸತ್ಯಜ್ಞಾನಸುಖಾತ್ಮಕ ।
ಪಾಹಿ ಮಾಂ ಪರಮೇಶಾನ ಪರಾತ್ಪರ ನಮೋಸ್ತು ತೇ ॥ ೩೭ ॥

ಮತ್ಪ್ರಸಾದಕ್ರಿಯಾದಕ್ಷ ದಕ್ಷಾಧ್ವರವಿನಾಶನ ।
ಮದನಾಂತಕ ಮದ್ಭರ್ತಃ ಮದಾಜ್ಞಾವಶವರ್ತಕ ॥ ೩೮ ॥

ನಿಗಮಾಗಮಸಂತಾನನಿಧೇಯಾಂಘ್ರಿಸರೋರುಹ ।
ಭುವನತ್ರಯಸಂಜಾತತ್ರಾಣಸಂಹಾರಕಾರಣ ॥ ೩೯ ॥

---

ಮುಕ್ತಿಯನ್ನು ಕೊಡುವ, ಸಕಲ ವಿಧವಾದ ಇಷ್ಟಸಿದ್ಧಿಯನ್ನುಂಟುಮಾಡುವ, ಹಾಲಾಸ್ಯೇಶ್ವರ ಮೂಲ ಲಿಂಗದ ದೇವಸ್ಥಾನವನ್ನು ಅನೇಕ ಸಾರಿ ನೋಡಿ, ಭಕ್ತಿಯಿಂದ ನಮಸ್ಕರಿಸಿ, ಬ್ರಹ್ಮಾಂಡಕ್ಕಿಂತಲೂ ಮೇಲುಭಾಗದಲ್ಲಿ ಇರುವ ಶಿವಲೋಕಕ್ಕೆ ಹೋದರು.

೩೭. ಆಗ ತಟಾತಕಾದೇವಿಗೆ ಸಂತೋಷವಾಯಿತು. ಆ ಸಂತೋಷದಿಂದ ತನ್ನ ಪತಿಯನ್ನು ಸ್ತುತಿಮಾಡಿದಳು. ತಟಾತಕಾದೇವಿಯು ಹೇಳಿದಳು:—" ಸತ ಜ್ಞಾನ, ಆನಂದ ರೂಪವಾದ ಪರಮೈಶ್ವರ್ಯ ಭಾವದಲ್ಲಿರುತ್ತಾ ಜಗತ್ಪತಿಯಾಗಿ ನನಗೆ ಪತಿಭಾವವನ್ನು ಹೊಂದಿರುವ, ಈಶ್ವರನಾದ ನಿನಗೆ ನಮಸ್ಕಾರವು. ನನ್ನನ್ನು ರಕ್ಷಿಸು.

೩೮. ನೀನು ನನ್ನ ಸಂತೋಷಕ್ಕಾಗಿ ಬೇಕಾಗಿರುವ ಕಾರ್ಯಗಳನ್ನು ಮಾಡುವುದರಲ್ಲಿ ಸಮರ್ಥನಾಗಿರುತ್ತೀಯೆ. ದಕ್ಷಬ್ರಹ್ಮನ ಯಜ್ಞವನ್ನು ನಾಶಮಾಡಿರುತ್ತೀಯೆ, ಮನ್ಮಥನನ್ನು ನಿಗ್ರಹಿಸಿರುತ್ತೀಯೆ. ನನಗೆ ಪತಿಯಾಗಿ ನನ್ನ ಇಷ್ಟಾನುಸಾರವಾಗಿ ನನಗೆ ಅಧೀನನಾಗಿರುತ್ತೀಯೆ.

೩೯. ಶಾಸ್ತ್ರ, ಆಗಮ, ಇವುಗಳ ಸಮೂಹದಲ್ಲಿ ನಿನ್ನ ಪಾದಕಮಲದ ಸ್ವರೂಪವನ್ನು ಇಡಲು ಯೋಗ್ಯವಾದ ಪೂಜ್ಯಭಾವವನ್ನು ಧರಿಸಿರುತ್ತೀಯೆ. ಮೂರು ಲೋಕಗಳನ್ನೂ ನಿರ್ಮಿಸಿ, ಲಯ ಮಾಡಲು ಕಾರಣನಾಗಿರುತ್ತೀಯೆ.

ಹಂಸರೂಪಾಂಬುಜಾವಾಸದರ್ಶನಾಗಮ್ಯಮೌಳಿಯೆ ।
ಸೂಕರಾಕಾರಮುರಜಿದದೃಷ್ಟಾಂಘ್ರಿಸರೋರುಹ ॥ ೪೦ ॥

ನಮೋ ಭಗವತೇ ತುಭ್ಯಂ ಸರ್ವಾಂತಾಂತರವರ್ತಿನೇ ।
ಪುರತ್ರಯವಿನಾಶಾಯ ಪುರಂದರಸುತಾಂಘ್ರಯೇ ॥ ೪೧ ॥

ನಮಃ ಪರಾವರಜ್ಞಾಯ ಪರಾತ್ಪರತರಾಯ ಚ ।
ಪರಮಾತ್ಮಸ್ವರೂಪಾಯ ನಮಃ ಕೈವಲ್ಯದಾಯಿನೇ ॥ ೪೨ ॥

ನಮಸ್ತ್ರೈಲೋಕ್ಯನಾಥಾಯ ನಮಶ್ಚಂದ್ರಾರ್ಧಧಾರಿಣೆ ।
ನಮೋ ಭಸಿತಭೂಷಾಯ ನಮಶ್ಚರ್ಮಾಂಬರಾಯ ಚ ॥ ೪೩ ॥

ನಮಃ ಶ್ಯಾಮಾರ್ಧದೇಹಾಯ ನಮೋ ನಾಗೇಂದ್ರಹಾರಿಣೇ ।
ನಮೋ ಮಹ್ಯಂಬುವಾಯ್ವಗ್ನಿಪುಷ್ಪವತ್ಯಾತ್ಮಮೂರ್ತಯೇ ॥ ೪೪ ॥

---

೪೦–೪೨. ಹಂಸ ವಾಹನನಾದ, ಪದ್ಮದಲ್ಲಿ ಉಪವಿಷ್ಟನಾದ ಬ್ರಹ್ಮನು ನಿನ್ನ ಶಿರಸ್ಸನ್ನು ದರ್ಶನ ಮಾಡಲು ಆಗಲಿಲ್ಲವು. ಸೂಕರನ ಆಕಾರವನ್ನು ಧರಿಸಿದ ವಿಷ್ಣುವೂ ಕೂಡ ನಿನ್ನ ಪಾದಕಮಲಗಳನ್ನು ದರ್ಶನ ಮಾಡಲು ಆಗಲಿಲ್ಲವು. ಈ ಪ್ರಕಾರದ ಮಹಿಮೆಯನ್ನು ಹೊಂದಿರುವ ಷಡ್ಗುಣೈಶ್ವರ್ಯ ಸಂಪನ್ನನಾದ ನಿನಗೆ ನಮಸ್ಕಾರವು. ಎಲ್ಲರ ಮನಸ್ಸಿನಲ್ಲಿಯೂ ಅಂತರ್ಯಾಮಿಯಾಗಿರುವ ನಿನಗೆ ನಮಸ್ಕಾರವು. ಪರ (ಉತ್ಕೃಷ್ಟ) ಅಪರ (ನೀಚ) ಭಾವಗಳನ್ನು ತಿಳಿದಿರುವ, ಪರಮಾತ್ಮ ಭಾವದಿಂದ ಇರುತ್ತಾ ಕೈವಲ್ಯ (ಮುಕ್ತಿ) ವನ್ನು ಕೊಡುವ ನಿನಗೆ ನಮಸ್ಕಾರವು.

೪೩–೪೪. ಮೂರು ಲೋಕಗಳಿಗೂ ಪ್ರಭುವಾಗಿ, ಅರ್ಧಚಂದ್ರನನ್ನು ಧರಿಸಿ ಭಸ್ಮವನ್ನು ಆಭರಣವನ್ನಾಗಿ ಮಾಡಿಕೊಂಡು, ಚರ್ಮಾಂಬರಧಾರಿಯಾದ ನಿನಗೆ ನಮಸ್ಕಾರವು. (ಯೌವನ ಮಧ್ಯಸ್ಥ) ಮಧ್ಯ ಯೌವನದಲ್ಲಿರುವ ಸ್ತ್ರೀ ಶರೀರವನ್ನು ನಿನ್ನ ದೇಹದ ಅರ್ಧದಲ್ಲಿ ಧರಿಸಿರುವ ನಿನಗೆ ನಮಸ್ಕಾರವು. ಶ್ರೇಷ್ಠವಾದ ಸರ್ಪವನ್ನು ಹಾರವಾಗಿ ಧರಿಸಿರುವ ನಿನಗೆ ನಮಸ್ಕಾರವು. ಭೂಮಿ, ನೀರು, ಅಗ್ನಿ, ವಾಯು, ಆಕಾಶ, ಚಂದ್ರ, ಸೂರ್ಯ, ಯಾಗಮಾಡುವ ದೀಕ್ಷಿತ, ಎಂಬ ಎಂಟು ಮೂರ್ತಿಗಳಿಂದ ಇರುವ ನಿನಗೆ ನಮಸ್ಕಾರವು.

ನಮೋ ವೇದಾಂತವೇದ್ಯಾಯ ನಮೋ ನಾದಾಂತರೂಪಿಣೇ ।
ನಮೋ ನಾರಾಯಣಾಚ್ಯಾರ್ಯ ನಮೋ ನರಕಹಾರಿಣೇ ।		॥ ೪೫ ॥

ಜೀವನ್ಮುಕ್ತಿಪುರೇಶಾಯ ಶ್ರೀಕಂಠಾಯ ನಮೋನಮಃ ।
ನಮೋ ಹಾಲಾಸ್ಯನಾಥಾಯ ಶಂಕರಾಯ ನಮೋಽಸ್ತು ತೇ		॥ ೪೬ ॥

ಇತ್ಯಾತ್ಮನಾಯಕಂ ಸ್ತುತ್ವಾ ಶಿವಂ ದೇವೀ ತಟಾತಕಾ ।
ವಿಶೇಷತಶ್ಚ ತಸ್ಯಾಪಿ ಲಬ್ಧ್ವಾನುಗ್ರಹ ಮೀಶಿತುಃ		॥ ೪೭ ॥

ಪೂರ್ಣಸರ್ವೇಷ್ಟಕಾಮಾ ಸಾ ತ್ವಂತರ್ವತ್ನೀ ಬಭೂವ ಚ ।
ಶ್ರೀಮಾನ್ ಸುಂದರಪಾಂಡ್ಯೇಶೋ ದೇವೋ ಹಾಲಾಸ್ಯನಾಯಕಃ		॥ ೪೮ ॥

ಪಾಲಯಾಮಾಸ ಷಟ್ತ್ರಿಂಶತ್ಸಹಸ್ರಂ ಶರದಾಂ ಮಹೀಂ ।
ಏತದದ್ಭುತಕೃತ್ಯಂ ತದಾಲೋಕ್ಯಾಶ್ಚರ್ಯಸಂಯುತಾಃ		॥ ೪೯ ॥

---

೪೫–೪೬. ವೇದಾಂತಗಳಿಂದ ತಿಳಿಯಲು ಯೋಗ್ಯನಾದ, ನಾದದ ಅಂತ್ಯದಲ್ಲಿರುವ ಆಕಾರವನ್ನು ಹೊಂದಿರುವ ನಿನಗೆ ನಮಸ್ಕಾರವು. (ವಿಷ್ಣುವಿನಿಂದ ಪೂಜೆಯನ್ನು ಅಂಗೀಕರಿಸುವ) ವಿಷ್ಣುವಿಗೂ ಪೂಜ್ಯನಾಗಿ ನರಕ ಬಾಧೆಯನ್ನು ತಪ್ಪಿಸುವ ನಿನಗೆ ನಮಸ್ಕಾರವು. ಜೀವನ್ಮುಕ್ತಿಪುರಕ್ಕೆ ಅಧಿಪತಿಯಾದ ಕಪ್ಪುವರ್ಣದಿಂದ ಕೂಡಿರುವ ಕಂಠವುಳ್ಳ ನಿನಗೆ ನಮಸ್ಕಾರವು. ಹಾಲಾಸ್ಯ ಕ್ಷೇತ್ರದಲ್ಲಿ ಅಧಿಪತಿಯಾಗಿ ಎಲ್ಲರಿಗೂ ಸುಖವನ್ನುಂಟುಮಾಡುವ ನಿನಗೆ ನಮಸ್ಕಾರವು.

೪೭–೪೯. ತಟಾತಕಾದೇವಿಯು ಈ ಪ್ರಕಾರದಿಂದ ತನ್ನ ಪತಿಯಾದ ಶಿವನನ್ನು ಸ್ತುತಿಮಾಡಿ ಆ ದೇವನ ಸಂಪೂರ್ಣವಾದ ಅನುಗ್ರಹಕ್ಕೆ ಪಾತ್ರಳಾಗಿದ್ದಳು. ತಟಾತಕಾದೇವಿಯು ಪರಮೇಶ್ವರನ ಪೂರ್ಣಾನುಗ್ರಹದಿಂದ ತನ್ನ ಕೋರಿಕೆಗೆ ಅನುಸಾರವಾದ ಸುಖಗಳೆಲ್ಲವನ್ನೂ ಅನುಭವಿಸುತ್ತಾ ಕೆಲವುಕಾಲ ಕಳೆದನಂತರ ಗರ್ಭಿಣಿಯಾದಳು. ಸಂಪದ್ಯುಕ್ತನಾದ ಸುಂದರಪಾಂಡ್ಯರಾಜನಾಗಿ ಹಾಲಾಸ್ಯೇಶ್ವರನು ಅರುವತ್ತಾರುಸಾವಿರ ವರ್ಷಗಳ ಕಾಲ ರಾಜ್ಯ ಪರಿಪಾಲನೆಯನ್ನು ಮಾಡಿದನು. ಮಧುರಾಪುರದಲ್ಲಿ ವಾಸಮಾಡುವವರು ಈ ಆಶ್ಚರ್ಯವನ್ನು ನೋಡಿ ಸಂತೋಷದಿಂದ ದೇವದೇವನಾದ ಹಾಲಾಸ್ಯೇಶ್ವರನನ್ನು ಸ್ತೋತ್ರಮಾಡಿದರು.

ತುಷ್ಟುವು ಹೃಷ್ಟಮನಸೋ ಮಧುರಾಪುರವಾಸಿನಃ ।
ಆಕರ್ಣ್ಯ ದಶಮೀಂ ಲೀಲಾಂ ಯಃ ಪ್ರೀಣಾತಿ ನರೋತ್ತಮಃ ॥ ೫೦ ॥
ಮನೋರಥಮಿಹ ಪ್ರಾಪ್ಯ ದೇಹಾಂತೇ ಚ ದಿವಂ ಲಭೇತ್

ಸುರೇಶ್ವರಾರ್ಧಾಸನವಾಸಿನಂ ನೃಪಂ
ಸಂಯೋಜ್ಯ ಯಃಕಾಂಚನಮಾಲಯಾ ತಯಾ
ಸಾರೂಪ್ಯಮುಕ್ತಿಂ ಚ ದದಾತಿ ತಾಭ್ಯಾಂ
ತಸ್ಮೈ ತನೋ ನೀಪವನೇಶ್ವರಾಯ ॥ ೫೧ ॥

ಇತಿ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ ಮಾಹಾತ್ಮ್ಯೇ ಮಲಯಧ್ವಜದರ್ಶನಂ ನಾಮ ಚತುರ್ದಶೋಧ್ಯಾಯಃ

---

೫೦. ಹಾಲಾಸ್ಯೇಶ್ವರನಾದ ಶಿವನ ಹತ್ತನೆಯ ಈ ಲೀಲೆಯನ್ನು ಕೇಳಿದವರು ತಮ್ಮ ಇಷ್ಟಸಿದ್ಧಿಯನ್ನು ಹೊಂದಿ ದೇಹಾಂತದಲ್ಲಿ ಸ್ವರ್ಗವನ್ನು ಹೊಂದುವರು.

೫೧. ಇಂದ್ರನ ಅರ್ಧಾಸನದಲ್ಲಿ ಸುಖವಾಗಿದ್ದ ಮಲಯಧ್ವಜ ರಾಜನನ್ನು ಭೂಮಿಗೆ ಬರುವಂತೆ ಮಾಡಿ, ಅವನ ಪತ್ನಿಯೊಡನೆ ಅವನಿಗೆ ಶಿವ ಸಾರೂಪ್ಯ ಮುಕ್ತಿಯನ್ನು ಅನುಗ್ರಹಿಸಿದ ಕದಂಬವನಾಧಿಪನಾದ ಪರಮೇಶ್ವರನಿಗೆ ನಮಸ್ಕಾರವು.

ಸಂಪದ್ಯುಕ್ತವಾದ ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯ ಮಾಹಾತ್ಮ್ಯೆಯಲ್ಲಿ ಮಲಯಧ್ವಜ ದರ್ಶನವೆಂದು ಹೆಸರುಳ್ಳ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥

॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಪಂಚದಶೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

ಅಥ ಸುಂದರನಾಥಸ್ಯ ಕುಮಾರೋತ್ಪತ್ತಿಸತ್ಕಥಾಂ ।
ವದಾಮಿ ಸಂಗ್ರಹೇಣಾಹಂ ಶೃಣ್ವಂತು ಮುನಿಪುಂಗವಾಃ ॥ ೧ ॥

ತಟಾತಕಾ ಗರ್ಭವತೀ ಯಸ್ಮಿನ್ ವಸ್ತುನಿ ಸಾದರಾ ।
ತತ್ ಶಂಭೋಸ್ತು ಗಣಾಸ್ತಸ್ಯೈ ಪ್ರಯಚ್ಛಂತಿ ಮುನೀಶ್ವರಾಃ ॥ ೨ ॥

ದಿನೇ ದಿನೇ ಗರ್ಭರಕ್ಷಾ ಮಾಯುರ್ವೇದವಿಚಕ್ಷಣೈಃ ।
ಕಾರಯಾಮಾಸ ದೇವೇಶ ಸ್ಸದ್ಗರ್ಭಪರಿವೃದ್ಧಯೇ ॥ ೩ ॥

ಗರ್ಭಾಧಾನಾದಿಕರ್ಮಾಣಿ ಯಥಾಕಾಲಂ ವಿಧಾನತಃ ।
ಶ್ರೀಮತ್ಸುಂದರಪಾಂಡ್ಯೇಶೋ ವಿದಧಾತಿ ಮುನೀಶ್ವರೈಃ ॥ ೪ ॥

---

### ಹದಿನೈದನೆಯ ಅಧ್ಯಾಯವು.

೧–೪. ಅಗಸ್ತ್ಯಋಷಿಯು ಹೇಳಿದನು :—ಸುಂದರ ಭೂಪಾಲನಿಗೆ ಪುತ್ರನು ಹುಟ್ಟಿದ ಒಳ್ಳೆಯದಾದ ಚರಿತ್ರೆಯನ್ನು ಸಂಕ್ಷೇಪವಾಗಿ ಹೇಳುವೆನು. ಮುನಿಗಳೆಲ್ಲರೂ ಕೇಳಿರಿ. ಗರ್ಭಿಣಿಯಾದ ತಟಾತಕಾದೇವಿಯು ಆದರದಿಂದ ಅಪೇಕ್ಷಿಸಿದ ಪದಾರ್ಥಗಳೆಲ್ಲವನ್ನೂ ಶಿವನ ಗಣಗಳು ತಂದುಕೊಡುತ್ತಿದ್ದರು. ದೇವದೇವನು ಪ್ರತಿದಿನವೂ ಆಯುರ್ವೇದವನ್ನು ತಿಳಿದಿರುವ ವೈದ್ಯರಿಂದ ಗರ್ಭವು ವೃದ್ಧಿಯಾಗುವ ಉಪಾಯಗಳನ್ನು ತಿಳಿದು ಆಯಾಯ ಕೆಲಸಗಳನ್ನು ಮಾಡಿಸುತ್ತಿದ್ದನು. ಮತ್ತು ಆಯಾಯ ಶಾಸ್ತ್ರೋಕ್ತ ಕಾಲಕ್ಕನುಗುಣವಾಗಿ ಗರ್ಭಾಧಾನವೇ ಮೊದಲಾದ ಕರ್ಮಗಳನ್ನು ಪಾಂಡ್ಯರಾಜನು ನೆರವೇರಿಸಿದನು.

ದಶಮೇ ಮಾಸಿ ಸಂಪ್ರಾಪ್ತೇ ರೌದ್ರರ್ಕ್ಷೇ ಸೋಮವಾಸರೇ ।
ಗುರೌ ಕೇಂದ್ರಸ್ಥಿತೇ ಲಗ್ನೇ ಸಾಮ್ರಾಜ್ಯಪದಸೂಚಕೇ ॥ ೫ ॥

ಅರಿಷ್ಟಂ ಶೋಭಯನ್ ದೀಪ್ತ್ಯಾ ತಾರಕಾರಿಷ್ಷಡಾನನಃ ।
ಏಕಾನನಸ್ಸನ್ ಸಂಜಾತಃ ಶ್ರೀ ಹಾಲಾಸ್ಯೇಶ್ವರಾಜ್ಞಯಾ ॥ ೬ ॥

ಸ ಸದ್ಯ ಸ್ಸುಖದಶ್ಚಾಸೀ ದ್ಭೂರ್ಭುವಸ್ಸ್ವರ್ನಿವಾಸಿನಾಂ ।
ಜಾತೇ ತಸ್ಮಿನ್ ಮಹಾಭಾಗೇ ಸರ್ವಲೋಕಾರ್ತಿಹಾರಕೇ ॥ ೭ ॥

ಪರಾಕ್ರಮೇಣಾತುಲಯಾ ಸಂಪದಾ ಸಮುದಾಶ್ಚ ಯೇ ।
ಬಂಧನಾತ್ತೇ ನೃಪಾ ಮುಕ್ತಾಃ ಕಾರಾಗೃಹನಿಯಂತ್ರಿತಾಃ ॥ ೮ ॥

ದೇವದುಂದುಭಯೋ ನೇದುಃ ಪ್ರಸೇದುಸ್ಸರ್ವತೋ ದಿಶಃ ।
ಮಲಯಾದ್ರಿಸಮುದ್ಭೂತೋ ಮಂದಮಾಯಾತಿ ಮಾರುತಃ ॥ ೯ ॥

---

೫-೭. ಹತ್ತನೆಯ ತಿಂಗಳು ಪ್ರಾಪ್ತವಾಯಿತು. ಹಾಲಾಸ್ಯೇಶ್ವರನ ಆಜ್ಞೆಯಿಂದ ತಾರಕಾಸುರನಿಗೆ ವೈರಿಯಾದ ಷಣ್ಮುಖನು ತನ್ನ ಆರು ಮುಖಗಳನ್ನೂ ಮರೆಮಾಡಿಕೊಂಡು ಒಂದೇ ಮುಖವುಳ್ಳವನಾಗಿ, ತನ್ನ ತೇಜಸ್ಸಿನಿಂದ ವಿಪತ್ತುಗಳನ್ನು ನಾಶಮಾಡುವವನಾಗಿ ಹುಟ್ಟಿದನು. ಇವನು ಹುಟ್ಟಿದ ದಿನವು ಸೋಮವಾರವು. ಆರಿದ್ರಾ ನಕ್ಷತ್ರದಲ್ಲಿ ಇವನು ಜನ್ಮವನ್ನು ತಾಳಿದನು. ಇವನು ಹುಟ್ಟುವಾಗ ಬೃಹಸ್ಪತಿಯು ಲಗ್ನ ಕೇಂದ್ರದಲ್ಲಿದ್ದುಕೊಂಡು ಇವನಿಗೆ ಸಾಮ್ರಾಜ್ಯವನ್ನು ಸೂಚಿಸುತ್ತಿದ್ದನು. ಎಲ್ಲಾ ಲೋಕಗಳ ವಿಪತ್ತನ್ನೂ ನಾಶಪಡಿಸುವ ಇವನು ಹುಟ್ಟಿದಕೂಡಲೆ ಭೂಲೋಕ, ಭುವರ್ಲೋಕ, ಸ್ವರ್ಗಲೋಕವೆಂಬ ಮೂರು ಲೋಕಗಳಲ್ಲಿ ವಾಸಮಾಡುವವರೆಲ್ಲರಿಗೂ ಸಂತೋಷವು ಉಂಟಾಯಿತು.

೮-೧೨. ಇವನು ಹುಟ್ಟಿದ ಕೂಡಲೆ ಬಹಳ ಪರಾಕ್ರಮದ ಗರ್ವವುಳ್ಳವರೂ, ಧನದ ಮದವುಳ್ಳವರೂ, ಆಗಿ ಕಾರಾಗೃಹದಲ್ಲಿದ್ದ ರಾಜರಿಗೆ ಬಿಡುಗಡೆಯಾಯಿತು. ದೇವತೆಗಳ ನಗಾರಿಗಳು ಧ್ವನಿಮಾಡಿದವು. ದಿಕ್ಕುಗಳೆಲ್ಲವೂ ನಿರ್ಮಲವಾದುವು. ಮಲಯಪರ್ವತದಿಂದ ತಂಗಾಳಿಯು ಬೀಸಿತು. ಮೇಘಗಳಿಂದ ಪಾರಿಜಾತ ಕಲ್ಪವೃಕ್ಷದ ಹೂವಿನ ಮಳೆಯು ವಿಪುಲವಾಗಿ ಆಯಿತು. ಜನಗಳ ಮನಸ್ಸುಗಳು ಕಾಮವೇ ಮೊದಲಾದ ದೋಷಗಳಿಲ್ಲದೆ ಪ್ರಸನ್ನವಾದವು. ಇವುಗಳಂತೆಯೇ ನದಿಗಳ

ಪಾರಿಜಾತಪ್ರಸೂನೌಘೈ ರ್ವವರ್ಷು ರ್ವಾರಿ ವಾರಿದಾಃ ।
ಸರಿತಃ ಪರಿತ ಸ್ಸ್ವಚ್ಛಾ ಜನಾನಾಂ ಮಾನಸೈಃ ಸಹ ॥ ೧೦ ॥

ಪ್ರದಕ್ಷಿಣಾರ್ಚಿ ಸ್ಸಪ್ತಾರ್ಚಿ ರಾದದೇ ಹವಿ ರಾದರಾತ್ ।
ಸುಪ್ರೀತಾ ಲೋಕಪಾಲಾದ್ಯಾ ಸ್ಸಮಸ್ತಾ ದೇವತಾಗಣಾಃ ॥ ೧೧ ॥

ಸಂತೋಷಸಾಗರೇ ಮಗ್ನಾ ಮಧುರಾಪುರವಾಸಿನಃ ।
ಪೃಥಕ್ಪೃಥಕ್ಚ ಕಲ್ಯಾಣಂ ಚಕ್ರುಸ್ಸ್ವೇ ಸ್ವೇ ಚ ಮಂದಿರೇ ॥ ೧೨ ॥

ಪುತ್ರೋತ್ಸವಾರ್ಥಂ ಸಂಭೂತಸ್ತೂರ್ಯನಿಘೋಷ ಉಚ್ಛ್ರಿತಃ ।
ಉದಜ್ರಂಭತ ಲೋಕೇಷು ತ್ರಿಷು ಶೋಕೋ ನ ಕಸ್ಯಚಿತ್ ॥ ೧೩ ॥

ತಮೋಂತಮಗಮಚ್ಚೈವ ರಜೋಽಪಿ ವಿರಜೋಽಭವತ್ ।
ಸತ್ವಾಸತ್ವಸಮಾಯುಕ್ತಾ ವಸುಧಾಸೀತ್ಸುಧಾ ತದಾ ॥ ೧೪ ॥

ಕಲ್ಯಾಣೀ ಸರ್ವತೋ ವಾಣೀ ಪ್ರಾಣಿನಃ ಪ್ರೀಣಯಂತ್ಯಭೂತ್ ।
ತಿಲೋತ್ತಮೋರ್ವಶೀರಂಭಾಪ್ರಮುಖಾ ಅಪ್ಸರೋಗಣಾಃ ॥ ೧೫ ॥

---

ನೀರೂ ನಿರ್ಮಲವಾಯಿತು. ಅಗ್ನಿದೇವನು ಪ್ರದಕ್ಷಿಣಾಕಾರವಾದ ಜ್ವಾಲೆಯಿಂದ ಹವಿಸ್ಸನ್ನು ಆದರದಿಂದ ಸ್ವೀಕರಿಸಿದನು. ಲೋಕಪಾಲಕರೂ, ದೇವತೆಗಳೂ ಇವರೆಲ್ಲರೂ ಸಂತೋಷವನ್ನು ಹೊಂದಿದರು. ಮಧುರಾಪುರದ ನಿವಾಸಿಗಳು ಬಹಳ ಸಂತೋಷದಿಂದ ತಮ್ಮ ತಮ್ಮ ಮನೆಗಳಲ್ಲಿ ಉತ್ಸವಗಳನ್ನು ಮಾಡಿದರು.

೧೩–೧೬. ಪುತ್ರೋತ್ಸವವನ್ನು ಸೂಚಿಸುವ ವಾದ್ಯಘೋಷವು ಎಲ್ಲವನ್ನೂ ಮೀರಿತ್ತು. ಮೂರು ಲೋಕಗಳಲ್ಲಿಯೂ ಆ ಕ್ಷಣದಲ್ಲಿ ಯಾವ ಪ್ರಾಣಿಗೂ ದುಃಖವು ಇರಲಿಲ್ಲ. ತಮೋಗುಣವು ನಾಶವಾಯಿತು. ಇದರಿಂದ ಪ್ರಾಣಿಗಳೆಲ್ಲರೂ ಸತ್ವಗುಣವುಳ್ಳವರಾಗಿ ಇದ್ದರು. ಆಗ ವಸುಧೆಯು (ಭೂಮಿಯು) ಸುಧೆಯಾಯಿತು. (ಅಮೃತ) ಭೂಮಿಯೇ ಸ್ವರ್ಗವಾಗಿತ್ತು. ಎಲ್ಲಾ ಕಡೆಯಲ್ಲಿಯೂ ಪ್ರಾಣಿಗಳಿಗೆ ಮಂಗಳಕರವಾದ ಮಾತು ಕೇಳುತ್ತಿತ್ತು. ಇದರಿಂದ ಎಲ್ಲಾ ಪ್ರಾಣಿಗಳೂ ಸಂತೋಷವಾಗಿದ್ದವು. ತಿಲೋತ್ತಮಾ, ಊರ್ವಶೀ, ರಂಭಾ ಇವರೇ ಮೊದಲಾದ ಅಪ್ಸರಸ್ತ್ರೀಯರು ಮಂಗಳಸೂಚಕವಾದ ವಸ್ತುಗಳನ್ನು ಹಿಡಿದುಕೊಂಡು ಸಂತೋಷವಾಗಿ ಆ ನಗರಕ್ಕೆ ಬಂದು ಸೇರಿದರು. ಯಕ್ಷರೂ, ಗಂಧರ್ವರೂ, ನಾಗರೂ, ಇವರ ಸ್ತ್ರೀಯರುಗಳು ಮನೋಹರವಾಗಿರುವಂತೆ ಗಾನಮಾಡುತ್ತಾ ಅಲ್ಲಿಗೆ ಗುಂಪು ಗುಂಪಾಗಿ ಬಂದು ಸೇರಿದರು.

ಸಮಾಯಾಂತಿ ಮುದಾ ಯುಕ್ತಾ ಮಂಗಳದ್ರವ್ಯಪಾಣಯಃ ।
ಯಕ್ಷಗಂಧರ್ವನಾಗಾನಾಂ ಸುವಾಸಿನ್ಯಸ್ಸಮಾಗತಾಃ ॥ ೧೬ ॥

ಗಾಯಂತ್ಯೋ ಲಲಿತಂ ಗೀತಂ ತತ್ರ್ಯ್ಯಜಗ್ಮುರನೇಕಶಃ ।
ಋಷ್ಯಶೃಂಗಮರೀಚ್ಯಾದ್ಯಾಸ್ತತ್ರ ಸರ್ವೇ ಮುನೀಶ್ವರಾಃ ॥ ೧೭ ॥

ಆಜಗ್ಮುರ್ದೇವಪಾಂಡ್ಯಸ್ಯ ಮಂದಿರೇ ಮಂಗಳಾಲಯೇ ।
ಬೃಹಸ್ಪತಿಯುತೋ ಬ್ರಹ್ಮಾ ದೇವೋಽಪಿ ಗರುಡಧ್ವಜಃ ॥ ೧೮ ॥

ಮಹೇಂದ್ರಮುಖ್ಯಾ ಗೀರ್ವಾಣಾಸ್ಸಮಾಯಾಂತಿ ಸಹಸ್ರಶಃ ।
ಆಗತೈರ್ಮುನಿಭಿಃ ದೇವೈರ್ದೇವಃಪಾಂಡ್ಯಮಹೀಪತಿಃ ॥ ೧೯ ॥

ಜಾತಕರ್ಮ ತದಾ ಕೃತ್ವಾ ಋಣಾನ್ಮುಕ್ತ ಇವಾಬಭೌ ।
ವರ್ಷಾಕಾಲಾತ್ಯಯೇ ಚಂದ್ರೋ ಮೇಘರಾಶೇರಿವಾಂಬರೇ ॥ ೨೦ ॥

ವಿಪ್ರವರ್ಯಕರಾತ್ ಪ್ರಾಪ್ತದಾನೋದಕವಿಜೃಂಬಣೈಃ ।
ವಿನಾ ವೇಗವತೀಂ ತತ್ರ ನಿಮ್ನಗಾ ಭವತಿ ಕ್ಷಣಾತ್ ॥ ೨೧ ॥

---

೧೭–೨೦. ಋಷ್ಯಶೃಂಗ, ಮರೀಚಿ ಇವರೇ ಮುಂತಾದ ಋಷಿಶ್ರೇಷ್ಠರು ಮಂಗಳಕ್ಕೆ (ಆಧಾರ) ಆಸ್ಪದವಾಗಿರುವ, ಪಾಂಡ್ಯರಾಜನ ಮನೆಗೆ ಬಂದರು. ಬೃಹಸ್ಪತಿಯನ್ನು ಕರೆದುಕೊಂಡು ಬ್ರಹ್ಮನೂ, ವಿಷ್ಣುವೂ ಬಂದನಂತರ ಇಂದ್ರನೇ ಮೊದಲಾದ ದೇವತೆಗಳು ಸಾವಿರಗಟ್ಟಲೆಯಾಗಿ ರಾಜನಮನೆಗೆ ಬಂದು ಸೇರಿದರು. ದೇವದೇವನಾದ ಪಾಂಡ್ಯರಾಜನು ಮುನಿಗಳೂ, ದೇವತೆಗಳೂ ಬಂದನಂತರ ಅವರೊಡನೆ ಶಿಶುವಿಗೆ ಜಾತಕರ್ಮವನ್ನು ಮಾಡಿದನು. ಆ ರಾಜನು ಮಳೆಗಾಲ ಕಳೆದನಂತರ ಅಂತರಿಕ್ಷದಲ್ಲಿ ಚಂದ್ರನು ಮೇಘಗಳಿಂದ ಮುಚ್ಚದೆ ಪ್ರಕಾಶಿಸುವಂತೆ ಋಣತ್ರಯದಿಂದ ಮುಕ್ತನಾದವನ ಹಾಗೆ ಹೊಳೆಯುತ್ತಿದ್ದನು.

೨೧–೨೪. ಆಗ ಮಧುರಾನಗರದಲ್ಲಿ ವೇಗವತೀ ನದಿಗೆ ಬದಲಾಗಿ ಬ್ರಾಹ್ಮಣರಿಗೆ ದಾನಕಾಲದಲ್ಲಿ ಧಾರೆಯಾಗಿ ದಾನಕೊಡುವ ನೀರಿನ ಪ್ರವಾಹವು ಒಂದು ನದಿಯಾಗಿ ಹರಿಯುತ್ತಿತ್ತು. ಶಾಸ್ತ್ರಗಳನ್ನು ತಿಳಿದವರು, ಶುಭವನ್ನು ಹೇಳುವವರು, ಯಾಚಕರು ಇವರೆಲ್ಲರೂ ಆ ನಗರದಲ್ಲಿ ಆ ಕಾಲದಲ್ಲಿ ಬೇರೆಯ ಕಡೆಗೆ ಪ್ರಾರ್ಥನೆ

ಯೇ ಸಮಾಯಾಂತಿ ವಿದ್ವಾಂಸೋ ಯೇ ಚ ಮಂಗಳವಾದಿನಃ ।
ಅರ್ಥಿನಸ್ತು ಯಥಾ ಸರ್ವೇ ನಾನ್ಯತ್ರ ಪ್ರಾರ್ಥಯಂತಿ ಹಿ ॥ ೨೨ ॥

ಪ್ರಯಚ್ಛತಿ ತದಾ ತೇಭ್ಯಃಸ್ವರ್ಣರತ್ನಾಂಬರಾದಿಕಂ ।
ನ್ಯೂನಾಂಗಾಂಧೋರುಗಾತ್ರಾಶ್ಚ ದೀನಾನಾಥಾಶ್ಚ ದುರ್ಗತಾಃ ॥ ೨೩ ॥

ದೇವಪಾಂಡ್ಯಸ್ಯ ಕೃಪಯಾ ಕೃತಾರ್ಥಾಶ್ಚ ಭವಂತಿ ಹಿ ।
ವಿದ್ವದ್ಭಿರ್ಬ್ರಾಹ್ಮಣೈಸ್ಸಾರ್ಧಂ ಮಂತ್ರಿಭಿಶ್ಚ ಪುರೋಹಿತೈಃ ॥ ೨೪ ॥

ನೃಪಾಲೈರ್ದೇವಸಂಘೈಶ್ಚ ಸಂಪ್ರಾಪ್ತೇ ದ್ವಾದಶೇಽಹನಿ ।
ಸ್ವನಾಮಾನುಗುಣಾಭಿಖ್ಯಾ ಮುಗ್ರ ಇತ್ಯಸ್ಯ ಸ ವ್ಯಧಾತ್ ॥ ೨೫ ॥

ರಕ್ಷಾಂ ಬಾಲೋಚಿತಾಂ ಕೃತ್ವಾ ದೇವೋಽಪಿ ಪ್ರಪಿತಾಮಹಃ ।
ಹರಿಣಾ ಗುರುಣಾ ಸಾರ್ಧಂ ಸರ್ವೈರ್ದೇವೈರ್ಗಣೈರಪಿ ॥ ೨೬ ॥

ಸುಂದರೇಶಂ ನಮಸ್ಕೃತ್ಯ ಸಂಪ್ರಹೃಷ್ಟತನೂರುಹಃ ।
ನಿರ್ಯಯೌ ಹಂಸಮಾರುಹ್ಯ ಸರ್ವೇ ಜಗ್ಮುರ್ಯಥಾಗತಂ ॥ ೨೭ ॥

---

ಮಾಡುತ್ತಾ ಹೋಗದಿರುವಂತೆ, ಚಿನ್ನ, ರತ್ನ, ವಸ್ತ್ರ, ಆಭರಣ ಇವುಗಳನ್ನು ರಾಜನು ದಾನಮಾಡಿದನು. ವಿಕಾರವಾದ ಶರೀರವುಳ್ಳವರು, ದೀನರು, ಅನಾಥರು, ಗತಿಯಿಲ್ಲದವರು ಇವರೆಲ್ಲರೂ, ರಾಜನ ದಯೆಯಿಂದ ವಸ್ತ್ರಾಭರಣಾದಿಗಳನ್ನು ಹೊಂದಿ ಕೃತಕೃತ್ಯರಾದರು.

೨೪–೨೭. ದೇವದೇವನಾದ ಪಾಂಡ್ಯರಾಜನು ವಿದ್ವಾಂಸರು. ಮುನಿಗಳು, ಮಂತ್ರಿಗಳು, ಪುರೋಹಿತರು, ರಾಜರು, ದೇವತೆಗಳು ಇವರಿಂದ ಕೂಡಿದವನಾಗಿ ಹನ್ನೆರಡನೆಯ ದಿವಸ ತನ್ನ ಹೆಸರಿಗೆ ಅನುಸಾರವಾಗಿ ಆ ಶಿಶುವಿಗೆ ಉಗ್ರನೆಂದು ನಾಮಕರಣವನ್ನು ಮಾಡಿದನು. ಮುತ್ತಜ್ಜನಾದ ಬ್ರಹ್ಮನೂ ಕೂಡ, ಶಿಶುವಿಗೆ ಉಚಿತವಾದ ರಕ್ಷೆಯನ್ನು ಮಾಡಿದನು. ಅನಂತರದಲ್ಲಿ ಬ್ರಹ್ಮನು, ಬೃಹಸ್ಪತಿ, ವಿಷ್ಣು, ಮತ್ತು ದೇವತೆಗಳು ಇವರೊಡನೆ ಸುಂದರೇಶನಿಗೆ ನಮಸ್ಕಾರಮಾಡಿ, ರೋಮಾಂಚವುಳ್ಳವನಾಗಿ ಹಂಸವನ್ನು ಏರಿ ಹೊರಟನು. ಇವನಂತೆಯೇ ಇತರ ದೇವತೆಗಳೆಲ್ಲರೂ ಈ ನಗರಕ್ಕೆ ಬಂದಹಾಗೆಯೇ ತಮ್ಮ ತಮ್ಮ ವಾಸಸ್ಥಾನಕ್ಕೆ ಹಿಂತಿರುಗಿ ಪ್ರಯಾಣ ಮಾಡಿದರು.

**ಅಹೋ ರೂಪ ಮಹೋತೇಜಸ್ತ್ವಹೋ ಸರ್ವಾಂಗಲಕ್ಷಣಂ ।**
**ಅಹೋ ತಟಾತಕಾಭಾಗ್ಯಾದಾವಿರಾಸೀತ್ಸ್ವಯಂಗುಹಃ ॥ ೨೮ ॥**

**ಏವಂ ಪರಸ್ಪರಂ ಸರ್ವೇ ಸದಾ ಶಂಸಂತಿ ಸಜ್ಜನಾಃ ।**
**ಗ್ರಹಾನ್ನಿಷ್ಕ್ರಮಣೇ ಮಾಸಿ ಚತುರ್ಥೇ ತು ಕೃತೇ ಸತಿ ॥ ೨೯ ॥**

**ಅನ್ನಪ್ರಾಶನಮಬ್ದಾರ್ಧೇ ಚೂಡಾಕರ್ಮ ದ್ವಿವತ್ಸರೇ ।**
**ಕೃತ್ವಾ ತೇಜೋಭಿವೃಧ್ಯರ್ಥಂ ಪಂಚಮೇಬ್ದೇ ವ್ರತಂ ದದೌ ॥ ೩೦ ॥**

**ವೇದಾದಿವಿದ್ಯಾಜಾತಂ ಯತ್ಸಾಕ್ಷಿಮಾತ್ರಾದ್ಗುರೋರ್ಮುಖಾತ್ ।**
**ಸಕೃತ್ಶ್ರವಣತಸ್ತಚ್ಚ ಸರ್ವಂ ಜಗ್ರಾಹ ಶಕ್ತಿಮಾನ್ ॥ ೩೧ ॥**

**ಕಲಾನಾಂ ಚ ಚತುಷ್ಷಷ್ಟಿಂ ಸರ್ವಲೋಕಹಿತಪ್ರದಾಂ ।**
**ಅಸ್ತ್ರಶಸ್ತ್ರಾಂ ಚ ವಿವಿಧಾಂ ಸ್ವಯಮಗ್ರಾಹಯಚ್ಛಿವಃ ॥ ೩೨ ॥**

---

೨೮–೩೦. ಮಗುವಿನ ಆಕಾರವೂ, ತೇಜಸ್ಸೂ, ಆಶ್ಚರ್ಯಕರವಾಗಿದ್ದಿತು. ಮಗುವಿನ ಶರೀರವು ಎಲ್ಲಾ ಅವಯವದಲ್ಲಿಯೂ ಲಕ್ಷಣವಾಗಿರುತ್ತಾ ಆಶ್ಚರ್ಯವನ್ನುಂಟುಮಾಡುತ್ತಿರುವುದು. ತಟಾತಕಾದೇವಿಯ ಪುಣ್ಯದಿಂದ ಕುಮಾರಸ್ವಾಮಿಯೇ ಸಾಕ್ಷಾತ್ತಾಗಿ ಈ ಮಗುವಿನ ರೂಪದಿಂದ ಅವತರಿಸಿರುವನು, ಎಂದು ಸತ್ಪುರುಷರು ಆ ಮಧುರಾನಗರದಲ್ಲಿ ಪರಸ್ಪರವಾಗಿ ಮಾತನಾಡುತ್ತಿದ್ದರು. ಆ ಮಗುವಿಗೆ ನಾಲ್ಕನೆಯ ತಿಂಗಳಿನಲ್ಲಿ ಉಪನಿಷ್ಕ್ರಮಣವು (ಹುಟ್ಟಿದ ಮನೆಯಿಂದ ಬೇರೆಯ ಕಡೆಗೆ ಕರೆದುಕೊಂಡು ಹೋಗುವುದು) ನಡೆಯಿತು. ಆರನೆಯ ತಿಂಗಳಿನಲ್ಲಿ ಅನ್ನಪ್ರಾಶನವು ನಡೆಯಿತು. ಎರಡು ವರ್ಷ ಕಳೆದನಂತರ ಚೂಡಾಕರ್ಮವು ನೆರವೇರಿತು. ಆ ಬಾಲಕನಿಗೆ ತೇಜಸ್ಸು ವೃದ್ಧಿಯಾಗುವುದಕ್ಕಾಗಿ ಐದನೆಯ ವರ್ಷದಲ್ಲಿಯೇ ಉಪನಯನವಾಯಿತು.

೩೧–೩೪. ರಾಜಕುಮಾರನಾದ ಉಗ್ರನು ವೇದವೇ ಮೊದಲಾದ ಎಲ್ಲಾ ವಿದ್ಯೆಗಳನ್ನೂ ಗುರುವಿನ ಮುಖದಿಂದ ಉಪದೇಶವಾಗಬೇಕೆಂಬ ರೂಢಿಯಂತೆ, ಒಂದು ಸಾರಿ ಕೇಳಿದ ಮಾತ್ರದಿಂದಲೇ ತನ್ನ ಸಾಮರ್ಥ್ಯದಿಂದ ಕಲಿತುಕೊಂಡನು. ಶಿವನು ಲೋಕಗಳೆಲ್ಲಕ್ಕೂ ಹಿತವನ್ನು ಉಂಟುಮಾಡುವ ಅರವತ್ತು ನಾಲ್ಕು ಕಲೆಗಳನ್ನೂ ಅನೇಕ ವಿಧವಾದ, ಅಸ್ತ್ರವಿದ್ಯೆ, ಮತ್ತು ಶಸ್ತ್ರವಿದ್ಯೆ ಇವುಗಳನ್ನು ತಾನೇ ಹೇಳಿಕೊಟ್ಟನು. ಉಗ್ರನೂ ಕೂಡ ವಿನಯವೇ ಮೊದಲಾದ ಸದ್ಗುಣಗಳಿಂದಲೂ,

ಉಗ್ರೋಽಪಿ ವಿನಯಾದ್ಯೈಶ್ಚ ಸದ್ಗುಣೈಃ ಪಿತೃಭಕ್ತಿತಃ ।
ಸಮಂತ್ರಂ ಚ ಧನುರ್ವೇದಂ ಸರ್ವಸ್ವಮತಿದುರ್ಲಭಂ ॥ ೩೩ ॥

ಲಬ್ಧ್ವಾ ಪಾಶುಪತಂ ಚಾಸ್ತ್ರಮಭೂದತುಲವೀರ್ಯವಾನ್ ।
ಜನ್ಮತಸ್ತ್ವಷ್ಟಮಾದ್ವರ್ಷಾದಂತರಾ ಮತಿಮತ್ತರಃ ॥ ೩೪ ॥

ಅಧೀತಸರ್ವವಿದ್ಯಶ್ಚ ಸರ್ವಜ್ಞೋಽಭೂಚ್ಛಿವಾತ್ಮಜಃ ।
ಪಿತ್ರೋಸ್ಸೇವಾಂ ಚ ನಿರತಂ ಕೃತ್ವಾ ಚೋಗ್ರಸ್ಸಮಾಹಿತಃ ॥ ೩೫ ॥

ತಯೋಃ ಕೃಪಾದೃಗ್ವಿಷಯೋ ಮಹಾಬಲಪರಾಕ್ರಮಃ ।
ರಾಜ್ಞಾಂ ಕುಮಾರೈಸ್ಸಾರ್ಧಂ ಚ ಕ್ರೀಡತ್ಯತಿಪರಾಕ್ರಮೈಃ ॥ ೩೬ ॥

ಶ್ರೀಮತ್ಸುಂದರಪಾಂಡ್ಯೇಶಕುಮಾರಃ ಕುಂಕುಮಪ್ರಭಃ ।
ಕಾಂತಾನಾಂ ಕಮನೀಯಂ ಚ ಯೌವನಂ ಪ್ರಾಪ ಕಾಲತಃ ॥ ೩೭ ॥

---

ತಂದೆಯಲ್ಲಿ ಭಕ್ತಿಯಿಂದಲೂ, ಮಂತ್ರಸಹಿತವಾಗಿರುವ ಧನುರ್ವೇದ ವೆಲ್ಲವನ್ನೂ ಕಲಿತುಕೊಂಡನು. ಯಾರೂ ಹೊಂದಲು ಅಶಕ್ಯವಾಗಿರುವ ಪಾಶುಪತಾಸ್ತ್ರವನ್ನು ಹೊಂದಿ, ಹೋಲಿಕೆಯಿಲ್ಲದಿರುವ ಪರಾಕ್ರಮಶಾಲಿಯಾಗಿದ್ದನು. ಶಿವಪುತ್ರನಾದ ಉಗ್ರನು ಹುಟ್ಟಿದಕಾಲ ಮೊದಲುಗೊಂಡು ಎಂಟನೆಯ ವರ್ಷ ತುಂಬುವುದರ ವಳಗೆ ಎಲ್ಲಾ ವಿದ್ಯೆಗಳನ್ನೂ ಚೆನ್ನಾಗಿ ಕಲಿತುಕೊಂಡು ಸರ್ವಜ್ಞನೆನಿಸಿಕೊಂಡನು.

೩೫–೩೬. ರಾಜಪುತ್ರನಾದ ಉಗ್ರನು ತನ್ನ ಮಾತಾಪಿತೃಗಳ ಸೇವೆಯಲ್ಲಿ ನಿರತನಾಗಿ ಸಂತೋಷದಿಂದ ಇರುತ್ತಾ ಅವರ ಕಟಾಕ್ಷಕ್ಕೆ ಪಾತ್ರನಾಗಿ ಬಹಳ ಶಕ್ತಿಯೂ ಪರಾಕ್ರಮವೂ ಉಳ್ಳವನಾಗಿ, ಶೂರರಾದ ರಾಜಕುಮಾರರೊಡನೆ ವಿಹಾರಮಾಡುತ್ತಾ ಇರುವನು.

೩೭–೪೦ ಸುಂದರಪಾಂಡ್ಯರಾಜನ ಪುತ್ರನಾದ ಉಗ್ರನು ಕೊಂಚಕಾಲ ದಲ್ಲಿಯೇ ಕೆಂಪಾದ ಕಾಂತಿಯುಳ್ಳವನಾಗಿ ಸುಂದರಿಯರಿಗೆ ಮೋಹಕವಾದ ಯೌವನ ವನ್ನು ಹೊಂದಿದನು. ಯೌವನವನ್ನು ಹೊಂದಿದ ಕಾಲದಲ್ಲಿ ಆ ರಾಜ ಕುಮಾರನ ಪಾದಗಳು ತೇಜಸ್ಸನ್ನು ಹೊಂದಿ ಪ್ರಕಾಶಿಸುತ್ತಿದ್ದವು. ಜಂಘಾ

ರುಚಿರಾಭಾಂಘ್ರಿಯುಗಳಂ ವೃತ್ತಜಂಘಂ ಸುಜಾನುಕಂ ।
ಹಸ್ತಿಹಸ್ತಸಮಾನೋರುಂ ಚಿತ್ರವೃತ್ತಸುಮಧ್ಯಮಮ್ ॥ ೩೮ ॥

ಶಾತೋದರಮುದಾರಾಂಗಂ ಪರಿಘಾದೀರ್ಘಬಾಹುಕಮ್ ।
ಕವಾಟ ಸದೃಶೋರಸ್ಕಂ ಕಂಬು ಸನ್ನಿಭ ಕಂಧರಮ್ ॥ ೩೯ ॥

ಮಂದರಾದ್ರಿಸಮಾನಾಂಸಂ ಸುಂದರಾಯತಲೋಚನಮ್ ।
ಇಂದಿರಾವಾಸವಕ್ತ್ರಾಬ್ಜಂ ಕಂಧರಾಭಕಚೋಜ್ವಲಮ್ ॥ ೪೦ ॥

ಸರ್ವಾವಯವಶೋಭಾಢ್ಯಂ ಸೌಕುಮಾರ್ಯನಿಕೇತನಂ ।
ಉಗ್ರಂ ತಂ ಸರ್ವಕೃತ್ಯಾರ್ಹಂ ಸಮಾಲೋಕ್ಯ ಮಹಾಪ್ರಭುಃ ॥ ೪೧ ॥

ತತಃ ಪರೀಕ್ಷಯಾಮಾಸ ದ್ವಾತ್ರಿಂಶಲ್ಲಕ್ಷಣಾನ್ಯಪಿ ।
ಪಂಚದೀರ್ಘಂ ಚತುರ್ಹ್ರಸ್ವಂ ಪಂಚಸೂಕ್ಷ್ಮಂ ಷಡುನ್ನತಂ ॥ ೪೨ ॥

---

ಪ್ರದೇಶವು ದುಂಡಾಗಿ ಇತ್ತು. ಜಾನುಗಳೆರಡೂ ಮನೋಹರವಾಗಿ ಇದ್ದವು. ಪರಿಘಾಯುಧದಂತೆ ಭುಜಗಳು ದೀರ್ಘವಾಗಿದ್ದವು. ಎದೆಯು ಕದದಂತೆ ವಿಸ್ತಾರವಾಗಿದ್ದಿತು. ಕುತ್ತಿಗೆಯು ಶಂಖದಂತೆ ಇದ್ದಿತು. ಹೆಗಲು ಮಂದರಪರ್ವತಕ್ಕೆ ಸಮವಾಗಿ ಇತ್ತು. ಕಣ್ಣುಗಳು ಸುಂದರವಾಗಿ ವಿಸ್ತಾರವಾಗಿ ಇದ್ದವು. ಮುಖವು ಕಮಲದಂತೆ ಸುಂದರವಾಗಿ ಲಕ್ಷ್ಮಿಯು ವಾಸಸ್ಥಾನವಾಗಿತ್ತು. ತಲೆಯ ಕೂದಲು ನೀರು ತುಂಬಿರುವ ಮೇಘದಹಾಗೆ ಪ್ರಕಾಶಿಸುತ್ತಿತ್ತು.

೪೧-೪೨. ಮಹಾಪ್ರಭುವಾದ ಸುಂದರೇಶ್ವರನು ಎಲ್ಲಾ ಅವಯವಗಳ ಕಾಂತಿಯಿಂದ ಕೂಡಿ, ಸೌಕುಮಾರ್ಯದಿಂದ ಒಪ್ಪುತ್ತಿರುವ ಪುತ್ರನಾದ ಉಗ್ರನು, ಎಲ್ಲಾ ಕೆಲಸಗಳನ್ನೂ ನೆರವೇರಿಸಲು ಅರ್ಹನಾಗಿರುವುದನ್ನು ನೋಡಿ, ಚಕ್ರವರ್ತಿಯಾಗುವವನಿಗೆ ಶರೀರದಲ್ಲಿ ಇರಬೇಕಾದ ಮೂವತ್ತೆರಡು ಲಕ್ಷಣಗಳನ್ನು ಪರೀಕ್ಷೆ ಮಾಡಿದನು. ಶರೀರದಲ್ಲಿ ಐದು ಅವಯವಗಳು ಉದ್ದವಾಗಿರಬೇಕು. ನಾಲ್ಕು ಅವಯವಗಳು ಹ್ರಸ್ವವಾಗಿರಬೇಕು. ಐದು ಪ್ರದೇಶಗಳು ಸ್ಥೂಲವಾಗಿರಬೇಕು. ಆರು ಭಾಗಗಳು ಎತ್ತರವಾಗಿರಬೇಕು. ಏಳು ಭಾಗಗಳು ಕೆಂಪಗಿರಬೇಕು. ಮೂರು ಅವಯವಗಳು ಗಂಭೀರವಾಗಿರತಕ್ಕದ್ದು. ಎರಡು ಭಾಗಗಳು ವಿಸ್ತಾರವಾಗಿರಬೇಕು- ಶರೀರದ ಲಕ್ಷಣವು ಹೀಗಿದ್ದರೆ ಪ್ರಶಸ್ತವು.

ಸಪ್ತರಕ್ತಂ ತ್ರಿಗಂಭೀರಂ ದ್ವಿವಿಸ್ತೀರ್ಣಂ ಪ್ರಶಸ್ಯತೆ ।
ಬಾಹೂ ನೇತ್ರಾಂತರಂ ಚೈವ ಹನುರ್ನಾಸಾತಥೈವ ಚ ॥ ೪೩ ॥

ಸ್ತನಯೋರಂತರಂ ಚೈವ ಪಂಚ ದೀರ್ಘಮಿಹಾಸ್ತಿ ಹಿ
ಜಿಹ್ವಾಪ್ರಜನನಂ ಪೃಷ್ಠಂ ಜಂಘಾ ಚ ಹ್ರಸ್ವಮುತ್ತಮಂ ॥ ೪೪ ॥

ಹ್ರಸ್ವಾನಿ ಚಾಸ್ಮಿಂಶ್ಚತ್ವಾರಿ ತಸ್ಮಾದತ್ಯಂತಭಾಗ್ಯವಾನ್ ।
ಸೂಕ್ಷ್ಮಾಣ್ಯಂಗುಳಿಪರ್ವಾಣಿ ಕೇಶದಂತನಖತ್ವಚಃ ॥ ೪೫ ॥

ಪಂಚ ಸೂಕ್ಷ್ಮಾಣಿ ಸಂತ್ಯಸ್ಮಿನ್ ದೀರ್ಘಜೀವೀ ಭವೇದಯಂ ।
ಕಕ್ಷಕುಕ್ಷ್ಯಳಿಕಂ ಸ್ಕಂಧಃ ಘ್ರಾಣಂ ವಕ್ಷಃ ಷಡುನ್ನತವ್ ॥ ೪೬ ॥

ಬಾಲೇಸ್ಮಿನ್ ದೃಶ್ಯತೆ ಸಮ್ಯಕ್‌ತಸ್ಮಾದೈಶ್ವರ್ಯಭಾ ಗ್ಭವೇತ್
ಪಾಣಿಪಾದತಲೇ ಚೈವ ನೇತ್ರಾಂತೇ ಚ ನಖಾನಿ ಚ ॥ ೪೭ ॥

ತಾಲುಜಿಹ್ವಾಧರೋಷ್ಠಂ ಚ ರಕ್ತಮಸ್ಮಿನ್ ಸುಖಪ್ರದಂ ।
ಸ್ವರಸ್ಸತ್ವಂ ಚ ನಾಭಿಶ್ಚ ತ್ರಿಗಂಭೀರಮಿಹಾಸ್ತಿ ಹಿ ॥ ೪೮ ॥

---

೪೩–೪೭. ಕುಮಾರನಾದ ಉಗ್ರನ ಶರೀರದಲ್ಲಿ ತೋಳುಗಳು, ಕಣ್ಣುಗಳ ಮಧ್ಯಭಾಗ, ದವಡೆ, ಮೂಗು, ಸ್ತನಗಳ ಮಧ್ಯಭಾಗ ಇವುಗಳು ಐದೂ ಉದ್ದವಾಗಿ ಇರುತ್ತವೆ. ನಾಲಗೆ, ಗುಹ್ಯೇಂದ್ರಿಯ, ಪೃಷ್ಠಪ್ರದೇಶ, ಮೊಳಕಾಲು ಇವುಗಳು ನಾಲ್ಕು ಹ್ರಸ್ವವಾಗಿರುವುವು. ಇವು ನಾಲ್ಕು ಹ್ರಸ್ವವಾಗಿರುವುದರಿಂದ ಇವನು ಬಹಳ ಅದೃಷ್ಟಶಾಲಿಯಾಗಿರುವನು. ಬೆರಳುಗಳ ಗಿಣ್ಣುಗಳು, ಕೂದಲು, ಹಲ್ಲು, ಉಗುರು, ಚರ್ಮ, ಇವುಗಳು ಸೂಕ್ಷ್ಮವಾಗಿರುವ ಕಾರಣ ಇವನು ಬಹಳಕಾಲ ಜೀವಿಸಿರುವನು. ತೋಳಿನ ಮೂಲಭಾಗ, (ಕಂಕುಳು) ಹೊಟ್ಟೆ, ಮುಂಗುರುಳು, ಹೆಗಲು, ಮೂಗು, ವಕ್ಷಸ್ಸಿನ ಪ್ರದೇಶ (ಎದೆ) ಇವು ಆರೂ ಈ ಹುಡುಗನ ಶರೀರದಲ್ಲಿ ಎತ್ತರವಾಗಿ ಇರುವುದರಿಂದ ಇವನು ಐಶ್ವರ್ಯವಂತನಾಗಿರುವನು. ಕಾಲು, ಕೈಯ್ಯಿ ಇವುಗಳ ಪ್ರದೇಶವು, ಕಣ್ಣಿನ ಕೊನೆಭಾಗ, ಉಗುರುಗಳು, ಅಂಗಳು, ನಾಲಗೆ, ಅಧರೋಷ್ಠ ಇವು ಏಳೂ ಕೆಂಪಾಗಿ ಇರುವದರಿಂದ ಇವನು ಸುಖವುಳ್ಳವನಾಗಿ ಇರುವನು.

೪೮–೫೦. ನಾಭಿಪ್ರದೇಶ, ಧ್ವನಿ, ಮನಸ್ಸು, ಇವು ಮೂರೂ ಗಂಭೀರವಾಗಿ ರುವುವು. ಶಿರಸ್ಸು, ಹಣೆ ಇವೆರಡೂ ವಿಸ್ತಾರವಾಗಿರುವುವು. ಆದ್ದರಿಂದ ಎಲ್ಲಾ

**ಉತ್ತಮಾಂಗಂ ಲಲಾಟಂ ಚ ದ್ವಿವಿಸ್ತೀರ್ಣಮಿಹಾ ಭವೇತ್ ।**
**ಸರ್ವಾಣಿ ಲಕ್ಷಣಾನ್ಯಸ್ಮಿನ್ ಸಂತಿ ಸದ್ಗುಣ ಸಂಯುತೇ ॥ ೪೯ ॥**

**ತಸ್ಮಾತ್ಸಾಮ್ರಾಜ್ಯಪದವೀಮಧಿಗಮ್ಯ ಸ ಜೀವತಿ ।**
**ಇತಿ ನಿಶ್ಚಿತ್ಯ ಮನಸಾ ಮದನಾರಿರಥಾತ್ಮಜಮ್ ॥ ೫೦ ॥**

**ಸರ್ವಲಕ್ಷಣಸಂಪನ್ನಂ ಸರ್ವಸದ್ಗುಣ ಸಂಯುತಮ್ ।**
**ಶಾಂತಂ ನಿರ್ಮಲಚಿತ್ತಂ ಚ ನೀತಿಶಾಸ್ತ್ರವಿಶಾರದಂ ॥ ೫೧ ॥**

**ದಯಯಾ ಪೂರ್ಣಹೃದಯಂ ಜಗದಾಹ್ಲಾದಕಾರಣಂ ।**
**ಧರ್ತುಂ ಮಹಾಂತಂ ಭೂಭಾರಂ ಭುಜೇನಾಯತ್ನತಃ ಕ್ಷಮಂ ॥ ೫೨ ॥**

**ವಿಲೋಕ್ಯ ಭಗವಾನೀಶಸ್ಸರ್ವಲೋಕೈಕನಾಯಕಃ ।**
**ಪೂರ್ಣಂ ವೈವಾಹಿಕಂ ಕರ್ಮ ನಿರ್ವೃತ್ಯ ಚ ತತಃ ಪರಂ ॥ ೫೩ ॥**

---

ಲಕ್ಷಣಗಳೂ ಇರುತ್ತವೆಯಾಗಿ ಉತ್ತಮವಾದ ಲಕ್ಷಣಗಳಿಂದ ಕೂಡಿದ ಇವನು ಚಕ್ರವರ್ತಿಪದವಿಯನ್ನು ಹೊಂದಿ ಸುಖವಾಗಿ ಬದುಕುವನೆಂದು ಮದನ ವೈರಿಯಾದ ಸುಂದರೇಶ್ವರನು ತನ್ನ ಮಗನ ಶರೀರದಲ್ಲಿರುವ ಲಕ್ಷಣಗಳಿಂದ ಸ್ಥಿತಿಗತಿಗಳನ್ನು ಹೀಗೆ ನಿಶ್ಚಯಮಾಡಿದನು.

೫೧–೫೨. ರಾಜಪುತ್ರನಾದ ಉಗ್ರನು ಎಲ್ಲಾ ವಿಧವಾದ ಶುಭಲಕ್ಷಣಗಳಿಂದ ಕೂಡಿರುವನು. ಎಲ್ಲಾ ವಿಧವಾದ ಉತ್ತಮಗುಣಗಳಿಂದ ಕೂಡಿ, ಉಪಶಾಂತನಾಗಿ ರುವನು. ನಿರ್ಮಲವಾದ ಮನಸ್ಸಿನಿಂದ, ನೀತಿಶಾಸ್ತ್ರದಲ್ಲಿ ನಿಪುಣನಾಗಿ ಎಲ್ಲರಲ್ಲಿಯೂ ದಯೆಯಿಂದ ಇರುತ್ತಾ ಜಗತ್ತನ್ನು ಸಂತೋಷಗೊಳಿಸುವುದರಲ್ಲಿ ಕಾರಣನಾಗಿರುವು ದರಿಂದ, ದೊಡ್ಡದಾದ ಭೂಪರಿಪಾಲನೆಯನ್ನು ಲೀಲೆಯಿಂದ ನಿರ್ವಹಿಸಲು ಸಮರ್ಥ ನಾಗಿರುವನು ಎಂದು ಸುಂದರೇಶ್ವರನು ತಿಳಿದುಕೊಂಡನು.

೫೩–೫೫. ಲೋಕಗಳೆಲ್ಲಕ್ಕೂ ಒಬ್ಬನೇ ರಾಜನಾಗಿರುವ ಪೂಜ್ಯನಾದ ಸುಂದರೇಶ್ವರನು, ತನ್ನ ಪುತ್ರನಾದ ಉಗ್ರನಿಗೆ ಮೊದಲು ವಿವಾಹವನ್ನು ನೆರವೇರಿಸಿ, ಅನಂತರದಲ್ಲಿ ಇವನಿಗೆ ರಾಜ್ಯದ ಪಟ್ಟಾಭಿಷೇಕವನ್ನು ಮಾಡುವುದು, ಎಂದು ಮನ ಸ್ಸಿನಲ್ಲಿ ನಿಶ್ಚಯ ಮಾಡಿಕೊಂಡು, ಮಂತ್ರಿಗಳೊಡನೆ ಮೊದಲು ಅವನ ವಿವಾಹವನ್ನು

ಅಯಂ ರಾಜ್ಯಾಭಿಷೇಕಾರ್ಹಇತಿ ನಿಶ್ಚಿತ್ಯ ಮಾನಸೇ ।
ತತಸ್ಸ ಚಿವಸಂಘ್ಸೈಶ್ಚ ಪುತ್ರೋದ್ವಾಹಂವಿಚಿಂತಯತ್ ॥ ೫೪ ॥

ಕಥಿತ್ರೈಕಾದಶೀ ಲೀಲಾ ಪುತ್ರ ಸಂಪತ್ಪ್ರದಾಯಿನೀ ।
ಶ್ರುತಾ ಸೌಭಾಗ್ಯಜನನೀ ಹ್ಯಾಯುರಾರೋಗ್ಯದಾಯಿನೀ ॥ ೫೫ ॥

ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ಉಗ್ರಜನನಂ ನಾಮ
ತ್ರಯೋದಶೋಽಧ್ಯಾಯಃ

---

ಮಾಡಲು ಆಲೋಚಿಸಿದನು. ಕೇಳಿದವರಿಗೆ ಪುತ್ರಸಂಪತ್ತನ್ನೂ, ಶ್ರೇಯಸ್ಸು, ಆಯುರಾರೋಗ್ಯಗಳನ್ನೂ ಕೊಡುವ ಹನ್ನೊಂದನೆಯ ಲೀಲೆಯನ್ನು ನಾನು ಹೇಳಿರುವೆನು.

ಸಂಪದ್ಯುಕ್ತವಾದ ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯ
ಮಾಹಾತ್ಮ್ಯೆಯಲ್ಲಿ ಉಗ್ರ ಜನನವೆಂದು ಹೆಸರುಳ್ಳ
ಹದಿನೈದನೆಯ ಅಧ್ಯಾಯವು ಮುಗಿದುದು.

|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಹಾ ಲಾ ಸ್ಯ ಮಾ ಹಾ ತ್ಮ್ಯಂ



## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ

## ಷೋಡಶೋಽಧ್ಯಾಯಃ

---

**॥ ಅಗಸ್ತ್ಯ ಉವಾಚ ॥**

**ವಲಯಾದ್ಯಾಯುಧಾನಾಂ ಚ ಪ್ರದಾನಂ ಚ ಯಯಾ ಕರೋತ್ ।**
**ಉಗ್ರಾಯೋಗ್ರಶ್ಚ ತಾಂ ಲೀಲಾಂ ವಕ್ಷ್ಯೇಽಹಂ ಮುನಿಪುಂಗವಾಃ ॥ ೧ ॥**

**ಅಥ ಸಂಕಲ್ಪಸಿದ್ಧೇನ ಮಧುರಾನಾಯಕೇನ ಚ ।**
**ಚಿಂತಿತೇ ಸತಿ ಪುತ್ರಸ್ಯ ವೈವಾಹಿಕಮಹೋತ್ಸವೇ ॥ ೨ ॥**

**ಸೋಮಶೇಖರಭೂಪಾಲಸ್ಸೂರ್ಯವಂಶಶಿರೋಮಣಿಃ**
**ಕಲ್ಯಾಣನಗರೀನಾಥಶ್ಶಂಭು ಧ್ಯಾನಪರಾಯಣಃ ॥ ೩ ॥**

---

### ಹದಿನಾರನೆಯ ಅಧ್ಯಾಯವು.

೧–೫. ಅಗಸ್ತ್ಯಋಷಿಯು ಹೇಳಿದನು:—ಉಗ್ರನೆಂದು ಹೆಸರುವಾಸಿಯಾಗಿರುವ ಪರಮೇಶ್ವರನು ತನ್ನ ಪುತ್ರನಾದ ಉಗ್ರನಿಗೆ ವಲಯವೇ ಮೊದಲಾದ ಆಯುಧಗಳನ್ನು ಅನುಗ್ರಹಿಸಿದ ಲೀಲೆಗಳನ್ನು ಹೇಳುವೆನು. ಮುನಿಶ್ರೇಷ್ಠರೇ ನೀವೆಲ್ಲರೂ ಕೇಳಿರಿ. ಮಧುರಾಪುರಿಗೆ ಅಧಿಪನಾದ ಸುಂದರೇಶ್ವರನು ತನ್ನ ಪುತ್ರನ ವಿವಾಹವನ್ನು ನೆರವೇರಿಸಲು ನಿಶ್ಚಯ ಮಾಡಿದನು. ಆ ಕಾಲದಲ್ಲಿ ಸೂರ್ಯವಂಶಕ್ಕೆ ಉತ್ತಮವಾದ ರತ್ನದಂತಿರುವ ಸೋಮಶೇಖರನೆಂಬ ರಾಜನು ಕಲ್ಯಾಣನಗರೀ ಎಂಬ ಪಟ್ಟಣದಲ್ಲಿ

ಅತ್ಯುಗ್ರತಪಸಾ ಲಬ್ಧಾಂ ಸರ್ವಲಕ್ಷಣಸತ್ವನಿಂ ।
ಕನ್ಯಾಂ ಕಾಂತಿಮತೀಂ ನಾಮ್ನಾ ಮಹಾಲಕ್ಷ್ಮೀ ಮಿವಾಪರಾಂ ॥ ೪ ॥

ಶಂಭುನಾ ಚೋದಿತಸ್ಸ್ವಪ್ನೇ ವಿಮಾನಮಧಿರೋಹ್ಯ ಚ ।
ಮನೋವೇಗಾತ್‌ಸಮಾಯಾತೋ ಮಧುರೇ ಮಧುರಾಪುರೇ ॥ ೫ ॥

ಹಾಲಾಸ್ಯೇಶಾಜ್ಞಯಾ ಸದ್ಯ ಆಗತಂ ಸೋಮಶೇಖರಂ ।
ಶೃತ್ವಾ ವಿಸ್ಮಯಸಂಯುಕ್ತಾಸ್ಸಚಿವಾ ಅಭವಂಸ್ತದಾ ॥ ೬ ॥

ಅಥಾ ಭಿಮುಖಮಾಸಾದ್ಯ ಮಂತ್ರಿಣಸ್ಸ್ವಾಗತಾದಿಭಿಃ ।
ಉಪಚರ್ಯ ಸುಸಂತೋಷ್ಯ ಮಧುರೈರ್ವಚನೈರಪಿ ॥ ೭ ॥

ತಂ ನೃಪಂ ಪ್ರಾಪಯಾಮಾಸುರ್ದೇವಪಾಂಡ್ಯಸ್ಯ ಸನ್ನಿಧಿಂ ।
ಸಿಂಹಾಸನೇ ನಿವಿಷ್ಟಂ ತಂ ದೇವತಾನಾಂ ಚ ದೈವತಂ ॥ ೮ ॥

---

ರಾಜ್ಯಭಾರ ಮಾಡುತ್ತಿದ್ದನು. ಅವನು ಶಿವನ ಧ್ಯಾನದಲ್ಲಿ ನಿರತನಾಗಿರುವವನು. ಅವನು ತಪಸ್ಸನ್ನು ಮಾಡಿ, ಎಲ್ಲಾ ಲಕ್ಷಣಗಳಿಂದ ಕೂಡಿರುವ ಕಾಂತಿಮತೀ ಎಂದು ಹೆಸರುಳ್ಳ ಮಗಳನ್ನು ಪಡೆದಿದ್ದನು. ಆ ಕನ್ಯೆಯು ಮಹಾಲಕ್ಷ್ಮಿಯ ಹಾಗೆ ಇದ್ದಳು.

೫-೬. ಸೋಮಶೇಖರ ಭೂಪಾಲನಿಗೆ ಸ್ವಪ್ನದಲ್ಲಿ ಪರಮೇಶ್ವರನು ಬಂದು “ ನೀನು ಮಧುರಾಪುರಕ್ಕೆ ಹೋಗು ” ಎಂದು ಪ್ರೇರಿಸಿದಂತಾಗಲು, ಆ ರಾಜನು ವಿಮಾನದಲ್ಲಿ ಕುಳಿತುಕೊಂಡು, ಮಧುರಾನಗರಕ್ಕೆ ಮನೋವೇಗದಿಂದ ಬಂದನು. ಹಾಲಾಸ್ಯೇಶ್ವರನ ಅಪ್ಪಣೆಯಂತೆ ವಿವಾಹ ಮಹೋತ್ಸವವನ್ನು ನೆರವೇರಿಸಲು, ನಿಶ್ಚಯ ಮಾಡಿದ ಕ್ಷಣಕ್ಕೆ ಸರಿಯಾಗಿ ಸೋಮಶೇಖರರಾಜನು ಬಂದಿರುವುದನ್ನು ಕೇಳಿ ಮಂತ್ರಿಗಳೆಲ್ಲರೂ ಆಶ್ಚರ್ಯಪಟ್ಟರು.

೭-೧೦. ಸುಂದರೇಶ್ವರರಾಜನ ಮಂತ್ರಿಗಳೆಲ್ಲರೂ ಸೋಮಶೇಖರರಾಜನನ್ನು ಸ್ವಾಗತಾದಿಗಳಿಂದ ಸತ್ಕರಿಸಿ, ಉಪಚಾರಗಳನ್ನು ಹೇಳಿ, ಸಂತೋಷದಿಂದಲೂ ಮೃದುವಾದ ಮಾತುಗಳಿಂದಲೂ, ಅವನನ್ನು ಸಂತೋಷಪಡಿಸಿ, ಪಾಂಡ್ಯರಾಜನಾದ ದೇವದೇವನ ಸಮೀಪಕ್ಕೆ ಕರೆದುಕೊಂಡು ಬಂದರು. ಆಗ ಸುಂದರಪಾಂಡ್ಯರಾಜನು ಸಭೆಯಲ್ಲಿ ಸಿಂಹಾಸನದಲ್ಲಿ ಕೂತುಕೊಂಡಿದ್ದನು. ಆ ರಾಜನು ದೇವತೆಗಳಿಗೂ ದೇವನಾಗಿದ್ದನು. ಪ್ರಾಣಿಗಳಿಗೆ ಯಾವಾಗಲೂ ಅವರವರ ಇಷ್ಟಗಳನ್ನು ನೆರವೇರಿಸುತ್ತಾ

ಅಭೀಷ್ಟಮಖಿಲಂ ದಾತುಮುದ್ಯುಕ್ತಂ ಜನ್ಮಿನಾಂ ಸದಾ ।
ಸತ್ಯಂ ವಿಜ್ಞಾನಮಾನಂದಂ ಪರಂ ಬ್ರಹ್ಮ ಪರಾತ್ಪರಂ ॥ ೯ ॥

ಪರಂಜ್ಯೋತಿಃ ಪರಶಿವಂ ಪರವಸ್ತು ಪರಾಮೃತಂ ।
ಇತಿ ವೇದಶಿರೋಭಿಶ್ಚ ಸಂಗೀತಂ ಪರಮೇಶ್ವರಂ ॥ ೧೦ ॥

ಸರ್ವಾವಯವಶೋಭಾಢ್ಯಂ ಸರ್ವಾಭರಣಭೂಷಿತಂ ।
ಶ್ರೀಮದ್ಧಾಲಾಸ್ಯನಾಥಂ ತಂ ರಾಜವೇಷಧರಂ ಮುದಾ ॥ ೧೧ ॥

ದೃಷ್ಟ್ವಾ ಸುಂದರಪಾಂಡ್ಯೇಶಂ ಲೋಚನಾನಾಂ ಮಹೋತ್ಸವಂ ।
ಸೌವರ್ಣೈಃ ಪುಷ್ಪಜಾಲೈಶ್ಚ ನವರತ್ನೈರನರ್ಘ್ಯಕೈಃ ॥ ೧೨ ॥

ಸಂಪೂಜ್ಯ ಚರಣೌ ತಸ್ಯ ಪ್ರಣನಾಮ ಮಹೀಪತಿಃ ।
ತಮುತ್ಥಾಪ್ಯ ಸಮಾಲಿಂಗ್ಯ ಭಕ್ತಭಕ್ತೋ ಮಹೇಶ್ವರಃ ॥ ೧೩ ॥

---

ಅನುಗ್ರಹವನ್ನು ಮಾಡುತ್ತಿದ್ದನು. "ಈ ರಾಜನು ಪರಮೇಶ್ವರನು. ಸತ್ಯ ಜ್ಞಾನ ರೂಪದಿಂದ ಇರುವ ಪರಶಿವನು. ಎಲ್ಲಕ್ಕಿಂತಲೂ ಶ್ರೇಷ್ಠನಾದ ಪರಂಜ್ಯೋತಿ ಸ್ವರೂಪ ದಿಂದ ಇರುವ ಪರಬ್ರಹ್ಮನು. ಅಮೃತರೂಪದಿಂದ ಇರುವ ಪರವಸ್ತುವು" ಎಂದು ಉಪನಿಷತ್ತುಗಳಲ್ಲಿ ಪ್ರಸಿದ್ಧವಾಗಿರುವದು.

೧೧-೧೪. ಹೀಗೆ ಇರುವ ಮಹಿಮೆಯುಳ್ಳ ಎಲ್ಲಾ ಅವಯವಗಳ ಕಾಂತಿ ಯಿಂದ ಪ್ರಕಾಶಿಸುತ್ತಿರುವ ಮತ್ತು ಎಲ್ಲಾ ವಿಧವಾದ ಆಭರಣಗಳನ್ನು ಧರಿಸಿಕೊಂಡು ಇರುವ ಹಾಲಾಸ್ಯನಾಥನೇ ಸಂತೋಷದಿಂದ ಸುಂದರಪಾಂಡ್ಯರಾಜನ ವೇಷವನ್ನು ಧರಿಸಿ, ನೋಡುವವರಿಗೆ ಆನಂದವನ್ನುಂಟುಮಾಡುತ್ತಿದ್ದನು. ಸೋಮಶೇಖರ ರಾಜನು, ಪಾಂಡ್ಯದೇಶದ ರಾಜನಾದ ಸುಂದರೇಶ್ವರನನ್ನು ನೋಡಿ, ಚಿನ್ನದ ಹೂವು ಗಳು ಮತ್ತು ನವರತ್ನಗಳಿಂದ ಅವನ ಪಾದಗಳನ್ನು ಪೂಜಿಸಿ (ನಮಸ್ಕರಿಸಿದನು) ನೆಲದಮೇಲೆ ಕ್ರಮವಾಗಿ ನಮಸ್ಕಾರ ಮಾಡಿದನು. ಭಕ್ತರಲ್ಲಿ ವಿಶ್ವಾಸದಿಂದ ಇರುವ

**ಅನುಗ್ರಹಕರೈರ್ವಾಕ್ಯೈರಂಬರೈರ್ಭೂಷಣೈರಪಿ ।**
**ಸಂತೋಷ್ಯ ಪ್ರೇಷಯಾಮಾಸ ದತ್ವಾಽಽವಸಥಮುತ್ತಮಂ ॥ ೧೪ ॥**

**ತತಸ್ತು ಮಂತ್ರಿಣಸ್ಸರ್ವೇ ಕಲ್ಯಾಣಾರ್ಥಂ ಸಮುದ್ಯತಾಃ**
**ಶಾಸನಂ ಪ್ರೇಷಯಾಮಾಸುಸ್ಸರ್ವೇಷಾಂ ಭೂಭುಜಾಮಪಿ ॥ ೧೫ ॥**

**ರಾಜಾನಸ್ತೇ ತು ಮಧುರಾಮುಪದಾಭಿಃ ಪ್ರಪೂರಯನ್ ।**
**ಅಥ ನೀಪಾಟವೀನಾಥಸ್ಸಮಾಹೂಯ ಬೃಹಸ್ಪತಿಂ ॥ ೧೬ ॥**

**ಚೋದಯಾಮಾಸ ಕನ್ಯಾಯಾ ಲಕ್ಷಣಾನಿ ಪರೀಕ್ಷಿತುಂ ।**
**ತತಸ್ಸ ರಹಸಿ ಪ್ರಾಪ್ತಸ್ಸುಸ್ನಾತವರವಿಗ್ರಹಾಂ ॥ ೧೭ ॥**

**ಕನ್ಯಾಂ ಕಾಂತಿಮತೀಂ ದೃಷ್ಟ್ವಾ ಸರ್ವಾಯವಮಂಜುಳಾಂ ।**
**ತಸ್ಯಾಃ ಕೇಶಾದಿಪಾದಾಂತಂ ಲಕ್ಷಣಾನಿ ಪರೀಕ್ಷ್ಯ ಚ ॥ ೧೮ ॥**

---

ಮಹೇಶ್ವರನು ಅವನನ್ನು ಎಬ್ಬಿಸಿ, ಆಲಿಂಗಿಸಿಕೊಂಡು, ಅನುಗ್ರಹಮಾಡುವ ಮಾತುಗಳನ್ನು ಹೇಳಿ, ವಸ್ತ್ರಾಭರಣಗಳನ್ನೂ ಅವನಿಗೆ ವಾಸಮಾಡಲು ಉತ್ತಮವಾದ ವಾಸಸ್ಥಳವನ್ನೂ ಕೊಟ್ಟು ಕಳುಹಿಸಿದನು.

೧೫-೧೮. ಅನಂತರದಲ್ಲಿ ಮಂತ್ರಿಗಳೆಲ್ಲರೂ ಉಗ್ರನ ವಿವಾಹ ಮಹೋತ್ಸವಕ್ಕಾಗಿ ಎಲ್ಲಾ ರಾಜರಿಗೂ ಲಗ್ನಪತ್ರಿಕೆಯನ್ನು ಕಳುಹಿಸಿದರು. ರಾಜರೆಲ್ಲರೂ ಮಧುರಾನಗರಿಗೆ ಬಂದು, ತಮ್ಮ ಕಾಣಿಕೆಗಳಿಂದ ಆ ನಗರವನ್ನು ತುಂಬಿದರು. ಅನಂತರದಲ್ಲಿ ಕದಂಬವನಾಧಿಪತಿಯಾದ ಸುಂದರೇಶ್ವರನು ವಿವಾಹ್ಯಳಾದ ಕನ್ಯೆಯ ಲಕ್ಷಣಗಳನ್ನು ಪರೀಕ್ಷಿಸಿ ತಿಳಿಸುವುದಕ್ಕಾಗಿ ಬೃಹಸ್ಪತಿಯನ್ನು ಕಳುಹಿಸಿದನು. ಬೃಹಸ್ಪತಿಯು ರಹಸ್ಯವಾಗಿ ಸೋಮಶೇಖರರಾಜನ ಮನೆಗೆ ಬಂದು, ಕಾಂತಿಮತಿಯು ಸ್ನಾನಮಾಡಿ ಶರೀರಶುದ್ಧಿಯನ್ನು ಹೊಂದಿರುವಾಗ, ಅವಳು ಎಲ್ಲಾ ಅವಯವಗಳಲ್ಲೂ ಮನೋಹರಳಾಗಿ ಇರುವುದನ್ನು ನೋಡಿ, ಅವಳ ಶರೀರದಲ್ಲಿ ತಲೆಯಕೂದಲು ಮೊದಲುಗೊಂಡು ಉಗುರಿನವರೆಗೂ ಲಕ್ಷಣಗಳನ್ನು ಚೆನ್ನಾಗಿ ಪರೀಕ್ಷಿಸಿದನು.

ದೇವಾಂತಿಕಂ ತತಃ ಪ್ರಾಪ್ಯ ಪ್ರಾಹ ಗೀರ್ವಾಣದೇಶಿಕಃ ।
ಸ್ವಾಮಿನ್ ಸರ್ವಜ್ಞ ದೇವೇಶ ಮಹಾದೇವ ಜಗದ್ಗುರೋ ॥ ೧೯ ॥

ಸರ್ವಲಕ್ಷಣಸಂಪನ್ನಾ ಸೋಮಶೇಖರಕನ್ಯಕಾ ।
ಸರ್ವಜ್ಞೇನ ತ್ವಯಾ ಜ್ಞಾತಾ ತಥಾಪಿ ತ್ವದಾಜ್ಞಯಾ ॥ ೨೦ ॥

ಪರೀಕ್ಷಿತಾ ಮಯಾ ಚಾತ್ರ ಸಮ್ಯಕ್ಛಾಸ್ತ್ರೋಕ್ತಮಾರ್ಗತಃ ।
ಕಾಂತಿಮತ್ಯಾ ಲಕ್ಷಣಾನಿ ವಕ್ಷ್ಯೇ ಪರತರಾಣಿ ಚ ॥ ೨೧ ॥

ದೇವಲೋಕೇಪಿ ಸದೃಶೀ ತಯಾ ಕನ್ಯಾ ನ ವಿದ್ಯತೇ ।
ಕೇಶಾ ಮೂರ್ಧಾ ಲಲಾಟಂ ಚ ಲೋಚನೇ ನಾಸಿಕಾ ತಥಾ ॥ ೨೨ ॥

ಶ್ರೋತ್ರಗಂಡೋಷ್ಠದಂಷ್ಟ್ರಾಶ್ಚ ಜಿಹ್ವಾ ಚ ಚಿಬುಕಂ ಕ್ರಮಾತ್ ।
ಕಂಠವಕ್ಷೋಭುಜಾಪಾಣಿತಲಾಂಗುಲಿನಖಾ ಅಪಿ ॥ ೨೩ ॥

ವಕ್ಷೋಜಯುಗಳಂ ಕುಕ್ಷಿರ್ನಾಭಿರ್ಜಘನಮಂಡಲಂ ।
ಊರುಜಾನುದ್ವಯಂ ಜಂಘೇ ಗುಲ್ಫೇ ಚ ಪ್ರಪದೇ ತಥಾ ॥ ೨೪ ॥

---

೧೯–೨೧. ಅನಂತರದಲ್ಲಿ ದೇವಗುರುವಾದ ಬೃಹಸ್ಪತಿಯು, ದೇವ ದೇವನಾದ ಸುಂದರೇಶ್ವರನ ಸಮೀಪಕ್ಕೆ ಬಂದು, " ಸರ್ವಜ್ಞನಾದ, ದೇವಾಧಿಪನಾದ, ಮಹಾದೇವನೆ, ಎಲೈ, ಜಗದ್ಗುರುವೇ, ಎಲೈ ಪ್ರಭುವೆ, ಸೋಮಶೇಖರರಾಜನ ಪುತ್ರಿಯು ಎಲ್ಲಾ ವಿಧವಾದ ಲಕ್ಷಣಗಳಿಂದಲೂ ಕೂಡಿರುವಳು. ಎಲ್ಲವನ್ನೂ ತಿಳಿದಿರುವ ನಿನಗೆ ಈ ವಿಷಯವು ತಿಳಿದು ಇರುವುದು. ಆದಾಗ್ಯೂ ನಿನ್ನ ಅಜ್ಞಾನುಸಾರವಾಗಿ ನಾನು ಶಾಸ್ತ್ರಕ್ರಮದಿಂದ ಪರೀಕ್ಷೆ ಮಾಡಿದೆನು. ಬಹಳ ಉತ್ತಮೋತ್ತಮವಾಗಿರುವ ಕಾಂತಿಮತಿಯ ಲಕ್ಷಣಗಳನ್ನು ಹೇಳುವೆನು.

೨೨–೨೫. ಕಾಂತಿಮತಿಗೆ ಸಮನಾದ ಕನ್ಯೆಯು ದೇವಲೋಕದಲ್ಲಿಯೂ ಸಿಕ್ಕುವುದಿಲ್ಲ. ಮೂವತ್ತೆರಡು ಲಕ್ಷಣಗಳಿಂದಲೂ ಈ ಕನ್ಯೆಯು ಕೂಡಿರುವಳು. ಕೇಶ, ಶಿರಸ್ಸು, ಹಣೆ, ಕಣ್ಣು, ಮೂಗು, ಕಿವಿ, ಕಪೋಲಪ್ರದೇಶ, ಹಲ್ಲು, ನಾಲಗೆ, ಗಡ್ಡ, ಕಂಠಪ್ರದೇಶ, ಓಷ್ಠಪ್ರದೇಶ, ವಕ್ಷಸ್ಸು, (ಎದೆ) ಭುಜ, ಹಸ್ತಗಳು, ಬೆರಳು,

**ಅಂಗುಳ್ಯಶ್ಚ ನಖಾಃ ಪಾದತೆಲಗಂಧಸ್ವರಾಸ್ತಥಾ ।**
**ವರ್ಣಾಶ್ಚ ವನಿತಾನಾಂ ಚ ದ್ವಾತ್ರಿಂಶಲ್ಲಕ್ಷಣಾನಿ ಚ ।**
**ಕಾಳಾಭ್ರಭಮರಾ ನೀಲಾ ಸ್ನಿಗ್ಧಾಸ್ಸೂಕ್ಷ್ಮಾಸ್ಸುಕೋಮಲಾಃ　　॥ ೨೫ ॥**

**ಕಿಂಚಿದಾಕುಂಚಿತಾಃ ಕೇಶಾಃ ಸೌಭಾಗ್ಯೈಶ್ವರ್ಯಸೂಚಕಾಃ ।**
**ಗಜಕುಂಭನಿಭೋ ಮೂರ್ಧಾ ಸುವೃತ್ತಶ್ಚ ಸುಮುನ್ನತಃ　　॥ ೨೬ ॥**

**ಭರ್ತುರ್ದೀರ್ಘಾಯುಷ್ಯದಶ್ಯಸ್ತಸಾರ್ವಭೌಮಪದಪ್ರದಃ ।**
**ಅಳಿಕಂ ಚಾರ್ಧಚಂದ್ರಾಭಂ ಸಿರಾರೋಮವಿವರ್ಜಿತಂ　　॥ ೨೭ ॥**

**ಅನಿಮ್ನಂ ತ್ರ್ಯಂಗುಳೋತ್ಸೇಧಂ ಸೌಭಾಗ್ಯಾರೋಗ್ಯಕಾರಣಂ ।**
**ರಕ್ತಾಂತೇ ಲೋಚನೇ ಶಸ್ತೇ ಸುಸ್ನಿಗ್ಧೇ ಕೃಷ್ಣತಾರಕೇ　　॥ ೨೮ ॥**

---

ಸ್ತನಗಳು, ಹೊಟ್ಟೆ, ನಾಭಿ, ಜಘನಪ್ರದೇಶ, ತೊಡೆ, ಮಂಡಿ, ಮೊಣಕಾಲು, ಹಿಮ್ಮಡಿ, ಕಾಲಿನ ಬೆರಳುಗಳು, ಉಗುರುಗಳು, ಅಂಗಾಲು, ಶರೀರದ ವಾಸನೆ, ಧ್ವನಿ, ದೇಹದ ವರ್ಣ, ಮತ್ತು ಕಾಂತಿ, ಇವುಗಳಲ್ಲಿ ಮೂವತ್ತೆರಡು ಲಕ್ಷಣಗಳನ್ನೂ ಚೆನ್ನಾಗಿ ನೋಡಬೇಕಾಗಿರುವುದು.

೨೬-೨೭. (1)ತಲೆಯಕೂದಲುಗಳು ಮೋಡಗಳು, ದುಂಬಿ. ಇವುಗಳಂತೆ ಕಪ್ಪಗೆ ಇರುತ್ತಾ ಮೃದುವಾಗಿಯೂ, ಸೂಕ್ಷ್ಮವಾಗಿಯೂ, ಕೋಮಲವಾಗಿಯೂ ಇದ್ದು, ಕೊಂಚಮಟ್ಟಿಗೆ ವಕ್ರಗಳಾಗಿ ಇದ್ದಲ್ಲಿ ಅವುಗಳಿಂದ ಐಶ್ವರ್ಯಸೂಚಕವಾದ ಚಿಹ್ನೆಯು ಇರುವುದು. (2)ಶಿರಸ್ಸು ಆನೆಯ ಕುಂಭಸ್ಥಳದಂತೆ ದುಂಡಾಗಿ ಎತ್ತರವಾಗಿರಬೇಕು. ಹೀಗಿದ್ದಲ್ಲಿ ಪತಿಯು ಧೀರ್ಘಾಯುಸ್ಸುಳ್ಳವನಾಗಿರುವನು. ಮತ್ತು ಇದರಿಂದ ಸಾಮ್ರಾಜ್ಯವು ಉಂಟಾಗುವುದು.

(3) ಫಾಲಪ್ರದೇಶವು ಅರ್ಧಚಂದ್ರನಂತೆ ಇರಬೇಕು. ನರಗಳೂ, ರೋಮಗಳೂ, ಇರಬಾರದು. ಹಳ್ಳವಾಗಿರದೆ ಮೂರು ಬೆರಳು ಎತ್ತರವಾಗಿ ಇರಬೇಕು. ಹೀಗೆ ಇದ್ದರೆ ಆಯುರಾರೋಗ್ಯಗಳು ವೃದ್ಧಿಯಾಗುವುವು.

೨೮-೩೧. (4) ಕಣ್ಣುಗಳು ಕೊನೆಯಲ್ಲಿ ಕೆಂಪಾಗಿರಬೇಕು. ಮೃದುವಾಗಿ, ಕಪ್ಪಾದ ಗುಡ್ಡೆಯಿಂದ ಕೂಡಿಕೊಂಡಿರಬೇಕು. ಬಿಳೀ ಗುಡ್ಡೆಯು ಹಸುವಿನ ಹಾಲಿನಂತೆ ಸ್ವಚ್ಛವಾಗಿರಬೇಕು. ರೆಪ್ಪೆಗಳು ಮೃದುವಾಗಿ ಕೊನೆಯಲ್ಲಿ ಕಪ್ಪಗೆ ಇರಬೇಕು.

ಗೋಕ್ಷೀರವರ್ಣೇ ವಿಶದೇ ಕೋಮಲೇ ಕೃಷ್ಣಪಕ್ಷ್ಮಣೀ ।
ಸಮವೃತ್ತಪುಟಾ ನಾಸಾ ತಿಲಪುಷ್ಪಸಮಾ ಶುಭಾ ॥ ೨೯ ॥

ಪ್ರಲಂಬೌ ಚ ತಥಾ ಕರ್ಣೌ ಶುಭಾವರ್ತೌ ಶುಭಪ್ರದೌ ।
ಶಸ್ತೌ ಕಪೋಲೌ ವಾಮಾಕ್ಷ್ಯಾಃ ಪೀನೌ ವೃತ್ತೌ ಸಮುನ್ನತೌ ॥ ೩೦ ॥

ಪಾಟಲೋ ವರ್ತಲಸ್ಸ್ನಿಗ್ಧೋ ರೇಖಾಭೂಷಿತಮಧ್ಯಭೂಃ ।
ಯಸ್ಯಾಶ್ಚೋಷ್ಠಶ್ಚಾಧರಶ್ಚ ಸಾ ರಾಜ್ಞೋಽತಿಪ್ರಿಯಾ ಭವೇತ್ ॥ ೩೧ ॥

ಗೋಕ್ಷೀರಧವಳಾಃ ಸ್ನಿಗ್ಧಾಃ ದ್ವಾತ್ರಿಂಶದ್ದಶನಾ ಶುಭಾಃ
ಅದಸ್ತಾದು ಪರಿಷ್ಟಾಚ್ಚ ಸಮಾಸ್ತೋಕಸಮುನ್ನತಾಃ ॥ ೩೨ ॥

ಜಿಹ್ವೇಯಮಿಷ್ಟಭೋಕ್ತ್ರೀ ಸ್ಯಾಚ್ಛೋಣಾ ಮೃದ್ವೀ ಸುಕೋಮಳಾ ।
ಚಿಬುಕಂ ದ್ವ್ಯಂಗುಲಂ ಶಸ್ತಂ ವೃತ್ತಂ ಪೀನಂ ಚ ಮಂಜುಳಂ ॥ ೩೩ ॥

---

(5) ಒಂದೇ ಸಮನಾದ ಉಸಿರುಬಿಡುವ ದುಂಡಾಗಿರುವ ಪ್ರದೇಶಗಳನ್ನು ಹೊಂದಿ, ಎಳ್ಳಿನ ಹೂವಿನಂತೆ ಇರುವ ಮೂಗು ಪ್ರಶಸ್ತವಾಗಿರುವುದು.

(6) ಕಿವಿಗಳು ಉದ್ದವಾಗಿ ಮಂಗಳಕರವಾದ ಸುಳಿಯನ್ನು ಹೊಂದಿದ್ದರೆ ಶುಭಕರವು.

(7) ಕಪೋಲಗಳು ಸ್ಥೂಲವಾಗಿ, ದುಂಡಾಗಿ, ಎತ್ತರವಾಗಿದ್ದಲ್ಲಿ ಪ್ರಶಸ್ತವು.

(8) ಅಧರೋಷ್ಠವು ಕೆಂಪಾಗಿ, ದುಂಡಾಗಿ ಇರುತ್ತಾ ಮೃದುವಾಗಿ ಮಧ್ಯದಲ್ಲಿ ಗೆರೆಯನ್ನು ಹೊಂದಿದ್ದರೆ ಆಸ್ತ್ರೀಯು ರಾಜಪ್ರಿಯಳಾಗಿರುವಳು.

೩೨–೩೪. (9) ಹಸುವಿನ ಹಾಲಿನಂತೆ ಶುಭ್ರವಾಗಿ ಇರುವ, ನುಣುಪಾಗಿರುವ, ಊರ್ಧ್ವಾಧೋ ಭಾಗಗಳಲ್ಲಿ ಸಮನಾಗಿ,ಕೊಂಚ ಎತ್ತರವಾದ ಮೂವತ್ತೆರಡು ಹಲ್ಲುಗಳು ಇದ್ದಲ್ಲಿ ಶುಭವನ್ನುಂಟುಮಾಡುವುದು.

(10) ನಾಲಗೆಯು ಕೆಂಪಾಗಿ, ಮೃದುವಾಗಿ, ಕೋಮಲವಾಗಿದ್ದಲ್ಲಿ ರುಚಿಕರವಾದ ಇಷ್ಟವಸ್ತುಗಳನ್ನು ಉಪಯೋಗಿಸುವಳು.

ಮಾಂಸಳೋ ವರ್ತುಳಃ ಕಂಠಃ ಪ್ರಶಸ್ತಶ್ಚತುರಂಗುಳಃ ।
ತ್ರಿರೇಖಾಭಿರ್ಯುತಶ್ಚೇತ್ಸ ಭರ್ತುಸ್ಸಾಮ್ರಾಜ್ಯಸೂಚಕಃ ॥ ೩೪ ॥

ಅಷ್ಟಾದಶಾಂಗುಳತತ ಮುರಃ ಪೀವರಮುತ್ತಮಂ ।
ರೋಮಭಿಶ್ಚ ಸಿರಾಭಿಶ್ಚ ವಿಹೀನಂ ಚೇತ್ಪ್ರಶಸ್ತಕಂ ॥ ೩೫ ॥

ನಿರ್ದೋಷೌ ಚ ಭುಜೌ ಸ್ಯಾತಾಂ ಗೂಢಾಸ್ಥಿಗ್ರಂಥಿಕೋಮಳೌ ।
ಸಿರಾರೋಮವಿನಿರ್ಮುಕ್ತೌ ಸುವೃತ್ತೌ ಹರಿಣೀದೃಶಾಂ ॥ ೩೬ ॥

ಮೃದುಮಧ್ಯೋನ್ನತಂ ರಕ್ತಂ ತಲಂ ಪಾಣ್ಯೋರರಂಧ್ರಕಂ ।
ಪ್ರಶಸ್ತಶಸ್ತರೇಖಾಢ್ಯಮಲ್ಪರೇಖಂ ಸುಖಪ್ರದಂ ॥ ೩೭ ॥

---

(11) ಗಡ್ಡವು ಎರಡು ಅಂಗುಲ ಉದ್ದವಾಗಿ ದುಂಡಾಗಿ ಸ್ಥೂಲವಾಗಿದ್ದಲ್ಲಿ ರಮ್ಯವಾಗಿ ಇರುವುದು.

(12) ಕುತ್ತಿಗೆಯು ನಾಲ್ಕು ಅಂಗುಲಗಳುಳ್ಳದ್ದಾಗಿ, ಮಾಂಸದಿಂದ ಕೂಡಿ, ದುಂಡಾಗಿ ಮೂರು ಗೆರೆಗಳಿಂದ ಕೂಡಿದ್ದರೆ ಪತಿಯ ಸಾಮ್ರಾಜ್ಯವನ್ನು ಸೂಚಿಸುವುದು.

೩೪–೩೮. (13) ಎದೆಯ ವಿಸ್ತಾರವು ಹದಿನೆಂಟು ಅಂಗುಲಗಳಿರಬೇಕು. ಎದೆಯು ಎತ್ತರವಾಗಿ ದಪ್ಪವಾಗಿರಬೇಕು. ರೋಮಗಳೂ, ನರಗಳೂ ಇಲ್ಲದಿದ್ದರೆ ಪ್ರಶಸ್ತವು.

(14) ಭುಜಗಳು ಗೂಢವಾದ ಅಸ್ಥಿಗ್ರಂಥಿಗಳುಳ್ಳವುಗಳಾಗಿ, ಕೋಮಲವಾಗಿ, ನರ, ಮತ್ತು ರೋಮ ಇವುಗಳು ಇಲ್ಲದೆ ದುಂಡಾಗಿರಬೇಕು.

(15) ಹಸ್ತದ ತಲಪ್ರದೇಶವು ಮೃದುವಾಗಿ, ಮಧ್ಯದಲ್ಲಿ ಎತ್ತರವಾಗಿ ಇರಬೇಕು. ಪಾಣಿತಲದಲ್ಲಿ ಪ್ರಶಸ್ತವಾದ ರೇಖೆಗಳಿರಬೇಕು. ರೇಖೆಗಳು ಕಡಿಮೆ ಯಾಗಿದ್ದಲ್ಲಿ ಸುಖವುಂಟಾಗುವುದು. ಬೆರಳುಗಳನ್ನು ಒಟ್ಟುಗೂಡಿಸಿದಲ್ಲಿ ರಂಧ್ರಗಳು ಇರಬಾರದು.

ಕರಶಾಖಾಸ್ಸುಪರ್ವಾಣೋ ದೀರ್ಘವೃತ್ತಾಃ ಕ್ರಮಾತ್ಕೃತಾಃ ।
ಪ್ರಶಸ್ತಕಾಮಿನೀನಾಂ ಚ ಸುಖಸಂಪತ್ತಿಹೇತವಃ ॥ ೩೮ ॥

ಸ್ನಿಗ್ಧಾಸ್ಸಮುನ್ನತಾಸ್ತಾಮ್ರಾ ವೃತ್ತಾಃ ಕಾಂತಾ ನಖಾ ಶ್ಶುಭಾಃ ।
ಸುವೃತ್ತೌ ಸುಧೃಢೌ ಪೀನೌ ಸಮೌ ಶಸ್ತೌ ಪಯೋಧರೌ ॥ ೩೯ ॥

ಉದರೇಣಾತಿತುಚ್ಛೇನ ವಿಸಿರೇಣ ಮೃದುತ್ವಚಾ ।
ಯೋಷಿದ್ಭವತಿ ಭೋಗಾಢ್ಯಾ ನಿತ್ಯಂ ಮೃಷ್ಟಾನ್ನಸೇವಿನೀ ॥ ೪೦ ॥

ಗಂಭೀರಾ ಧಕ್ಷಿಣಾವೃತ್ತಾ ನಾಭಿಸ್ಸ್ಯಾತ್ಸುಖಸಂಪದೇ ।
ಜಘನಂ ಕಮಠೀಪೃಷ್ಠಗಜಕುಂಭಸಮಂ ಶುಭಂ ॥ ೪೧ ॥

---

(16) ಬೆರಳುಗಳು ಉದ್ದವಾಗಿ ದುಂಡಗೆ ಕ್ರಮಕ್ರಮವಾಗಿ ತುದಿಯವರಿಗೆ ಕೃಶವಾಗಿದ್ದಲ್ಲಿ ಉತ್ತಮಸ್ತ್ರೀಯರ ಸುಖೈಶ್ವರ್ಯ ಸೂಚನೆಯು ಇರುವುದು.

೩೯–೪೦. (17) ಉಗುರುಗಳು ಮೃದುವಾಗಿ, ಎತ್ತರವಾಗಿ, ಕೆಂಪಾಗಿ, ದುಂಡಗೆ ಇದ್ದಲ್ಲಿ ಶುಭವೆಂದು ಹೇಳುವರು.

(18) ಸ್ತನಗಳು ದುಂಡಾಗಿ, ಗಟ್ಟಿಯಾಗಿ, ದಪ್ಪವಾಗಿ, ಒಂದೇ ಸಮನಾಗಿ ಇದ್ದಲ್ಲಿ ಪ್ರಶಸ್ತವು.

(19) ಹೊಟ್ಟೆಯು ಕೃಶವಾಗಿ, ನರವಿಲ್ಲದೆ ಮೃದುವಾಗಿ ಚರ್ಮದಿಂದ ಕೂಡಿರಬೇಕು. ಹೀಗಿರುವ ಸ್ತ್ರೀಯು ಭೋಗಗಳ್ಳುವಳಾಗಿಯೂ ನಿತ್ಯವೂ ಮೃಷ್ಟಾನ್ನಭೋಜನ ಮಾಡುವವಳಾಗಿಯೂ ಇರುವಳು.

೪೧–೪೪. (20) ನಾಭಿಯು ಗಂಭೀರವಾಗಿ ಬಲಗಡೆಗೆ ಸುಳಿಯನ್ನು ಹೊಂದಿದ್ದರೆ ಸುಖಸಂಪತ್ತುಗಳು ಉಂಟಾಗುವುವು.

(21) ಜಘನ ಪ್ರದೇಶವು (ಕಟಿಪುರೋಭಾಗವು) ಆಮೆಯ ಬೆನ್ನಿನಂತೆಯೂ, ಆನೆಯ ಕುಂಭಸ್ಥಳದಂತೆಯೂ ಎತ್ತರವಾಗಿ ಸಮನಾಗಿರುವುದು ಉತ್ತಮವು.

ಕರೀಂದ್ರಶುಂಡಾಕರಭಕದಳೀಕಾಂಡಸನ್ನಿಭಂ ।
ಊರುದ್ವಯಂ ಪ್ರಶಸ್ತಂ ಸ್ಯಾದ್ವಿಸಿರಂ ರೋಮವರ್ಜಿತಂ ॥ ೪೨ ॥

ವೃತ್ತಂ ಪಿಶಿತಸಮ್ಮಗ್ನಂ ಜಾನುಯುಗ್ಮಂ ಪ್ರಶಸ್ಯತೇ ।
ರೋಮಹೀನೇ ಸಮೇ ಸ್ನಿಗ್ಧೇ ದ್ವೇ ಜಂಘೇ ಕ್ರಮವರ್ತುಳೇ ॥ ೪೩ ॥

ಸಾ ರಾಜಪತ್ನೀ ಭವತಿ ವಿಸಿರೇ ಸುಮನೋಹರೇ ।
ಗೂಢಗುಲ್ಫೌ ಶುಭಾಯೋಕ್ತಾ ವಸಿರಾಳೌ ಸುವರ್ತುಲೌ ॥ ೪೪ ॥

ಪ್ರಪದಂ ಮಾಂಸಲಂ ಸ್ತ್ರೀಣಾಂ ಸಿರಾಹೀನಂ ಸಮುನ್ನತಂ ।
ಕಮಠೀಕರ್ಪರಾಕಾರಂ ಶುಭಂ ರಾಜ್ಞೀತ್ವಸೂಚಕಂ ॥ ೪೫ ॥

---

(22) ಆನೆಯ ಸೊಂಡಿಲು, ಹಸ್ತದ ಹೊರಬಾಗ (ಕನಿಷ್ಠಕಾಮೂಲ) ಬಾಳೆ ಗಿಡದಂತೆ ಇರುವ ತೊಡೆಯು ರೋಮವೂ, ನರವೂ ಇಲ್ಲದಿರುವುದು ಪ್ರಶಸ್ತವು.

(23) ಎರಡು ಮಂಡಿಯೂ ಮಾಂಸವುಳ್ಳದ್ದಾಗಿ ದುಂಡಗೆ ಇರುವುದು ಉತ್ತಮವು.

(24) ಮೊಣಕಾಲುಗಳು ರೋಮವಿಲ್ಲದವುಗಳಾಗಿ ಕ್ರಮದಿಂದ ದುಂಡಾಗಿ ಸಮನಾಗಿ, ನರವಿಲ್ಲದೆ, ಇರಬೇಕು. ಹೀಗೆ ಇದ್ದರೆ ಅವಳು ರಾಜಪತ್ನಿಯಾಗುವಳು.

(25) ಗುಲ್ಫಪ್ರದೇಶಗಳೆರಡು ಗೂಢವಾಗಿ ನರಗಳು ಕಾಣದಿರುವಂತೆ ದುಂಡಾಗಿ ಇರಬೇಕು. ಇವು ಹೀಗೆ ಇದ್ದಲ್ಲಿ ಶುಭವು.

೪೫-೪೯. (26) ಕಾಲಿನ ಮೇಲುಭಾಗವು ಮಾಂಸವುಳ್ಳದ್ದಾಗಿ, ನರಗಳು ಕಾಣದೆ ಇರುವಂತೆ ಇರುತ್ತಾ, ಆಮೆಯ ಬೆನ್ನಿನ ಹಾಗೆ ಎತ್ತರವಾಗಿದ್ದರೆ ರಾಜಪತ್ನಿಯಾಗುವಿಕೆಯನ್ನು ಸೂಚಿಸುವುದು.

(27) ಕಾಲಿನ ಬೆರಳುಗಳು ಉಗುರುಗಳಿಂದ ಕೂಡಿ, ಮೃದುವಾಗಿ, ಎತ್ತರವಾಗಿದ್ದಲ್ಲಿ ಪ್ರಶಸ್ತವು.

(28) ಉಗುರುಗಳು ಅರ್ಧಚಂದ್ರನಂತೆ ಇರುತ್ತಾ ಕೊಳೆಯಿಲ್ಲದವುಗಳಾಗಿ, ಮೃದುವಾಗಿ ಇರುವುದು ಉತ್ತಮವು.

ಪಾದಾಂಗುಳ್ಯಃ ನಖಾ ವೃತ್ತಾಃ ಮೃದ್ವ್ಯಸ್ತಸ್ಯಾಸ್ಸಮುನ್ನತಾಃ ।
ನಖಾಶ್ಚಾರ್ಧೇಂದುಸದೃಶಾ ನಿರ್ಮಲಾಃ ಕೋಮಲಾ ಶ್ಶುಭಾಃ ॥ ೪೭ ॥

ಮಾಂಸಲಂ ಮೃದುಲಂ ಸ್ನಿಗ್ಧಂ ಸ್ತ್ರೀಣಾಂ ಪಾದತಲಂ ಸಮಂ ।
ಅಸ್ವೇದ ಮುಷ್ಣ ಮರುಣಂ ಸರ್ವಸೌಭಾಗ್ಯಕಾರಣಂ ॥ ೪೭ ॥

ಫುಲ್ಲಕಲ್ಹಾರಕಮಲಪಾಟಲೀ ಚಂಪಕಾದಿಭಿಃ ।
ಪುಷ್ಪೈಸ್ಸಮಸುಗಂಧೈಶ್ಚ ಶುಭೋ ನಾರೀವಪುರ್ಭವಃ ॥ ೪೮ ॥

ಕೋಕಿಲಾನಾಂ ಶುಕೀನಾಂ ಚ ವಲ್ಲಕೀನಾಂ ಸ್ವರೈಸ್ಸಮಃ ।
ಸ್ವರಶ್ಚ ಶೋಭನಾಯೋಕ್ತಃ ಸ್ತ್ರೀಣಾಂ ಸೌಭಾಗ್ಯಸೂಚಕಃ ॥ ೪೯ ॥

ತಪ್ತಕಾಂಚನಸಂಕಾಶಾ ಕಾಂತಾ ಗಾತ್ರಪ್ರಭಾ ವರಾ ।
ಉಕ್ತಾನಾಂ ಲಕ್ಷಣಾನಾಂ ಚ ವಿಪರೀತಾನಿ ಯಾನಿ ಚ ॥ ೫೦ ॥

---

(29) ಸ್ತ್ರೀಯರ ಪಾದತಲವು (ಅಂಗಾಲು) ಮೃದುವಾಗಿ ಒಂದೇ ಸಮನಾಗಿ ಒಣಗಿದಂತೆ ಇರದೆ, ಬೆವರಿಲ್ಲದ್ದಾಗಿ, ಬಿಸಿಯಾಗಿರದೆ, ಕೆಂಪಾಗಿದ್ದಲ್ಲಿ ಎಲ್ಲಾ ವಿಧವಾದ ಶ್ರೇಯಸ್ಸಿಗೂ ಕಾರಣವಾಗಿರುವುದು.

(30) ಅರಳಿದ ಕಲ್ಹಾರ ಪುಷ್ಪ, ಕಮಲ, ಪಾದರೀಹೂವು, ಸಂಪಗೆ ಹೂವು, ಇವುಗಳಲ್ಲಿ ಯಾವುದಾದರೂ ಒಂದು ಹೂವಿನ ವಾಸನೆಯು ಸ್ತ್ರೀ ಶರೀರದಲ್ಲಿ ಇದ್ದರೆ ಉತ್ತಮವು.

(31) ಕಂಠಸ್ವರವು ಕೋಗಿಲೆ, ಗಿಣಿ, ವೀಣೆ, ಇವುಗಳ ಧ್ವನಿಗೆ ಸಮನಾಗಿದ್ದಲ್ಲಿ ಉತ್ತಮವು ಮತ್ತು ಅದು ಶ್ರೇಯಸ್ಸನ್ನು ಸೂಚಿಸುವುದು.

(32) ಪುಟಹಾಕಿದ ಚಿನ್ನದಂತಿರುವ ದೇಹಕಾಂತಿಯು ಸ್ತ್ರೀಶರೀರದಲ್ಲಿ ಇದ್ದರೆ ಅದು ಉತ್ತಮವು.

೫೦–೫೩. ಈಗ ಹೇಳಿದ ಲಕ್ಷಣಗಳಿಗೆ ವ್ಯತ್ಯಾಸವಾದ ಲಕ್ಷಣಗಳು ಇದ್ದಲ್ಲಿ ಅವುಗಳು ಕೆಟ್ಟ ಲಕ್ಷಣಗಳೆಂದು ಬುದ್ಧಿವಂತರು ತಿಳಿಯಬೇಕು. ಎಲೈ ಪ್ರಭುವಾದ ಸೋಮಸುಂದರೇಶ್ವರನೆ, ನೀನು ನನಗೆ ಮೊದಲು ಸಾಮುದ್ರಿಕ ಶಾಸ್ತ್ರವನ್ನು ಉಪದೇಶ ಮಾಡಿರುತ್ತೀಯೆ. ನಾನು ಅದನ್ನು ಜ್ಞಾಪಕದಲ್ಲಿರಿಸಿಕೊಂಡು ನನಗೆ ಕಂಡು

**ತಾನಿ ದುರ್ಲಕ್ಷಣಾನಿ ಸ್ಯುರ್ಜ್ಞಾತವ್ಯಾನಿ ವಿಪಶ್ಚಿತಾ ।**
**ಪುರಾ ತ್ವಯೋಪದಿಷ್ಟಾನಿ ಮಯಾ ಹ್ಯವಧೃತಾನಿ ಚ　　॥ ೫೧ ॥**

**ಸಲ್ಲಕ್ಷಣಾನಿ ಯಾನ್ಯದ್ಯ ದೃಷ್ಟಾನಿ ನಿಖಿಲಾನಿ ಚ ।**
**ಸುಲಕ್ಷಣೇಯಂ ಕಲ್ಯಾಣೀ ಕನ್ಯಾ ಕಾಂತಿಮತೀ ಪ್ರಭೋ　　॥ ೫೨ ॥**

**ಪರಿಣೇಯಾ ಕುಮಾರೇಣ ಧ್ರುವಂ ಭಗವದಾಜ್ಞಯಾ ।**
**ಇತ್ಯುಕ್ತ್ವಾ ಗೀಷ್ಪತಿರ್ಭಕ್ತ್ಯಾ ಶಂಭೋಶ್ಚರಣಪಂಕಜೇ　　॥ ೫೩ ॥**

**ನಿಧಾಯ ಚ ಮನೋ ನೇತ್ರೇ ತೂಷ್ಣೀಮಾಸ್ತೇ ಸುನಿಶ್ಚಲಃ ।**
**ಅಥ ಸುಂದರಪಾಂಡ್ಯೇಶಸ್ಸರ್ವಜ್ಞಸ್ಸರ್ವಕರ್ಮಸು　　॥ ೫೪ ॥**

**ಕುಶಲಸ್ಸುಮುಹೂರ್ತೇ ಚ ಲಗ್ನೇ ಸುಗ್ರಹಸಂಯುತೇ ।**
**ವಿಧಿವಿಷ್ಣುಸಹಸ್ರಾಕ್ಷಪ್ರಮುಖೈರ್ದೇವತಾಗಣೈಃ　　॥ ೫೫ ॥**

**ಮುನೀಂದ್ರೈರಪಿ ನಿರ್ವರ್ತ್ಯ ವ್ರತಾನಿ ಸ್ನಾನಕರ್ಮ ಚ ।**
**ಸೋಮಶೇಖರಭೂಪೇನ ಸಕಳತ್ರೇಣ ಧೀಮತಾ　　॥ ೫೬ ॥**

---

ಬಂದಿರುವ ಶುಭಲಕ್ಷಣಗಳೆಲ್ಲವನ್ನೂ ಈ ಕಾಂತಿಮತಿಯ ಶರೀರದಲ್ಲಿ ಪರೀಕ್ಷಿಸಿದೆನು. ಈ ಕಾಂತಿಮತಿಯು ಶುಭವಾದ ಲಕ್ಷಣಗಳಿಂದ ಕೂಡಿರುವಳು. ಮಂಗಳಕರಳು. ಕುಮಾರನಾದ ಉಗ್ರನಿಗೆ ಇವಳನ್ನು ತಂದು ವಿವಾಹವನ್ನು ಖಂಡಿತವಾಗಿ ಮಾಡ ಬಹುದು" ಎಂದು ಬೃಹಸ್ಪತಿಯು ಹೇಳಿ ಭಕ್ತಿಯಿಂದ ಪ್ರಭುವಿನ ಪಾದಕಮಲದಲ್ಲಿ ಮನಸ್ಸನ್ನೂ, ದೃಷ್ಟಿಯನ್ನೂ ಇರಿಸಿ ಸುಮ್ಮನೆ ನಿಂತುಕೊಂಡನು.

೫೪–೫೭. ಅನಂತರದಲ್ಲಿ ಎಲ್ಲಾ ಕೆಲಸಗಳನ್ನೂ ಮಾಡುವುದರಲ್ಲಿ ಬಹಳ ತಿಳುವಳಿಕೆಯುಳ್ಳ ಸುಂದರಪಾಂಡ್ಯರಾಜನು ಶುಭಗ್ರಹಗಳಿಂದ ಕೂಡಿರುವ ಶುಭಲಗ್ನ ದಲ್ಲಿ ಬ್ರಹ್ಮ, ವಿಷ್ಣು, ಇಂದ್ರ ಇವರೇ ಮೊದಲಾದ ದೇವತೆಗಳ ಸಮೂಹದಿಂದಲೂ ಮುನಿಶ್ರೇಷ್ಠರಿಂದಲೂ ಕೂಡಿದವನಾಗಿ, ತನ್ನ ಪುತ್ರನಿಗೆ ಸ್ನಾತಕವ್ರತವನ್ನು.

ಧಾರಾಪೂರ್ವಂ ಪ್ರದತ್ತಾಯಾಃ ಕನ್ಯಕಾಯಾ ವಿಧಾನತಃ ।
ಪಾಣಿಗ್ರಹಣಕರ್ಮಾಣಿ ಸ್ವಪುತ್ರಸ್ಯ ಸಮಾಪ್ಯ ಚ ॥ ೫೭ ॥

ಕಲ್ಯಾಣೋಚಿತವೇಷಾಢ್ಯಾಲಂಕಾರಾಲಂಕೃತಂ ಸುತಂ ।
ಆರೋಪ್ಯ ಸಹಸಾ ದೇವೋ ಮತ್ತಮಾತಂಗಕಂಧರೇ ॥ ೫೮ ॥

ಪುರೀಂ ಪ್ರದಕ್ಷಿಣೀಕೃತ್ಯ ಮಧುರಾಂ ಸಮಲಂಕೃತಾಂ ।
ಇಹಾ ಭೀಷ್ಟಪ್ರದಾತಾರ ಮೀಡ್ಯ ಮಿಂದ್ರಾದಿದೈವತೈಃ ॥ ೫೯ ॥

ಕುಲೋಚಿತಂ ಶಂಭುಲಿಂಗಂ ವಂದಯಿತ್ವಾತ್ಮಜೇನ ಚ ।
ಸ್ವಕೇತನಂ ಪ್ರವೇಶ್ಯಾಥ ಸರ್ವಮಂಗಳಸಂಭೃತಂ ॥ ೬೦ ॥

ಪುತ್ರಂ ಭದ್ರಾಸನೇ ಸ್ಥಾಪ್ಯ ಕಾಂತಿಮತ್ಯಾ ಚ ಕಾಂತಯಾ ।
ಗಂಗಾದಿತೀರ್ಥಸಲಿಲೈಃ ಹೇಮಕುಂಭಸುಸಂಭೃತೈಃ ॥ ೬೧ ॥

---

ನೆರವೇರಿಸಿದನು. ಸಪತ್ನೀಕನಾಗಿರುವ ಸೋಮಶೇಖರ-ಭೂಪಾಲನು ಧಾರಾಪೂರ್ವಕ ವಾಗಿ ಧಾರೆಯೆರೆದು ಕೊಟ್ಟ ಕಾಂತಿಮತಿಯ ವಿವಾಹ ಕರ್ಮವನ್ನು ನೆರವೇರಿಸಿದನು.

೫೮–೬೦. ಸುಂದರಪಾಂಡ್ಯರಾಜನು ವಿವಾಹಕಾಲಕ್ಕೆ ಉಚಿತವಾದ ವೇಷಾ ಲಂಕಾರಗಳಿಂದ ಕೂಡಿದ ತನ್ನ ಪುತ್ರನಾದ ಉಗ್ರನನ್ನು ಮದಿಸಿದ ಆನೆಯಮೇಲೆ ಕೂರಿಸಿ ಅಲಂಕಾರ ಮಾಡಿರುವ ಮಧುರಾನಗರದಲ್ಲಿ ಪ್ರದಕ್ಷಿಣೆಯಾಗಿ ಮೆರವಣಿಗೆ ಯನ್ನು ಮಾಡಿಸಿದನು. ಅನಂತರದಲ್ಲಿ ಇಂದ್ರನೇ ಮೊದಲಾದ ದೇವತೆಗಳೂ ಸ್ತುತಿ ಮಾಡುತ್ತಿರುವ, ಇಷ್ಟಾರ್ಥಗಳನ್ನು ಕೊಡುವ, ವಂಶಪಾರಂಪರ್ಯವಾಗಿ ಬಂದಿರುವ, ಲಿಂಗರೂಪದಿಂದ ಇರುವ, ಶಿವನಿಗೆ ತನ್ನ ಪುತ್ರನಿಂದ ನಮಸ್ಕಾರವನ್ನು ಮಾಡಿಸಿ, ಸರ್ವವಿಧವಾದ ಮಂಗಳಗಳಿಂದ ಕೂಡಿರುವ ತನ್ನ ಮನೆಗೆ ಕರೆದುಕೊಂಡು ಬಂದನು.

೬೧–೬೪. ಆ ಮೇಲೆ ಪಾಂಡ್ಯರಾಜನು ಕಾಂತಿಮತೀಯೆಂಬ ಕಾಂತೆಯೊಡನೆ ಕೂಡಿರುವ ತನ್ನ ಪುತ್ರನಾದ ಉಗ್ರನನ್ನು ಸಿಂಹಾಸನದಲ್ಲಿ ಕೂರಿಸಿ, ಚಿನ್ನದ ಕಲಶ ಗಳನ್ನು ತುಂಬಿರುವ, ಗಂಗಾದಿ ತೀರ್ಥಗಳಿಂದ ವೇದೋಕ್ತ ಕ್ರಮದಿಂದ ರಾಜ್ಯಾ ಭಿಷೇಕವನ್ನು ನೆರವೇರಿಸಿದನು. ಅನಂತರದಲ್ಲಿ ಆ ರಾಜನು ಅವನಿಗೆ ಶ್ವೇತಛತ್ರ, ಚಾಮರ, ಇವೇ ಮೊದಲಾದ ರಾಜಚಿಹ್ನೆಗಳೆಲ್ಲವನ್ನೂ ಸಂತೋಷದಿಂದ

ನಿಗಮೋಕ್ತೈ ಶ್ಚ ವಿಧಿಭಿರಭ್ಯಷಿಂಚನ್ಮಹೋತ್ಸವಂ ।
ತತಸ್ಸಿತಾತಪತ್ರಂ ಚ ಚಾಮರೇ ದ್ವೇ ಪ್ರದಾಯ ಚ ॥ ೬೨ ॥

ಅನ್ಯಾನಿ ಯಾನಿ ಚಿಹ್ನಾನಿ ರಾಜ್ಞಾಂ ತಾನಿ ದದೌ ಮುದಾ ।
ಉಗ್ರಾಯೋಗ್ರಶ್ಚ ವಲಯಂ ಶಕ್ತಿಂ ಚಂಡಾಯುಧಂ ಕ್ರಮಾತ್ ॥ ೬೩

ದಾತುಮುದ್ಯೋಗಮಕರೋತ್ ಹಾಲಾಸ್ಯೇಶೋ ಮುನೀಶ್ವರಾಃ ।
ಆಯುಧತ್ರಯದಾನಸ್ಯ ಕಾರಣಂ ಕಥಯಾಮ್ಯಹಂ ॥ ೬೪ ॥

ಪುರಾ ಶಂಭೋರವಮತಿಂ ಕದಾಚಿ ದ್ಭಾಗ್ಯಹಾನಿತಃ ।
ಇಂದ್ರಾಬ್ಧಿಮೇರವಶ್ಚಕ್ರುಸ್ತದೀಶಸ್ಯ ಹೃದಿ ಸ್ಥಿತಂ ॥ ೬೫ ॥

ತಸ್ಮಾತ್ತಾನ್ ಬಾಧಿತುಂ ತೈಶ್ಚ ಶಕ್ರಾದೀನ್ ಕುಪಿತ ಶ್ಶಿವಃ ।
ದಿವ್ಯಂ ಹೇಮಮಹಾಭಾಸಂ ಚಿತ್ರಕರ್ಮಸಮಾವೃತಂ ॥ ೬೬ ॥

ತಪನಾಯುತಸಂಕಾಶಂ ಮಣಿಜಾಲೈರಲಂಕೃತಂ ।
ಪ್ರಾದಾತ್ಸುತಾಯ ವಲಯಂ ವಲಿಭಿನ್ಮೌಳಿತಾಡನಂ ॥ ೬೭ ॥

---

ಅನುಗ್ರಹಿಸಿದನು. ಉಗ್ರನೆಂದು ಹೆಸರುಳ್ಳ ಸುಂದರೇಶ್ವರನು ವಲಯ, ಶಕ್ತಿ ಚಂಡಾಯುಧ ಎಂಬ ಆಯುಧಗಳನ್ನು ಕ್ರಮವಾಗಿ ತನ್ನ ಪುತ್ರನಾದ ಉಗ್ರನಿಗೆ ಕೊಡಲು ಉದ್ಯುಕ್ತನಾಗಿದ್ದನು. ಈ ಆಯುಧಗಳು ಮೂರನ್ನೂ ಕೊಡಲು ಕಾರಣವನ್ನು ಹೇಳುವೆನು.

೬೫–೬೭. ಪೂರ್ವದಲ್ಲಿ ಯಾವಾಗಲೋ ಒಂದು ಕಾಲದಲ್ಲಿ ಹಾಲಾಸ್ಯೇಶ್ವರನಿಗೆ ಐಶ್ವರ್ಯವು ಇಲ್ಲವೆಂದು ಇಂದ್ರ, ಮೇರುಪರ್ವತ, ಸಮುದ್ರ ಇವರುಗಳು ಅವಮಾನ ಮಾಡಿದರು. ಆದ್ದರಿಂದ ಅವರ ಹೆಮ್ಮೆಯನ್ನು ನಾಶಮಾಡುವುದಕ್ಕಾಗಿ ಅವರ ವಿಷಯದಲ್ಲಿ ಕೋಪವುಳ್ಳ ಹಾಲಾಸ್ಯೇಶ್ವರನು ಈ ಆಯುಧಗಳನ್ನು ನಿರ್ಮಿಸಿದ್ದನು. ಅವುಗಳಲ್ಲಿ ಒಂದಾದ ಚಕ್ರಾಯುಧವು, ಚಿನ್ನದ ಕಾಂತಿಯಿಂದ ಬೆಳಗುತ್ತಾ, ಚಿತ್ರದ ಕೆಲಸಗಳಿಂದ ತುಂಬಿರುವುದಾಗಿ, ಹತ್ತು ಸಾವಿರ ಸೂರ್ಯರಂತೆ ಪ್ರಕಾಶಿಸುತ್ತಾ, ರತ್ನ ಸಮೂಹಗಳಿಂದ ಅಲಂಕೃತವಾಗಿ ಇತ್ತು. ಇದರಿಂದ ಇಂದ್ರನ ಕಿರೀಟವನ್ನು ಭೇದಿಸು ವಂತೆ ಹೇಳಿ ಪುತ್ರನಾದ ಉಗ್ರನಿಗೆ ಈ ಆಯುಧವನ್ನು ಕೊಟ್ಟನು.

ದೀಪ್ತಜ್ವಾಲಾವಳೀಯುಕ್ತಾಂ ಜ್ವಲನಾನುಗತಪ್ರಭಾಂ ।
ನಿಶಿತಾತುಲಸದ್ಧಾರಾಂ ಮಂತ್ರಜಾಲೈರಧಿಷ್ಠಿತಾಂ ॥ ೬೮ ॥

ಪಯೋನಿಧಿಂ ಚಾಕ್ರಮಿತುಂ ಶಕ್ತಿಂ ಚ ಪ್ರದದೌ ತತಃ ।
ಭೀಷಣಂ ಪ್ರಹ್ವವದನಂ ಪ್ರಭಾಭಾಸುರಮುದ್ಧೃತಂ ॥ ೬೯ ॥

ದೃಢಮಾಯತಸರ್ವಾಂಗಮರಿಭಿರ್ದುರ್ನಿರೀಕ್ಷಣಂ ।
ಚಂಡಾಯುಧಂ ತು ಕುತುಕಂ ಗಿರಿಂ ಭೇತ್ತುಂ ದದೌ ತತಃ ॥ ೭೦ ॥

ಏತೈರೇತಾನ್ ಪೀಡಯೇತಿ ಪೌನಃ ಪುನ್ಯೇನ ಸೋಽಬ್ರವೀತ್ ।
ತಾನ್ ಗೃಹೀತ್ವೋಗ್ರನಾಮಾ ಚ ತನಯಃ ಪ್ರಹ್ವಮಾನಸಃ ॥ ೭೧ ॥

ನನಾಮ ದೇವದೇವಸ್ಯ ಪಾದೌ ಭಕ್ತ್ಯಾ ವಿಶುದ್ಧಧೀಃ ।
ಉತ್ಥಾಪ್ಯಾಲಿಂಗ್ಯ ತನಯಂ ಸಮಾಘ್ರಾಯ ಚ ಮೂರ್ಧನಿ ॥ ೭೨ ॥

---

೬೮–೭೦. ಉರಿಯುತ್ತಿರುವ ಜ್ವಾಲೆಗಳ ಸಮೂಹದಿಂದ ಕೂಡಿ, ಅಗ್ನಿಯ ಪ್ರಭೆಯನ್ನು ಹೊರಗಡೆಗೆ ಹರಡುತ್ತಿರುವ ಹರಿತವಾದ, ಹೋಲಿಕೆಯಿಲ್ಲದಿರುವ, ಧಾರೆಗಳಿಂದಲೂ, ಮಂತ್ರಸಮೂಹಗಳಿಂದಲೂ ಕೂಡಿರುವ, ಶಕ್ತ್ಯಾಯುಧದಿಂದ ಸಮುದ್ರವನ್ನು ಆಕ್ರಮಿಸುವಂತೆ ಹೇಳಿ ಅದನ್ನು ಉಗ್ರನಿಗೆ ಕೊಟ್ಟನು. ನಮ್ರವಾದ ಮುಖವುಳ್ಳದ್ದಾಗಿ, ಭಯಂಕರವಾಗಿ, ಕಾಂತಿಯಿಂದ ಪ್ರಕಾಶಕರವಾಗಿ ಆಶ್ಚರ್ಯಕರ ವಾಗಿರುವ, ಗಟ್ಟಿಯಾಗಿಯೂ, ವಿಸ್ತಾರವಾದ ಸರ್ವಾಯವವುಳ್ಳದ್ದಾಗಿಯೂ, ಶತ್ರುಗಳಿಂದ ನೋಡಲಶಕ್ಯವಾಗಿಯೂ, ಇರುವ ಚಂಡಾಯುಧವನ್ನು ಮೇರುಪರ್ವತವನ್ನು ಬಾಧಿಸುವುದಕ್ಕಾಗಿ ಉಗ್ರನಿಗೆ ಸುಂದರಪಾಂಡ್ಯರಾಜನು ಕೊಟ್ಟನು.

೭೧–೭೩. ಸುಂದರಪಾಂಡ್ಯರಾಜನು ಆ ಆಯುಧಗಳಿಂದ ಇವರನ್ನು ಬಾಧಿಸು ಎಂದು ಅನೇಕ ಸಾರಿ ಹೇಳಿದನು. ಪುತ್ರನಾದ ಉಗ್ರನು ಆ ಆಯುಧಗಳನ್ನು ತೆಗೆದು ಕೊಂಡು, ಪರಿಶುದ್ಧವಾದ ಬುದ್ಧಿಯುಳ್ಳವನಾಗಿ, ಭಕ್ತಿಯಿಂದ ತನ್ನ ಮುಖವನ್ನು ತಗ್ಗಿಸಿಕೊಂಡು, ದೇವ ದೇವನ ಪಾದಕಮಲಗಳಿಗೆ ನಮಸ್ಕರಿಸಿದನು. ಆಗ ಸುಂದರೇಶನು ಪುತ್ರನನ್ನು ಮೇಲಕ್ಕೆ ಎತ್ತಿ, ಶಿರಸ್ಸನ್ನು ಆಘ್ರಾಣಿಸಿದನು. ಸುಂದರೇಶನು

ರಾಜ್ಯಭರಕ್ಷಮಂ ಮತ್ವಾ ರಾಮಾಜನಮನೋಹರಂ ।
ದೃಷ್ಟ್ವಾ ಪುತ್ರಂ ಸುಂದರೇಶಃ ಸ್ವಧಾಮನಿ ಮನೋ ದಧೌ ॥ ೭೩ ॥

ವತ್ಸರಾಣಾಂ ಚತುಷ್ಷಷ್ಟಿಃ ಸಹಸ್ರಂ ಪರಮೇಶ್ವರಃ ।
ಭೂಲೋಕಶಿವಲೋಕಾಖ್ಯಾಂ ಮಧುರಾಂ ಪರಿಪಾಲ್ಯ ಚ ॥ ೭೪ ॥

ಅಥೋಗ್ರೇ ಭಾರಮಾರೋಪ್ಯ ಪೃಥಿವ್ಯಾಂ ಲೋಕರಕ್ಷಕಃ ।
ಕಾಶ್ಯಪೀಂ ಮುದಿತಸ್ಸಮ್ಯಕ್ಪಾಲಯೇತ್ಯಭಿಧಾಯ ಚ ॥ ೭೫ ॥

ತಟಾತಕಾಖ್ಯಯಾ ದೇವ್ಯಾ ಪರಮಂ ಹರ್ಷಮುದ್ವಹನ್ ।
ಅಂತರ್ದಧೇ ಮಹಾಲಿಂಗೇ ಸಾರ್ಧಂ ಸ್ವಗಣನಾಯಕೈಃ ॥ ೭೬ ॥

ತದಾ ಪ್ರಭೃತಿ ಭೂಲೋಕೇ ಉಗ್ರ ಸ್ತೂಗ್ರಪರಾಕ್ರಮಃ ।
ಯಥಾ ಪಿತ್ರಾ ಸಮುದ್ದಿಷ್ಟಂ ಶಶಾಸ ಸ ಮುದಾ ನೃಪಃ ॥ ೭೭ ॥

---

ತನ್ನ ಪುತ್ರನು ರಾಜ್ಯಪರಿಪಾಲನೆಯನ್ನು ಮಾಡುವುದರಲ್ಲಿ ಸಮರ್ಥನಾಗಿ, ಸ್ತ್ರೀಯರಿಗೆ ಮನೋಹರನಾಗಿರುವನೆಂದು ತಿಳಿದು, ತನ್ನ ಸ್ವಸ್ಥಾನಕ್ಕೆ ಹೋಗಲು ನಿಶ್ಚಯಿಸಿದನು.

೭೪–೭೬. ಪರಮೇಶ್ವರನು ಅರವತ್ತನಾಲ್ಕು ಸಾವಿರ ವರ್ಷಗಳು ಭೂಲೋಕ ಶಿವಲೋಕವೆಂಬ ಮಧುರಾನಗರವನ್ನು ಪಾಲನೆ ಮಾಡಿದ ನಂತರ, ತನ್ನ ಮಗನಾದ ಉಗ್ರನನ್ನು ಪರಿಪಾಲಿಸುವಂತೆ ಅವನಿಗೆ ರಾಜ್ಯಾಭಿಷೇಕವನ್ನು ಮಾಡಿ, ಸರಿಯಾಗಿ ಭೂಮಿಯನ್ನು ಪಾಲಿಸು ಎಂದು ಹೇಳಿ, ಬಹಳ ಸಂತೋಷದಿಂದ ಕೂಡಿದವನಾಗಿ, ತಟಾತಕಾದೇವಿಯೊಡನೆಯೂ, ತನ್ನ ಗಣನಾಯಕರೊಡನೆಯೂ, ತನ್ನ ಮೂಲ ಸ್ಥಾನವಾದ ಮಹಾಲಿಂಗದಲ್ಲಿ ಐಕ್ಯವನ್ನು ಹೊಂದಿ ಅದೃಶ್ಯನಾದನು.

೭೭–೭೯. ಉಗ್ರವಾದ ಪರಾಕ್ರಮವುಳ್ಳ ರಾಜನಾದ ಉಗ್ರನು ಆ ಕಾಲ ಮೊದಲುಗೊಂಡು, ಭೂಲೋಕದಲ್ಲಿ ತನ್ನ ತಂದೆಯು ಹೇಳಿದ ಪ್ರಕಾರದಿಂದ ರಾಜ್ಯ ವನ್ನು ಪಾಲಿಸುತ್ತಿದ್ದನು. ಆಗ ಎಲ್ಲರೂ ಚಕ್ರವರ್ತಿಯಾದ ಉಗ್ರನಿಂದ ಪಾಲಿತರಾಗಿ,

ಸಾರ್ವಭೌಮೇನ ಚೋಳೇನ ಸರ್ವಲೋಕಾಃ ಕೃತಾರ್ಥತಾಂ ।
ಸಂಪ್ರಾಪುಸ್ಸತತಂ ಪ್ರೀತಾಸ್ಸಪ್ರಜಾಸ್ತದ್ಗುಣಾಶ್ರಿತಾಃ ॥ ೭೮ ॥

ಜೀವನ್ಮುಕ್ತಿಪುರೇಶಸ್ಯ ಲೀಲೇಯಂ ದ್ವಾದಶೀ ಮತಾ ।
ಸಕೃಚ್ಛ್ರವಣಮಾತ್ರೇಣ ಪುರುಷಾರ್ಥಾನ್ ಪ್ರಯಚ್ಛತಿ ॥೭೯ ॥

ಇತಿ ಶ್ರೀಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ವಲಯಾದ್ಯಾಯುಧತ್ರಯಪದಾನಂ ನಾಮ
ಷೋಡಶೋಽಧ್ಯಾಯಃ

---

ಸಂತೋಷದಿಂದ ಕೂಡಿ, ತಮ್ಮ ಪ್ರಜೆಗಳೊಡನೆ ಒಳ್ಳೆಯ ಗುಣಗಳುಳ್ಳವರಾಗಿ ಕೃತಾರ್ಥರಾದರು. ಜೀವನ್ಮುಕ್ತಿ ಪುರೇಶ್ವರನು ನಡಸಿದ ಹನ್ನೆರಡನೆಯ ಈ ಲೀಲೆಯು ಒಂದು ಸಾರಿ ಕೇಳಿದ ಮಾತ್ರದಿಂದಲೇ ಪುರುಷಾರ್ಥಗಳನ್ನು ಕೊಡುವುದು.

ಸಂಪದ್ಯುಕ್ತವಾದ ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯ
ಮಾಹಾತ್ಮ್ಯೆಯಲ್ಲಿ ವಲಯಾಧ್ಯಾಯುಧ ಪ್ರದಾನವೆಂದು ಹೆಸರುಳ್ಳ
ಹದಿನಾರನೆಯ ಅಧ್ಯಾಯವು ಮುಗಿದುದು.

॥ ಶ್ರೀಃ ॥
॥ ಶ್ರೀ ಶಿವಾಯ ನಮಃ ॥

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ

## ಸಪ್ತದಶೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

**ಸಿಂಧೋಶ್ಶಕ್ತ್ಯಾ ತಾಡನಂ ಚ ಯಯಾ ಸುಂದರನಾಯಕಃ ।**
**ಉಗ್ರೇಣ ಕಾರಯಾಮಾಸ ತಾಂ ಲೀಲಾಂ ಕಥಯಾಮಿ ವಃ ॥ ೧ ॥**

**ಪ್ರಾಜ್ಞೇ ಸತಿ ಮಹೀಪಾಲೇ ಪ್ರಜಾಪಾಲನ ತತ್ಪರೇ ।**
**ಉಗ್ರಾಭಿಧಾನೇ ಸನ್ಮಾರ್ಗಸಮ್ಮತೇ ಸತ್ಯಸಂಗರೇ ॥ ೨ ॥**

**ಪ್ರಜಾಸ್ಸರ್ವಾಶ್ಚ ಸಂತುಷ್ಟಾಃ ಸಂಪದಾ ಪರಯಾ ನ್ವಿತಾಃ**
**ಸ್ವಸ್ವಧರ್ಮರತಾಸ್ಸ್ವಚ್ಛಮಾನಸಾ ಅಭವನ್ಸದಾ ॥ ೩ ॥**

---

### ಹದಿನೇಳನೆಯ ಅಧ್ಯಾಯವು.

೧-೩. ಅಗಸ್ತ್ಯಋಷಿಯು ಹೇಳಿದನು:—ಸುಂದರೇಶ್ವರನು ಶಕ್ತ್ಯಾಯುಧವನ್ನು ಸಮುದ್ರಕ್ಕೆ ಉಗ್ರಪಾಂಡ್ಯನಿಂದ ಪ್ರಯೋಗ ಮಾಡಿಸಿದ ಲೀಲೆಯನ್ನು ನಿಮಗೆ ಹೇಳುವೆನು. ಉಗ್ರಪಾಂಡ್ಯರಾಜನು ತಿಳುವಳಿಕೆಯುಳ್ಳವನಾಗಿದ್ದನು. ಸತ್ಯಸಂಧನಾಗಿ ಸತ್ಪುರುಷರು ಒಪ್ಪುತ್ತಿರುವ ಕ್ರಮದಿಂದ ರಾಜ್ಯದಲ್ಲಿರುವ ಪ್ರಜೆಗಳನ್ನು ರಕ್ಷಿಸುತ್ತಿರುವಾಗ ಪ್ರಜೆಗಳು ಎಲ್ಲರೂ ಸಂತೋಷವುಳ್ಳವರಾಗಿ, ಬಹಳ ಐಶ್ವರ್ಯವುಳ್ಳವರಾಗಿ ತಮ್ಮ ತಮ್ಮ ಧರ್ಮಗಳನ್ನು ಆಚರಿಸುತ್ತಾ, ಯಾವಾಗಲೂ ಪರಿಶುದ್ಧವಾದ ಮನಸ್ಸುಳ್ಳವರಾಗಿದ್ದರು. ರಾಜನು ಪ್ರಜೆಗಳನ್ನು ಅನುರಾಗದಿಂದ ಕಾಣುತ್ತಿರುವುದರಿಂದ ಅವನಿಗೆ ರಾಜಶಬ್ದವು ಸಾರ್ಥಕವಾಗಿರುವುದು.

ರಂಜನಾ ತ್ಖಲು ರಾಜತ್ವಂ ನೃಣಾಮೇವಾನುಪಾಲನಾತ್ ।
ನೃಪತ್ವಂ ಪರಮೋ ಧರ್ಮಃ ಪ್ರಜಾನಾಮೇವ ಪಾಲನಂ ॥ ೪ ॥

ರಾಜನ್ನಾನಿತಿ ಮಹಾತೇಜಾಸ್ಸುಂದರೇಶಾತ್ಮಜಃ ಪ್ರಭುಃ
ಸಹಾಯೈಸ್ಸಚಿವೈಸ್ಸಾರ್ಧಂ ಸದಾ ಪಾಲಯತಿ ಪ್ರಜಾಃ ॥ ೫ ॥

ವೃಷ್ಟಿಭಿರ್ಹೃಷ್ಟಪುಷ್ಟೈಶ್ಚರಮ್ಯಹಾಟಕಭೂಷಣೈಃ
ಜನೈರ್ನಿಬಿಡಿತಂ ಸರ್ವಂ ಸಸ್ಯಗೋಧನಪೂರಿತಂ ॥ ೬ ॥

ದೇವತಾಯತನಾನಾಂ ಚ ರಾಶಿಭಿಃ ಪರಿವಾರಿತಂ ।
ಅಸಪತ್ನಂ ಮಹದ್ರಾಜ್ಯಂ ಚಕಾರೋಗ್ರಃ ಪ್ರತಾಪವಾ ॥ ೭ ॥

ನದ್ಯಃ ಕುಟಿಲಗಾ ಏವ ನ ತಸ್ಯ ವಿಷಯೇ ಪ್ರಜಾಃ
ಕ್ಷಪಾ ಏವ ತಮೋಯುಕ್ತಾ ರಜೋಯುಕ್ತಾ ಮೃಗೀದೃಶಃ ॥ ೮ ॥

---

೪–೬ ರಾಜನಿಗೆ ತನ್ನ ರಾಜ್ಯದಲ್ಲಿರುವ ಪ್ರಜೆಗಳನ್ನು ಸರಿಯಾಗಿ ರಕ್ಷಿಸುವುದು ಉತ್ತಮವಾದ ಧರ್ಮಾಚರಣೆಯು ಎಂದು ಉಗ್ರಪಾಂಡ್ಯರಾಜನು ತಿಳಿದು ತನಗೆ ಸಹಾಯಕರಾದ ಮಂತ್ರಿಗಳೊಡನೆ ಯಾವಾಗಲೂ ಪ್ರಜೆಗಳನ್ನು ಕಾಪಾಡುತ್ತಿದ್ದನು. ಸುಂದರೇಶ್ವರನ ಪುತ್ರನಾದ ಬಹಳ ತೇಜಶ್ಶಾಲಿಯಾದ ಉಗ್ರಪಾಂಡ್ಯ ರಾಜನು ರಾಜ್ಯಭಾರ ಮಾಡುವಾಗ ಕಾಲ ಕಾಲಕ್ಕೆ ಸರಿಯಾಗಿ ಮಳೆ ಬೆಳೆಗಳು ಆಗುತ್ತಿದ್ದವು. ಆದರಿಂದ ಸಂತೋಷ ಐಶ್ವರ್ಯಗಳಿಂದ ಕೂಡಿರುವ ಪ್ರಜೆಗಳು ಮನೋಹರವಾದ ಚಿನ್ನದ ಆಭರಣಗಳನ್ನು ಧರಿಸಿದ್ದರು. ಈ ಪ್ರಕಾರವಾದ ಜನಗಳಿಂದ ತುಂಬಿರುವ ಆ ರಾಜ್ಯದಲ್ಲಿ ಬೆಳೆಯೂ, ಗೋವುಗಳೂ, ದ್ರವ್ಯವೂ, ಎಲ್ಲಾ ಕಡೆಯಲ್ಲಿಯೂ ತುಂಬಿದ್ದವು.

೭–೧೦. ಪರಾಕ್ರಮಶಾಲಿಯಾದ ಉಗ್ರಪಾಂಡ್ಯರಾಜನು ದೇವಾಲಯಗಳೂ ಮನೆಗಳೂ ತುಂಬಿರುವ ದೊಡ್ಡ ರಾಜ್ಯವನ್ನು ಶತ್ರುಗಳ ಕಾಟವಿಲ್ಲದಂತೆ ಕಾಪಾಡುತ್ತಿದ್ದನು. ಪ್ರಜೆಗಳಿಗೆ ಕುಟಿಲ ಮಾರ್ಗದಲ್ಲಿ ಪ್ರವರ್ತನೆಯು ಇಲ್ಲದೆ, ನದಿಗಳಲ್ಲಿಯೇ ಇತ್ತು. ತಮಸ್ಸೆಂಬುವುದು ರಾತ್ರಿಯಲ್ಲಿತ್ತು. ಪ್ರಜೆಗಳಲ್ಲಿ ಇರಲಿಲ್ಲ. ರಜಸ್ಸೆಂಬುವುದು ಸ್ತ್ರೀಯರಲ್ಲಿ ಇತ್ತು. ದಂಡವನ್ನು ಉಪಯೋಗಿಸುವುದು ಎಂಬ ಶಬ್ದವು, ಕೊಡಲಿ, ಗುದ್ದಲಿ, ಇವುಗಳ ವಿಷಯದಲ್ಲಿ ಮಾತ್ರವೇ ಇತ್ತು. ಕುಷ್ಠವೆಂಬುದು ವೈದ್ಯರು

ದಂಡವಾರ್ತಾಪಿ ಪರಶುಕುದ್ದಾಲವ್ಯಜನಾದಿಷು ।
ಔಷಧೇಷ್ವೇವ ಕುಷ್ಠೋಽಸ್ತಿ ತದ್ಯೋಗ್ಯೋ ನಹಿ ಮಾನವೇ ॥ ೯ ॥

ಕಠೋರಹೃದಯಾಸ್ತತ್ರ ಸೀಮಂತಿನ್ಯೋ ನ ಮಾನವಾಃ
ವಿಭ್ರಮಸ್ತತ್ರ ನಾರೀಷು ನ ವಿದ್ವತ್ಸು ಜನೇಷು ಚ ॥ ೧೦ ॥

ಇಭಾ ಏವ ಪ್ರಮತ್ತಾಶ್ಚ ಯುದ್ಧಂ ವೀಚ್ಯೋ ರ್ಜಲಾಶಯೇ ।
ದಾನಹಾನಿರ್ಗಜೇಷ್ವೇವ ದ್ರುಮೇಷ್ವೇವ ಹಿ ಕಂಟಕಾಃ ॥ ೧೧ ॥

ಸಯೂಪಾಸ್ತತ್ರ ವೈ ಗ್ರಾಮಾಸ್ಸಂತಿ ವಿದ್ವಜ್ಜನೋಷಿಕಾಃ ।
ಪುಷ್ಪಿತಾಃ ಫಲಿತಾ ನಿತ್ಯಂ ಬಹವಃ ಪುಷ್ಪಭೂರುಹಾಃ ॥ ೧೨ ॥

ಲಾಂಗಲೀಪನಸಾಮ್ರಾದ್ಯಾಸ್ಸಂತಿ ತತ್ರ ಪದೇಪದೇ ।
ಉದ್ಯಾನಾನಿ ವಿಚಿತ್ರಾಣಿ ಪುಷ್ಪಿತಾನಿ ನಿರಂತರಂ ॥ ೧೩ ॥

---

ಸಿದ್ಧಪಡಿಸುವ ಔಷಧಿಯಲ್ಲಿ ಮಾತ್ರವೇ ಇತ್ತು. ಪ್ರಜೆಗಳಲ್ಲಿ ಇರಲಿಲ್ಲ. ಸ್ತ್ರೀಯರಿಗೆ ಕಠಿನವಾದ ಹೃದಯವು ಇತ್ತು. ಜನರು ಕ್ರೂರರಾಗಿ ಇರಲಿಲ್ಲ. ವಿಭ್ರಮವು (ಭ್ರಮೆಯಿಂದ ದಾರಿ ತಪ್ಪುವುದು, ಸಡಗರ) ಸ್ತ್ರೀಯರಲ್ಲಿ ಇತ್ತು. ವಿದ್ವಾಂಸರೂ ಜನರೂ ಭ್ರಮೆಗೊಳ್ಳುತ್ತಿರಲಿಲ್ಲ.

೧೧-೧೩. ಆನೆಗಳು ಮಾತ್ರವೇ ಬಹಳ ಮದಿಸಿದ್ದವು. ನೀರಿನ ಕೊಳದಲ್ಲಿ ತೆರೆಗಳಿಗೆ ಮಾತ್ರ ಯುದ್ಧವಾಗುತ್ತಿತ್ತು. ದಾನ ಹಾನಿ ಎಂಬುವದು ಆನೆಗಳಲ್ಲಿ ಮಾತ್ರವೇ ಇತ್ತು. ಮನುಷ್ಯರು ಯಥೇಚ್ಛವಾಗಿ ದಾನಮಾಡುತ್ತಿದ್ದರು. ಕಂಟಕವೆಂಬುವುದು ಮರಗಳಲ್ಲಿ ಮಾತ್ರವೇ ಇತ್ತು. (ಮುಳ್ಳು) ಜನರು ಇತರರಿಗೆ ಮುಳ್ಳಿನಂತೆ ಇರಲಿಲ್ಲ. ಆ ರಾಜ್ಯದ ಗ್ರಾಮಗಳಲ್ಲಿ ಯೂಪಸ್ತಂಬಗಳು ಇದ್ದವು. ತಿಳುವಳಿಕೆಯಿರುವ ವಿದ್ವಾಂಸರು ಅಲ್ಲಿ ವಾಸಿಸುತ್ತಿದ್ದರು. ಪವಿತ್ರವಾದ ಮರಗಳು, ಹೂವು ಹಣ್ಣುಗಳಿಂದ ತುಂಬಿದ್ದವು. ಹಲಸಿನಮರ, ತೆಂಗಿನಮರಗಳು, ಲಾಂಗಲೀವೃಕ್ಷಗಳು ಅಲ್ಲಲ್ಲಿ ಬಹಳವಾಗಿದ್ದವು. ಉದ್ಯಾನವನಗಳಲ್ಲಿ ಅನೇಕ ವಿಧವಾದ ಹೂವುಗಳು, ಅರಳಿ; ಯಾವಾಗಲೂ ಬಹಳ ಚೆನ್ನಾಗಿ ಕಾಣಿಸುತ್ತಿದ್ದವು. ಕೆರೆ, ಕೊಳ, ಇವುಗಳಲ್ಲಿ ಕಮಲಗಳೂ, ನೈದಿಲೆಹೂವುಗಳೂ ಬಹಳವಾಗಿದ್ದವು.

ತಟಾಕಾನ್ಯಪಿ ಕಲ್ಹಾರಕಮಲೋತ್ಪಲವಂತಿ ಚ ।
ಇತ್ಯಾದಿಗುಣವದ್ದೇಶೇ ತಸ್ಮಿನ್ ರಾಜ್ಯಂ ಪ್ರಶಾಸತಿ ॥ ೧೪ ॥

ಧರ್ಮೇಣ ರಾಜಧರ್ಮಜ್ಞೇ ಶೌರ್ಯೌದಾರ್ಯಗುಣಾನ್ವಿತೇ ।
ಮಾರ್ತಾಂಡವತ್ಪ್ರತಪತಿ ದುರ್ಹೃದಾಂ ಹೃದಿ ನೇತ್ರಯೋಃ ॥ ೧೫ ॥

ಸೋಮವತ್ಸುಹೃದಾಂ ಜಾತೇ ಮಾನಸೇಷು ಚ ನೇತ್ರಯೋಃ
ವಿಶೇಷತೋ ವಿವೃದ್ಧಿಶ್ಚ ಸರ್ವೇಷಾಂ ಪ್ರಾಣಿನಾಮಭೂತ್ ॥ ೧೬ ॥

ಉಗ್ರೇಣ ಸಾರ್ವಭೌಮೇನ ಯಜ್ಞಾಶ್ಚ ಬಹುದಕ್ಷಿಣಾಃ ।
ವಿವಿಧಾ ರಾಜಸೂಯಾದ್ಯಾಃ ಕೃತಾಶ್ಚ ವಿಧಿನಾದರಾತ್ ॥ ೧೭ ॥

ಆಖಂಡಲವದಿಷುಭಿಃ ಕೋದಂಡಂ ಕಲಯನ್ರಣೇ ।
ಪಲಾಯಮಾನೈರಾಲೋಕೇ ಶತ್ರುಸೇನಾಸಮೂಹಕೈಃ ॥ ೧೮ ॥

ಅಥಾಶ್ವಮೇಧಯಜ್ಞಾನಾಂ ಕೃತಾಷ್ಷಣ್ಣವತಿಃ ಕ್ರಮಾತ್ ।
ಉಗ್ರೇಣ ಪಾಂಡ್ಯರಾಜೇನ ದೇವರಾಜಾಧಿಕಶ್ರಿಯಾ ॥ ೧೯ ॥

---

೧೪-೧೬. ಮೇಲೆ ಹೇಳಿದ ಗುಣಗಳಿಂದ ಕೂಡಿರುವ ದೇಶಗಳುಳ್ಳ ಆ ರಾಜ್ಯವನ್ನು ಶೌರ್ಯ, ಔದಾರ್ಯವೇ ಮೊದಲಾದ ಗುಣಗಳುಳ್ಳ, ರಾಜಧರ್ಮವನ್ನು ತಿಳಿದಿರುವ ಉಗ್ರಪಾಂಡ್ಯರಾಜನು ಧರ್ಮದಿಂದ ಆಳುತ್ತಿರುವಾಗ ಅವನು ಶತ್ರುಗಳ ಮನಸ್ಸು, ಮತ್ತು ನೇತ್ರಗಳಿಗೆ ಸೂರ್ಯನಂತೆ ತೇಜಶ್ಶಾಲಿಯಾಗಿಯೂ, ಮಿತ್ರರ ಮನಸ್ಸು, ನೇತ್ರಗಳಿಗೆ ಚಂದ್ರನಂತೆ ಆಹ್ಲಾದಕರನಾಗಿಯೂ, ಇದ್ದನು. ಇದರಿಂದ ಆ ರಾಜ್ಯದಲ್ಲಿರುವ ಪ್ರಾಣಿಗಳಿಗೆ ದಿನೇ ದಿನೇ ಅಭಿವೃದ್ಧಿಯು ಬಹಳ ಹೆಚ್ಚಾಗಿತ್ತು.

೧೭-೨೧. ಉಗ್ರಪಾಂಡ್ಯರಾಜನು, ಬಹು ದಕ್ಷಿಣೆಗಳುಳ್ಳ ರಾಜಸೂಯವೇ ಮೊದಲಾದ ಯಜ್ಞಗಳನ್ನು ಆದರದಿಂದ ಮಾಡಿದನು. ಮತ್ತು ಅವನು ಇಂದ್ರನಂತೆ ಯಜ್ಞಗಳಲ್ಲಿ ಧನುಸ್ಸನ್ನು ಹಿಡಿದು ಶತ್ರುಗಳನ್ನೂ ಅವರ ಸೇನೆಗಳನ್ನೂ ಗೆದ್ದು ತೊಂಬತ್ತಾರು ಅಶ್ವಮೇಧಯಾಗಗಳನ್ನು ಮಾಡಿದನು. ಇಂದ್ರನಿಗೆ ತನಗಿಂತಲೂ ಹೆಚ್ಚಾದ ಐಶ್ವರ್ಯ ಪರಾಕ್ರಮಗಳುಳ್ಳ ಉಗ್ರಪಾಂಡ್ಯ ಚಕ್ರವರ್ತಿಯ ವಿಷಯದಲ್ಲಿ ಭಯವೂ, ಅಸೂಯೆಯೂ, ಉಂಟಾಯಿತು. ಆದ್ದರಿಂದ ಇಂದ್ರನು ಕೋಪಗೊಂಡು ಈ ಉಗ್ರಪಾಂಡ್ಯನಿಗೆ ಇಷ್ಟು ಐಶ್ವರ್ಯಕ್ಕೆ ಕಾರಣವು ಧರ್ಮದಿಂದ ರಾಜ್ಯ ಪಾಲನೆ

ಇಂದ್ರೋ ಭೀತ್ಯಾಸೂಯಯಾ ಚ ಮಹತ್ಯಾ ಚ ಕ್ರುಧಾ ಯುತಃ
ಪ್ರಜಾರಕ್ಷಣಮೇವಾಸ್ಯ ಸಂಪದ್ವೃದ್ಧೇಶ್ಚ ಕಾರಣಂ　　॥ ೨೦ ॥

ತದ್ಧರ್ಮಹಾನಿಃ ಕರ್ತವ್ಯಾ ಮಯೋಪಾಯಾಂತರೇಣ ಚ ।
ತಸ್ಯ ಸಂಪದ್ವಿವೃದ್ಧಿಶ್ಚ ಯಥಾ ಸದ್ಯೋ ವಿನಶ್ಯತಿ　　॥ ೨೧ ॥

ಇತಿ ನಿಶ್ಚಿತ್ಯ ಮತಿಮಾನಾಹೂಯ ಸರಿತಾಂ ಪತಿಂ ।
ಮಹಾಕಲ್ಲೋಲಜಾಲೈಶ್ಚ ಭಯಂಕರಮಹರ್ನಿಶಂ　　॥ ೨೨ ॥

ಕಬಳೀಕರ್ತುಮುಗ್ರಸ್ಯ ಪುರೀಮತ್ಯಮರಾವತೀಂ ।
ಮಧುರಾಂ ಚೋದಯಾಮಾಸ ಮಹದಂಭಃ ಪ್ರವಾಹಕೈಃ　　॥ ೨೩ ॥

ದೇವೇಂದ್ರಾಜ್ಞಾಭಯಾತ್ಸದ್ಯಸ್ಸಮುದ್ರಸ್ಸಂಭ್ರಮಾನ್ವಿತಃ
ಆಯಾತಿ ಮೂಲಲಿಂಗಸ್ಯ ಮಹಿಮಾಮವಿಚಾರಯನ್　　॥ ೨೪ ॥

ಉದಧಾವರ್ಧರಾತ್ರೇ ತು ಪುರತೋ ಮಧುರಾಗತೇ ।
ಮಹದ್ಭಿರ್ಗಿರಿಸಂಕಾಶೈಃ ಕಲ್ಲೋಲೈಃ ಪೂರಿತಾತ್ಮನಿ　　॥ ೨೫ ॥

---

ಯಾಗಿರುವುದು. ಯಾವುದಾದರೂ ಉಪಾಯದಿಂದ ಇದಕ್ಕೆ ಕುಂದಕವನ್ನುಂಟು ಮಾಡಿದರೆ ಐಶ್ವರ್ಯವು ಕಡಿಮೆಯಾಗುವುದು ಎಂದು ಮನಸ್ಸಿನಲ್ಲಿ ನಿಶ್ಚಯ ಮಾಡಿದನು.

೨೨–೨೪. ಆಮೇಲೆ ಬುದ್ಧಿವಂತನಾದ ಇಂದ್ರನು ನದಿಗಳೆಲ್ಲಕ್ಕೂ ಒಡೆಯನಾದ, ಯಾವಾಗಲೂ ಅಲೆಗಳಿಂದ ಕೂಡಿ ಭಯಂಕರನಾದ ಸಮುದ್ರನನ್ನು ಕರೆದು "ನೀನು ನಿನ್ನ ಬಹಳವಾದ ನೀರಿನ ಪ್ರವಾಹದಿಂದಲೂ, ನಿನ್ನಲ್ಲುಂಟಾಗುತ್ತಿರುವ ತೆರೆಗಳಿಂದಲೂ, ಅಮರಾವತಿಯನ್ನು ಮೀರಿ ಇರುವ ಮಧುರಾನಗರವನ್ನು ಮುಳುಗಿಸು" ಎಂದು ಹೇಳಿದನು. ದೇವತೆಗಳಿಗೆ ಅಧಿಪನಾದ ಇಂದ್ರನ ಆಜ್ಞೆಯನ್ನು ಕೇಳಿ ಸಮುದ್ರನು ಭಯದಿಂದ ಕೂಡಿ, ಮೂಲಲಿಂಗವಾದ ಹಾಲಾಸ್ಯೇಶ್ವರನ ಮಹಿಮೆಯನ್ನು ಗಣನೆಗೆ ತರದೆ ಸಂಭ್ರಮದಿಂದ ಮಧುರಾನಗರವನ್ನು ಮುಳುಗಿಸಲು ಸಿದ್ಧನಾದನು.

೨೫–೨೭. ಹೀಗಿರುವಾಗ ಒಂದು ದಿನ ಅರ್ಧರಾತ್ರಿಯ ವೇಳೆಯಲ್ಲಿ ಬೆಟ್ಟದಂತೆ ಇರುವ ತೆರೆಗಳಿಂದ ತುಂಬಿರುವ ಸಮುದ್ರನು ಮಧುರಾನಗರವನ್ನು

ಭೀತಾಸ್ಸದ್ಯಃ ಪ್ರಜಾಸ್ಸರ್ವಾಃ ಪ್ರಪಲಾಯಿತು ಮುದ್ಯತಾಃ ।
ಹಾಲಾಸ್ಯೇಶೋ ಮಹೇಶಾನಸ್ಸರ್ವಜ್ಞಃ ಕರುಣಾನಿಧಿಃ

ಸಮಾಲೋಕ್ಯ ಪ್ರಜಾನಾಂ ತ ಮುಪಪ್ಲವ ಮೀಶ್ವರಃ
ಉಗ್ರಾಭಿಧಾನಂ ಭೂಪಾಲಂ ಸ್ವಪ್ನ ಎನ ಮಗಾತ್ಕ್ಷಣಾತ್ ॥ ೨೭ ॥

ಉತ್ತಿಷ್ಠೋತ್ತಿಷ್ಠ ನೃಪತೇ ತ್ವದೀಯಾಂ ಮಧುರಾಪುರೀಂ ।
ಜಲಧಿಃ ಕಬಳೀಕರ್ತುಂ ಸಮುದ್ಯುಕ್ತೋ ಮಹಾರ್ಣವಃ ॥ ೨೮ ॥

ಕಿಂ ತ್ವಂ ರಾಜಾಸಿ ಭೂಪಾಲ ಪ್ರಜಾಶ್ಚೈತಾನ ರಂಜಯನ್ ।
ಕ್ಷತಾತ್ತ್ರಾಯತ ಇತ್ಯೇವಂ ಪ್ರಾಣಿನಃ ಕ್ಷತ್ರಸಂಜ್ಞಕಾಃ ॥ ೨೯ ॥

ನರಾಣಾಂ ಪಾಲನಾದೇವ ನೃಪೋ ಭವತಿ ಭೂಪತಿಃ
ಎತದ್ವಿಪರ್ಯಯಪ್ರಾಯಃ ಕಿಂ ತ್ವಂ ಜೀವಿತುಮರ್ಹಸಿ ॥ ೩೦ ॥

ಲಕ್ಷ್ಮೀಂ ವಿಹಾಯ ಶರ್ವರ್ಯಾಂ ನಿದ್ರಯಾ ಕಿಂ ವಿನೋದಸಿ ।
ರಕ್ಷ್ಯಾಃ ಪ್ರಜಾಃ ಪ್ರಜಾನಾಥ ಪಾರಾವಾರಭವಾತ್ ಭಯಾತ್ ॥ ೩೧ ॥

---

ಮುಳುಗಿಸಲು ಪ್ರಾರಂಭಿಸಿದನು. ಆ ಕ್ಷಣದಲ್ಲಿಯೇ ಜನಗಳೆಲ್ಲರೂ ಹೆದರಿಕೆಯಿಂದ ಓಡುವುದಕ್ಕೆ ಸಿದ್ಧರಾದರು. ಆಗ ಹಾಲಾಸ್ಯೇಶ್ವರನಾಗಿ ಅಲ್ಲಿಯೇ ಇದ್ದ ಸರ್ವಜ್ಞನಾದ, ಕರುಣಾನಿಧಿಯಾದ, ಮಹೇಶ್ವರನು ಜನಗಳ ಆ ಪ್ರಕಾರವಾದ ತೊಂದರೆಯನ್ನೂ, ಸಮುದ್ರನು ಮಾಡುವ ಕಾರ್ಯವನ್ನೂ ನೋಡಿ ಉಗ್ರಪಾಂಡ್ಯಚಕ್ರವರ್ತಿಯ ಸ್ವಪ್ನ ದಲ್ಲಿ ಆ ಕ್ಷಣದಲ್ಲಿಯೇ ಕಾಣಿಸಿಕೊಂಡನು.

೨೮–೩೧. ಹಾಲಾಸ್ಯೇಶ್ವರನು, "ಎಲೈ ರಾಜನೆ, ಮೇಲಕ್ಕೆ ಏಳು. ನಿನ್ನ ಮಧುರಾನಗರವನ್ನು ಸಮುದ್ರನು ಮುಳುಗಿಸುವುದರಲ್ಲಿ ಉದ್ಯುಕ್ತನಾಗಿರುವನು. ಪ್ರಜೆಗಳನ್ನು ನೀನು ರಕ್ಷಿಸದಿದ್ದರೆ ನೀನು ರಾಜನಲ್ಲ. ವಿಪತ್ತಿನಿಂದ ಕಾಪಾಡುವವನು ಕ್ಷತ್ರಿಯನೆನಿಸಿಕೊಳ್ಳುವನು. ನರರನ್ನು ರಕ್ಷಿಸುವುದರಿಂದ ನೃಪನಾಗುವನು. ಇದಕ್ಕೆ ವ್ಯತ್ಯಾಸವಾಗಿದ್ದುಕೊಂಡು ರಾಜನಾಗಿ ಬದುಕಿರುವುದು ವ್ಯರ್ಥವು. ಹೀಗೆ ನೀನು ರಾತ್ರಿಯಲ್ಲಿ ಲಕ್ಷ್ಮಿಯನ್ನು ಕಳೆದುಕೊಂಡು ನಿದ್ರೆಯನ್ನು ಭೋಗಿಸುವುದರಿಂದ ಫಲವಿಲ್ಲವು. ಸಮುದ್ರನ ಭಯದಿಂದ ಪ್ರಜೆಗಳನ್ನು ರಕ್ಷಿಸುವುದೇ ನಿನ್ನ ಧರ್ಮವು.

ಪ್ರಜಾನಾಂ ರಕ್ಷಣೋಪಾಯಂ ಮತ್ತ ಶ್ಶೃಣು ಮಹೀಪತೇ ।
ಪುರಾ ದತ್ತಾಂ ಮಯಾ ಶಕ್ತಿಂ ಆದಾಯಾಬ್ಧೌ ಜವಾತ್ಕ್ಷಿಪ ॥ ೩೨ ॥

ಶಕ್ತಿತಾಡನಭೀತಸ್ಸ ನಿರ್ವೀರ್ಯೋಽಬ್ಧಿ ರ್ಭವಿಷ್ಯತಿ ।
ಅಗತ್ವಾ ಪ್ರಸ್ಥಿತಶ್ಚೇತ್ತ್ವಂ ತ್ವಾಮೇನಾಂ ಚ ಪುರೀಂ ತವ ॥ ೩೩ ॥

ಮಧುರಾಂ ಸರ್ವಲೋಕಾಭ್ಯಾಮಸೌ ಕಬಳಯಿಷ್ಯತಿ ।
ಇತ್ಯುಕ್ತ್ವಾ ಭಸ್ಮನಾ ಫಾಲಮಲಂಕೃತ್ಯಾತ್ಮಜಸ್ಯ ಚ ॥ ೩೪ ॥

ಅನುಗ್ರಹಕರೇಣಾಪಿ ಕರೇಣೋತ್ಥಾಪ್ಯ ತಂ ಮುದಾ ।
ಸತ್ವರಂ ಗಚ್ಛಗಚ್ಛೇತಿ ಸಮಾಜ್ಞಾಪ್ಯ ತಿರೋದಧೇ ॥ ೩೫ ॥

ಸ ಬುಧ್ವಾ ಸಹಸೋತ್ಥಾಯ ಮಂತ್ರಿಭ್ಯ ಸ್ಸ್ವಪ್ನಮಬ್ರವೀತ್ ।
ಸ್ವಪ್ನವೃತ್ತಾಂತಮಖಿಲಂ ಶ್ರುತ್ವಾ ವಿಸ್ಮಿತಮಾನಸಾಃ ॥ ೩೬ ॥

ಈಶ ಏವ ಪ್ರೇಷಯಿತಾ ನೈವಾನ್ಯೋ ಮಧುರಾಪತೇ ।
ಯಥಾ ಶ್ರುತಂ ತ್ವಯಾ ಸ್ವಪ್ನೇ ತಥಾ ಕುರ್ವಿತಿ ತೇಬ್ರುವನ್ ॥ ೩೭ ॥

---

೩೨–೩೫. ಎಲೈ ರಾಜನೆ, ಪ್ರಜೆಗಳನ್ನು ರಕ್ಷಿಸುವ ಉಪಾಯವನ್ನು ನಾನು ಹೇಳುವೆನು ! ಕೇಳು. ನಾನು ನಿನಗೆ ಹಿಂದೆ ಕೊಟ್ಟಿರುವ ಶಕ್ತ್ಯಾಯುಧದಿಂದ ಬೇಗನೆ ಸಮುದ್ರವನ್ನು ಹೊಡಿ. ಶಕ್ತಿಯ ಏಟಿನಿಂದ ಸಮುದ್ರನಿಗೆ ಬಲವು ಕುಂದುವುದು. ನೀನು ಈಗ ಹೊರಗಡೆಗೆ ಹೊರಡದೆ, ಇದ್ದಲ್ಲಿಯೇ ಇದ್ದರೆ, ನಿನ್ನನ್ನೂ, ನಿನ್ನ ಮಧುರಾನಗರಿಯನ್ನೂ ಸಮುದ್ರನು ಮುಳುಗಿಸಿ ಬಿಡುವನು.'' ಎಂದು ಹೇಳಿ, ತನ್ನ ಮಗನಿಗೆ ಹಣೆಯಲ್ಲಿ ಭಸ್ಮವನ್ನು ಇರಿಸಿ, ವರದ ಹಸ್ತದಿಂದ ಅವನಿಗೆ ಅನುಗ್ರಹಿಸಿ, ತನ್ನ ಕೈಯಿಂದಲೇ ಅವನಿಗೆ ಎಚ್ಚರಮಾಡಿ, ಬೇಗ ಹೊರಡು ಎಂದು ಹೇಳಿ, ತನ್ನ ಮೂಲಲಿಂಗದಲ್ಲಿ ಅದೃಶ್ಯನಾದನು. ಅವನು ಬೇಗ ಎಚ್ಚರ ಗೊಂಡು ತನ್ನ ಮಂತ್ರಿಗಳಿಗೆ ತನಗಾದ ಸ್ವಪ್ನವನ್ನೆಲ್ಲವನ್ನೂ ಹೇಳಿದನು.

೩೬–೩೯. ಮಂತ್ರಿಗಳೆಲ್ಲರೂ ರಾಜನು ಹೇಳಿದ ಸ್ವಪ್ನವೃತ್ತಾಂತವನ್ನು ಕೇಳಿ, ಆಶ್ಚರ್ಯವನ್ನು ಹೊಂದಿ " ಎಲೈ ಮಧುರಾಧಿಪನೆ. ಈಶ್ವರನೇ ನಿನಗೆ ತಿಳಿಸಲು ಕಳುಹಿಸಿರಬೇಕು. ಅವನ ಹೊರತು ಬೇರೆ ಯಾವನೂ ಹೀಗೆ ಹೇಳುವವನು ಇಲ್ಲವು. ಸ್ವಪ್ನದಲ್ಲಿ ನಿನಗೆ ಹೇಳಿದಂತೆ ಕೆಲಸವನ್ನು ಮಾಡು " ಎಂದು ಹೇಳಿದರು. ಉಗ್ರಪಾಂಡ್ಯರಾಜನು ಬಹಳ ಶಕ್ತಿ ಮತ್ತು ಪರಾಕ್ರಮಗಳುಳ್ಳವನಾಗಿದ್ದ ಕಾರಣ,

ಉಗ್ರಸ್ಯಾತ್ಮಜ ಉಗ್ರಶ್ಚ ಮಹಾಬಲಪರಾಕ್ರಮಃ ।
ಮಹತೀಂ ಶಕ್ತಿಮಾದಾಯ ಗತ್ವಾಬ್ಧಿಂ ಸಂಭ್ರಮಾನ್ವಿತಃ ॥ ೩೮ ॥

ಸುಂದರೇಶೋಪದಿಷ್ಟಂ ತಮುಪದೇಶಂ ಸ್ಮರನ್ನಸೌ ।
ಅತಿಷ್ಠತ್ ಕ್ಷಣಮಂಭೋಧಿಂ ವಿಲೋಕ್ಯ ಗತಸಾಧ್ವಸಃ ॥ ೩೯ ॥

ಅಂಭಸ್ಸಂಘಟ್ಟನೋದ್ಭೂತತೂರ್ಯಧ್ವನಿಸಮಾಕುಲಂ ।
ದುಷ್ಟಸತ್ವಾನೇಕಭಟಪರಿಪೂರಿತಪಾರ್ಶ್ವಕಂ ॥ ೪೦ ॥

ಜಲಪ್ರವಾಹಸಂಘಟ್ಟಶಂಖಘೋಷಸಮಾಯುತಂ ।
ಶ್ರೇಣೀಕೃತೋರ್ಮಿಸಂಘಾತಪುರಶ್ಚರವಿಜೃಂಭಿತಂ ॥ ೪೧ ॥

ಸ್ವರಾಜ್ಯಗ್ರಹಣೋದ್ಯುಕ್ತಪರಸೈನ್ಯಮಿವಾಗತಂ ।
ಸಿದ್ಧವೇಷಂ ವಿಚಿತ್ರಂ ಚ ಧೃತ್ವಾ ಹಾಸ್ಯಸ್ಯನಾಯಕಃ ॥ ೪೨ ॥

ಸಾರ್ಧಂ ಕುಮಾರೇಣೋಗ್ರೇಣ ತತ್ರ ಗಚ್ಛತಿ ಸಂಭ್ರಮಾತ್ ।
ತತ್ಕಾರುಣ್ಯಕಟಾಕ್ಷೇಣ ಚೋದಿತಸ್ಸ ಮಹೀಪತಿಃ ॥ ೪೩ ॥

---

ದೊಡ್ಡದಾದ ಆ ಶಕ್ತ್ಯಾಯುಧವನ್ನು ಹಿಡಿದುಕೊಂಡು ಸಂಭ್ರಮದಿಂದ ಸಮುದ್ರದ ಹತ್ತಿರಕ್ಕೆ ಹೋಗಿ, ಸುಂದರೇಶ್ವರನು ಉಪದೇಶಮಾಡಿರುವುದನ್ನು ಸ್ಮರಿಸುತ್ತಾ ಒಂದು ಕ್ಷಣದವರೆಗೂ ಸಮುದ್ರವನ್ನು ನೋಡುತ್ತಾ ಭಯವಿಲ್ಲದವನಾಗಿ ನಿಂತಿದ್ದನು.

೪೦–೪೩. ಸಮುದ್ರವು ನೀರಿನ ಹೊಡೆಯುವಿಕೆಯಿಂದ ಉಂಟಾದ, ಉಗ್ರವಾದ ಧ್ವನಿಯ ಆರ್ಭಟದಿಂದ ಕೂಡಿತ್ತು. ಅನೇಕ ದುಷ್ಟಜಂತುಗಳು ಸೇನಾಜನರಂತೆ ಪಕ್ಕದಲ್ಲಿ ತುಂಬಿದ್ದವು. ನೀರಿನ ಪ್ರವಾಹದಲ್ಲಿ ದೊಡ್ಡ ದೊಡ್ಡ ಶಂಖಗಳು ಧ್ವನಿಮಾಡುತ್ತಾ ಇದ್ದವು. ಸಾಲು ಸಾಲಾಗಿರುವ ತೆರೆಗಳ ಸಮೂಹದಿಂದ ಮುಂದು ಮುಂದಕ್ಕೆ ಹೆಚ್ಚುತ್ತಾ, ಸಮುದ್ರವು ಬರುತ್ತಿತ್ತು. ಇದನ್ನು ನೋಡಿದರೆ, ತನ್ನ ರಾಜ್ಯವನ್ನು ಹಿಡಿಯುವುದಕ್ಕಾಗಿ ಬರುತ್ತಿರುವ ಶತ್ರುಸೇನೆಯಂತೆ ಕಾಣುತ್ತಿತ್ತು. ಹಾಲಾಸ್ಯೇಶ್ವರನು ಆಶ್ಚರ್ಯಕರವಾದ ಸಿದ್ಧಪುರುಷನ ವೇಷವನ್ನು ಧರಿಸಿ ಕುಮಾರನಾದ ಉಗ್ರರಾಜನು ನಿಂತಿದ್ದ ಪ್ರದೇಶಕ್ಕೆ ಬಂದು ಸೇರಿದನು. ಆ ಸಿದ್ಧಪುರುಷನ ದಯಾಪೂರಿತನಾದ ಕಟಾಕ್ಷದಿಂದ ಪ್ರೇರಿತನಾದ ರಾಜನು ಸಮುದ್ರದ ನೀರಿನ ಪ್ರವಾಹವನ್ನು ನಿಲ್ಲಿಸುವುದಕ್ಕಾಗಿ ಶಕ್ತ್ಯಾಯುಧವನ್ನು ಸಮುದ್ರದ ಮೇಲೆ ಪ್ರಯೋಗ ಮಾಡಲು ಉದ್ಯುಕ್ತನಾದನು.

ಜಲಪ್ರವಾಹಮಂಭೋಧೇಸ್ಸಂಹರ್ತುಂ ಶಕ್ತಿಮಾದಧೇ ।
ಸುವರ್ಣಕಿಂಕಿಣೀಜಾಲಕೋಲಾಹಲವಿರಾಜಿತಾಂ ॥ ೪೪ ॥

ಕಾಲಾನಲಸಮಜ್ವಾಲಾಮಾಲಾಮಂತ್ರಾಭಿಮಂತ್ರಿತಾಂ ।
ಶಕ್ತಿಂ ವಿಕ್ಷಿಪ್ಯ ವಿದಧೇ ಪಾರ್ಶ್ವದಘ್ನಂ ಸರಿತ್ಪತಿಂ ॥ ೪೫ ॥

ತಂ ದೃಷ್ಟ್ವಾ ಸುಂದರೇಶಸ್ತು ಸಹಸಾ ಪ್ರೀತಮಾನಸಃ ।
ಪ್ರದದಾದುಗ್ರಸಂಜ್ಞಾಯ ತಸ್ಮೈ ರಾಜ್ಞೇ ವರಾನ್ ಬಹೂನ್ ॥ ೪೬ ॥

ಸಂಘಂ ಚ ವಿದುಷಾಂ ತತ್ರ ಸಮಕಲ್ಪಯದೀಶ್ವರಃ ।
ಮಧುರಾಸಂಸ್ಥಿತಸ್ಸಂಘ ಉತ್ತಮೋ ಮಧ್ಯಮೋಽಭವತ್ ॥ ೪೭ ॥

ಅಯಂ ಸಂಘಃ ತೃತೀಯಶ್ಚ ಗಂಗಾತೀರೇ ಭವಿಷ್ಯತಿ ।
ಇತ್ಯುಕ್ತ್ವಾ ಲೋಕಹಿತಕೃತ್ ಜೀವನ್ಮುಕ್ತಿಪುರೇಶ್ವರಃ ॥ ೪೮ ॥

---

೪೪–೪೫. ಆಗ ರಾಜನು ಚಿನ್ನದ ಕಿರುಗಂಟೆಗಳ ಸಮೂಹದಿಂದ ಧ್ವನಿಮಾಡುತ್ತಿರುವ, ಪ್ರಳಯಕಾಲದ ಅಗ್ನಿಯ ಹಾಗೆ ಜ್ವಾಲಾಮಾಲೆಯಿಂದ ಕೂಡಿದ, ಮಂತ್ರದಿಂದ ಅಭಿಮಂತ್ರಿತವಾದ ಶಕ್ತ್ಯಾಯುಧವನ್ನು ಸಮುದ್ರದಮೇಲೆ ಪ್ರಯೋಗಿಸಿದನು. ಆದರಿಂದ ಸಮುದ್ರದಲ್ಲಿ ಸಾಧಾರಣವಾಗಿ ಒಬ್ಬ ಮನುಷ್ಯನು ಒಂದು ಪಾರ್ಶ್ವದಿಂದ ಮುಳುಗುವಷ್ಟು ನೀರು ನಿಂತಿತು.

೪೬–೪೮. ಸುಂದರೇಶ್ವರನು ಅದನ್ನು ನೋಡಿ, ಸಂತೋಷವುಳ್ಳಮನಸ್ಸಿನಿಂದ ಆ ಉಗ್ರರಾಜನಿಗೆ ಬಹಳ ವರಗಳನ್ನು ಕೊಟ್ಟನು. ಆಗ ಈಶ್ವರನು ಆಪ್ರದೇಶದಲ್ಲಿ ವಿದ್ವಾಂಸರ ಸಂಘವನ್ನು ಏರ್ಪಡಿಸಿದನು. "ಮಧುರಾನಗರದಲ್ಲಿ ಈ ಸಭೆಯು ಉತ್ತಮ, ಮಧ್ಯಮ ಎಂದು ಎರಡು ವಿಧವಾಗಿ ಇರುವುದು. ಕಾಶೀನಗರದಲ್ಲಿ ಮೂರನೆಯ ಸಂಘವು ಉಂಟಾಗುವುದು" ಹೀಗೆಂದು ಹೇಳಿ, ಜೀವನ್ಮುಕ್ತಿಪುರಿಗೆ ಅಧಿಪನಾದ ಸುಂದರೇಶ್ವರನು ಲೋಕಹಿತಕ್ಕಾಗಿ ಈ ಕಾರ್ಯವನ್ನು ನೆರವೇರಿಸಿದ

ಜ್ಯೋತಿರ್ಮಯಂ ವಪುರ್ಧೃತ್ವಾ ಕೋಟಿಶೀತಾಂಶುಸನ್ನಿಭಂ ।
ಪ್ರತ್ಯಕ್ಷೇಣ ಜನೈಸ್ಸರ್ವೈರ್ದೃಶ್ಯಮಾನೋತಿವಿಸ್ಮಿತೈಃ ॥ ೪೯ ॥

ನಭೋಮಾರ್ಗೇಣ ಚಾಗತ್ಯ ಮೂಲಲಿಂಗೇ ತಿರೋದಧೇ ।
ಏತದಾಶ್ಚರ್ಯಮಾಲೋಕ್ಯ ಸ ಸಮ್ರಾಟ್ಸಚಿವೈಃ ಸಹ ॥ ೫೦ ॥

ಸಹಸಾ ಚ ಸಮಾಗತ್ಯ ಮೂಲಲಿಂಗಸ್ಯ ಸನ್ನಿಧಿಂ ।
ಸ್ತುತ್ವಾ ಚ ವಿವಿಧೈಃ ಸ್ತೋತ್ರೈಃ ಪ್ರಣಿಪತ್ಯ ಪುನಃಪುನಃ ॥ ೫೧ ॥

ಸಮಸ್ತಸಸ್ಯಸಂಪೂರ್ಣಕೇದಾರಸಮಲಂಕೃತಾಂ ।
ಮಹಾವಿಶಾಲಗಂಭೀರ ತಟಾಕಪರಿಶೋಭಿತಾಂ ॥ ೫೨ ॥

ಮೂಲಲಿಂಗಪುರೋಭಾಗಮಾರಭ್ಯ ಮಹತೀಂ ಮಹೀಂ ।
ದದೌ ಸಮುದ್ರಪರ್ಯಂತಾಂ ಹಾಲಾಸ್ಯೇಶಾಯ ಶಂಭವೇ ॥ ೫೩ ॥

ಇಯಂ ತ್ರಯೋದಶೀ ಲೀಲಾ ಸರ್ವಾಪದ್ಭಂಜಿನೀ ಶ್ರುತಾ ।
ದುರ್ಗತೇರಪಿ ಸಂಹರ್ತ್ರೀ ಕಾಮಿತಾರ್ಥಪ್ರದಾಯಿನೀ ॥ ೫೪ ॥

---

ನಂತರ, ಅನೇಕ ಚಂದ್ರರಂತೆ ಇರುವ ತೇಜೋರೂಪವಾದ ಶರೀರವನ್ನು ಧರಿಸಿ, ಜನರೆಲ್ಲರೂ ನೋಡುತ್ತಿರುವಾಗಲೇ, ಅವರ ಎದುರಿಗೆ ಅಂತರಿಕ್ಷಮಾರ್ಗದಿಂದ ಬಂದು ಮೂಲಲಿಂಗದಲ್ಲಿ ಅದೃಶ್ಯನಾದನು.

೫೦-೫೪. ಮಂತ್ರಿಗಳೊಡನೆ ಇರುವ ಆ ಉಗ್ರಪಾಂಡ್ಯರಾಜನು ಈ ಆಶ್ಚರ್ಯವನ್ನು ನೋಡಿದ ಕೂಡಲೆ, ಹಾಲಾಸ್ಯೇಶ್ವರ ಲಿಂಗದ ಸನ್ನಿಧಿಗೆ ಬೇಗ ಬಂದು, ಅನೇಕ ಸ್ತೋತ್ರಗಳಿಂದ ಸ್ತುತಿಮಾಡಿ, ನಮಸ್ಕಾರವನ್ನು ಮಾಡಿದನು. ಅನಂತರದಲ್ಲಿ ಚೆನ್ನಾಗಿ ಬೆಳೆಯುವ ನೀರಾವರಿ ಪ್ರದೇಶಗಳಿಂದ ಕೂಡಿರುವ, ದೊಡ್ಡದಾದ ಕೆರೆಯಿಂದ ಅಲಂಕಾರವಾಗಿರುವ, ಭೂಪ್ರದೇಶವನ್ನು ಹಾಲಾಸ್ಯೇಶ್ವರ ದೇವಾಲಯ ಮೊದಲುಗೊಂಡು ಸಮುದ್ರದವರಿಗೂ ಹಾಲಾಸ್ಯೇಶ್ವರನಾದ ಶಿವನ ಸೇವೆಗಾಗಿ ಬಿಟ್ಟುಬಿಟ್ಟನು.

ಹಾಲಾಸ್ಯೇಶ್ವರನು ಮಾಡಿರುವ ಹದಿಮೂರನೆಯ ಈ ಲೀಲೆಯು ಕೇಳಿದವರಿಗೆ ವಿಪತ್ತೆಲ್ಲವನ್ನೂ ನಾಶಮಾಡಿ, ದುರ್ಗತಿಯನ್ನು ತಪ್ಪಿಸಿ, ಇಷ್ಟಾರ್ಥಗಳನ್ನು ಕೊಡುವುದು.

**ಇತಿ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ**
**ಮಾಹಾತ್ಮ್ಯೇ ಸಮುದ್ರತಾಡನಂ ನಾಮ**
**ಸಪ್ತದಶೋಽಧ್ಯಾಯಃ**

---

ಸಂಪದ್ಯುಕ್ತವಾದ ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯ
ಮಾಹಾತ್ಮ್ಯೆಯಲ್ಲಿ ಸಮುದ್ರತಾಡನವೆಂದು ಹೆಸರುಳ್ಳ
ಹದಿನೇಳನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಹಾಲಾಸ್ಯ ಮಾಹಾತ್ಮ್ಯಂ



## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಅಷ್ಟೋದಶೋऽಧ್ಯಾಯಃ

---

**॥ ಅಗಸ್ತ್ಯ ಉವಾಚ ॥**

**ಕದಂಬವನನಾಥಸ್ಯ ಕರುಣಾಸಾಗರಸ್ಯ ಚ ।**
**ವಕ್ಷ್ಯಾಮಿ ಮಹತೀಂ ಲೀಲಾಂ ವೃತ್ರಾರೇರ್ಮೌಳಿ ಭೇದಿನೀಂ ॥ ೧ ॥**

**ಇಂದ್ರಸ್ಯ ಪಾಂಡ್ಯಭೂಪಾನಾಂ ವೈಮತ್ಯಂ ಕಿಂಚಿದಸ್ತಿ ಹಿ ।**
**ಹೇತು ರ್ನಜ್ಞಾಯತೇ ತಸ್ಯ ದೈವಾದ್ಯೈಃ ಪ್ರಕೃತಿಭಿರ್ಜನ್ಯೈಃ ॥ ೨ ॥**

**ತದ್ಧೇತುರುಕ್ತಃ ಸ್ಕಂದೇನ ಮಯಾ ಪೃಷ್ಟೇನ ಸಾದರಂ ।**
**ಯೂಯಂ ಚ ತದ್ರಹಸ್ಯಂ ಚ ಶೃಣುಧ್ವಂ ಮುನಿಪುಂಗವಾಃ ॥ ೩ ॥**

---

### ಹದಿನೆಂಟನೆಯ ಅಧ್ಯಾಯವು.

೧-೩. ಅಗಸ್ತ್ಯಋಷಿಯು ಹೇಳಿದನು :—"ಬಹಳ ದಯೆಯುಳ್ಳವನಾದ ಕದಂಬವನಾಧಿಪನು, ಇಂದ್ರನ ಕಿರೀಟವನ್ನು ಭೇದಿಸುವಂತೆ ಮಾಡಿದ ಲೀಲೆಯನ್ನು ಹೇಳುವೆನು. ಇಂದ್ರನಿಗೂ ಪಾಂಡ್ಯದೇಶದ ದೊರೆಗಳಿಗೂ ಕೊಂಚಮಟ್ಟಿನ ವಿರೋಧವು ಇದ್ದೇ ಇತ್ತು. ಇದಕ್ಕೆ ಕಾರಣವನ್ನು ದೇವತೆಗಳೇ ಮೊದಲಾದವರು ಯಾರೂ ತಿಳಿದಿರಲಿಲ್ಲ. ನಾನು ಕುಮಾರಸ್ವಾಮಿಯನ್ನು ಪ್ರಶ್ನೆ ಮಾಡಿದಾಗ ಅವನು ಆದರದಿಂದ ಅದನ್ನು ನನಗೆ ತಿಳಿಸಿದನು. ರಹಸ್ಯವಾದ ಅದನ್ನು ನಾನು ನಿಮಗೆ ಹೇಳುವೆನು. ನೀವೆಲ್ಲರೂ ಕೇಳಿರಿ.

**ಪುರಾ ಚೇರಸ್ಯ ಚೋಳಸ್ಯ ಪಾಂಡ್ಯಸ್ಯ ಚ ಮಹೀಪತೇಃ ।**
**ದೇಶಾ ಗ್ರಹಾಣಾಂ ವಕ್ರೇಣ ಕದಾಚಿದ್ವೃಷ್ಟಿವರ್ಜಿತಾಃ ॥ ೪ ॥**

**ವ್ರೀಹ್ಯಾದಿಸರ್ವಧಾನ್ಯಾನಿ ನದ್ಯಾದಿಷು ಜಲಾನ್ಯಪಿ ।**
**ತೃಣಾನ್ಯಪಿ ಚ ಸರ್ವತ್ರ ದುರ್ಭಿಕ್ಷಾಣಿ ಭವಂತಿ ಹಿ ॥ ೫ ॥**

**ಕೃಶಾನಿ ಗೋಧನಾನ್ಯಾಸನ್ ವೃಕ್ಷಾದ್ಯಾಃ ಶುಷ್ಕತಾಂ ಗತಾಃ ।**
**ಪ್ರಜಾಃ ಸರ್ವಾಶ್ಚ ಸಂತಪ್ತಾಃ ಪಕ್ಷಿಣಶ್ಚ ಮೃಗಾ ಅಪಿ ॥ ೬ ॥**

**ತಮುಪಪ್ಲವಮಾಲೋಕ್ಯ ಪ್ರಾಣಿನಾಂ ತೇ ಚ ಪಾರ್ಥಿವಾಃ ।**
**ಸಂಭೂಯ ಸಹಸೈಕತ್ರ ವಿಚಾರ್ಯ ಚ ಪರಸ್ಪರಂ ॥ ೭ ॥**

**ಮದೀಯಂ ನಿಲಯಂ ಪ್ರಾಪುರ್ಮಲಯಾಚಲಮಧ್ಯಗಂ ।**
**ಶ್ರೀಹಾಲಾಸ್ಯೇ ಶಿವಪದೇ ದ್ವಾದಶಾಂತಗತೇ ಪರೇ ॥ ೮ ॥**

---

೪–೭. ಕೆಲವು ಕಾಲದ ಹಿಂದೆ ಗ್ರಹಗಳು ವಕ್ರವಾಗಿದ್ದು ಗ್ರಹಚಾರ ದೋಷದಿಂದ ಚೇರಚೋಳರಾಜರ ರಾಜ್ಯದಲ್ಲಿಯೂ, ಪಾಂಡ್ಯರಾಜನಾದ ಉಗ್ರಪಾಂಡ್ಯನ ರಾಜ್ಯದಲ್ಲಿಯೂ ಮಳೆಯು ಬರಲಿಲ್ಲ. ಇದರಿಂದ ಭತ್ತವೇ ಮೊದಲಾದ ಧಾನ್ಯಗಳು ಬೆಳೆಯಲಿಲ್ಲ. ನದಿಯೇ ಮೊದಲಾದವುಗಳಲ್ಲಿ ಕುಡಿಯುವುದಕ್ಕೂ ನೀರು ಇರಲಿಲ್ಲ. ದನಗಳಿಗೆ ಹುಲ್ಲು ಕೂಡ ಸಿಕ್ಕದೆ, ಎಲ್ಲಾ ಕಡೆಯಲ್ಲಿಯೂ ಕ್ಷಾಮವು ಬಂದಿತ್ತು. ಗೋವುಗಳೇ ಮೊದಲಾದವುಗಳು ಕೃಶವಾಗಿದ್ದವು. ಮರಗಳೇ ಮುಂತಾದವು ಒಣಗಿಹೋದವು. ಪ್ರಜೆಗಳೆಲ್ಲರೂ ಸಂಕಟವುಳ್ಳವರಾಗಿದ್ದರು. ಹಕ್ಕಿಗಳು, ಮೃಗಗಳು ಕೂಡ ಆಹಾರವಿಲ್ಲದೆ ಇದ್ದವು. ಪ್ರಾಣಿಗಳಿಗೆ ಒದಗಿರುವ ಈ ವಿಪತ್ತನ್ನು ನೋಡಿ, ಆ ರಾಜರಿಬ್ಬರೂ ಒಟ್ಟಿಗೆ ಸೇರಿ, ಅನ್ಯೋನ್ಯವಾಗಿ ವಿಚಾರಮಾಡಿಕೊಂಡು ನಾನು ವಾಸಮಾಡುತ್ತಿದ್ದ ಮಲಯಪರ್ವತದ ಮಧ್ಯದಲ್ಲಿರುವ ನನ್ನ ಮನೆಗೆ ಬಂದರು.

೮–೧೨. ನಾನು ನನ್ನ ಮನೆಯಲ್ಲಿದ್ದುಕೊಂಡು ಪರಮೇಶ್ವರನನ್ನು ಧ್ಯಾನ ಮಾಡುತ್ತಿದ್ದೆನು. ಅವನು ದ್ವಾದಶಾಂತಗತವಾದ ಪರಮಪದದಲ್ಲಿರುವವನು. ಪಾತಕಗಳನ್ನು ಪರಿಹರಿಸುವವನು, ಯಮನಿಗೂ ಯಮನಾಗಿರುವವನು, ವಿಷದಿಂದ ಪ್ರಕಾಶಿಸುತ್ತಿರುವ ಕಪ್ಪಾದ ಕಂಠವುಳ್ಳವನಾಗಿರುವನು. ಕದಂಬವನಕ್ಕೆ ಅಧಿಪತಿಯಾಗಿರುವನು. ಭಕ್ತರ ಇಷ್ಟಾರ್ಥಗಳನ್ನು ಕೊಡುತ್ತಾ, ಮನೋಹರನಾಗಿರುವ, ಅರ್ಧನಾರೀಶ್ವರನಾಗಿರುವವನು. ಅವನು ಸೃಷ್ಟಿಯೇ ಮೊದಲಾದ ಪಂಚಕೃತ್ಯಗಳಿಗೂ

ಕಲ್ಮಷಾರಣ್ಯಕಾಲಾಗ್ನಿಂ ಕಾಲಕಾಲಂ ಕಪಾಲಿನಂ ।
ಕಾಲಕೂಟಲಸತ್ಕಂಠಂ ಕದಂಬವನನಾಯಕಂ । ॥ ೯ ॥

ಕಾಮಿತಾರ್ಥಪ್ರದಾತಾರಂ ಕಾಂತಕಾಂತಾರ್ಧವಿಗ್ರಹಂ ।
ಕಾರಣಂ ಪಂಚಕೃತ್ಯಾನಾಂ ಕಾಮಶಾಸನಮೀಶ್ವರಂ ॥ ೧೦ ॥

ಚಿರಂತನಂ ಮಹಾಲಿಂಗಂ ಪುರಂದರಮುಖಾಮರೈಃ ।
ನಿರಂತರಸುಖಾವಾಪ್ತ್ಯೈ ವಿಚಿಂತಿತಪದಾಂಬುಜಂ ॥ ೧೧ ॥

ಶಿವಂ ತಂ ಧ್ಯಾಯಮಾನಸ್ಯ ಮಮಾಂತಿಕಮಥಾಗತಾಃ ।
ಉಕ್ತವಂತೋ ವೃಷ್ಟ್ಯಭಾವಂ ತೇ ಮಹೀಪಾಲಪುಂಗವಾಃ ॥ ೧೨ ॥
ದಿವ್ಯದೃಷ್ಟ್ಯಾ ಸಮಾಲೋಕ್ಯ ಗ್ರಹಾಣಾಂ ವಕ್ರತಾಮಹಂ ॥ ೧೩ ॥
ಉಕ್ತವಾನಥ ತೇಭ್ಯ ಶ್ಚ ವೃಷ್ಟ್ಯಭಾವಸ್ಯ ಕಾರಣಂ ॥ ೧೪ ॥

ಹೇ ಪಾಂಡ್ಯ ಚೇರ ಚೋಳಾಶ್ಚ ಶೃಣ್ವಂತು ನೃಪಪುಂಗವಾಃ
ಅದ್ಯಾರಭ್ಯ ತ್ವನಾವೃಷ್ಟಿಂ ಕ್ರೂರಾಂ ದ್ವಾದಶವಾರ್ಷಿಕೀಂ ॥ ೧೫ ॥

---

ಕಾರಣನಾಗಿರುಪವನು ಮತ್ತು ಮನ್ಮಥನನ್ನು ನಿಗ್ರಹಮಾಡಿರುವವನು. ಇಂದ್ರನೇ ಮೊದಲಾದ ದೇವತೆಗಳು ಇವನನ್ನು ನಿತ್ಯಸುಖಕ್ಕಾಗಿ ಸೇವಿಸುತ್ತಿರುವರು. ಪುರಾತನವಾದ ಹಾಲಾಸ್ಯೇಶ್ವರ ಲಿಂಗರೂಪದಿಂದ ಇರುವ, ಈ ಮಹಿಮೆಯುಳ್ಳ ಪರಮೇಶ್ವರನ ಪಾದಪದ್ಮಗಳನ್ನು ನಾನು ಧ್ಯಾನಮಾಡುತ್ತಿರುವಾಗ ಇವರಿಬ್ಬರೂ ನನ್ನ ಸಮೀಪಕ್ಕೆ ಬಂದರು. ಅವರು ನನ್ನ ಸಂಗಡ ತನ್ನ ರಾಜ್ಯದ ಸ್ಥಿತಿಯನ್ನು ಕ್ರಮವಾಗಿ ವಿವರಿಸಿ ಹೇಳಿದರು.

೧೩–೧೭. ಆಗ ನಾನು ದಿವ್ಯದೃಷ್ಟಿಯಿಂದ ವಿಚಾರಮಾಡಿ, ಗ್ರಹಗಳು ವಕ್ರವಾಗಿರುವುದನ್ನು ತಿಳಿದುಕೊಂಡು, ಅನಂತರದಲ್ಲಿ ಅವರ ರಾಜ್ಯದಲ್ಲಿ ಮಳೆಯು ಬೀಳದಿರುವುದಕ್ಕೆ ತಕ್ಕ ಕಾರಣವನ್ನು ಹೇಳಿದೆನು. ಎಲೈ ಪಾಂಡ್ಯರಾಜನೆ, ಎಲೈ ಚೇರ ಮತ್ತು ಚೋಳರಾಜರೆ, ಕೇಳಿರಿ. ಈಗ ಶುಕ್ರನು ವಕ್ರನಾಗಿರುವನು. ಸೂರ್ಯನೂ ಕುಜನೂ ಅವನನ್ನು ಹಿಂದೆ ಬಿಟ್ಟುಕೊಂಡು ಮುಂದಕ್ಕೆ ಹೋಗುತ್ತಿರುವರು. ಇದರಿಂದ ಹನ್ನೆರಡು ವರ್ಷಗಳು ಈ ಪ್ರದೇಶದಲ್ಲಿ ಅನಾವೃಷ್ಟಿಯು

ಅಂಗಾರಕಶ್ಚ ಸೂರ್ಯಶ್ಚ ಪೃಷ್ಠೀಕೃತ್ಯ ಚ ಭಾರ್ಗವಂ ।
ಗಚ್ಛತಸ್ತಾವುಭಾವಗ್ರೇ ಶುಕ್ರೋ ವಕ್ರೋ ಮಹಾನಭೂತ್ ॥ ೧೬ ॥

ತಸ್ಮಾದ್ಗ್ರಹಾಣಾಂ ಸರ್ವೇಷಾಂ ಮಧ್ಯೇ ವೃಷ್ಟೇರ್ನ ಕಾರಣಂ ।
ಉತ್ಪನ್ನಾಽಯಮನಾವೃಷ್ಟಿಸ್ಸಮಾನಾ ಜಗತೀತಲೇ ॥ ೧೭ ॥

ತಥಾಪಿ ಯುಷ್ಮದ್ದೇಶೇಷು ವೃಷ್ಟ್ಯುಪಾಯಂ ವದಾಮ್ಯಹಂ ।
ಹಾಲಾಸ್ಯನಾಯಕೋ ದೇವೋ ಭಕ್ತಾಪದ್ಭಂಜನೇ ರತಃ ॥ ೧೮ ॥

ಭುಭುಕ್ಷೂಣಾಂ ಮುಮುಕ್ಷೂಣಾಂ ಭೋಗಮೋಕ್ಷೌ ಪ್ರಯಚ್ಛತಿ ।
ಯೇ ಮಹೋತ್ಪಾತಭೀತಾಶ್ಚ ಯೇ ಮಹಾವ್ಯಾಧಿಪೀಡಿತಾಃ ॥ ೧೯ ॥

ಯೇ ಕೃತಾಂತಪ್ರಭೀತಾಶ್ಚ ತೈಸ್ಸೇವ್ಯಸ್ಸುಂದರೇಶ್ವರಃ ।
ಸುಂದರೇಶ್ವರನಾಥಂ ತಂ ಭವಂತೋಽಪಿ ಸಮಾಹಿತಾಃ ॥ ೨೦ ॥

ಆರಾಧ್ಯ ತತ್ ಪ್ರಸಾದೇನ ಲಭಧ್ವಂ ವೃಷ್ಟಿಮುತ್ತಮಾಂ ।
ಇತ್ಯುಕ್ತೇ ಮಯಿ ತೇ ಪ್ರೀತಾಃ ಪುನಃ ಪಪ್ರಚ್ಛುರಾದರಾತ್ ॥ ೨೧ ॥

---

ಆಗುವುದು. ಇತರ ಗ್ರಹಗಳಿಂದ ಅನಾವೃಷ್ಟಿಗೆ ಕಾರಣವಿಲ್ಲವು. ಈ ಅನಾವೃಷ್ಟಿಯು ಭೂಮಿಯೆಲ್ಲಕ್ಕೂ ವ್ಯಾಪಿಸಿರುವುದು. ಆದಾಗ್ಯೂ ನಿಮ್ಮ ದೇಶಗಳಿಗೆ ಮಳೆಯು ಬೀಳುವುದಕ್ಕೆ ತಕ್ಕ ಉಪಾಯವನ್ನು ನಾನು ಹೇಳುವೆನು.

೧೮-೨೧. "ದೇವ ದೇವನಾದ ಹಾಲಾಸ್ಯೇಶ್ವರನು ಭಕ್ತರ ವಿಪತ್ತನ್ನು ನಾಶ ಮಾಡುವುದರಲ್ಲಿ ಯಾವಾಗಲೂ ಆಸಕ್ತಿಯಿಂದ ಇರುವನು. ಇವನು ಭೋಗಾಭಿಲಾಷೆಯುಳ್ಳವರಿಗೆ ಭೋಗವನ್ನೂ, ಮೋಕ್ಷಾಭಿಲಾಷೆಯುಳ್ಳವರಿಗೆ ಮುಕ್ತಿಯನ್ನೂ ಕೊಡುವನು. ದೊಡ್ಡ ವಿಪತ್ತಿನಿಂದ ಹೆದರಿದವರೂ, ದೊಡ್ಡ ದೊಡ್ಡ ರೋಗಗಳಿಂದ ಪೀಡಿತರಾದವರೂ, ಯಮನ ಬಾಧೆಗೆ ಒಳಗಾದವರೂ, ಸುಂದರೇಶ್ವರನ ಸೇವೆಯನ್ನು ಮಾಡಬೇಕು. ಆದ್ದರಿಂದ ನೀವಿಬ್ಬರೂ ಸುಂದರೇಶ್ವರನ ಸೇವೆಯನ್ನು ಸರಿಯಾದ ಮನಸ್ಸಿನಿಂದ ನೆರವೇರಿಸಿ ಅವನ ಅನುಗ್ರಹದಿಂದ ಉತ್ತಮವಾದ ಮಳೆಯು ನಿಮ್ಮ ದೇಶದಲ್ಲಿ ಬೀಳುವಂತೆ ಮಾಡಿಕೊಳ್ಳಿರಿ." ಅವರು ನನ್ನ ಮಾತನ್ನು ಕೇಳಿ, ಆದರದಿಂದ ಪ್ರಶ್ನೆ ಮಾಡಿದರು.

ಕದಾ ಕೇನ ಪ್ರಕಾರೇಣ ಸಮಾರಾಧಿತ ಈಶ್ವರಃ ।
ಪ್ರಯಚ್ಛತ್ಯಖಿಲಾನ್ ಕಾಮಾನ್ ಸಪ್ರಕಾರ ಇಹೋಚ್ಯತೇ ॥ ೨೨ ॥

ಇತಿ ಭೂಪೈಃ ಪ್ರಾರ್ಥಿತೇ ತು ಸೋಮವಾರವ್ರತಂ ಮಹತ್ ।
ಉಪದಿಷ್ಟಂ ಮಯಾ ಸದ್ಯಶ್ಶಂಭೋಸ್ಸಂತುಷ್ಟಿಕಾರಣಂ ॥ ೨೩ ॥

ವ್ರತಪ್ರಭಾವಂ ತೇ ಶ್ರುತ್ವಾ ಶ್ರೀಹಾಲಾಸ್ಯಮವಾಪ್ಯ ಚ ।
ಸಂಸ್ನಾಯ ಹೇಮಪದ್ಮಿನ್ಯಾಂ ಭಸ್ಮದಿಗ್ಧಕಳೇಬರಾಃ ॥ ೨೪ ॥

ಧೃತರುದ್ರಾಕ್ಷಮಾಲಾಶ್ಚ ನಿತ್ಯಕೃತ್ಯಂ ವಿಧಾಯ ಚ ।
ಶಿವವ್ರತೋತ್ತಮಂ ಸದ್ಯಃ ಶಿವಯೋಃ ಪ್ರೀತಿಕಾರಣಂ ॥ ೨೫ ॥

ಭಕ್ತ್ಯಾ ಮಹತ್ಯಾ ಚಕ್ರುಸ್ತೇ ಮಹಾಲಿಂಗೇ ಮಹೇಶ್ವರಾಃ ।
ತತಸ್ಸ್ತುತ್ವಾ ನಮಸ್ಕೃತ್ಯ ಸಂತುಷ್ಟಂ ಪರಮೇಶ್ವರಂ ॥ ೨೬ ॥

ಪ್ರಾರ್ಥಯಂತಿ ಚ ವೃಷ್ಟ್ಯರ್ಥಂ ಸೋಮಸುಂದರಮೀಶ್ವರಂ ।
ದಿವ್ಯಾ ವಾಣೀ ತದಾ ತೇಷಾಂ ನೃಪಾಣಾಂ ಪ್ರೀತಿಕಾರಿಣೀ ॥ ೨೭ ॥

---

೨೨–೨೬. "ಹಾಲಾಸ್ಯೇಶ್ವರನನ್ನು ಯಾವ ಕಾಲದಲ್ಲಿ ಯಾವ ಕ್ರಮದಿಂದ ಸೇವಿಸಿದರೆ ಅವನು ಫಲವನ್ನು ಕೊಡುವನು ಅದನ್ನು ನಮಗೆ ತಿಳಿಸು" ಎಂದು ಅವರು ನನ್ನನ್ನು ಪ್ರಾರ್ಥಿಸಿದರು. ಆಗ ನಾನು ಅವರಿಗೆ ಉತ್ತಮವಾದ ಸೋಮವಾರ ವ್ರತವನ್ನು ಆಚರಿಸುವ ಕ್ರಮವನ್ನೂ ಉಪದೇಶಮಾಡಿದೆನು. ಶಿವನ ಅನುಗ್ರಹ ವನ್ನು ಹೊಂದಲು ಕಾರಣವಾದ ನನ್ನ ಉಪದೇಶವನ್ನೂ, ವ್ರತದ ಮಹಿಮೆಯನ್ನೂ ಅವರಿಬ್ಬರೂ ಕೇಳಿ, ಹಾಲಾಸ್ಯಕ್ಷೇತ್ರಕ್ಕೆ ಹೋಗಿ, ಹೇಮಪದ್ಮಾಕರದಲ್ಲಿ ಸ್ನಾನಮಾಡಿ, ಭಸ್ಮರುದ್ರಾಕ್ಷಗಳನ್ನು ಧರಿಸಿ, ನಿತ್ಯಕರ್ಮಗಳೆಲ್ಲವನ್ನೂ ನೆರವೇರಿಸಿದನಂತರ, ಆ ಕ್ಷಣದಲ್ಲಿಯೇ ಶಿವನ ಪ್ರೀತಿಗೆ ಕಾರಣವಾದ, ಸೋಮವಾರ ವ್ರತವನ್ನು ಆಚರಿಸಿ, ಭಕ್ತಿಯಿಂದ ಹಾಲಾಸ್ಯೇಶ್ವರನಿಗೆ ನಮಸ್ಕರಿಸಿ, ಸ್ತೋತ್ರಮಾಡಿ, ತಮ್ಮ ಇಷ್ಟವು ಸಿದ್ಧಿಯಾಗುವುದಕ್ಕಾಗಿ ಪ್ರಾರ್ಥಿಸಿದರು.

೨೭–೩೦. ಆಗ ಅವರಿಬ್ಬರಿಗೂ ಸಂತೋಷವಾಗುವಂತೆ, ಸುಂದರೇಶ್ವರನ ಅಪ್ಪಣೆಗೆ ಅನುಸಾರವಾಗಿ ಅಶರೀರವಾಣಿಯು ಮಧುರವಾದ ಧ್ವನಿಯುಳ್ಳದ್ದಾಗಿ

ಸುಂದರೇಶಾಜ್ಞಯಾ ಸದ್ಯಸ್ಸಂಜಾತಾ ಮಧುರಸ್ವನಾ ।
ಭೂಪಾ ದೇಶೇಷು ಯುಷ್ಮಾಕಂ ವೃಷ್ಟಿಕರ್ತಾ ದಿವಸ್ಪತಿಃ ॥ ೨೮ ॥

ವೃಷ್ಟ್ಯರ್ಥಂ ಪ್ರಾರ್ಥನೀಯೋಽಯಂ ದಿವಂ ಗತ್ವಾ ಮಮಾಜ್ಞಯಾ ।
ನಭೋಮಾರ್ಗೇಣ ಗಂತುಂ ಚ ಸಾಮರ್ಥ್ಯಂ ವೋ ಭವಿಷ್ಯತಿ ॥ ೨೯ ॥

ಶ್ರೋತ್ರಾಮೃತಂ ಶಿವವಚಃ ಶ್ರುತ್ವಾ ಭೂಪಾಲಪುಂಗವಾಃ ।
ನಭೋಮಾರ್ಗೇಣ ಸಹಸಾ ದೇವೇಂದ್ರನಿಕಟಂ ಯಯುಃ ॥ ೩೦ ॥

ಜ್ಞಾನದೃಷ್ಟ್ಯಾ ಪರಿಜ್ಞಾಯ ತೇಷಾಮಾಗಮನಂ ಪುರಾ ।
ತ್ರೀಣ್ಯಾಶು ಭದ್ರಪೀಠಾನಿ ಸುತ್ರಾಮ್ಣಾ ಕಲ್ಪಿತಾನಿ ಹಿ ॥ ೩೧ ॥

ಪುರೋ ಗತ್ವಾ ಚೇರಚೋಳೌ ಪ್ರಣಮ್ಯ ಚ ಪುರಂದರಂ ।
ತಚ್ಛಾಸನಾ ಚ್ಚೋಪವಿಷ್ಟಾವುಭೌ ತೌ ಭದ್ರಪೀಠಯೋಃ ॥ ೩೨ ॥

ನ ನತ್ವಾ ಪಾಂಡ್ಯಭೂಪಾಲೋ ದೇವೇಂದ್ರಂ ಸ್ವಸ್ಯ ಕಲ್ಪಿತಂ ।
ಅನುನ್ನತಂ ಭದ್ರಪೀಠಂ ಹಿತ್ವಾ ಚ ಪುನರುನ್ನತಂ ॥ ೩೩ ॥

---

ಕೇಳಿಸಿತು. “ಎಲೈ ರಾಜರೇ, ನಿಮ್ಮ ರಾಜ್ಯದಲ್ಲಿ ಇಂದ್ರನೇ ಮಳೆಯನ್ನು ಸುಯ್ಯಿಸುವವನು. ಅದಕ್ಕಾಗಿ ನೀವು ಇಂದ್ರನನ್ನೇ ಪ್ರಾರ್ಥಿಸಬೇಕು. ನೀವು ಅಂತರಿಕ್ಷಮಾರ್ಗದಿಂದ ಇಂದ್ರನ ಹತ್ತಿರಕ್ಕೆ ಹೋಗುವ ಶಕ್ತಿಯನ್ನು ನಾನು ಅನುಗ್ರಹಿಸುವೆನು” ಎಂದು ಹೇಳಿದ ಹಿತಕರವಾದ ಆ ಮಾತನ್ನು ಕೇಳಿದ ಅವರು ಇಬ್ಬರೂ ಬೇಗನೆ ಅಂತರಿಕ್ಷಮಾರ್ಗದಿಂದ ಇಂದ್ರನ ಹತ್ತಿರಕ್ಕೆ ಹೋದರು.

೩೧–೩೪. ಇಂದ್ರನು ಜ್ಞಾನದೃಷ್ಟಿಯಿಂದಲೇ, ಇವರು ಬರುವರೆಂದು ತಿಳಿದು ಮೂರು ಪೀಠಗಳನ್ನು ಇವರು ಬರುವುದಕ್ಕೆ ಮುಂಚಿತವಾಗಿ ಸಿದ್ಧ ಮಾಡಿದ್ದನು. ಚೇರ ಚೋಳರು ಮೊದಲು ಹೋಗಿ ಇಂದ್ರನಿಗೆ ನಮಸ್ಕರಿಸಿ, ಅವನು ಅಪ್ಪಣೆಮಾಡಿದ ಪೀಠದಲ್ಲಿ ಕುಳಿತುಕೊಂಡರು. ಪಾಂಡ್ಯರಾಜನಾದ ಉಗ್ರನು

ದೇವೇಂದ್ರಾಧಿಷ್ಠಿತಂ ಪ್ರಾಪ ಸಿಂಹಾಸನವರಂ ಪರಂ ।
ತತ್ ದೃಷ್ಟ್ವಾ ಸತ್ಕಾರಾಥ ದೇವೇಂದ್ರಃ ಪ್ರೀತಮಾನಸಃ ॥ ೩೪ ॥

ಕಿಮಾಗಮನಕಾರ್ಯಂ ವ ಇತಿ ಪಪ್ರಚ್ಛ ತಾಂ ಸ್ತದಾ ।
ಚೇರಚೋಳೌ ಚ ಚಾಟೂನಿ ಪ್ರೋಕ್ತ್ವಾ ಸದ್ವಚನನಾನಿ ಚ ॥ ೩೫ ॥

ಸ್ವದೇಶಯೋ ರ್ವೃಷ್ಟಿಹಾನಿಂ ತದ್ದೇಶೋಲೋಕಪೀಡನಂ ।
ಅಬ್ರೂತಾಂ ಸ ತು ತಚ್ಛ್ರುತ್ವಾ ವರ್ಷತೇತಿಘನಾನಶಾತ್ ॥ ೩೬ ॥

ಪಾಂಡ್ಯಸ್ತು ಪಾಲಯನ್ಮಾನಂ ವೃಷ್ಟಿಹಾನಿಂ ಸ್ವದೇಶತಃ ।
ನೈವಾಹಾಸೂಯಯಾವಿಷ್ಟೋ ದೇವರಾಜೋಽಭವತ್ತದಾ ॥ ೩೭ ॥

ತಯೋಃ ಸ ಲಘ್ವಾಭರಣೇ ಪ್ರದದೌ ಚೇರಚೋಳಯೋಃ ।
ದುರ್ವಹಂ ತು ಮಹದ್ಭಾರಂ ಹಾರಂ ರತ್ನಮಯಂ ತತಃ ॥ ೩೮ ॥

---

ಇಂದ್ರನಿಗೆ ನಮಸ್ಕಾರಮಾಡದೆ, ತನಗಾಗಿ ಸಿದ್ಧಪಡಿಸಿದ್ದ ಪೀಠವನ್ನು ಬಿಟ್ಟು, ಎತ್ತರವಾದ ಇಂದ್ರನ ಆಸನದಲ್ಲಿ ಕುಳಿತುಕೊಂಡನು. ಇಂದ್ರನು ಇದನ್ನು ನೋಡಿ, ಸಂತೋಷದಿಂದ ಸತ್ಕಾರವನ್ನು ಮಾಡಿದನು.

೩೫–೩೮. ಇಂದ್ರನು ಇವರು ಬರುವುದಕ್ಕೆ ಕಾರಣವನ್ನು ವಿಚಾರಿಸಿದಾಗ, ಚೇರ ಚೋಳರಾಜರಿಬ್ಬರೂ, ರಮ್ಯವಾಗಿರುವ ಮಾತನಾಡುತ್ತಾ, ತಮ್ಮ ದೇಶಕ್ಕೆ ಒದಗಿರುವ ಅನಾವೃಷ್ಟಿಯನ್ನೂ, ಅದರ ಪರಿಣಾಮವನ್ನೂ, ಇಂದ್ರನಿಗೆ ವಿವರಿಸಿ ಹೇಳಿದರು. ಇಂದ್ರನು ಅವರ ಮಾತನ್ನು ಕೇಳಿ, ಮೇಘಗಳಿಗೆ ಮಳೆಯನ್ನು ಸುರಿಯುವಂತೆ ಅಪ್ಪಣೆಮಾಡಿದನು. ಉಗ್ರಪಾಂಡ್ಯನು ತನ್ನ ಗೌರವಕ್ಕೆ ಕುಂದಕವೆಂದು ತಿಳಿದುಕೊಂಡು, ತನ್ನ ದೇಶದಲ್ಲಿ ಮಳೆಯಾಗದಿರುವುದನ್ನು ಇಂದ್ರನ ಸಂಗಡ ಹೇಳಲಿಲ್ಲ. ಇದರಿಂದ ಇಂದ್ರನಿಗೆ ಈ ರಾಜನ ವಿಷಯದಲ್ಲಿ ಅಸೂಯೆಯು ಉಂಟಾಯಿತು. ಆಗ ಇಂದ್ರನು ಚೇರ ಮತ್ತು ಚೋಳರಾಜರಿಗೆ ಹೂವಿನಂತೆ ಹಗುರವಾಗಿರುವ ಆಭರಣಗಳನ್ನು ಉಚಿತವಾಗಿಕೊಟ್ಟನು. ಪಾಂಡ್ಯರಾಜನಿಗೆ ರತ್ನಖಚಿತವಾದ ಹೊರುವುದಕ್ಕೆ ಆಗದೇ ಇರುವಷ್ಟು ಭಾರವಾದ ಹಾರವನ್ನು, ಅವನ ಶಕ್ತಿಪರೀಕ್ಷೆಗಾಗಿ ಕೊಟ್ಟನು. ಮತ್ತು ಆಶ್ಚರ್ಯದಿಂದ ನೋಡುತ್ತಿದ್ದನು.

ಪಾಂಡ್ಯಾಯ ಪ್ರದದೌ ಶೀಘ್ರಂ ತಚ್ಛಕ್ತ್ಯಾಲೋಕನೇಚ್ಛಯಾ ।
ಸ ತು ಮಾಲಾಮುದಾಶ್ಲಿಷ್ಟಂ ದಧೌ ವಿಸ್ಮಯಸಂಯುತಃ　　॥ ೩೯ ॥

ಇಂದ್ರಃ ಪ್ರಾಹ ಸಹೇಷ್ಯೋಽಪಿ ಪಾಂಡ್ಯಪತ್ವಂ ಮಹಾನ್ ಖಲು ।
ಉಗ್ರಸ್ಯ ವಂಶಜತ್ವಂ ತೇ ವ್ಯಕ್ತಮದ್ಯ ತು ನಿಶ್ಚಿತಂ　　॥ ೪೦ ॥

ಹಾರಧಾರೀ ಪಾಂಡ್ಯರಾಜ ಇತಿ ಖ್ಯಾತಿಂ ಗಮಿಷ್ಯಸಿ ।
ಕಿಂ ಚ ಸುಂದರಪಾಂಡ್ಯಶ್ಚ ಖ್ಯಾತನಾಮಾ ಭವಿಷ್ಯಸಿ　　॥ ೪೧ ॥

ಇತ್ಯುಕ್ತೇ ದೇವರಾಜೇನ ಪ್ರಾಹ ಚಾಟೂನಿ ಪಾಂಡ್ಯಪಃ ।
ವಾಕ್ಯಾನ್ಯತಿವಿಚಿತ್ರಾಣಿ ಮಹೇಂದ್ರಪ್ರೀತಿಹೇತವೇ　　॥ ೪೨ ॥

ಗಚ್ಛತೇತಿ ನೃಪಾಂ ಸ್ತ್ರೀಂಸ್ತ್ರಾನ್ ಪ್ರತ್ಯುಕ್ತೇ ಮೇಘವಾಹನೇ ।
ತೇ ಚ ಜಗ್ಮುರ್ಮುದಾ ಯುಕ್ತಾಃ ಸ್ವಂ ಸ್ವಂ ದೇಶಂ ನೃಪೋತ್ತಮಾಃ॥೪೩॥

ಸಂಜಾತಾ ಮಹತೀ ವೃಷ್ಟಿಃ ಸಕಾಲೇ ಚೇರಚೋಳಯೋಃ ।
ಕದಾಚಿತ್ಪಾಂಡ್ಯದೇಶೇ ತು ನೈವ ವೃಷ್ಟಿರಜಾಯತ　　॥ ೪೪ ॥

---

೩೯–೪೪. ಇಂದ್ರನು ತನಗೆ ಅಸೂಯೆಯು ಇದ್ದಾಗ್ಯೂ “ ಪಾಂಡ್ಯರಾಜನ ಶಕ್ತಿಯು ಬಹಳವಾಗಿರುವುದು. ಉಗ್ರನೆಂದು ಹೆಸರುಳ್ಳ ಪರಮೇಶ್ವರನ ವಂಶದಲ್ಲಿ ನೀನು ಹುಟ್ಟಿರುವುದು, ಈಗ ವ್ಯಕ್ತವಾಗಿರುವುದು. ಈ ಹಾರವನ್ನು ನೀನು ಧರಿಸಿರುವುದರಿಂದ ಹಾರಧಾರಿ ಎಂದು ಪಾಂಡ್ಯರಾಜನಿಗೆ ಕೀರ್ತಿಯು ಲೋಕದಲ್ಲಿ ಉಂಟಾಗುವುದು.” ಎಂದು ಹೇಳಿದನು.

೪೨–೪೪. ಇಂದ್ರನ ಮಾತನ್ನು ಕೇಳಿ, ಪಾಂಡ್ಯರಾಜನು ಅವನ ಸಂತೋಷಕ್ಕಾಗಿ ಮೃದುವಾದ ಮಾತನಾಡಿದನು. ಇಂದ್ರನು ಅವರನ್ನು ಕಳುಹಿಸಿಕೊಡಲು, ಅವರು ಸಂತೋಷದಿಂದ ತಮ್ಮ ತಮ್ಮ ದೇಶಗಳಿಗೆ ಬಂದರು. ಚೇರ ಮತ್ತು ಚೋಳರಾಜರ ದೇಶಗಳಲ್ಲಿ ಕಾಲಕ್ಕನುಗುಣವಾಗಿ ಮಳೆಯು ಬಂತು. ಪುನಃ ಒಂದು ಕಾಲದಲ್ಲಿ ಪಾಂಡ್ಯದೇಶದಲ್ಲಿ ಮಳೆಯು ಆಗಲಿಲ್ಲ.

ಧಾನ್ಯಾನಾಮಾಯತಿರಭೂದ್ದೇಶತಶ್ಚೇರಚೋಳಯೋಃ ।
ಪಾಂಡ್ಯಸ್ತು ಲಜ್ಜಿತೋಽಪ್ಯಂತರ್ಧೀರತ್ವಾದ್ಧೃತಿಮೇಯಿವಾನ್ ॥ ೪೫ ॥
ಏವಂ ತು ಹೃದಿ ವೈಮತ್ಯಂ ಸದೈವಾಸ್ತೀಂದ್ರಪಾಂಡ್ಯಯೋಃ ।

॥ ಮುನಯ ಊಚುಃ ॥

ಉಕ್ತಂ ರಹಸ್ಯಂ ಭವತಾ ಸ ಭೂಪಾಲಶ್ಚ ಕಿಂ ವ್ಯಧಾತ್ ॥ ೪೬ ॥
ಪಾಂಡ್ಯಃ ಪಶ್ಚಾನ್ಮಹಾಮಾನೀ ಬ್ರೂಹಿ ತ್ವಂ ತಚ್ಚ ನಃ ಕ್ರಮಾತ್

॥ ಅಗಸ್ತ್ಯ ಉವಾಚ ॥

ವನೇಷು ಶ್ವಾಪದಾಭಾವಾತ್ ಮೃಗಯಾರ್ಥಂ ಸ ಜಾತುಚಿತ್ ॥ ೪೭ ॥

ಮಲಯಂ ಪ್ರಾಪ್ಯ ಚಿಕ್ರೀಡ ಮೃಗಾದ್ಯೈಃ ಪರಿತೋ ಭ್ರಮನ್ ।
ಪುಷ್ಕಲಾವರ್ತಕಾದೀಂಸ್ತಾಂಶ್ಚತುರೋ ಮೇಘನಾಯಕಾನ್ ॥ ೪೮ ॥

ಆಸೀನಾಂಸ್ತತ್ತಟೇ ದೃಷ್ಟ್ವಾ ಜಗ್ರಾಹ ಪುರತೋ ಭಟೈಃ ।
ಆನೀಯ ಸದ್ಯಃ ಕಾರಾಯಾಂ ಚಿಕ್ಷೇಪ ನಿಗಳಾನ್ವಿತಾನ್ ॥ ೪೯ ॥

---

೪೫–೪೬. ಚೇರ, ಚೋಳರಾಜ್ಯಗಳಲ್ಲಿ ಧಾನ್ಯವು ಬಹಳವಾಗಿ ಬೆಳೆಯಿತು. ಪಾಂಡ್ಯದೇಶದಲ್ಲಿ ಮಳೆಬೆಳೆಗಳು ಇಲ್ಲದಿದ್ದರೂ ಆ ರಾಜನು ಧೈರ್ಯದಿಂದ ಇದ್ದನು. ಪಾಂಡ್ಯರಾಜನಿಗೂ ಇಂದ್ರನಿಗೂ ವೈಮನಸ್ಯವು ಈ ಪ್ರಕಾರದಿಂದ ಉಂಟಾಗಿರುವುದು.

ಋಷಿಗಳು ಹೇಳಿದರು :—"ಆಗ ಬಹಳ ಮಾನವಂತನಾದ ಪಾಂಡ್ಯರಾಜನು ಏನು ಮಾಡಿದನು? ನೀನು ಹೇಳಿದ ರಹಸ್ಯವು ತಿಳಿಯಿತು. ಮುಂದೆ ಆ ರಾಜನು ಮಾಡಿದ ಕೆಲಸವನ್ನು ನಮಗೆ ಕ್ರಮವಾಗಿ ತಿಳಿಸು."

೪೭–೪೯. ಅಗಸ್ತ್ಯಋಷಿಯು ಹೇಳಿದನು :—"ಪಾಂಡ್ಯರಾಜನು ಬೇಟೆಯಾಡುವುದಕ್ಕಾಗಿ ಕಾಡಿಗೆ ಹೋದನು. ಅಲ್ಲಿ ದುಷ್ಟಮೃಗಗಳು ಯಾವವೂ ಇರಲಿಲ್ಲ. ಆದ್ದರಿಂದ ಮಲಯಪರ್ವತದ ಹತ್ತಿರಕ್ಕೆ ಹೋಗಿ ಆಟವಾಡುತ್ತಿದ್ದನು. ಅಲ್ಲಿರುವ ಮೃಗಗಳ ಸಂಗಡ ಸುತ್ತಲೂ ಸುತ್ತುತ್ತಿರುವಾಗ ಪುಷ್ಕಳ, ಆವರ್ತಕ ಎಂಬ ಮೇಘದ ಅಧಿಪತಿಗಳಾದ ನಾಲ್ಕು ಜನರನ್ನು ನೋಡಿದನು. ಅವರು ಮಲಯಪರ್ವತದ ತಪ್ಪಲಿನಲ್ಲಿ ಕುಳಿತಿರುವುದನ್ನು ಕಂಡಕೂಡಲೆ ತನ್ನ ದೂತರಿಂದ ಅವರನ್ನು ಹಿಡಿದು ತರಿಸಿ, ಅವರಿಗೆ ಸಂಕೋಲೆಗಳನ್ನು ಹಾಕಿಸಿ, ಸೆರೆಮನೆಯಲ್ಲಿ ಇರಿಸಿದನು.

**ತಚ್ಛ್ರುತ್ವಾ ಯೋದ್ಧುಮಾಯಾತಿ ದೇವರಾಜೋ ರುಷಾನ್ವಿತಃ ।**
**ಪಾಂಡ್ಯಭೂಪೋಽತಿಧೀರಸ್ಸ ನ್ನಿರ್ಗತ್ಯಾಂತಃಪುರಾಜ್ಜವಾತ್ ॥ ೫೦ ॥**

**ಸುಂದರೇಶಂ ಮಹಾಲಿಂಗಂ ಸುಮೀನಾಕ್ಷ್ಯಾ ಸುಸಂಯುತಂ ।**
**ಭಕ್ತ್ಯಾ ಪ್ರದಕ್ಷಿಣಂ ಕೃತ್ವಾ ಸ್ತುತ್ವಾ ಸಮ್ಯಕ್ಪ್ರಣಮ್ಯ ಚ । ॥ ೫೧ ॥**

**ಆರುಹ್ಯ ಸುವಿಮಾನಂ ಚ ಮೀನಧ್ವಜವಿರಾಜಿತಂ ।**
**ಗತ್ವಾಭಿಮುಖಮಿಂದ್ರಸ್ಯ ಯುದ್ಧಾಯೋದ್ಯೋಗಮಾತನೋತ್ ॥ ೫೨ ॥**

**ಆಸೀದಾಯೋಧನಂ ಪಶ್ಚಾತ್ತ್ರಿದಿವಾಧಿಪಪಾಂಡ್ಯಯೋಃ ।**
**ಅಸ್ತ್ರಮಸ್ತ್ರೇಣ ಸಂಹೃತ್ಯ ಪರಸ್ಪರಜಯೈಷಿಣೋಃ ॥ ೫೩ ॥**

**ಆಗ್ನೇಯಂ ವಾರುಣಾಸ್ತ್ರೇಣ ವಾರುಣಂ ಚಾನಿಲಾಸ್ತ್ರತಃ ।**
**ಅನಿಲಂ ಪನ್ನಗಾಸ್ತ್ರೇಣ ಪನ್ನಗಂ ಗಾರುಡಾಸ್ತ್ರತಃ ॥ ೫೪ ॥**

**ಗಾರುಡಂ ಚ ಮಹಾಪಾಶಾತ್ ಮಹಾಪಾಶಂ ಗಜಾಸ್ತ್ರತಃ ।**
**ಗಜಾಸ್ತ್ರಮಪಿ ಸೈಂಹೇನ ಸೈಂಹಂ ಚ ಶರಭಾಸ್ತ್ರತಃ ॥ ೫೫ ॥**

---

೫೦-೫೨. ಇದನ್ನು ಕೇಳಿ ದೇವರಾಜನಾದ ಇಂದ್ರನು ಕೋಪದಿಂದ ಯುದ್ಧ ಮಾಡುವುದಕ್ಕಾಗಿ ಬಂದನು. ಬಹಳ ಧೀರನಾದ ಪಾಂಡ್ಯರಾಜನೂ ಕೂಡ ಬೇಗನೆ ಯುದ್ಧಕ್ಕೆ ಸಿದ್ಧನಾಗಿ ಅಂತಃಪುರದಿಂದ ಹೊರಟನು. ಮೀನಾಕ್ಷೀದೇವಿಯಿಂದ ಸಹಿತನಾಗಿರುವ, ಮಹಾಲಿಂಗರೂಪದಿಂದ ಇರುವ, ಸುಂದರೇಶ್ವರನನ್ನು ದರ್ಶನ ಮಾಡಿ, ಭಕ್ತಿಯಿಂದ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ, ಸ್ತೋತ್ರಮಾಡಿ, ಮೀನಧ್ವಜದಿಂದ ಪ್ರಕಾಶಿಸುತ್ತಿರುವ ವಿಮಾನದಲ್ಲಿ ಕುಳಿತುಕೊಂಡು, ಇಂದ್ರನಿಗೆ ಎದುರಾಗಿ ಯುದ್ಧಮಾಡುವ ಉದ್ಯೋಗವನ್ನು ಪಾಂಡ್ಯರಾಜನು ನಡೆಸಿದನು.

೫೩-೫೫. ಅನಂತರದಲ್ಲಿ ಪಾಂಡ್ಯರಾಜನಿಗೂ, ಇಂದ್ರನಿಗೂ ಯುದ್ಧವು ನಡೆಯಿತು. ಇವರಿಬ್ಬರೂ ತಮ್ಮ ತಮ್ಮ ಅಸ್ತ್ರಗಳಿಂದ ಪರಸ್ಪರವಾಗಿ ಜಯವನ್ನು ಹೊಂದಲು ಅಪೇಕ್ಷಿಸುತ್ತಿದ್ದರು. ಆಗ್ನೇಯಾಸ್ತ್ರವನ್ನು ವಾರುಣಾಸ್ತ್ರದಿಂದಲೂ, ವಾರುಣಾಸ್ತ್ರವನ್ನು ವಾಯವ್ಯಾಸ್ತ್ರದಿಂದಲೂ, ವಾಯುವ್ಯಾಸ್ತ್ರವನ್ನು ಸರ್ಪಾಸ್ತ್ರದಿಂದಲೂ, ಸರ್ಪಾಸ್ತ್ರವನ್ನು ಗರುಡಾಸ್ತ್ರದಿಂದಲೂ, ಗರುಡಾಸ್ತ್ರವನ್ನು ಮಹಾಪಾಶವೆಂಬ ಅಸ್ತ್ರದಿಂದಲೂ, ಮಹಾಪಾಶಾಸ್ತ್ರವನ್ನು ಗಜಾಸ್ತ್ರದಿಂದಲೂ, ಗಜಾಸ್ತ್ರವನ್ನು ಸಿಂಹಾಸ್ತ್ರದಿಂದಲೂ, ಸಿಂಹಾಸ್ತ್ರವನ್ನು ಶರಭಾಸ್ತ್ರದಿಂದಲೂ ಅವರು ತಡೆಗಟ್ಟುತ್ತಿದ್ದರು.

ಏವಮುಸ್ತ್ರಾಣಿ ಘೋರಾಣಿ ಘೋರೈರಸ್ತ್ರೈರ್ನಿಪಾತ್ಯ ಚ ।

ತಥಾ ತೌ ತೀಕ್ಷ್ಣ ಶಸ್ತ್ರಾಭ್ಯಾಂ ಧನುಷೀ ಸ್ವಸ್ವಹಸ್ತಗೇ
ಬಭಂಜತುರತಿಕ್ರುದ್ಧೌ ಮಲ್ಲಯುದ್ಧಂ ಚ ಚಕ್ರತುಃ । ॥ ೫೬ ॥

ಅಶನಿಪಾತನಿಭೈರತಿದಾರುಣೈಃ ।
ಕಠಿನಮುಷ್ಟಿಕೃತೈರಪಿ ತಾಡನೈಃ ।
ಶಯನಬೃಂದಯುತಂ ಚ ಕಳೇಬರಂ ।
ಶತಮುಖಸ್ಯ ಮಹದ್ವ್ಯಥಿತಂ ವ್ಯಧಾತ್ ॥ ೫೭ ॥

ಶತಮುಖೋಽಪಿ ಮಹಾಬಲಸಂಯುತಃ ।
ಕನಕಪರ್ವತಸನ್ನಿಭಧಾರಯಾ ।
ವಿಧೃತಯಾ ಭುಜಯಾ ಕುಲಿಶಾಯುಧಂ ।
ಕುಪಿತದಂಡಧರೇಣ ಸಮೋ ಬಭೌ ॥ ೫೮ ॥

ತದನುಪಾಂಡ್ಯನೃಪೋ ವಲಯಾಯುಧಂ ।
ತಪನಕೋಟಿನಿಭಂ ನಿಶಿತಂ ದಧತ್ ।

---

೫೬-೫೮. ಅವರು ಈ ಪ್ರಕಾರವಾಗಿ ಭಯಂಕರವಾದ ಅಸ್ತ್ರಗಳನ್ನು, ಅದಕ್ಕಿಂತ ಭಯಂಕರವಾದ ಅಸ್ತ್ರಗಳಿಂದ ನಾಶಪಡಿಸಿದರು. ತೀಕ್ಷ್ಣವಾದ ಶಸ್ತ್ರಗಳಿಂದ ಅವರು ತನ್ನ ತಮ್ಮ ಹಸ್ತಗಳಲ್ಲಿದ್ದ ಬಿಲ್ಲುಗಳನ್ನು ಮುರಿದುಕೊಂಡು, ಮಲ್ಲಯುದ್ಧ (ಜಟ್ಟಿಗಳ ಕಾಳಗ)ವನ್ನು ಮಾಡಿದರು. ಆ ಕಾಳಗದಲ್ಲಿ ಪಾಂಡ್ಯರಾಜನು ಸಿಡಲಿನ ಏಟಿನಂತೆ ಬಹಳ ಕ್ರೂರವಾದ, ಬಹಳ ದೃಢವಾದ ತನ್ನ ಮುಷ್ಟಿಯ ಏಟುಗಳಿಂದ ಇಂದ್ರನ ಶರೀರವು ಬಹಳ ದಪ್ಪವಾದ ಹಾಸಿಗೆಯಮೇಲೆ ಮಲಗುವಂತೆ ಮಾಡಿದನು. ಆಗ ಇಂದ್ರನು ಮೇರುಪರ್ವತಕ್ಕೆ ಸಮನಾದ ಧಾರೆಯುಳ್ಳ, ವಜ್ರಾಯುಧವನ್ನು ಹಿಡಿದುಕೊಂಡು ಕೋಪದಿಂದ ಯಮದಂಡವನ್ನು ಹಿಡಿದಿರುವ ಯಮನಂತೆ ಕಾಣಿಸುತ್ತಿದ್ದನು.

೫೯-೬೦. ಇದನ್ನು ನೋಡಿ ಪಾಂಡ್ಯರಾಜನು ಕೋಟಿಸೂರ್ಯರಂತೆ, ಬೆಳಗುತ್ತಿರುವ ಹರಿತವಾದ ಚಕ್ರಾಯುಧವನ್ನು ಧರಿಸಿ, ಐಶ್ವರ್ಯ, ಬಹಳ ಶಕ್ತಿ, ತೇಜಸ್ಸು, ಪರಾಕ್ರಮ ಇವುಗಳಿಂದ ಹೋಲಿಕೆಯಿಲ್ಲದಿರುವ ವಿಷ್ಣುವಿನ ಹಾಗೆ

ಅತುಲಚಕ್ರಧರೇಣ ಸಮೋ ಬಧಾ ।
ವತಿಬಲೇನ ಪರಾಕ್ರಮತಃ ಶ್ರಿಯಾ ॥ ೫೯ ॥

ವಜ್ರಾಯುಧಂ ಕುಲಾದ್ರೀಣಾಂ ಪಕ್ಷಶಾತನಸುಕ್ಷಮಂ ।
ವ್ಯಸರ್ಜಯತ್ ಮಹಾಘೋರಮಿಂದ್ರಃ ಪಾಂಡ್ಯನೃಪಂ ಪ್ರತಿ ॥ ೬೦ ॥

ಉಗ್ರೋ ಮಹಾಘೋರತರಂ ದುರ್ಭೇದ್ಯಂ ವಲಯಾಯುಧಂ ।
ಬಹುಶೋ ಭ್ರಾಮಯಿತ್ವಾ ತಮತಿವೇಗೇನ ಚಾಕ್ಷಿಪತ್ ॥ ೬೧ ॥

ವೇಗಾಗತಂ ಮಹಾವಜ್ರಂ ನಿಪಾತ್ಯ ಧರಣೀತಲೇ ।
ಕಿರೀಟಂ ವೃತ್ರಶತ್ರೋಶ್ಚ ಭಿನತ್ತಿ ವಲಯೋ ಮಹಾನ್ ॥ ೬೨ ॥

ಸೋಮಸುಂದರಲಿಂಗಸ್ಯ ಭಕ್ತ್ಯಾ ಚಾತುಲಯಾನ್ವಿತಃ ।
ಉಗ್ರಾಖ್ಯ ಉಗ್ರತನಯೋ ನೈವ ಜೇಯೋ ಮಯಾಧುನಾ ॥ ೬೩ ॥

---

ಕಾಣಿಸುತ್ತಿದ್ದನು, ಇಂದ್ರನು ಬೆಟ್ಟಗಳ ರೆಕ್ಕೆಯನ್ನು ಕತ್ತರಿಸುವ ಶಕ್ತಿಯುಳ್ಳ ಬಹಳ ಭಯಂಕರವಾದ ವಜ್ರಾಯುಧವನ್ನು ಪಾಂಡ್ಯರಾಜನ ಮೇಲೆ ಪ್ರಯೋಗಿಸಿದನು. ಉಗ್ರಪಾಂಡ್ಯನು ಬಹಳ ಭಯಂಕರವಾದ ಯಾರಿಂದಲೂ ಭೇದಿಸಲಸಾಧ್ಯವಾದ ಚಕ್ರಾಯುಧವನ್ನು ಬಹಳ ವೇಗವಾಗಿ ತಿರುಗಿಸಿ ಇಂದ್ರನಿಗೆ ತಗಲುವಂತೆ ಬಲವಾಗಿ ಎಸೆದನು.

೬೨-೬೫. ಆಗ ಚಕ್ರಾಯುಧವು ವೇಗದಿಂದ ಬರುತ್ತಿದ್ದ ವಜ್ರಾಯುಧವನ್ನು ಭೂಮಿಗೆ ಕೆಡವಿ, ಇಂದ್ರನ ಕಿರೀಟಕ್ಕೆ ಬಿದ್ದದ್ದರಿಂದ ಕಿರೀಟವು ಭೂಮಿಗೆ ಬಿದ್ದು ಹೋಯಿತು. ಉಗ್ರನ ಮಗನು ಉಗ್ರಪಾಂಡ್ಯನು. ಇವನೂ ಸುಂದರೇಶ್ವರನಲ್ಲಿ ಬಹಳ ಭಕ್ತಿಯುಳ್ಳವನು. ಆದ್ದರಿಂದ ನಾನು ಈಗ ಜಯಿಸಲು ಆಗುವುದಿಲ್ಲವೆಂದು ಇಂದ್ರನು ಮನಸ್ಸಿನಲ್ಲಿ ನಿಶ್ಚಯಿಸಿಕೊಂಡು ನಾಚಿಕೆಯಿಂದ ಹಿಂದಕ್ಕೆ ಹೊರಟು ಹೋದನು. ಉಗ್ರಪಾಂಡ್ಯರಾಜನು ಇಂದ್ರನನ್ನು ಸೋಲಿಸಿ, ತನ್ನ ಚತುರಂಗ ಸೇನೆಯೊಡನೆ ಬಹಳವಾದ ವಾದ್ಯಘೋಷ, ಜಯಕಾರಧ್ವನಿಗಳಿಂದ ಕೂಡಿ, ಹೊಗಳು

ಇತಿ ನಿಶ್ಚಿತ್ಯ ಮನಸಾ ವ್ರೀಡಿತಃ ಪ್ರಯಯೌ ಸ್ವರಾಟ್ ।
ಉಗ್ರೋ ವಿಜಿತ್ಯ ವೃತ್ರಾರಿಂ ಚತುರಂಗಬಲಾನ್ವಿತಃ ॥ ೬೪ ॥

ಮಹದ್ಭಿಸ್ತೂರ್ಯಘೋಷೈಶ್ಚ ಜಯಘೋಷೈಶ್ಚ ವಂದಿನಾಂ ।
ಪುರೀಂ ಚ ಮಧುರಾಂ ಪ್ರಾಪ್ಯ ಸಾಂಬಂ ಶಂಭುಂ ಪ್ರಣಮ್ಯ ಚ ॥ ೬೫ ॥

ಪ್ರಾಸಾಂತಃಪುರಮಾತ್ಮೀಯಂ ಧೃತನೀರಾಜನೋತ್ಸವಃ ।
ಇಂದ್ರೋ ಹಿ ಮೌಳಿಶೂನ್ಯೇನ ಮಸ್ತಕೇನ ಸಮನ್ವಿತಃ ॥ ೬೬ ॥

ಶ್ರೀಮದ್ಧಾಲಾಸ್ಯನಾಥೇನ ಮದೀಯಂ ರಕ್ಷಿತಂ ಶಿರಃ ।
ಇತಿ ಸಮ್ಯಗ್ವಿನಿಶ್ಚಿತ್ಯ ವ್ರೀಡಾವನತಕಂಧರಃ ॥ ೬೭ ॥

ನಗರೀಂ ಸ್ವಾಂ ಚ ಸಂಪ್ರಾಪ್ಯ ಮಹತೀಮಮರಾವತೀಂ ।
ವಲಾಹಕಾನ್ಮೋಚಯಿತುಂ ವಲಾರಾತಿರಥೋದ್ಯತಃ ॥ ೬೮ ॥

ಪತ್ರಿಕಾಂ ಪಾಂಡ್ಯಭೂಪಾಯ ಪ್ರೇಷಯಾಮಾಸ ದೂತತಃ ।
ದೇವಪಾಂಡ್ಯ ಮಹಾಂಸ್ತ್ವಂ ಹಿ ಭವತಃ ಸದೃಶೋ ನಹಿ ॥ ೬೯ ॥

---

ಭಟ್ಟರಿಂದ ಶ್ಲಾಘನೆಯನ್ನು ಹೊಂದಿದವನಾಗಿ, ಮಧುರಾನಗರಕ್ಕೆ ತಿರುಗಿ ಬಂದನು. ಅನಂತರ ಸೋಮಸುಂದರೇಶ್ವರನಿಗೆ ನಮಸ್ಕಾರವನ್ನು ಮಾಡಿ, ತನ್ನ ಅಂತಃಪುರದಲ್ಲಿ ಜಯ ಸಂಬಂಧವಾದ ಮಹೋತ್ಸವಗಳ ಆನಂದವನ್ನು ಅನುಭವಿಸುತ್ತಾ ಇದ್ದನು.

೬೬–೭೦. ಇಂದ್ರನು ಕಿರೀಟವಿಲ್ಲದಿರುವವನಾಗಿ "ಹಾಲಾಸ್ಯೇಶ್ವರನಾದ ಶಿವನು ನನ್ನ ಶಿರಸ್ಸಿಗೆ ಏಟು ಬೀಳದಂತೆ ರಕ್ಷಿಸಿದನು" ಎಂದು ನಿಶ್ಚಯಿಸಿಕೊಂಡು ನಾಚಿಕೆಯಿಂದ ಕುತ್ತಿಗೆಯನ್ನು ಬಗ್ಗಿಸಿಕೊಂಡು, ಅಮರಾವತೀ ನಗರಕ್ಕೆ ಹೋದನು. ಅವನು ಸೆರೆಯಲ್ಲಿರುವ ಮೋಡಗಳನ್ನು ಬಿಡಿಸುವುದಕ್ಕೆ ಪುನಃ ಪಾಂಡ್ಯರಾಜನಿಗೆ, ದೂತನ ಮುಖಾಂತರವಾಗಿ "ಎಲೈ ಪಾಂಡ್ಯರಾಜನೆ, ನೀನು ಮಹಾಮಹಿಮನು. ನಿನಗೆ ಸಮನಾದವರು ಯಾರೂ ಇಲ್ಲ. ಉತ್ಸಾಹವೇ ಮೊದಲಾದ ಶಕ್ತಿಯು ನಿನ್ನಲ್ಲಿ ಅತಿಶಯವಾಗಿ ಇರುವುದು. ಅವುಗಳಿಂದ ನಿನ್ನನ್ನು ಯಾರೂ ನೋಡುವುದಕ್ಕೂ

ಉತ್ಸಾಹಾದ್ಯಾಸ್ತ್ವದೀಯಾಶ್ಚ ದುರ್ನಿರೀಕ್ಷ್ಯಾ ಹಿ ಶಕ್ತಯಃ ।
ಮುಕ್ತ್ವಾ ಚಾಭ್ರಾಣಿ ಮದೀಯಾಂಶ್ಚ ಪ್ರೇಷಯಾಶು ಮದಂತಿಕಂ ॥ ೭೦ ॥

ಯಥಾಕಾಲಂ ಸುವೃಷ್ಟಿಃ ಸ್ಯಾತ್ತವ ರಾಷ್ಟ್ರೇ ನ ಸಂಶಯಃ ।
ಇತಿ ಸಂಲಿಖ್ಯ ಸಂಪ್ರಾಪ್ತಾಂ ವಾಚಯಿತ್ವಾ ಚ ಪತ್ರಿಕಾಂ ॥ ೭೧ ॥

ಶಂಭೋಸ್ಸುಂದರಪಾಂಡ್ಯಸ್ಯ ಪುತ್ರೋ ನೀತಿಮನುಸ್ಮರನ್ ।
ವೃಷ್ಟ್ಯರ್ಥಂ ಪ್ರತಿಭೂಃ ಕಸ್ಸ್ಯಾದಿತಿ ಪ್ರಾಹ ಯದಾ ನೃಪಃ ॥ ೭೨ ॥

ತದಾಹಂ ಪ್ರತಿಭೂರಸ್ಮೀತ್ಯುಕ್ತಃ ಪ್ರೀತ್ಯೈ ಬಿಡೌಜಸಃ ।
ಸಪ್ತಗ್ರಾಮಾಧಿಪೋಽಪ್ಯೇಕೋ ವನ್ಯೇಷು ಚ ಜನೇಷು ಚ ॥ ೭೩ ॥

ಪ್ರಸಿದ್ಧಶ್ಶಂಭುಭಕ್ತ್ಯಾ ಚ ವೀರ್ಯೇಣ ಯಶಸಾ ಶ್ರಿಯಾ ।
ಏಕವೀರ ಇತಿ ಖ್ಯಾತೋ ನಾಮಧೇಯೇನ ಚಾರ್ಥತಃ ॥ ೭೪ ॥

---

ಕೂಡ ಆಗುವಂತಿಲ್ಲ. ಮೋಡಗಳನ್ನು ಸೆರೆಯಿಂದ ಬಿಡಿಸಿ ನನ್ನ ಹತ್ತಿರಕ್ಕೆ ಕಳುಹಿಸು. ನಿನ್ನ ರಾಜ್ಯದಲ್ಲಿ ಆಯಾಯ ಕಾಲಕ್ಕೆ ಅನುಗುಣವಾಗಿ ಮಳೆಬೆಳೆಗಳು ಆಗುತ್ತವೆ. ಇದರಲ್ಲಿ ಸಂಶಯವಿಲ್ಲ" ಎಂದು ಕಾಗದವನ್ನು ಬರೆದು ಕಳುಹಿಸಿದನು.

೭೧-೭೨. ಉಗ್ರಪಾಂಡ್ಯರಾಜನು ಆ ಪತ್ರಿಕೆಯನ್ನು ನೋಡಿ, ನೀತಿಸಾಸ್ತ್ರವನ್ನು ಜ್ಞಾಪಿಸಿಕೊಂಡು "ಮಳೆಯು ಸರಿಯಾಗಿ ಬಂದು ಬೆಳೆಗಳು ಚೆನ್ನಾಗಿ ಬೆಳೆಯುವ ವಿಷಯದಲ್ಲಿ ಯಾರು ನಂಬಿಕೆಯನ್ನು ಕೊಡುವವರು"? ಎಂದು ಕೇಳಿದನು.

೭೨-೬೫. "ಶಿವನಲ್ಲಿ ಭಕ್ತಿಯಿಂದಲೂ, ಸಾಮರ್ಥ್ಯ, ಐಶ್ವರ್ಯ, ತೇಜಸ್ಸು, ಇವುಗಳಿಂದ ಏಕವೀರನೆಂದು ಸಾರ್ಥಕವಾದ ಹೆಸರನ್ನು ಹೊಂದಿರುವವನು ಒಬ್ಬನು ಜನಗಳಲ್ಲಿಯೂ ಮತ್ತು ಕಾಡಿನಲ್ಲಿರುವವರಲ್ಲಿಯೂ ಪ್ರಸಿದ್ಧನಾಗಿ ಇರುತ್ತಾ ನಾನು ಏಳು ಗ್ರಾಮಗಳಿಗೆ ಅಧಿಪತಿಯಾಗಿ ಮಳೆಯವಿಷಯದಲ್ಲಿ ನಂಬಿಕೆಯುಳ್ಳವನು." ಎಂದು ಇಂದ್ರನ ಸಂತೋಷಕ್ಕಾಗಿ ಒಪ್ಪಿಕೊಂಡನು. ಆಗ ಪಾಂಡ್ಯರಾಜನು ಮೇಘ

ಅಥ ಪಾಂಡ್ಯಮಹೀಪಾಲೋ ಮುಮೋಚ ಜಲಭೃದ್ವರಾನ್ ।
ತದಾ ಪ್ರಭೃತಿ ತದ್ರಾಷ್ಟ್ರೇ ಸುವೃಷ್ಟಿಸ್ಸುಮಹಾನಭೂತ್ ॥ ೭೫ ॥

ಸುಭಿಕ್ಷಮು ಭವದ್ರಾಜ್ಯಂ ಪ್ರಜಾಃ ಸರ್ವಾ ಸ್ಸನಂದಿತಾಃ ।
ಲೀಲಾ ಚತುರ್ದಶೀ ಪ್ರೋಕ್ತಾ ಸರ್ವಸಂತಾಪಹಾರಿಣೀ ॥ ೭೬ ॥

ಸದ್ಯಸ್ಸುವೃಷ್ಟಿಕರ್ತ್ರೀ ಚ ಸರ್ವಸೌಖ್ಯಪ್ರದಾಯಿನೀ ।
ಯಃ ಕಶ್ಚಿತ್ಸಕೃದಪ್ಯೇನಾಂ ಲೀಲಾಂ ಸಮ್ಯಕ್ ಶೃಣೋತಿ ಚೇತ್ ॥ ೭೭ ॥
ಲಭತೇ ಕಾಂಕ್ಷಿತಾನ್ ಸರ್ವಾನ್ ಪುರುಷಾರ್ಥಾಂಶ್ಚತುರ್ವಿಧಾನ್ ।

ಇತಿ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ವೃತ್ರಾರಿಮೌಳಿಭೇದನಂ
ನಾಮಾಷ್ಟಾದಶೋಽಧ್ಯಾಯಃ.

---

ಗಳನ್ನು ಕಾರಾಗೃಹದಿಂದ ಹೊರಕ್ಕೆ ಕಳುಹಿಸಿದನು. ಆಗಿನಿಂದಲೂ ಪಾಂಡ್ಯರಾಜನ ದೇಶಗಳಲ್ಲಿ ಸರಿಯಾಗಿ ಮಳೆಯಾಯಿತು. ರಾಜ್ಯದಲ್ಲಿ ಬೆಳೆಗಳು ಚೆನ್ನಾಗಿ ಬೆಳೆದು, ಪ್ರಜೆಗಳೆಲ್ಲರೂ ಸಂತೋಷದಿಂದ ಇದ್ದರು.

೭೬-೭೭. ಎಲ್ಲಾ ವಿಧವಾದ ಸಂಕಟಗಳನ್ನೂ ಪರಿಹರಿಸುವ, ಸರಿಯಾಗಿ ಮಳೆಯನ್ನುಂಟುಮಾಡಿ, ಎಲ್ಲಾ ಸೌಖ್ಯವನ್ನೂ ಕೊಡುವ, ಹದಿನಾಲ್ಕನೆಯ ಲೀಲೆಯನ್ನು ಹೇಳಿರುವೆನು. ಈ ಲೀಲೆಯನ್ನು ಒಂದು ಸಾರಿಯಾದರೂ ಚೆನ್ನಾಗಿ ಕೇಳಿದವನು ನಾಲ್ಕುವಿಧವಾದ ಪುರುಷಾರ್ಥವನ್ನೂ ತನ್ನ ಇಷ್ಟಾನುಸಾರವಾಗಿ ಹೊಂದುವನು.

ಸಂಪದ್ಯುಕ್ತವಾದ ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯ
ಮಾಹಾತ್ಮ್ಯೆಯಲ್ಲಿ ವೃತ್ರಾರಿಮೌಳಿ ಭೇದನವೆಂದು ಹೆಸರುಳ್ಳ
ಹದಿನೆಂಟನೆಯ ಅಧ್ಯಾಯವು ಮುಗಿದುದು,



|| ಶ್ರೀಃ ||
|| ಶ್ರೀ ಶಿವಾಯ ನಮಃ ||

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ

## ಏಕೋನವಿಂಶೋಽಧ್ಯಾಯಃ

ಚಂಡಾಯುಧೇನ ಹೇಮಾದ್ರಿಂ ಪ್ರಹೃತ್ಯ ಬಹುಲಂ ಧನಂ ।
ಅಗ್ರಹೀದುಗ್ರಭೂಪಾಲಃ ಪರಯಾ ಲೀಲಯಾ ಯಯಾ ॥ ೧ ॥

ತಾಂ ಲೀಲಾಂ ಸುಂದರೇಶಸ್ಯ ಕದಂಬವನವಾಸಿನಃ ।
ವಕ್ಷ್ಯೇ ಸಮಾಹಿತಸ್ವಾಂತಾಃ ಶೃಣ್ವಂತು ಮುನಿಪುಂಗವಾಃ ॥ ೨ ॥

ಸೋಮವಾರವ್ರತೇನಾಥ ಯಥಾವಿಧಿಕೃತೇನ ಚ ।
ಪ್ರಾತಃಸಾಯಂ ಚ ಕೃತಯಾ ಸೋಮಸುಂದರಸೇವಯಾ ॥ ೩ ॥

ಸರ್ವಾಸಾಂ ಸಂಪದಾಂ ವೃದ್ಧಿಸ್ತೇಜಸಾಂ ಯಶಸಾಮಪಿ ।
ಸರ್ವಸೌಭಾಗ್ಯವೃದ್ಧಿಶ್ಚ ಸದಾಽಭೂದುಗ್ರಭೂಪತೇಃ ॥ ೪ ॥

### ಹತ್ತೊಂಬತ್ತನೆಯ ಅಧ್ಯಾಯವು.

೧-೪. ಅಗಸ್ತ್ಯ ಋಷಿಯು ಹೇಳಿದನು:— "ಎಲೈ ಮುನಿಶ್ರೇಷ್ಠರೇ, ಉಗ್ರಪಾಂಡ್ಯರಾಜನು ಚಂಡಾಯುಧದಿಂದ ಮೇರುಪರ್ವತವನ್ನು ಹೊಡೆದು ಬಹಳ ಹಣವನ್ನು ತಂದ ಲೀಲೆಯನ್ನು ಹೇಳುವೆನು. ಕದಂಬವನವಾಸಿಯಾದ ಸುಂದರೇಶನು ನಡೆಸಿದ ಆ ಲೀಲೆಯನ್ನು ನೀವೆಲ್ಲರೂ ಏಕಾಗ್ರವಾದ ಮನಸ್ಸಿನಿಂದ ಕೇಳಿರಿ. ಉಗ್ರಪಾಂಡ್ಯರಾಜನು ಶಾಸ್ತ್ರಕ್ಕನುಸಾರವಾಗಿ ಸೋಮವಾರ ವ್ರತವನ್ನು ಆಚರಿಸಿ, ಸಾಯಂಪ್ರಾತಃಕಾಲಗಳಲ್ಲಿ ಸುಂದರೇಶ್ವರನ ಸೇವೆಯನ್ನು ತಪ್ಪದೆ ಸರಿಯಾಗಿ ಮಾಡಿದ್ದರಿಂದ ಅವನಿಗೆ ಎಲ್ಲಾ ವಿಧವಾದ ಸಂಪತ್ತುಗಳ ಅಭಿವೃದ್ಧಿಯೂ, ಯಶಸ್ಸು, ಮತ್ತು ತೇಜಸ್ಸುಗಳ ಅಭಿವೃದ್ಧಿಯೂ, ಶ್ರೇಯಸ್ಸಿನ ವೃದ್ಧಿಯೂ ದಿನೇದಿನೇ ಹೆಚ್ಚುತ್ತಿತ್ತು.

॥ ಋಷಯ ಊಚುಃ ॥

ಸೋಮವಾರವ್ರತವಿಧಿಂ ಕಥಯಿತ್ವಾ ಘಟೋದ್ಭವ ।
ತದನು ಪ್ರಸ್ತುತಾಂ ಲೀಲಾಂ ವದ ವಾತಾಪಿಭಕ್ಷಕ ॥ ೫ ॥

॥ ಅಗಸ್ತ್ಯ ಉವಾಚ ॥

ಸಾಧು ಪೃಷ್ಟಂ ಹಿ ಯುಷ್ಮಾಭಿಃ ಸರ್ವಲೋಕಹಿತಾಯ ಚ ।
ಅಧುನಾ ಸಂಪ್ರವಕ್ಷ್ಯಾಮಿ ಸೋಮವಾರವ್ರತಂ ಮಹತ್ ॥ ೬ ॥

ಯಸ್ಯಾನುಷ್ಠಾನಮಾತ್ರೇಣ ಶಂಭೋಃ ಸಾಯುಜ್ಯರೂಪಿಣೀ ।
ದುರ್ಲಭಾ ಸರ್ವಜಂತೂನಾಂ ಸುಲಭಾ ಮುಕ್ತಿ ರುತ್ತಮಾ ॥ ೭ ॥

ಸರ್ವೇಷಾಮಪಿ ದೇವಾನಾಂ ಪ್ರವರಃ ಶಂಕರೋ ಯಥಾ ।
ಸರ್ವಾಸಾಮಪಿ ದೇವೀನಾಂ ಪ್ರವರಾ ಪಾರ್ವತೀ ಯಥಾ ॥ ೮ ॥

ತಥಾ ವ್ರತೇಷು ಸರ್ವೇಷು ಸೋಮವಾರವ್ರತಂ ವರಂ ।
ಯೇ ಕುರ್ವಂತಿ ಯಥಾಶಕ್ತಿ ಸೋಮವಾರಮಹಾವ್ರತಂ ॥ ೯ ॥

ನಶ್ಯಂತಿ ವ್ಯಾಧಯಸ್ತೇಷಾಂ ತಥಾ ಸರ್ವೇಪಿ ಶತ್ರವಃ ।
ಅಕಾಲಮರಣಂ ನಾಸ್ತಿ ಚಾಪದೋ ನ ಸ್ಪೃಶಂತಿ ತಾನ್ ॥ ೧೦ ॥

---

೫. ಋಷಿಗಳು ಹೇಳಿದರು:– "ವಾತಾಪಿಯುನ್ನು ನಾಶಮಾಡಿದವನಾಗಿಯೂ ಕಲಶದಿಂದ ಉತ್ಪನ್ನನಾಗಿಯೂ ಇರುವ ಅಗಸ್ತ್ಯ ಋಷಿಯೇ, ನೀನು ಸೋಮವಾರ ವ್ರತಾಚರಣೆಯ ಕ್ರಮವನ್ನು ಹೇಳಿದನಂತರ ಮೇರುಪರ್ವತವನ್ನು ನಿಗ್ರಹಮಾಡಿದ ಲೀಲೆಯನ್ನು ನಮಗೆ ತಿಳಿಸು."

೬. ಅಗಸ್ತ್ಯಋಷಿಯು ಹೇಳಿದನು:—"ಎಲ್ಲಾ ಲೋಕಗಳಿಗೂ ಹಿತವನ್ನುಂಟುಮಾಡುವ ನೀವು ಕೇಳಿರುವ ಪ್ರಶ್ನೆಯು ಬಹಳ ಚೆನ್ನಾಗಿರುವುದು. ದೊಡ್ಡದಾದ ಮಹಿಮೆಯಿಂದ ಕೂಡಿರುವ ಸೋಮವಾರ ವ್ರತವನ್ನು ಆಚರಿಸುವ ಕ್ರಮವನ್ನು ಈಗ ಹೇಳುವೆನು.

೭-೧೧. ಈ ವ್ರತಾಚರಣೆಯಿಂದ ಶಿವನ ಸಾಯುಜ್ಯವು ಸುಲಭವಾಗಿ ದೊರಕುವುದು. ಎಲ್ಲಾ ಪ್ರಾಣಿಗಳಿಗೂ ಹೊಂದಲಶಕ್ಯವಾದ ಉತ್ತಮವಾದ ಮುಕ್ತಿಯು

ಇಹಾಮುತ್ರ ಮಹಾಭೋಗಾನ್ ಲಭಂತೇ ಪುಣ್ಯಗೌರವಾತ್ ।
ಅಮಾವಾಸ್ಯಾಯುತಂ ತಚ್ಚೇದನಂತಫಲದಾಯಕಂ ॥ ೧೮ ॥

ಸೋಮವಾರವ್ರತಂ ಪ್ರೋಕ್ತಂ ಪುಣ್ಯವಿದ್ಭಿಃ ಪುರಾತನೈಃ ।
ಮೇರ್ವಾದಿಸರ್ವಕ್ಷೇತ್ರೇಷು ಸೋಮವಾರವ್ರತಾತ್ಕೃತಾತ್ ॥ ೧೯ ॥

ಶ್ರೀಹಾಲಾಸ್ಯೇ ಶಿವಕ್ಷೇತ್ರೇ ಸೋಮಸುಂದರಸನ್ನಿಧೌ ।
ಕೃತಂ ತತ್ಕೋಟಿಗುಣಿತಂ ಫಲಪ್ರಾಪ್ತೌ ನ ಸಂಶಯಃ ॥ ೨೦ ॥

ಸೋಮವಾರವ್ರತಸ್ತಸ್ಮಾತ್ ಸೋಮಸುಂದರಸನ್ನಿಧೌ ।
ಸದಾ ಚಾತ್ಮಹಿತಾಪೇಕ್ಷೀ ಕುರ್ಯಾದತ್ಯಾದರೇಣ ಚ ॥ ೨೧ ॥

---

ಸುಲಭವಾಗಿ ಈ ವ್ರತಾಚರಣೆಯಿಂದುಂಟಾಗುವುದು. ದೇವತೆಗಳೆಲ್ಲರಿಗಿಂತಲೂ ಶಿವನು ಶ್ರೇಷ್ಠನಾಗಿರುವ ಹಾಗೆ, ದೇವತಾಸ್ತ್ರೀಯರಿಗೆಲ್ಲರಿಗಿಂತಲೂ ಪಾರ್ವತೀದೇವಿಯು ಶ್ರೇಷ್ಠಳಾಗಿರುವಳು. ಹೀಗೆಯೇ ಎಲ್ಲಾ ವ್ರತಗಳಿಗಿಂತಲೂ ಸೋಮವಾರ ವ್ರತವು ಬಹಳ ಉತ್ತಮವಾದದ್ದು. ತಮ್ಮ ಕೈಲಾದಮಟ್ಟಿಗೆ ಸಾಮಗ್ರಿಗಳನ್ನು ಸಿದ್ಧಪಡಿಸಿಕೊಂಡು ತಮ್ಮ ತಮ್ಮ ಶಕ್ತ್ಯನುಸಾರವಾಗಿ ಈ ವ್ರತವನ್ನು ಆಚರಿಸಿದವರಿಗೆ ರೋಗಗಳು ನಾಶವಾಗುವುವು. ಶತ್ರುಗಳೆಲ್ಲರೂ ಹಾಳಾಗುವರು. ಅಕಾಲದಲ್ಲಿ ಮರಣಭಯವು ಅವರಿಗೆ ಇರುವುದಿಲ್ಲ. ವಿಪತ್ತುಗಳು ಅವರಿಗೆ ಬರುವುದಿಲ್ಲ. ಅವರು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ತಮ್ಮ ಪುಣ್ಯಾತಿಶಯದಿಂದ ಬಹಳ ಭೋಗಗಳನ್ನು ಅನುಭವಿಸುವರು. ಸೋಮವಾರವು ಅಮಾವಾಸ್ಯೆಯಿಂದ ಕೂಡಿದ್ದರೆ, ಅದರ ಫಲವೆಲ್ಲವನ್ನು ಹೇಳಲು ಸಾಧ್ಯವಿಲ್ಲವು.

೧೯-೨೧. ಪುಣ್ಯದ ಮಹಿಮೆಯನ್ನು ತಿಳಿದಿರುವ ಪ್ರಾಚೀನರು ಸೋಮವಾರ ವ್ರತವನ್ನು ಹೇಳಿರುವರು ಮೇರುಪರ್ವತವೇ ಮೊದಲಾದ ಕ್ಷೇತ್ರಗಳಲ್ಲಿ ಈ ವ್ರತವನ್ನು ಆಚರಿಸಿದರೆ, ಉಂಟಾಗುವ ಪುಣ್ಯಕ್ಕಿಂತಲೂ ಹಾಲಾಸ್ಯಕ್ಷೇತ್ರದಲ್ಲಿ ಸೋಮಸುಂದರೇಶ್ವರನ ಸನ್ನಿಧಿಯಲ್ಲಿ ಆಚರಿಸಿದ ವ್ರತದಫಲವು ಕೋಟಿಗಟ್ಟಲೆಯಾಗಿ ಹೆಚ್ಚಾಗಿರುವುದು. ಆದ್ದರಿಂದ ತನಗೆ ಹಿತವನ್ನು ಅಪೇಕ್ಷಿಸುವವನು ಸೋಮವಾರ ವ್ರತವನ್ನು ಸುಂದರೇಶ್ವರನ ಸನ್ನಿಧಿಯಲ್ಲಿಯೇ ಆದರದಿಂದ ಆಚರಿಸಬೇಕು. ಉಮಾ

ಉಮಯಾ ಸಹಿತೋ ದೇವಃಸೋಮ ಇತ್ಯಭಿಧೀಯತೇ ।
ತದ್ದಿನಂ ಸೋಮವಾರಾಖ್ಯ ಮನಂತಫಲದಾಯಕಂ ॥ ೧೫ ॥

ಉಪವಾಸಂ ತಥಾ ನಕ್ತಮೇಕಭುಕ್ತಮಥಾಪಿ ವಾ ।
ವ್ರತಂ ಸಂಕಲ್ಪ್ಯ ತೇಷ್ವೇಕಂ ಗೃಹ್ಣೀಯಾನ್ನಿಯಮಂ ನರಃ ॥ ೧೬ ॥

ಫಲಂ ಪ್ರಾಪ್ನೋತಿ ನಿಯಮಾತ್ ನ ಶ್ರೇಯೋ ನಿಯಮಂ ವಿನಾ ।
ಸೋಮವಾರೇ ಮಹಾಪುಣ್ಯೇ ಸೋಮಮುದ್ದಿಶ್ಯ ಯತ್ಕೃತಂ ॥ ೧೭ ॥

ಅನಂತಫಲದಂ ತಚ್ಚ ಸುಕೃತಂ ಮುನಿಪುಂಗವಾಃ ।
ಅಥ ವ್ರತವಿಧಾನಂ ಚ ಕಥಯಾಮಿ ಮುನೀಶ್ವರಾಃ ॥ ೧೮ ॥

---

ಸಮೇತನಾದುದರಿಂದ ಶಿವನಿಗೆ ಸೋಮನೆಂದು ಹೆಸರು ಬಂದಿರುವುದರಿಂದಲೇ ಆ ದಿನಕ್ಕೆ ಸೋಮವಾರವೆಂದು ಹೆಸರು ಉಂಟಾಗಿರುವ ಕಾರಣ ಆ ದಿನದಲ್ಲಿ ವ್ರತಾಚರಣೆಯಿಂದ ಬಹಳ ಫಲವು ಉಂಟಾಗುವುದು.

೧೬-೧೮. ಈ ವ್ರತವನ್ನು ಆಚರಿಸುವವನು ಉಪವಾಸ, ಏಕಭುಕ್ತ, ನಕ್ತವ್ರತ ಎಂಬಿವುಗಳಲ್ಲಿ ಯಾವುದಾದರೂ ಒಂದನ್ನು ತಪ್ಪದೆ ಆಚರಿಸುತ್ತೇನೆಂದು ನಿಯಮವನ್ನು ಮಾಡಲು ನಿಶ್ಚಯಮಾಡಿಕೊಳ್ಳಬೇಕು. ನಿಯಮವಿಲ್ಲದಿದ್ದರೆ ಶ್ರೇಯಸ್ಸು ಉಂಟಾಗುವುದಿಲ್ಲವಾದ್ದರಿಂದ ನಿಯಮದಿಂದ ಇದ್ದುಕೊಂಡು ವ್ರತಾಚರಣೆಯ ಫಲವನ್ನು ಹೊಂದುವುದು ಶ್ರೇಯಸ್ಕರವಾದದ್ದು. ಬಹಳ ಪುಣ್ಯಕರವಾದ ಸೋಮವಾರದಲ್ಲಿ ಶಿವನನ್ನು ಉದ್ದೇಶಮಾಡಿಕೊಂಡು ಆಚರಿಸಿದ ವ್ರತವು ಬಹಳ ಪುಣ್ಯವನ್ನು ಕೊಡುವುದರಿಂದ ಅದನ್ನು ಆಚರಿಸುವುದು ಉತ್ತಮವಾದ ಕೆಲಸವಾಗಿರುವುದು. ಆ ವ್ರತವನ್ನು ಆಚರಿಸುವ ಕ್ರಮವನ್ನು ಹೇಳುವೆನು. ಅದನ್ನು ಕೇಳಿದವರೆಲ್ಲರಿಗೂ ಸಕಲ ವಿಧವಾದ ಐಶ್ವರ್ಯವು ಉಂಟಾಗುವುದು.

ಶ್ರುತಮಾತ್ರೇಣ ಸರ್ವೇಷಾಂ ಸರ್ವೈಶ್ವರ್ಯಪ್ರದಾಯಕಂ ।
ಕಾರ್ತಿಕೇ ಮಾಸಿ ಮಾರ್ಗೇವಾಮಾಸೇಷ್ವನ್ಯೇಷು ವಾ ಪುನಃ ॥ ೧೯ ॥

ಕರ್ತುಃ ಶ್ರದ್ಧಾ ಭವೇದ್ಯಸ್ಮಿನ್ ಸೋಮವಾರವ್ರತಂ ಪ್ರತಿ ।
ಶೂನ್ಯಾದಿದೋಷರಹಿತೇ ತಸ್ಮಿನ್ ಮಾಸೇ ಸಮಾರಭೇತ್ ॥ ೨೦ ॥

ಸೋಮವಾರೇ ವ್ರತವಿಧೌ ಮಾಸಾ ಶ್ಚಾಂದ್ರಮಸಾ ವರಾಃ ।
ತನ್ಮಾಸೇಷ್ವಾದಿತಃ ಪ್ರಾಪ್ತೇ ವಾರರಾಜೇ ಶುಭಾವಹೇ ॥ ೨೧ ॥

ದೇವದೈತ್ಯಮುನೀಂದ್ರಾದ್ಯೈಃಸ್ತೂಯಮಾನೇ ಶಿವಪ್ರಿಯೇ ।
ಸೋಮವಾರೇ ತು ಸಂಪ್ರಾಪ್ತೇ ಪ್ರಾತರುತ್ಥಾಯ ಭಕ್ತಿಮಾನ್ ॥ ೨೨ ॥

ಪರಾಶಕ್ತ್ಯಾ ಸುಮೀನಾಕ್ಷ್ಯಾ ಸಹಿತಂ ಸೋಮಸುಂದರಂ ।
ಶ್ರೀಹಾಲಾಸ್ಯೇ ಶಿವಪದೇ ದ್ವಾದಶಾಂತೇ ವಿಭಾವಯೇತ್ ॥ ೨೩ ॥

---

೧೯-೨೦. ಕಾರ್ತಿಕಮಾಸ ಅಥವಾ ಮಾರ್ಗಶಿರ ಮಾಸದಲ್ಲಿಯಾಗಲಿ, ಶೂನ್ಯ ಮಾಸದ ದೋಷವಿಲ್ಲದ ಮಾಸದಲ್ಲಿಯಾಗಲಿ, ವ್ರತಾಚರಣೆಯನ್ನು ಮಾಡುವವನಿಗೆ ಭಕ್ತಿಯು ಉಂಟಾದ ಸೋಮವಾರದಿಂದಲಾಗಲಿ, ವ್ರತಾಚರಣೆಗೆ ಪ್ರಾರಂಭಿಸಬೇಕು.

೨೧-೨೩. ಸೋಮವಾರ ವ್ರತಾಚರಣೆಗೆ ಚಾಂದ್ರಮಾನವು ಉತ್ತಮವಾದದ್ದು. ಚಾಂದ್ರಮಾನದ ಮಾಸಗಳಲ್ಲಿ ಮೊದಲನೆಯ ಸೋಮವಾರವನ್ನು ವ್ರತಾಚರಣೆಗೆ ಪ್ರಾರಂಭಿಸಲು ದೇವತೆಗಳೂ, ದೈತ್ಯರೂ, ಮುನಿಗಳೂ ಪ್ರಶಸ್ತವೆಂದು ಹೇಳುವರು. ಶುಭಾವಹವಾದ, ವಾರಶ್ರೇಷ್ಠವಾದ, ಶಿವನಿಗೆ ಪ್ರೀತ್ಯಾಸ್ಪದವಾದ, ಸೋಮವಾರದ ದಿವಸ ವ್ರತವನ್ನು ಮಾಡುವವನು ಪ್ರಾತಃಕಾಲಕ್ಕೆ ಸರಿಯಾಗಿ ಎದ್ದು, ಭಕ್ತಿಯಿಂದ ಪರಾಶಕ್ತಿಯಾದ ಮೀನಾಕ್ಷಿಯೊಡನೆ ಇರುವ ಸೋಮಸುಂದರೇಶ್ವರನನ್ನು ದ್ವಾದಶಾಂತವಾದ ಶಿವನ ಸ್ಥಾನವಾದ ಹಾಲಾಸ್ಯಕ್ಷೇತ್ರದಲ್ಲಿ ಧ್ಯಾನಮಾಡಬೇಕು.

ನಿತ್ಯಕರ್ಮಾಣಿ ಸರ್ವಾಣಿ ದಂತಧಾವನಪೂರ್ವಕಂ ।
ಕೃತ್ವಾ ನೈಮಿತ್ತಿಕಂ ಕರ್ಮ ಸ್ನಾನಾದ್ಯಂ ಪ್ರಾರಭೇತ್ಸುಧೀಃ ॥ ೨೪ ॥

ಭಸ್ಮಶ್ರೀವೃಕ್ಷಮೂಲೋದ್ಧಮೃದ್ಗೋಮಯತಿಲಾನ್ ಕುಶಾನ್ ।
ಉತ್ತಮಾಂಗೇ ವಿನಿಕ್ಷಿಪ್ಯ ಹೇಮಪದ್ಮಾಕರೇ ಶುಭೇ ॥ ೨೫ ॥

ಪವಿತ್ರಪಾಣಿಃ ಸಂಕಲ್ಪ್ಯ ಪಶ್ಚಾತ್ ಸ್ನಾನಂ ಸಮಾಚರೇತ್ ।
ಸುಂದರೇಶ್ವರ ಸರ್ವೇಶ ಸರ್ವತೀರ್ಥಫಲಪ್ರದ ॥ ೨೬ ॥

ದೇಹಿ ಸ್ನಾತುಮನುಜ್ಞಾಂ ಮೇ ತೀರ್ಥೇಸ್ಮಿನ್ ಭುಕ್ತಿಮುಕ್ತಿದೇ ।
ಯಸ್ಯ ಕೇಶೇಷು ಜೀಮೂತಾ ನದ್ಯಃ ಸರ್ವಾಂಗಸಂಧಿಷು ॥ ೨೭ ॥

ಕುಕ್ಷೌ ಸಮುದ್ರಾಶ್ಚತ್ವಾರಸ್ತಸ್ಮೈ ತೋಯಾತ್ಮನೇ ನಮಃ
ಇತ್ಯುಕ್ತ್ವಾ ವೇದಮಂತ್ರಾಂಶ್ಚ ರುದ್ರಲಿಂಗಾನ್ ಜಪೇದ್ವ್ರತೀ ॥ ೨೮ ॥

---

೨೪-೨೮. ಬುದ್ಧಿವಂತನಾದವನು ಅನಂತರದಲ್ಲಿ ದಂತಧಾವನ ಮಾಡಿಕೊಂಡು ಸ್ನಾನವನ್ನು ಮಾಡಿ ತನ್ನ ನಿತ್ಯಕರ್ಮಗಳನ್ನು ಆಚರಿಸಿದ ನಂತರ ನೈಮಿತ್ತಿಕವಾದ ಕರ್ಮಗಳನ್ನು ಆಚರಿಸಲು ಪ್ರಾರಂಭಿಸಬೇಕು. ಶುಭಕರವಾದ ಹೇಮಪದ್ಮಾಕರ ತೀರ್ಥವನ್ನು ಹೊಂದಿ ಭಸ್ಮ, ಶ್ರೀವೃಕ್ಷ(ಬಿಲ್ವಪತ್ರೆ)ಮೂಲದ ಮೃತ್ತಿಕೆ, ಗೋಮಯ, ತಿಲ,ದರ್ಭೆ ಇವುಗಳನ್ನು ತನ್ನ ಶಿರಸ್ಸಿನಲ್ಲಿ ಧರಿಸಿ,ಪವಿತ್ರವನ್ನು ಹಸ್ತದಲ್ಲಿ ಧರಿಸಿಕೊಂಡು ಅನಂತರ ಸಂಕಲ್ಪವನ್ನು ಮಾಡಬೇಕು. ಸಂಕಲ್ಪ ಮಾಡಿದ ನಂತರದಲ್ಲಿ, "ಎಲ್ಲಾ ತೀರ್ಥಗಳ ಫಲವನ್ನು ಕೊಡುವವನಾದ ಎಲ್ಲರಿಗೂ ಅಧಿಪನಾದ, ಸುಂದರೇಶ್ವರನೇ ಭುಕ್ತಿಯನ್ನೂ, ಮುಕ್ತಿಯನ್ನೂ ಉಂಟುಮಾಡುವ ಈ ಕ್ಷೇತ್ರದಲ್ಲಿರುವ ಹೇಮ ಪದ್ಮಾಕರ ತೀರ್ಥದಲ್ಲಿ ಸ್ನಾನವನ್ನು ಮಾಡಲು ನನಗೆ ಅನುಜ್ಞೆಯನ್ನು ಕೊಡು. ಜಲರೂಪದಿಂದ ಇರುವ ದೇವದೇವನ ಕೇಶಗಳಲ್ಲಿ ಮೇಘಗಳೂ, ದೇಹದ ಅಂಗ ಸಂಧಿಗಳಲ್ಲಿ ನದಿಗಳೂ, ಉದರದಲ್ಲಿ ನಾಲ್ಕು ಸಮುದ್ರಗಳೂ ಇರುವುವು. ಈ ಜಲ ರೂಪದಿಂದಿರುವ ದೇವನಿಗೆ ನಮಸ್ಕಾರವನ್ನು ನಾನು ಮಾಡುತ್ತೇನೆ" ಎಂದು ಅರ್ಥ ವನ್ನು ಬೋಧಿಸುವ ಈ ಶ್ಲೋಕವನ್ನೂ, ವೇದಮಂತ್ರಗಳನ್ನೂ ಹೇಳುತ್ತಾ ಸ್ನಾನ ವನ್ನು ಆ ತೀರ್ಥದಲ್ಲಿ ಮಾಡಬೇಕು.

**ಸ್ನಾತ್ವಾ ಶುಕ್ಲಾಂಬರಧರಸ್ಸಮಾಹಿತಮನಾಃ ಶುಚಿಃ**
**ಕಾಮಕ್ರೋಧಾದ್ಯಹಂಕಾರದ್ವೇಷಪೈಶೂನ್ಯವರ್ಜಿತಃ　　　　॥ ೨೯ ॥**

**ಆನೀತೈಃ ಶ್ವೇತಪುಷ್ಪೈಶ್ಚ ಮಾಲತೀಮಲ್ಲಿಕಾದಿಭಿಃ ।**
**ಕುಂದಪುನ್ನಾಗವಕುಳಶ್ವೇತಾರ್ಕಶತಪತ್ರಕೈಃ　　　　॥ ೩೦ ॥**

**ಬಿಲ್ವಪತ್ರೈರಖಂಡೈಶ್ಚ ಸಾಕ್ಷತೈಶ್ಚ ತಿಲೈರಪಿ ।**
**ಪೂಜಯೇಚ್ಛಂಕರಂ ಭಕ್ತ್ಯಾ ಶ್ರೀಹಾಲಾಸ್ಯಪತಿಂ ಪ್ರಭುಂ　　　　॥ ೩೧ ॥**

**ದೀಕ್ಷಾವಿಹೀನ ವಿಪ್ರಾಶ್ಚ ಮಹಾಲಿಂಗಸ್ಯ ತಸ್ಯ ತು ।**
**ಅರ್ಹಣಾಯಾಮನರ್ಹಾಶ್ಚ ಕ್ಷತ್ರಿಯಾದ್ಯಾಶ್ಚ ದೀಕ್ಷಿತಾಃ　　　　॥ ೩೨ ॥**

**ತೇ ಸರ್ವೇ ಕಾರಯಾಮಾಸುರನ್ಯೈ ರರ್ಹೈಸ್ತು ಭೂಸುರೈಃ**
**ಸ್ವೇಷ್ಟಲಿಂಗೇsಥವಾ ಬಾಹ್ಯೇ ಪೂಜಯೇತ್ ಸೋಮಸುಂದರಂ　　॥ ೩೩ ॥**

---

೨೯–೩೧. ಸ್ನಾನಮಾಡಿದ ನಂತರ ಪರಿಶುದ್ಧವಾದ ವಸ್ತ್ರಗಳನ್ನು ಧರಿಸಿ, ಸಮಾಧಾನವಾದ ಮನಸ್ಸುಳ್ಳವನಾಗಿ ಕಾಮ, ಕ್ರೋಧ, ಅಹಂಕಾರ, ದ್ವೇಷ, ಪೈಶುನ್ಯ (ಚಾಡಿ ಹೇಳುವಿಕೆ) ಇವುಗಳನ್ನು ಬಿಟ್ಟು ಶುಭ್ರವರ್ಣದ ಹೂವುಗಳಿಂದಲೂ ಜಾಜಿ, ಮಲ್ಲಿಗೆ, ಮಾಘಮಲ್ಲಿಗೆ, ಪುನ್ನಾಗಪುಷ್ಪ, ವಕುಳಪುಷ್ಪ, ಶ್ವೇತಾರ್ಕಪುಷ್ಪ, ತಾವರೆ ಹೂವು, ಇವುಗಳಿಂದಲೂ, ಖಂಡವಾಗದೆ ಇರುವ ಬಿಲ್ವಪತ್ರೆಗಳು, ತಿಲಾಕ್ಷತೆಗಳು ಇವುಗಳನ್ನು ತಂದು ಈ ಹೂವುಗಳಿಂದ ಹಾಲಾಸ್ಯಪತಿಯಾದ ಸುಂದರೇಶ್ವರನನ್ನು ಪೂಜೆಮಾಡತಕ್ಕದ್ದು

೩೨–೩೩. ಶಿವದೀಕ್ಷೆಯನ್ನು ಹೊಂದದೆಇರುವ ಬ್ರಾಹ್ಮಣರೂ ಹಾಲಾಸ್ಯೇಶ್ವರ ಮಹಾಲಿಂಗವನ್ನು ಪೂಜಿಸಲು ಯೋಗ್ಯರಲ್ಲದವರೂ, ಶಿವದೀಕ್ಷೆಯನ್ನು ಹೊಂದಿರುವ ಕ್ಷತ್ರಿಯರೂ ಇವರೆಲ್ಲರೂ ದೀಕ್ಷಾಬದ್ಧರಾದ ಬ್ರಾಹ್ಮಣರಿಂದ ಸೋಮಸುಂದರನಿಗೆ ಪೂಜೆಯನ್ನು ಮಾಡಿಸತಕ್ಕದ್ದು. ದೀಕ್ಷಿತರಾದವರು ತಮ್ಮ ಇಷ್ಟಲಿಂಗದಲ್ಲಿಯಾಗಲಿ ಬಾಹ್ಯಲಿಂಗದಲ್ಲಿಯಾಗಲಿ, ಸೋಮಸುಂದರೇಶ್ವರನನ್ನು ಪೂಜಿಸಬೇಕು.

ಏಕಭುಕ್ತವ್ರತೀ ಪೂಜಾಂ ಮಧ್ಯಾಹ್ನೇ ತು ಸಮಾಚರೇತ್ ।
ನಕ್ತವ್ರತೀ ಚೋಪವಾಸೀ ಕುರ್ಯಾದ್ರಾತ್ರೌ ಶಿವಾರ್ಚನಂ ॥ ೩೪ ॥

ಮಂತ್ರಾಣಾಮಪ್ಯಶೇಷಾಣಾಂ ಪಂಚಾಕ್ಷರಮನುರ್ಮಹಾನ್ ।
ಸಮಸ್ತವ್ರತಪುಷ್ಪಾಣಾಂ ಬಿಲ್ವಪತ್ರಂ ವಿಶಿಷ್ಯತೇ ॥ ೩೫ ॥

ತಸ್ಮಾದುಭಾಭ್ಯಾಂ ಮತಿಮಾನ್ ಪೂಜಯೇದಿಂದುಶೇಖರಂ ।
ಸಪ್ತಕೋಟಿಮಹಾಮಂತ್ರಾಃ ಶಿವವಕ್ತ್ರಾದ್ವಿನಿರ್ಗತಾಃ ॥ ೩೬ ॥

ಪಂಚಾಕ್ಷರಸ್ಯ ಮಂತ್ರಸ್ಯ ಕಲಾಂ ನಾರ್ಹಂತಿ ಷೋಡಶೀಂ ।
ದೀಕ್ಷಿತೋಽದೀಕ್ಷಿತೋ ವಾಪಿ ವಿಧಾನಾದನ್ಯತೋಽಪಿ ವಾ ॥ ೩೭ ॥

ಪಂಚಾಕ್ಷರಂ ಜಪೇದ್ಯಸ್ತು ಶಿವಸ್ಯಾನುಚರೋ ಭವೇತ್ ।
ಬ್ರಹ್ಮಹತ್ಯಾಂ ಭ್ರೂಣಹತ್ಯಾಂ ಕೃತ್ವಾ ಚಾನ್ಯಾನ್ ಬಹೂನಘಾನ್ ॥ ೩೮ ॥

---

೩೪–೩೬. ಏಕಭುಕ್ತವ್ರತವುಳ್ಳವನು ಮಧ್ಯಾಹ್ನದಲ್ಲಿಯೇ ಪೂಜಿಸಬೇಕು. ನಕ್ತವ್ರತಮಾಡುವವನೂ, ಉಪವಾಸ ವ್ರತ ಮಾಡುವವನೂ ರಾತ್ರಿಯ ಕಾಲದಲ್ಲಿ ಶಿವಪೂಜೆಯನ್ನು ಮಾಡಬೇಕು. ಎಲ್ಲಾ ಮಂತ್ರಗಳಿಗಿಂತಲೂ ಪಂಚಾಕ್ಷರ ಮಂತ್ರವು ಉತ್ತಮವಾದದ್ದು. ಎಲ್ಲಾ ವಿಧವಾದ ಪತ್ರಪುಷ್ಪಗಳಿಗಿಂತಲೂ ಬಿಲ್ವಪತ್ರೆಯು ಉತ್ತಮವಾದದ್ದು. ಬುದ್ಧಿವಂತನು ಇವೆರಡರಿಂದ ಶಿವನನ್ನು ಪೂಜಿಸಬೇಕು. ಶಿವನ ಮುಖದಿಂದ ಪ್ರಕಟವಾದ ಏಳು ಕೋಟಿ ಮಹಾಮಂತ್ರಗಳೆಲ್ಲಕ್ಕಿಂತಲೂ ಪಂಚಾಕ್ಷರ ಮಂತ್ರವು ಉತ್ತಮವಾದದ್ದು. ಪಂಚಾಕ್ಷರಿ ಮಂತ್ರದ ಹದಿನಾರನೆಯ ಒಂದು ಅಂಶವನ್ನು ಏಳುಕೋಟಿ ಮಂತ್ರಗಳೂ ಹೊಂದಲಾರವು.

೩೭–೩೯. ಶಿವದೀಕ್ಷಾ ಬದ್ಧನಾಗಲಿ, ಶಿವದೀಕ್ಷೆಯಿಲ್ಲದವನಾಗಲಿ, ಶಾಸ್ತ್ರ ವಿಧಿಯಿಂದಲಾಗಲಿ, ಬೇರೆಯ ವಿಧದಿಂದಲಾಗಲಿ ಪಂಚಾಕ್ಷರ ಮಂತ್ರವನ್ನು ಜಪ ಮಾಡುವವನು ಶಿವನಿಗೆ ಅನುಚರನಾಗುವನು. ಬ್ರಹ್ಮಹತ್ಯಾ, ಭ್ರೂಣಹತ್ಯಾ ಇವೇ ಮೊದಲಾದ ಯಾವ ಪಾಪಮಾಡಿದವನಾದರೂ ಅವನು ಪಂಚಾಕ್ಷರ ಮಂತ್ರ

**ಪಂಚಾಕ್ಷರಂ ಜಪನ್ ಸದ್ಯೋ ಮುಚ್ಯತೇ ನಾತ್ರ ಸಂಶಯಃ ।**
**ನಹಿ ಪಂಚಾಕ್ಷರಾ ದನ್ಯತ್ ಶ್ರೇಯೋಸ್ತಿ ಭುವನತ್ರಯೇ ॥ ೩೯ ॥**

**ಏವಂ ಜ್ಞಾತ್ವಾ ಜಪೇದ್ವಿದ್ವಾನ್ ವಿದ್ಯಾಂ ಪಂಚಾಕ್ಷರೀಂ ಶುಭಾಂ ।**
**ಸ್ತ್ರೀಲಿಂಗೋಚ್ಚಾರಿತೋಯಂ ತು ದೇವ್ಯಾ ಅಪಿ ಮನು ರ್ಭವೇತ್॥ ೪೦ ॥**

**ತಸ್ಮಾದನೇನ ಮಂತ್ರೇಣ ದೇವೀದೇವೌ ಸಮರ್ಚಯೇತ್ ।**
**ಪಂಚಾಕ್ಷರೇಣ ಮಂತ್ರೇಣ ಬಿಲ್ವಪತ್ರೈಃ ಶಿವಾರ್ಚನಂ ॥ ೪೧ ॥**

**ಕರೋತಿ ಶ್ರದ್ಧಯಾ ಯಸ್ತು ಸ ಗಚ್ಛೇದೈಶ್ವರಂ ಪದಂ ।**
**ದರ್ಶನಾದ್ಬಿಲ್ವವೃಕ್ಷಸ್ಯ ಸ್ಪರ್ಶನಾದ್ವಂದನಾದಪಿ ॥ ೪೨ ॥**

**ಅಹೋರಾತ್ರಕೃತಂ ಪಾಪಂ ನಶ್ಯತ್ಯೇವ ಮುನೀಶ್ವರಾಃ ।**
**ಅಂತ್ಯಕಾಲೇ ನರೋ ಯಸ್ತು ಬಿಲ್ವಮೂಲಸ್ಯ ಮೃತ್ತಿಕಾಂ ॥ ೪೩ ॥**

**ಸಂಲಿಪ್ಯ ಸರ್ವಗಾತ್ರೇಷು ಮೃತೋ ಯಾತಿ ಪರಾಂ ಗತಿಂ ।**
**ಬಿಲ್ವವೃಕ್ಷಂ ಸಮಾಶ್ರಿತ್ಯ ದ್ವಾದಶಾಹಮಭೋಜನಂ ॥ ೪೪ ॥**

---

ಜಪಮಾಡುವುದರಿಂದ ಆ ಕ್ಷಣದಲ್ಲಿಯೇ ಪಾಪದಿಂದ ಬಿಡುಗಡೆಯನ್ನು ಹೊಂದುವನು. ಪಂಚಾಕ್ಷರ ಮಂತ್ರದಷ್ಟು ಶ್ರೇಯಸ್ಸನ್ನು ಉಂಟುಮಾಡುವ ಮಂತ್ರವು ಮೂರು ಲೋಕಗಳಲ್ಲಿಯೂ ಬೇರೆ ಇರುವುದಿಲ್ಲ.

೪೦–೪೩. ಪಂಚಾಕ್ಷರ ಮಂತ್ರದ ಮಹಿಮೆಯು ಹೀಗೆ ಇರುವುದೆಂದು ತಿಳಿದು ತಿಳುವಳಿಕೆಯುಳ್ಳವನು ಶ್ರೇಯಸ್ಕರವಾದ ಈ ಮಂತ್ರವನ್ನು ಜಪಮಾಡಬೇಕು. ಈ ಪಂಚಾಕ್ಷರ ಮಂತ್ರದ ಶಬ್ದಗಳನ್ನು ಸ್ತ್ರೀಲಿಂಗ ಶಬ್ದರೂಪವಾಗಿರುವಂತೆ ಹೇಳಿದಲ್ಲಿ ಅದು ದೇವಿಯ ಮಂತ್ರವಾಗುವುದು. ಆದ್ದರಿಂದ ಈ ಒಂದು ಮಂತ್ರದಿಂದಲೇ ದೇವದೇವಿಯರಿಬ್ಬರನ್ನೂ ಪೂಜಿಸಬೇಕು. ಪಂಚಾಕ್ಷರ ಮಂತ್ರವನ್ನು ಹೇಳುತ್ತಾ ಶಿವನ ಪೂಜೆಯನ್ನು ಭಕ್ತಿಯಿಂದ ಮಾಡುವವನು ಈಶ್ವರನ ಸ್ಥಾನವನ್ನು ಹೊಂದುವನು. ಬಿಲ್ವಪತ್ರೆಯ ಮರವನ್ನು ದರ್ಶನ, ಸ್ಪರ್ಶನ ಮಾಡಿದ ಮಾತ್ರದಿಂದಲೂ, ನಮಸ್ಕಾರ ಮಾಡುವುದರಿಂದಲೂ ಅಹೋರಾತ್ರಿಗಳಲ್ಲಿ ಮಾಡಿರುವ ಪಾತಕವು ನಾಶವಾಗುವುದು.

೪೪–೪೮. ಅಂತ್ಯಕಾಲದಲ್ಲಿ ಬಿಲ್ವವೃಕ್ಷದ ಮೃತ್ತಿಕೆಯನ್ನು ತಂದು ಶರೀರಕ್ಕೆ ಲೇಪ ಮಾಡಿಕೊಂಡು ಮೃತನಾದವನು ಉತ್ತಮವಾದ ಗತಿಯನ್ನು ಹೊಂದುವನು.

ಯಃ ಕುರ್ಯಾದ್ಬ್ರಹ್ಮಹಾ ಪಾಪಾನ್ಮುಕ್ತೋ ಭವತಿ ಭೂಸುರಾಃ ।
ಬಿಲ್ವವೃಕ್ಷಂ ಸಮಾಶ್ರಿತ್ಯ ತ್ರಿರಾತ್ರೋಪೋಷಿತಶ್ಶುಚಿಃ ॥ ೪೫ ॥

ಹರನಾಮ ಜಪೇಲ್ಲಕ್ಷಂ ಭ್ರೂಣಹತ್ಯಾಂ ವ್ಯಪೋಹತಿ ।
ಬಿಲ್ವಪತ್ರೈರಖಂಡೈರ್ಯಃ ಪೂಜಯೇತ್ಸೋಮಸುಂದರಂ ॥ ೪೬ ॥

ಸೋಮವಾರೇ ಸಂಯತಾತ್ಮಾ ಬ್ರಹ್ಮಹತ್ಯಾಂ ವ್ಯಪೋಹತಿ ।
ಮಾತೃಹಾ ಪಿತೃಹಾ ವಾಪಿ ಯುಕ್ತೋ ವಾ ಸರ್ವಪಾತಕೈಃ ॥ ೪೭ ॥

ಭಕ್ತ್ಯಾ ಬಿಲ್ವದಳೈರ್ಮಾನೀ ಪೂಜಯೇಚ್ಚಂದ್ರಶೇಖರಂ ।
ಸರ್ವಪಾಪವಿನಿರ್ಮುಕ್ತಃ ಪ್ರಯಾತಿ ಪರಮಾಂ ಗತಿಂ ॥ ೪೮ ॥

ಶುಷ್ಕೈಃ ಪರ್ಯುಷಿತೈಃ ಪತ್ರೈರಪಿ ಬಿಲ್ವಸ್ಯ ಯೋ ಜನಃ ।
ಪೂಜಯೇದ್ಗಿರಿಜಾನಾಥಂ ಮುಚ್ಯತೇ ಸರ್ವಪಾತಕೈಃ ॥ ೪೯ ॥

---

ಬಿಲ್ವವೃಕ್ಷದ ಬುಡದಲ್ಲಿದ್ದುಕೊಂಡು ಹನ್ನೆರಡು ದಿನ ಉಪವಾಸ ಮಾಡಿದಲ್ಲಿ (ಬ್ರಹ್ಮ ಹತ್ಯೆಯು ನಾಶ) ಬ್ರಹ್ಮಹತ್ಯೆಯಿಂದ ಉಂಟಾಗ ಪಾತಕವು ನಾಶವಾಗುವುದು. ಬಿಲ್ವ ವೃಕ್ಷದ ಮೂಲದಲ್ಲಿ ಮೂರು ರಾತ್ರಿ ಉಪವಾಸ ಮಾಡಿ, ಪಂಚಾಕ್ಷರವನ್ನು ಒಂದು ಲಕ್ಷ ಜಪಮಾಡಿದವನಿಗೆ ಭ್ರೂಣಹತ್ಯೆಯಿಂದುಂಟಾದ ಪಾತಕವು ನಾಶವಾಗುವುದು. ಅಖಂಡವಾದ ಬಿಲ್ವಪತ್ರೆಯಿಂದ ಸೋಮವಾರದ ದಿನ ಸೋಮಸುಂದರೇಶ್ವರನನ್ನು ನಿಯಮದಿಂದ ಪೂಜಿಸಿದವನು ಬ್ರಹ್ಮಹತ್ಯಾ ಪಾಪವನ್ನು ಕಳೆದುಕೊಳ್ಳುವನು. ತಂದೆ ತಾಯಿಗಳನ್ನು ಕೊಂದವನೂ ಕೂಡ ಇತರ ವಿಧವಾದ ಎಲ್ಲಾ ಪಾತಕಗಳಿಂದ ಕೂಡಿದವನಾಗಿದ್ದರೂ ಬಿಲ್ವಪತ್ರೆಯಿಂದ ಸುಂದರೇಶ್ವರನನ್ನು ಭಕ್ತಿಯಿಂದ ಪೂಜಿಸಿದರೆ, ಅವನ ಪಾತಕಗಳೆಲ್ಲವೂ ಹೋಗಿ ಅವನಿಗೆ ಉತ್ತಮವಾದ ಗತಿಯು ಉಂಟಾಗುವುದು.

೪೯-೫೩. ಒಣಗಿರುವ, ಜೀರ್ಣ ಮತ್ತು ಶೀರ್ಣವಾದ ಬಿಲ್ವಪತ್ರೆ ಗಳಿಂದಲಾದರೂ ಪಾರ್ವತೀಕಾಂತನಾದ ಪರಮೇಶ್ವರನನ್ನು ಪೂಜಿಸಿದವನು ಎಲ್ಲಾ ಪಾತಕಗಳಿಂದಲೂ ಮುಕ್ತನಾಗುವನು. ಕೂದಲು, ಕ್ರಿಮಿಗಳಿಂದ ಕೂಡಿರುವುದು, ಜೇಡನ ಪರೆಯಿರುವುದು, ವಾಯುವಿನಿಂದ ತಾನಾಗಿ ಮರದಿಂದ ಬಿದ್ದಿರುವುದು ಈರೀತಿಯಾದ ಬಿಲ್ವಪತ್ರೆಯಿಂದ ಪೂಜಿಸಬಾರದು. ಬಿಲ್ವಪತ್ರೆಯ ಮಹಿಮೆಯು

**ಕೇಶಕೀಟಾಳಿವಿದ್ಧಂ ಚ ಲೂತಾತಂತು ಸಮಾವೃತಂ ।**
**ಸ್ವಯಂ ತು ವಾಯುಗಳಿತಂ ಬಿಲ್ವಪತ್ರಂ ತು ವರ್ಜಯೇತ್ ॥ ೫೦ ॥**

**ತಸ್ಮಾದವಶ್ಯಂ ಶಂಭೋಸ್ತು ಪೂಜನಂ ಬಿಲ್ವಪತ್ರಕೈಃ**
**ಸರ್ವಸೌಭಾಗ್ಯದಂ ಜ್ಞಾತ್ವಾ ಪೂಜಯೇತ್ತೈರ್ವಿಶೇಷತಃ ॥ ೫೧ ॥**

**ಪೂಜಾಪ್ರಾರಂಭಕಾಲೇ ತು ಸಂಕ್ಷಾಳ್ಯ ಚರಣೌ ತತಃ ।**
**ಭಸ್ಮರುದ್ರಾಕ್ಷಮಾಲಾಭಿರಲಂಕೃತ್ಯ ಕಳೇಬರಂ ॥ ೫೨ ॥**

**ಪ್ರಾಣಾನಾಯಮ್ಯ ಸಂಕಲ್ಪ್ಯ ಪುಣ್ಯಾಹಂ ಚ ವಿಧಾಯ ಚ ।**
**ವಿಘ್ನೇಶ್ವರಂ ಚ ಸಂಪೂಜ್ಯ ಪ್ರಾರ್ಥ್ಯ ನಿರ್ವಿಘ್ನಮಸ್ತ್ವಿತಿ ॥ ೫೩ ॥**

**ಅಥ ಸಾಂಬಶಿವಂ ನತ್ವಾ ಸಾಂಜಲಿಸ್ಸನ್ನಿಧೌ ಸ್ಥಿತಃ ।**
**ಸೋಮಸುಂದರ ಸೋಮೇಶ ಸೋಮ ಸೋಮವಿಭೂಷಣ ॥ ೫೪ ॥**

**ಸೋಮವಾರವ್ರತಮಹಂ ಕರಿಷ್ಯೇ ತ್ವದನುಜ್ಞಯಾ ।**
**ಇತಿ ಸಂಪ್ರಾರ್ಥ್ಯ ತದನು ಧ್ಯಾನಾದ್ಯೈರುಪಚಾರಕೈಃ ॥ ೫೫ ॥**

---

ಈ ಪ್ರಕಾರವಾಗಿ ಇರುವುದರಿಂದ ಬಿಲ್ವಪತ್ರೆಯಿಂದ ಶಿವನನ್ನು ಪೂಜಿಸುವುದು ಶ್ರೇಯಸ್ಕರವೆಂದು ತಿಳಿದು ಅದನ್ನು ಶಿವನ ಪೂಜೆಯಲ್ಲಿ ಅವಶ್ಯಕವಾಗಿ ಉಪಯೋಗಿಸಬೇಕು. ಶಿವನ ಪೂಜೆಯನ್ನು ಪ್ರಾರಂಭಮಾಡುವಾಗ ಕೈಕಾಲುಗಳನ್ನು ತೊಳೆದುಕೊಂಡು ಭಸ್ಮರುದ್ರಾಕ್ಷಿಗಳಿಂದ ಶರೀರವನ್ನು ಅಲಂಕರಿಸಿ ಪ್ರಾಣಾಯಾಮ ಸಂಕಲ್ಪಗಳನ್ನು ಮಾಡಿದನಂತರ ಪುಣ್ಯಾಹವನ್ನು ಮಾಡಿ,ವಿಘ್ನೇಶ್ವರನನ್ನು ಪೂಜಿಸಿ "ನಿರ್ವಿಘ್ನವಾಗಿ ಪೂಜೆಯು ನೆರವೇರಲಿ" ಎಂದು ವಿಘ್ನೇಶ್ವರನನ್ನು ಪ್ರಾರ್ಥಿಸಿಕೊಳ್ಳಬೇಕು.

೫೪–೫೫. ಅನಂತರದಲ್ಲಿ ಪಾರ್ವತೀ ಸಹಿತನಾದ ಪರಮೇಶ್ವರನಿಗೆ ನಮಸ್ಕಾರ ಮಾಡಿ ಹಾಲಾಸ್ಯೇಶ್ವರನ ಸಮೀಪದಲ್ಲಿ ನಿಂತುಕೊಂಡು, 'ಸೋಮವಿಭೂಷಣನಾದ, ಉಮಾಸಹಿತನಾದ ಸೋಮಸುಂದರೇಶ್ವರನೇ, ನಿನ್ನ ಅನುಜ್ಞೆಯಿಂದ ನಾನು ಸೋಮವಾರವ್ರತವನ್ನು ಮಾಡುವೆನು'' ಎಂದು ಪ್ರಾರ್ಥನೆ ಮಾಡಿಕೊಂಡು ಅನಂತರ ಧ್ಯಾನಾವಾಹನೆ ಮುಂತಾದ ಷೋಡಶೋಪಚಾರಗಳಿಂದ ಶಿವನನ್ನು ಭುಕ್ತಿ ಮುಕ್ತಿಗಳನ್ನು ಹೊಂದುವುದಕ್ಕಾಗಿ ಪೂಜಿಸಬೇಕು.

ಕುರ್ಯಾತ್ಪೂಜಾವಿಧಿಂ ಶಂಭೋರ್ಭುಕ್ತಿಮುಕ್ತಿಪ್ರಸಿದ್ಧಯೇ
ಕೋಟಿಭಾಸ್ಕರಸಂಕಾಶಂ ಕೋಟಿಶೀತಾಂಶುಶೀತಲಂ ॥ ೫೬ ॥

ಪಂಚಾಸನಸಮಾಸೀನಂ ಪಂಚವಕ್ತ್ರಂ ಸದಾಶಿವಂ ।
ದ್ವಿಪಂಚ ಭುಜಸಂಯುಕ್ತಂ ತ್ರಿಪಂಚನಯನಾನ್ವಿತಂ ॥ ೫೭ ॥

ತ್ರಿಶೂಲಂ ಪರಶುಂ ಖಡ್ಗಂ ವಜ್ರಂ ಚಾಭಯಮೇವ ಚ ।
ಪಾಶಂ ನಾಗಾಂಕುಶೌ ಘಂಟಾಂ ವಹ್ನಿಂ ದಕ್ಷೈರದಕ್ಷಕೈಃ ॥ ೫೮ ॥

ಭುಜೈರ್ದಧಾನಮನಿಶಂ ನಾಗಯಜ್ಞೋಪವೀತಿನಂ ।
ದಿವ್ಯಾಂಬರೈ ರ್ದಿವ್ಯಗಂಧೈ ರ್ದಿವ್ಯಪುಷ್ಪೈ ರ್ವಿರಾಜಿತಂ ॥ ೫೯ ॥

ಕಿರೀಟಹಾರಕೇಯೂರಕುಂಡಲಾದ್ಯೈ ರ್ವಿಭೂಷಣೈಃ ।
ವಿಭೂಷಿತಂ ಮಹಾದೇವಂ ಮನೋನ್ಮನ್ಯಾ ಸುಮನ್ವಿತಂ ॥ ೬೦ ॥

---

೫೬–೫೯. ಅನಂತರದಲ್ಲಿ ಸುಂದರೇಶ್ವರನನ್ನು ಧ್ಯಾನಮಾಡಬೇಕು. ಸುಂದರೇಶ್ವರನು ಕೋಟಿ ಸೂರ್ಯರ ಹಾಗೆ ತೇಜಶ್ಶಾಲಿಯಾಗಿರುವನು. ಕೋಟಿ ಚಂದ್ರರನ್ನು ನೋಡಿದಷ್ಟು ಆನಂದವನ್ನುಂಟುಮಾಡುತ್ತಿರುವನು. ದೊಡ್ಡದಾದ ಆ ಪೀಠದಲ್ಲಿ ಕುಳಿತುಕೊಂಡಿರುವನು. ಈ ದೇವನಿಗೆ ಐದು ಮುಖಗಳೂ ಹತ್ತು ಭುಜಗಳೂ ಇರುವುವು. ಪ್ರತಿಯೊಂದು ಮುಖದಲ್ಲಿಯೂ ಮೂರು ಕಣ್ಣುಗಳಿರುವುವು. ಬಲಗಡೆಯ ಹಸ್ತಗಳಲ್ಲಿ ತ್ರಿಶೂಲ, ಪರಶು, ಖಡ್ಗ, ವಜ್ರಾಯುಧ, ಅಭಯ ಹಸ್ತಗಳನ್ನು ಧರಿಸಿರುವನು. ಎಡಗಡೆಯ ಹಸ್ತಗಳಲ್ಲಿ ಪಾಶ, ನಾಗ, (ಹಾವು) ಅಂಕುಶ ಘಂಟೆ, ಅಗ್ನಿ ಇವುಗಳನ್ನು ಧರಿಸಿರುವನು. ನಾಗಯಜ್ಞೋಪವೀತದಿಂದ ಪ್ರಕಾಶಿಸುತ್ತಿರುವನು. ಶ್ರೇಷ್ಠವಾದ ವಸ್ತ್ರ, ಗಂಧಾನುಲೇಪನ, ಪುಷ್ಪಗಳು ಇವುಗಳನ್ನು ಧರಿಸಿ ಪ್ರಕಾಶಿಸುತ್ತಿರುವನು.

೬೦–೬೧. ಕಿರೀಟ, ಹಾರ ಭುಜಕೀರ್ತಿ, ಕುಂಡಲಗಳು ಇವೇ ಮೊದಲಾದ ದಿವ್ಯಾಭರಣಗಳನ್ನು ಧರಿಸಿ, ಮನೋನ್ಮನೀ ದೇವಿಯಿಂದ ಕೂಡಿರುವನು. ಹದಿನಾರು ವರ್ಷದ ಹುಡುಗನ ಆಕೃತಿಯನ್ನು ಹೊಂದಿ ಸುಂದರನಾಗಿರುವ ಜಗತ್ತಿಗೆ ಗುರುವಾದ

**ಷೋಡಶಾಬ್ದಾಕೃತಿಂ ಸೌಮ್ಯಂ ಸೋಮೇಶಂ ಸೋಮಸುಂದರಂ ।**
**ಸ್ವಯಂಭೂತೇ ಮಹಾಲಿಂಗೇ ಧ್ಯಾಯಾಮಿ ಜಗತಾಂ ಗುರುಂ ॥ ೬೧ ॥**

**ಇತಿ ಧ್ಯಾತ್ವೋಪಚಾರಾರ್ಥಮುಕ್ತ್ವಾ ಪುಷ್ಪೈ ಸ್ಸುಪೂಜಯೇತ್ ।**
**ಆಗಚ್ಛ ಕೃಪಯಾ ಶಂಭೋ ಮನೋನ್ಮನ್ಯಾ ಮಹೇಶ್ವರ ॥ ೬೨ ॥**

**ಪ್ರೀತ್ಯಾ ಪೂಜಾಂ ಗ್ರಹಾಣೇಶ ಜೀವನ್ಮುಕ್ತಿಪುರೇಶ್ವರ ।**
**ವಿಶ್ವಾತ್ಮನೇ ನಮಸ್ತುಭ್ಯಂ ಕದಂಬವನವಾಸಿನೇ ॥ ೬೩ ॥**

**ರತ್ನಸಿಂಹಾಸನಂ ಚಾರು ದದಾಮಿ ಕರುಣಾನಿಧೇ ।**
**ನಮಶ್ಶರ್ವಾಯ ಸೋಮಾಯ ಸರ್ವಮಂಗಳಹೇತವೇ ॥ ೬೪ ॥**

**ತುಭ್ಯಂ ಸಂಪ್ರದದೇ ಪಾದ್ಯಂ ಶ್ರೀಹಾಲಾಸ್ಯನಿವಾಸಿನೇ ।**
**ಅಶೇಷಜಗದಾಧಾರ ನಿರಾಧಾರ ಮಹೇಶ್ವರ ॥ ೬೫ ॥**

---

ಸೋಮಸುಂದರೇಶ್ವರನನ್ನು ಆ ಸ್ವಯಂಭುಲಿಂಗದಲ್ಲಿ ಧ್ಯಾನಮಾಡುತ್ತೇನೆಂದು ಈ ಶ್ಲೋಕಗಳನ್ನು ಹೇಳುತ್ತಾ ಧ್ಯಾನಮಾಡಿ, ಉಪಚಾರಕ್ಕಾಗಿ ಹೂವುಗಳಿಂದ ಪೂಜಿಸಬೇಕು.

೬೨ "ಜೀವನ್ಮುಕ್ತಿನಗರಾಧಿಪನಾದ ಮಹೇಶ್ವರನೇ, ಎಲೈ ಶಂಭುವೇ, ನೀನು ನನ್ನಲ್ಲಿ ದಯೆಯಿಂದ ಮನೋನ್ಮನೀದೇವಿಯೊಡನೆ ಇಲ್ಲಿಗೆ ಬಂದು ನಾನು ಮಾಡುವ ಪೂಜೆಯನ್ನು ಸ್ವೀಕರಿಸು" ಎಂಬ ಅರ್ಥವುಳ್ಳ ಈ ಶ್ಲೋಕವನ್ನು ಹೇಳಿ ಪೂಜೆಯನ್ನು ಮಾಡಬೇಕು.

೬೩. "ಕದಂಬವನದಲ್ಲಿ ವಾಸಮಾಡುತ್ತಿರುವ ಪ್ರಪಂಚದ ರೂಪದಿಂದಿರುವ ನಿನಗೆ ನಮಸ್ಕರಿಸಿ ಮನೋಹರವಾದ, ರತ್ನಖಚಿತವಾದ ಸಿಂಹಾಸನವನ್ನು ಒಪ್ಪಿಸುತ್ತೇನೆ" ಎಂದು ಈ ಮಂತ್ರವನ್ನು ಹೇಳಿ ಪೂಜಿಸಬೇಕು.

೬೪. "ಎಲ್ಲಾ ವಿಧವಾದ ಮಂತ್ರಗಳಿಗೆ ಕಾರಣನಾದ ಶರ್ವನೆಂದು ಪ್ರಸಿದ್ಧನಾದ ನಿನಗೆ ನಮಸ್ಕರಿಸಿ ಪಾದ್ಯವನ್ನು ಒಪ್ಪಿಸುವೆನು" ಎಂದು ಮಂತ್ರದಿಂದ ಪಾದ್ಯವನ್ನು ಕೊಡಬೇಕು.

೬೫. "ಹಾಲಾಸ್ಯಕ್ಷೇತ್ರದಲ್ಲಿ ನೆಲಸಿರುವ, ಪ್ರಪಂಚಕ್ಕೆಲ್ಲಕ್ಕೂ ಆಧಾರನಾಗಿಯೂ ತನಗೆ ಮಾತ್ರ ಆಧಾರವಿಲ್ಲದವನಾಗಿಯೂ ಇರುವ ಮಹೇಶ್ವರನಾದ ನಿನಗೆ ನಮಸ್ಕರಿಸಿ ಆಚಮನೀಯವನ್ನು ಒಪ್ಪಿಸುವೆನು" ಎಂದು ಈ ಮಂತ್ರದಿಂದ ಆಚಮನೀಯವನ್ನು ಕೊಡಬೇಕು.

ದದಾಮ್ಯಾಚನಂ ತುಭ್ಯಂ ಸುಂದರೇಶ ನಮೋಽಸ್ತು ತೇ ।
ಅನರ್ಘ್ಯಫಲದಾತ್ರೇ ಚ ಶಾಸ್ತ್ರೇಽನ್ಯೈವಸ್ವತಸ್ಯ ಚ ॥ ೬೬ ॥

ತುಭ್ಯಮರ್ಘ್ಯಂ ಪ್ರದಾಸ್ಯಾಮಿ ದ್ವಾದಶಾಂತನಿವಾಸಿನೇ ।
ದೃಷ್ಟಮಾತ್ರೇಣ ಸರ್ವೇಷಾಂ ಸರ್ವಾಭೀಷ್ಟಫಲಪ್ರದ ॥ ೬೭ ॥

ಪಂಚಾಮೃತಾದ್ಯೈ ದ್ರವ್ಯೈ ಸ್ತ್ವಾಂ ಸ್ನಾಪಯೇಽಹಂ ಸುರಾರ್ಚಿತ ।
ದಿಗಂಬರ ನಮಸ್ತುಭ್ಯಂ ಗಜಾಜಿನಧರಾಯ ಚ ॥ ೬೮ ॥

ವ್ಯಾಘ್ರಚರ್ಮೋತ್ತರೀಯಾಯ ವಸ್ತ್ರಯುಗ್ಮಂ ದದಾಮ್ಯಹಂ ।
ಚರಾಚರಜಗದ್ರತ್ನಪ್ರೋತಸೂತ್ರಧರಾಯ ತೇ ॥ ೬೯ ॥

---

೬೬. "ದ್ವಾದಶಾಂತದಲ್ಲಿ ವಾಸಮಾಡುತ್ತಿರುವ ಅನರ್ಘ್ಯವಾದ ಫಲವನ್ನು ಅನುಗ್ರಹಿಸುವವನಾಗಿ ಇರುತ್ತಾ ಯಮನನ್ನು ಶಿಕ್ಷೆಮಾಡಿದ ನಿನಗೆ ನಮಸ್ಕಾರ ಮಾಡಿ ಅರ್ಘ್ಯವನ್ನು ಕೊಡುವೆನು" ಎಂದು ಈ ಮಂತ್ರವನ್ನು ಹೇಳಿ ಅರ್ಘ್ಯವನ್ನು ಕೊಡಬೇಕು.

೬೭. "ನಿನ್ನ ದರ್ಶನವಾದಕೂಡಲೆ ಎಲ್ಲಾ ವಿಧವಾದ ಇಷ್ಟಾರ್ಥಗಳೂ ನೆರವೇರುವುವು. ದೇವಪೂಜ್ಯನಾದ ನಿನ್ನನ್ನು ಪಂಚಾಮೃತವೇ ಮೊದಲಾದ ದ್ರವ್ಯಗಳಿಂದ ಸ್ನಾನಮಾಡಿಸುವೆನು" ಎಂದು ಈ ಮಂತ್ರದಿಂದ ಪಂಚಾಮೃತ ಸ್ನಾನವನ್ನು ಮಾಡಿಸಬೇಕು.

೬೮. "ದಿಗಂಬರನಾಗಿರುವ ಗಜಾಜಿನವನ್ನು ಧರಿಸಿರುವ, ವ್ಯಾಘ್ರ ಚರ್ಮವನ್ನು ಹೊದ್ದಿರುವ ನಿನಗೆ ಎರಡು ವಸ್ತ್ರಗಳನ್ನು ಒಪ್ಪಿಸುವೆನು." ಎಂದು ಈ ಮಂತ್ರದಿಂದ ವಸ್ತ್ರವನ್ನು ಒಪ್ಪಿಸಬೇಕು.

೬೯. "ಚರಾಚರರೂಪದಿಂದ ಇರುವ, ಜಗತ್ತೆಂಬ ರತ್ನಗಳನ್ನು ಕಟ್ಟಿರುವ ಸೂತ್ರವನ್ನು ಧರಿಸಿ ಇರುವ, ನಾಗಯಜ್ಞೋಪವೀತವನ್ನು ಧರಿಸಿ ಇರುವ, ನಿನಗೆ ಯಜ್ಞೋಪವೀತವನ್ನು ಒಪ್ಪಿಸುವೆನು," ಎಂಬ ಈ ಮಂತ್ರದಿಂದ ಯಜ್ಞೋಪವೀತವನ್ನು ಒಪ್ಪಿಸಬೇಕು.

**ನಾಗಯಜ್ಞೋಪವೀತಾಯ ಹ್ಯುಪವೀತಂ ದದಾಮ್ಯಹಂ ।**
**ಸಮಷ್ಟಿವಿಧ್ಯಾನಗರೀನಾಥ ನಾಗವಿಭೂಷಣ ॥ ೭೦ ॥**

**ಗ್ರಹಾಣ ಭೂಷಣಂ ಶಂಭೋ ಶರಣಾಗತವತ್ಸಲ ।**
**ನಮಸ್ಸುಗಂಧದೇಹಾಯ ಹ್ಯವಂಧ್ಯಫಲದಾಯಿನೇ ॥ ೭೧ ॥**

**ತುಭ್ಯಂ ಗಂಧಂ ಪ್ರದಾಸ್ಯಾಮಿ ಚಾಂಧಕಾಸುರಭಂಜನ ।**
**ಅಕ್ಷತಾಃ ಧವಳಾಃ ದೇವ ಸಿದ್ಧಗಂಧರ್ವಪೂಜಿತ ॥ ೭೨ ॥**

**ಸುಂದರೇಶ ನಮಸ್ತುಭ್ಯಂ ಗೃಹಾಣ ವರದೋ ಭವ ।**
**ಪುಷ್ಪವದ್ವಹ್ನಿನಯನ ಪುಷ್ಪಚಾಪವಿಭಂಜನ ॥ ೭೩ ॥**

---

೭೦. ಸಮಷ್ಟಿವಿದ್ಯಾನಗರಿಗೆ ನಾಥನಾಗಿ ನಾಗಾಭರಣವನ್ನು ಧರಿಸಿರುವ ಶರಣಾಗತವತ್ಸಲನಾದ ನಿನಗೆ ಆಭರಣವನ್ನು ಒಪ್ಪಿಸುವೆನು." ಎಂದು ಈ ಮಂತ್ರದಿಂದ ಆಭರಣಗಳನ್ನು ಧರಿಸಬೇಕು.

೭೧. "ಸುವಾಸನೆಯುಳ್ಳ ಶರೀರದಿಂದ ಇರುವ,ವ್ಯರ್ಥವಾಗದಿರುವ ಫಲವನ್ನು ಅನುಗ್ರಹಿಸುವ, ಅಂಧಕಾಸುರನನ್ನು ನಿಗ್ರಹಮಾಡಿದ, ನಿನಗೆ ಗಂಧವನ್ನು ಧರಿಸುತ್ತೇನೆ'' ಎಂದು ಈ ಮಂತ್ರದಿಂದ ಗಂಧವನ್ನು ಧರಿಸಬೇಕು.

೭೨. "ಸಿದ್ಧರೂ,ಗಂಧರ್ವರೂ ಇವರಿಂದ ಪೂಜೆಯನ್ನು ಅಂಗೀಕರಿಸುತ್ತಿರುವ ಸುಂದರೇಶ್ವರನಾದ ನಿನಗೆ ಶುಭ್ರವಾದ ಅಕ್ಷತೆಗಳನ್ನು ಒಪ್ಪಿಸುವೆನು. ಇದನ್ನು ಸ್ವೀಕರಿಸಿ ವರವನ್ನು ಕೊಡುವವನಾಗು.'' ಎಂದು ಈ ಮಂತ್ರವನ್ನು ಹೇಳಿ ಮಂತ್ರಾಕ್ಷತೆಯಿಂದ ಪೂಜಿಸಬೇಕು.

೭೩. "ಪುಷ್ಪವಂತರಾದ ಚಂದ್ರ ಸೂರ್ಯರನ್ನು ಕಣ್ಣುಗಳಾಗಿ ಮಾಡಿಕೊಂಡಿರುವ, ಪುಷ್ಪದ ಬಿಲ್ಲನ್ನು ಧರಿಸಿದ ಕಾಮನನ್ನು ನಿಗ್ರಹಮಾಡಿದ, ಇಂದ್ರನಿಗೆ ವರವನ್ನು ಅನುಗ್ರಹಿಸಿದ ನಿನ್ನನ್ನು ಪುಷ್ಪಗಳಿಂದ ಪೂಜಿಸುವೆನು." ಎಂದು ಮಂತ್ರವನ್ನು ಹೇಳಿ ಹೂವುಗಳಿಂದ ಸುಂದರೇಶ್ವರನನ್ನು ಪೂಜಿಸಬೇಕು.

ಪುಷ್ಪೈಸ್ತ್ವಾಂ ಪೂಜಯಾಮೀಶ ಪುರಂದರವರಪ್ರದ ।
ಅಥ ನಾಮ್ನಾಂ ಸಹಸ್ರೇಣ ಬಿಲ್ವಪತ್ರೈಃ ಪ್ರಸೂನಕೈಃ ॥ ೭೪ ॥

ಸಮಾರಾಧ್ಯ ಶಿವಂ ಭಕ್ತ್ಯಾ ಪಶ್ಚಾದ್ಧೂಪಂ ಸಮರ್ಪಯೇತ್ ।
ನಮೋ ವೃತ್ರಾರಿಪಾಪಘ್ನೇ ಕಾರಣತ್ರಯಹೇತವೆ ॥ ೭೫ ॥

ಸಾಜ್ಯಗುಗ್ಗುಲುಧೂಪಂ ತ್ವಂ ಗೃಹಾಣ ವೃಷಭಧ್ವಜ ।
ಜ್ಯೋತಿರ್ಮಯಾಯ ಲಿಂಗಾಯ ಜ್ಯೋತಿಷಾಮಾಕರಾಯ ತೇ ॥ ೭೬ ॥

ದೀಪಂ ದಾಸ್ಯಾಮ್ಯಹಂ ಭಕ್ತ್ಯಾ ಜ್ಞಾನದೀಪಪ್ರದಾಯಿನೇ ।
ನೈವೇದ್ಯಂ ಷಡ್ರಸೋಪೇತಂ ಸೋಪದಂಶಂ ಘೃತಾನ್ವಿತಂ ॥ ೭೭ ॥

ಫಲಕ್ಷೀರಾಪೂಪಯುಕ್ತಂ ಗೃಹ್ಯತಾಂ ಶಂಕರ ತ್ವಯಾ ।
ಪಾನೀಯಂ ಶೀತಲಂ ಸ್ವಚ್ಛಂ ಚಂದ್ರಚಂದನವಾಸಿತಂ ॥ ೭೮ ॥

---

೭೪–೭೫. ಅನಂತರದಲ್ಲಿ ಶಿವನ ಸಹಸ್ರನಾಮದಿಂದ ಹೂವುಗಳನ್ನೂ ಬಿಲ್ವಪತ್ರೆಯನ್ನೂ ತಂದು ಭಕ್ತಿಯಿಂದ ಪೂಜಿಸಿದ ನಂತರ " ವೃಷಭಧ್ವಜನಾದ ನಿನಗೆ ಆಜ್ಯ ಗುಗ್ಗಲು ಇವೇ ಮೊದಲಾದ ಸುವಾಸನಾ ದ್ರವ್ಯಗಳಿಂದ ಮಾಡಿರುವ ಧೂಪವನ್ನು ಅರ್ಪಿಸುವೆನು. " ಎಂದು ಈ ಮಂತ್ರದಿಂದ ಧೂಪವನ್ನು ಸಮರ್ಪಿಸಬೇಕು.

೭೬. " ಜ್ಯೋತಿರ್ಮಯ ಲಿಂಗ ಸ್ವರೂಪದಿಂದ ಇರುವ, ಜ್ಯೋತಿಸ್ಸುಗಳಿಗೆ ಸ್ಥಾನವಾದ ಜ್ಞಾನದೀಪವನ್ನು ಅನುಗ್ರಹಿಸುವ ನಿನಗೆ ಭಕ್ತಿಯಿಂದ ನಾನು ದೀಪವನ್ನು ಅರ್ಪಿಸುವೆನು. " ಎಂದು ಈ ಮಂತ್ರವನ್ನು ಹೇಳಿ ದೀಪವನ್ನು ಒಪ್ಪಿಸಬೇಕು.

೭೭. "ಎಲೈ ಶಂಕರನೆ,ಷಡ್ರಸದಿಂದ ಕೂಡಿರುವ, ಆಜ್ಯದಿಂದಲೂ, ವ್ಯಂಜನ ಪದಾರ್ಥಗಳಿಂದಲೂ ಕೂಡಿ, ಹಣ್ಣು, ಹಾಲು, ಭಕ್ಷ್ಯಗಳು ಇವುಗಳಿಂದ ಕೂಡಿರುವ ನೈವೇದ್ಯವನ್ನು ನೀನು ಸ್ವೀಕರಿಸು. " ಎಂದು ಈ ಮಂತ್ರವನ್ನು ಹೇಳಿ ನೈವೇದ್ಯ ವನ್ನು ಸಮರ್ಪಿಸಬೇಕು.

೭೮. " ಎಲೈ ಸೋಮಸುಂದರೇಶ್ವರನೇ, ನಿರ್ಮಲವಾದ ಪಚ್ಚೆಕರ್ಪೂರದಿಂದ ಕೂಡಿರುವ ಸುವಾಸನೆಯಾದ ಪಾನೀಯವನ್ನು ನೀನು ಸ್ವೀಕರಿಸು. " ಎಂದು ಈ ಮಂತ್ರವನ್ನು ಹೇಳಿ ಪಾನೀಯವನ್ನು ಸಮರ್ಪಿಸಬೇಕು.

ತುಭ್ಯಂ ದಾಸ್ಯಾಮಿ ದೇವೇಶ ಗೃಹ್ಯತಾಂ ಸೋಮಸುಂದರ ।
ಪೂಗೀಫಲೈ ಸ್ಸಕರ್ಪೂರೈ ರ್ನಾಗವಲ್ಲೀದಳೈರಪಿ ॥ ೭೯ ॥

ಚೂರ್ಣೇನ ಚ ಯುತಂ ಶಂಭೋ ತಾಂಬೂಲಂ ಗೃಹ್ಯತಾಂ ತ್ವಯಾ ।
ಪ್ರಕೃಷ್ಟಪಾಪನಾಶಾಯ ಪ್ರಕೃಷ್ಟವರಸಿದ್ಧಯೇ ॥ ೮೦ ॥

ಪ್ರದಕ್ಷಿಣಂ ಕರೋಮೀಶ ಪ್ರಸೀದ ಪರಮೇಶ್ವರ ।
ನಮಶ್ಶಿವಾಯ ಸೋಮಾಯ ಶಂಭವೇ ಶಂಕರಾಯ ಚ ॥ ೮೧ ॥

ನಮೋ ಹಾಲಾಸ್ಯನಾಥಾಯ ಸಚ್ಚಿದಾನಂದಮೂರ್ತಯೇ ।
ಅಥಾಂಗಪೂಜಾಂ ವಿಧಿವದಾಚರೇ ಚ್ಛಿವಯೋ ರ್ವ್ರತೀ ॥ ೮೨ ॥

ಯಯಾ ಸಮಸ್ತಸೌಭಾಗ್ಯಂ ಲಭಂತೇ ವ್ರತಿನಸ್ಸದಾ ।
ಭವಾನ್ಯೈ ಚ ಭವಾಯಾಪಿ ಪಾದೌ ಸಾಂಬಸ್ಯ ಪೂಜಯೇತ್ ॥ ೮೩ ॥

---

೭೯. "ಎಲೈ ಶಂಭುವೆ, ಅಡಕೆ, ಪಚ್ಚಕರ್ಪೂರ, ವೀಳೆಯದೆಲೆ, ಸುಣ್ಣ ಇವುಗಳಿಂದ ಕೂಡಿದ ತಾಂಬೂಲವನ್ನು ಅರ್ಪಿಸುವೆನು." ಎಂಬ ಈ ಮಂತ್ರದಿಂದ ತಾಂಬೂಲವನ್ನು ಸಮರ್ಪಿಸಬೇಕು.

೮೦. "ಎಲೈ ಪರಮೇಶ್ವರನೆ, ಬಹಳ ಅಧಿಕವಾದ ಪಾತಕಗಳು ನಾಶವಾಗಿ ನಿನ್ನ ಉತ್ತಮವಾದ ಅನುಗ್ರಹವು ಉಂಟಾಗುವುದಕ್ಕಾಗಿ ಪ್ರದಕ್ಷಿಣೆಯನ್ನು ಮಾಡುತ್ತೇನೆ." ಎಂದು ಈ ಮಂತ್ರವನ್ನು ಹೇಳಿ ಪ್ರದಕ್ಷಿಣೆಯನ್ನು ಮಾಡಬೇಕು.

೮೧. "ಮಂಗಳಕರನಾಗಿರುವ, ಪಾರ್ವತಿಯಿಂದ ಒಡಗೂಡಿ ಇರುವ, (ಶಂಭು) ಸುಖವನ್ನು ಅನುಭವಿಸುವವನಾದ, ಇತರರಿಗೆ ಸುಖವನ್ನು ಕೊಡುತ್ತಿರುವ, ಸಚ್ಚಿದಾನಂದ ರೂಪದಿಂದ ಪ್ರಕಾಶಿಸುವ,ಹಾಲಾಸ್ಯೇಶ್ವರನಿಗೆ ನಮಸ್ಕಾರವು" ಎಂದು ಈ ಮಂತ್ರದಿಂದ ನಮಸ್ಕಾರವನ್ನು ಮಾಡತಕ್ಕದ್ದು.

೮೨-೮೩. ವ್ರತವನ್ನು ಆಚರಿಸುವವನು ಪಾರ್ವತೀ ಪರಮೇಶ್ವರರ ಅಂಗ ಪೂಜೆಯನ್ನು ಶಾಸ್ತ್ರಕ್ರಮದಿಂದ ಮಾಡಬೇಕು. ಇದರಿಂದ ಅವರಿಗೆ ಎಲ್ಲಾ ವಿಧವಾದ ಶ್ರೇಯಸ್ಸೂ ಉಂಟಾಗುವುದು.

ಜಗನ್ಮಾತ್ರೇ ಜಗತ್ಪಿತ್ರೇ ಜಂಘೇ, ಚೈವಂ ಪ್ರಪೂಜಯೇತ್ ।
ಮೃಡಾನ್ಯೈ ಚ ಮೃಡಾಯಾಪಿ ಜಾನುನೀ ಸಂಪ್ರಪೂಜಯೇತ್ ॥ ೮೪ ॥

ಊರುಯುಗ್ಮಂ ಚ ರುದ್ರಾಣ್ಯೈ ರುದ್ರಾಯೇತಿ ಪ್ರಪೂಜಯೇತ್ ।
ಕಾಳ್ಯೈ ಕಾಲಾಂತಕಾಯೇತಿ ಕಟಿದೇಶಂ ಪ್ರಪೂಜಯೇತ್ ॥ ೮೫ ॥

ನಾಭಿಂ ನಗೇಂದ್ರಕನ್ಯಾಯೈ ನಾಗೇಂದ್ರಾಭರಣಾಯ ಚ ।
ಸ್ತವಪ್ರಿಯಾಯೈ ಸ್ತವ್ಯಾಯ ಸ್ತನೌ ಸಮ್ಯಕ್ಪ್ರಪೂಜಯೇತ್ ॥ ೮೬ ॥

ಭವಘ್ನ್ಯೈ ಭವನಾಶಾಯ ಭುಜಾಂಶ್ಚೈವ ಪ್ರಪೂಜಯೇತ್ ।
ಕಂಠಂ ಚ ಕಂಬುಗ್ರೀವಾಯೈ ಕಾಲಕಂಠಾಯ ಪೂಜಯೇತ್ ॥ ೮೭ ॥

ಮಾಯಾಯೈ ಚ ಮಹೇಶಾಯ ಮುಖಾನ್ಯೇವಂ ಪ್ರಪೂಜಯೇತ್ ।
ಲಲಾಟಂ ಲಲಿತಾಯೈ ಚ ತದ್ಧಾಲಾಸ್ಯಪ್ರಿಯಾಯ ಚ ॥ ೮೮ ॥

---

"ಭವಾಯನಮಃ, ಭವಾನ್ಯೈನಮಃ," ಎಂದು ನಾಮಗಳಿಂದ ಶಿವನ ಪಾದಗಳನ್ನು ಪೂಜಿಸತಕ್ಕದ್ದು. "ಜಗನ್ಮಾತ್ರೇನಮಃ, ಜಗತ್ಪಿತ್ರೇನಮಃ," ಎಂಬ ನಾಮಗಳಿಂದ ಜಂಘೆಗಳನ್ನು ಪೂಜಿಸಬೇಕು. "ಮೃಡಾನ್ಯೈನಮಃ, ಮೃಡಾಯನಮಃ," ಎಂಬ ನಾಮಗಳಿಂದ ಮೊಳಕಾಲುಗಳನ್ನು ಪೂಜಿಸಬೇಕು. "ರುದ್ರಾಣ್ಯೈನಮಃ, ರುದ್ರಾಯನಮಃ," ಎಂಬ ನಾಮಗಳಿಂದ ಎರಡು ತೊಡೆಗಳಿಗೂ ಪೂಜೆಯನ್ನು ಮಾಡಬೇಕು. "ಕಾಳ್ಯೈನಮಃ, ಕಾಲಾಂತಕಾಯನಮಃ," ಎಂಬ ನಾಮಗಳಿಂದ ಕಟಿ ಪ್ರದೇಶವನ್ನು ಪೂಜಿಸಬೇಕು. "ನಗೇಂದ್ರಕನ್ಯಾಯೈನಮಃ, ನಾಗೇಂದ್ರಾಭರಣಾಯನಮಃ," ಎಂಬ ನಾಮಗಳಿಂದ ನಾಭಿಯನ್ನು ಪೂಜಿಸಬೇಕು. "ಸ್ತವಪ್ರಿಯಾಯೈನಮಃ, ಸ್ತವ್ಯಾಯನಮಃ," ಎಂಬ ನಾಮಗಳಿಂದ ಸ್ತನಗಳನ್ನು ಪೂಜಿಸಬೇಕು.

೮೭–೯೦. "ಭವಘ್ನ್ಯೈನಮಃ, ಭವನಾಶಾಯನಮಃ," ಎಂಬ ನಾಮಗಳಿಂದ ಭುಜಗಳನ್ನು ಪೂಜಿಸಬೇಕು." ಕಂಬುಗ್ರೀವಾಯೈನಮಃ, ಕಾಲಕಂಠಾಯನಮಃ," ಎಂಬ ನಾಮಗಳಿಂದ ಕಂಠವನ್ನು ಪೂಜಿಸಬೇಕು. "ಮಾಯಾಯೈನಮಃ, ಮಹೇಶಾಯನಮಃ," ಎಂಬ ನಾಮಗಳಿಂದ ಮುಖಗಳನ್ನು ಪೂಜಿಸಬೇಕು. "ಲಲಿತಾಯೈನಮಃ, ಹಾಲಾಸ್ಯಪ್ರಿಯಾಯನಮಃ," ಎಂಬ ನಾಮಗಳಿಂದ ಲಲಾಟ

**ಶಿರಾಂಸಿ ಚ ಶಿವಾಯೈ ಚ ಶಿವಾಯೇತಿ ಸಮರ್ಚಯೇತ್ ।**
**ಪ್ರಣತಾರ್ತಿಹರಾಯೈ ಚ ಪ್ರಣತಾರ್ತಿಹರಾಯ ಚ ॥ ೮೯ ॥**

**ಪುನಶ್ಚ ಪಾದೌ ಪರಮೌ ಪೂಜಯೇದಂಬಿಕಾಪತೇಃ ।**
**ಪ್ರಣವಾದಿನಮೋಂತಾನಿ ನಾಮಾನಿ ಶಿವಯೋಃ ಪುರಾ ॥ ೯೦ ॥**

**ಸಮುಚ್ಚಾರ್ಯ ಚ ಪಾದೌ ಚ ಪೂಜಯಾಮೀತಿ ಯೋಜಯೇತ್ ।**
**ದೂರ್ವಾರ್ಚನಂ -ತತಃ ಕುರ್ಯಾದ್ಬಿಲ್ವಪತ್ರಾಕ್ಷತಾನ್ವಿತಂ ॥ ೯೧ ॥**

**ಮಹಾದೇವೋ ಮಹೇಶಶ್ಚ ಶಂಕರೋ ವೃಷಭಧ್ವಜಃ ।**
**ಶೂಲೀ ಕಾಮಾಂತಕೋ ದೇವಃ ಶ್ರೀಕಂಠ ಇತಿ ಸಂಜ್ಞಿತಃ ॥ ೯೨ ॥**

**ಈಶ್ವರಶ್ಚಾಂಬಿಕಾನಾಥೋ ರುದ್ರಶ್ಶಿವ ಇತೀರಿತಃ ।**
**ಪ್ರಣವಾದಿಚತುರ್ಥ್ಯಂತೈ ರೇತೈ ರ್ದ್ವಾದಶ ನಾಮಭಿಃ ॥ ೯೩ ॥**

---

ವನ್ನು ಪೂಜಿಸಬೇಕು.'' ಶಿವಾಯೈನಮಃ, ಶಿವಾಯನಮಃ,'' ಎಂಬ ನಾಮಗಳಿಂದ ಶಿರಸ್ಸನ್ನು ಪೂಜಿಸಬೇಕು. '' ಪ್ರಣತಾರ್ತಿಹರಾಯೈನಮಃ, ಪ್ರಣತಾರ್ತಿಹರಾಯ ನಮಃ,', ಎಂಬ ನಾಮಗಳಿಂದ ಪುನಃ ಪಾದಗಳನ್ನು ಪೂಜಿಸಬೇಕು.

೯೦-೯೧. ಈ ನಾಮಗಳಿಗೆ ಮೊದಲು ಪ್ರಣವವನ್ನೂ, ಕೊನೆಯಲ್ಲಿ ಆಯಾಯ ಅಂಗಗಳ ಹೆಸರನ್ನೂ ಸೇರಿಸಿದನಂತರ ಪೂಜಯಾಮಿ ಎಂದು ಶೇರಿಸಬೇಕು. ('' ಓಂಪ್ರಣತಾ ರ್ತಿಹರಾಯೈನಮಃ, ಓಂ ಪ್ರಣತಾರ್ತಿಹ ರಾಯನಮಃ ಪಾದೌಪೂಜಯಾಮಿ'') ಹೀಗೆ ಎಲ್ಲಾ ನಾಮಗಳನ್ನೂ ಹೇಳತಕ್ಕದ್ದು.

೯೨-೯೩. ಬಿಲ್ವಪತ್ರೆ, ಮಂತ್ರಾಕ್ಷತೆ, ಗರಿಕೆ, ಇವುಗಳನ್ನು ಒಟ್ಟುಗೂಡಿಸಿ ಕೊಂಡು '' ಓಂ ಮಹಾದೇವಾಯನಮಃ ದೂರ್ವಾಂಪೂಜಯಾಮಿ '' ಎಂಬ ಈ ಪ್ರಕಾರದಿಂದ ದ್ವಾದಶನಾಮಗಳ ಪೂಜೆಯನ್ನು ಮಾಡಬೇಕು. '' ಓಂಮಹಾ ದೇವಾಯನಮಃ, ಓಂ ಮಹೇಶಾಯನಮಃ, ಓಂಶಂಕರಾಯನಮಃ, ಓಂ ವೃಷಭ ಧ್ವಜಾಯನಮಃ, ಓಂಶೂಲಿನೇನಮಃ, ಓಂಕಾಮಾಂತಕಾಯನಮಃ, ಓಂದೇವಾಯ ನಮಃ, ಓಂಶ್ರೀಕಂಠಾಯನಮಃ, ಓಂಈಶ್ವರಾಯನಮಃ, ಓಂಅಂಬಿಕಾನಾಥಾಯ ನಮಃ,ಓಂರುದ್ರಾಯನಮಃ, ಓಂಶಿವಾಯನಮಃ, ದೂರ್ವಾಂಪೂಜಯಾಮಿ'' ಎಂದು ಈ ಹನ್ನೆರಡು ನಾಮಗಳಿಗೂ ಈ ಪ್ರಕಾರದಿಂದ ಮೊದಲು ಪ್ರಣವವನ್ನೂ ಅನಂತರದಲ್ಲಿ

ಶಂಭೋಸ್ತು ಪೂಜನಂ ಪುಂಸಾಂ ಸರ್ವಕಾಮಾರ್ಥಸಾಧನಂ ।
ಆಯುರಾರೋಗ್ಯಜಯದ ಮಪಮೃತ್ಯುವಿನಾಶನಂ ॥ ೯೪ ॥

ಸೋಮನಾಥ ಜಗನ್ನಾಥ ಸರ್ವೇಶ್ವರ ಸಮೃದ್ಧಿದ ।
ಮಮ ದ್ದಾರಿದ್ರ್ಯಮುನ್ಮೂಲ್ಯ ಕಾಮಾನ್ ಪೂರಯ ಪೂರಯ ॥ ೯೫ ॥

ಇತಿ ಸಂಪ್ರಾರ್ಥ್ಯ ದೇವೇಶಮರ್ಚಯೇದಂಬಿಕಾಪತಿಂ ।
ಭವಾದ್ಯೈ ರ್ನಾಮಭಿ ರ್ದೇವಮಷ್ಟಾಭಿರಥ ಪೂಜಯೇತ್ ॥ ೯೬ ॥

ಶಿವೋ ರುದ್ರಃ ಪಶುಪತಿ ರ್ನೀಲಕಂಠೋ ಮಹೇಶ್ವರಃ ।
ಹರಿಕೇಶೀ ವಿರೂಪಾಕ್ಷಃ ಕಪರ್ದೀ ಪ್ರಮಥಾಧಿಪಃ ॥ ೯೭ ॥

ಹರಶ್ಶಂಭುಃ ಪಿನಾಕೀ ಚ ಶಂಕರಶ್ಚಂದ್ರಶೇಖರಃ ।
ಸಮಷ್ಟಿವಿದ್ಯಾನಗರೀನಾಯಕಶ್ಚ ಸದಾಶಿವಃ ॥ ೯೮ ॥

---

" ನಮಃ ಪೂಜಯಾಮಿ " ಎಂಬ ಮಂತ್ರವನ್ನೂ ಸೇರಿಸಿಕೊಂಡು ಪೂಜಿಸಿದಲ್ಲಿ ಎಲ್ಲಾ ವಿಧವಾದ ಇಷ್ಟಸಿದ್ಧಿಗಳೂ ಉಂಟಾಗುವುವು. ಆಯುರಾರೋಗ್ಯ ಐಶ್ವರ್ಯಗಳೂ ಉಂಟಾಗುವುವು. ಯುದ್ಧದಲ್ಲಿ ಜಯವು ಉಂಟಾಗುವುದು. ಅಪಮೃತ್ಯುವು ನಾಶವಾಗುವುದು.

೯೫-೯೯. " ಎಲೈ ಸೋಮನಾಥನೆ, ಜಗನ್ನಾಥನೆ, ಸಕಲ ವಿಧವಾದ ಐಶ್ವರ್ಯ ಸಮೃದ್ಧಿಯನ್ನು ಅನುಗ್ರಹಿಸುವ ಪ್ರಭುವೆ, ನನ್ನ ದರಿದ್ರತನವನ್ನು ನಾಶ ಮಾಡಿ ನನ್ನ ಇಷ್ಟಾರ್ಥಗಳನ್ನು ಅನುಗ್ರಹಿಸು." ಎಂದು ಈ ಮಂತ್ರವನ್ನು ಹೇಳಿ ದೇವೇಶ್ವರನಾದ ಶಿವನನ್ನು ಪ್ರಾರ್ಥಿಸಿಕೊಳ್ಳಬೇಕು. ಅನಂತರದಲ್ಲಿ ಭವಾದಿ ಎಂಟು ನಾಮಗಳಿಂದ ಪೂಜಿಸಬೇಕು. " ಓಂ ಭವಾಯ ದೇವಾಯನಮಃ, ಶರ್ವಾಯ ದೇವಾಯನಮಃ, ಉಗ್ರಾಯ ದೇವಾಯನಮಃ, ರುದ್ರಾಯ ದೇವಾಯನಮಃ, ಭೀಮಾಯ ದೇವಾಯನಮಃ, ಪಶುಪತಯೇ ದೇವಾಯನಮಃ, ಮಹತೇ ದೇವಾಯ ನಮಃ, ಈಶಾನಾಯ ದೇವಾಯನಮಃ, ಎಂಬ ಎಂಟು ನಾಮಗಳನ್ನು ಹೇಳಿ ಪೂಜಿಸಿದನಂತರ, " ಓಂಶಿವಾಯನಮಃ, ರುದ್ರಾಯನಮಃ, ಪಶುಪತಯೇನಮಃ, ನೀಲಕಂಠಾಯನಮಃ, ಮಹೇಶ್ವರಾಯನಮಃ, ಹರಿಕೇಶಿನೇನಮಃ, ವಿರೂಪಾಕ್ಷಾಯನಮಃ, ಕಪರ್ದಿನೇನಮಃ, ಪ್ರಮಥಾಧಿಪಾಯನಮಃ, ಹರಾಯನಮಃ, ಶಂಭವೇನಮಃ,

**ಏತಾನ್ಯುಚ್ಚಾರ್ಯ ನಾಮಾನಿ ಚತುರ್ಥ್ಯಂತೈಃ ಪ್ರಪೂಜಯೇತ್ ।**
**ಆಕಾಶದಿಕ್ಶರೀರಾಯ ಗ್ರಹನಕ್ಷತ್ರಮಾಲಿನೇ ॥ ೯೯ ॥**

**ಸುರಸಿದ್ಧನಿವಾಸಾಯ ದತ್ತಮರ್ಘ್ಯಂ ಮಯಾ ಶಿವ ।**
**ದತ್ವಾರ್ಘ್ಯತ್ರಯಮೇವಂ ತು ಪ್ರಾರ್ಥಯೇತ್ಸೋಮಸುಂದರಂ ॥ ೧೦೦ ॥**

**ಭಗವನ್ನತಿರಿಕ್ತಂ ವಾ ಹೀನಂ ವಾ ಯನ್ಮಯಾ ಕೃತಂ ।**
**ಸರ್ವಂ ತದಸ್ತು ಸಂಪೂರ್ಣಂ ತ್ವತ್ಪ್ರಸಾದಾನ್ಮಹೇಶ್ವರ ॥ ೧೦೧ ॥**

**ಅಪರಾಧಸಹಸ್ರಾಣಿ ಕ್ರಿಯಂತೇಹರ್ನಿಶಂ ಮಯಾ ।**
**ಕ್ಷಮಸ್ವ ತಾನಿ ಸರ್ವಾಣಿ ಪಿತಾ ಪುತ್ರ ಮಿವೇಶ್ವರ ॥ ೧೦೨ ॥**

**ತಿ ಸಂಪ್ರಾರ್ಥ್ಯ ಸೋಮೇಶಂ ಪೂಜಾಮೇವಂ ಸಮಾಪಯೇತ್ ।**
**ವಿದ್ಯಾರ್ಥೀ ಲಭತೇ ವಿದ್ಯಾಂ ಧನಾರ್ಥೀ ಲಭತೇ ಧನಂ ॥ ೧೦೩ ॥**

---

ಪಿನಾಕಿನೇನಮಃ, ಶಂಕರಾಯನಮಃ, ಚಂದ್ರಶೇಖರಾಯನಮಃ, ಸಮಷ್ಟಿ ವಿದ್ಯಾನಗರೀನಾಯಕಾಯನಮಃ, ಸದಾಶಿವಾಯನಮಃ,'' ಎಂಬ ಈ ನಾಮಗಳಿಂದ ಪೂಜಿಸಬೇಕು.

೧೦೦. ''ಆಕಾಶ, ದಿಕ್ಕುಗಳು, ಇವುಗಳನ್ನು ಶರೀರವಾಗಿ ಹೊಂದಿ, ನಕ್ಷತ್ರಗಳೇ ಹಾರವಾಗಿರುವ, ಆಕಾರದಿಂದ ದೇವತೆಗಳೂ, ಸಿದ್ಧರೂ ಇವರಿಗೆ ವಾಸಸ್ಥಾನನಾದ ಶಿವನಿಗೆ ಅರ್ಘ್ಯವನ್ನು ಸಮರ್ಪಿಸುವೆನು.'' ಎಂದು ಈ ಮಂತ್ರದಿಂದ ಮೂರು ಅರ್ಘ್ಯವನ್ನು ಕೊಡತಕ್ಕದ್ದು. ಅನಂತರದಲ್ಲಿ ಸುಂದರೇಶ್ವರನನ್ನು ಪ್ರಾರ್ಥಿಸಿಕೊಳ್ಳಬೇಕು.

೧೦೧-೧೦೩. ''ಎಲೈ ಷಡ್ಗುಣೈಶ್ವರ್ಯ ಸಂಪನ್ನನಾದ ಪರಮೇಶ್ವರನೆ, ನಾನು ನಿನ್ನ ಪೂಜಾವಿಷಯದಲ್ಲಿ ಮಾಡಿರುವ ಹೆಚ್ಚುಕಡಿಮೆಯಾಗಿರುವ (ಈ ವ್ರತವು) ಅಂಶಗಳೆಲ್ಲವೂ ಸರಿಯಾಗಿರುವಂತೆ ನೀನು ಭಾವಿಸಿ, ನಾನು ಆಚರಿಸಿರುವ ಈ ವ್ರತವು ಸಂಪೂರ್ಣವಾಗುವಂತೆ ಅನುಗ್ರಹವನ್ನು ಮಾಡಬೇಕು.'' ಎಂದು ಈ ಶ್ಲೋಕವನ್ನು ಹೇಳಬೇಕು.'' ನಾನು (ಹಗಲೂ, ರಾತ್ರಿಯೂ) ಹಗಲಿನಲ್ಲಿಯೂ, ರಾತ್ರಿಯಲ್ಲಿಯೂ ಅನೇಕ ವಿಧವಾದ ಅಪರಾಧಗಳನ್ನು ಮಾಡಿರುವೆನು. ಎಲೈ ಮಹೇಶ್ವರನೇ, ನೀನು

**ರಾಜ್ಯಾರ್ಥೀ ರಾಜ್ಯಮಾಪ್ನೋತಿ ಮೋಕ್ಷಾರ್ಥೀ ಮೋಕ್ಷಮಾಪ್ನುಯಾತ್ ।**
**ಪುತ್ರಾರ್ಥೀ ಲಭತೇ ಪುತ್ರಂ ಜಯಾರ್ಥೀ ಲಭತೇ ಜಯಂ ॥ ೧೦೪ ॥**

**ಯದ್ಯದಿಷ್ಟತಮಂ ಲೋಕೇ ತತ್ಸರ್ವಂ ಲಭತೇ ಧ್ರುವಂ ।**
**ಸೋಮವಾರವ್ರತವಿಧಿಂ ಯೇ ಶೃಣ್ವಂತಿ ಪಠಂತಿ ಹಿ ॥ ೧೦೫ ॥**
**ಸರ್ವಪಾಪವಿನಿರ್ಮುಕ್ತಾ ಸ್ಸಂಪನ್ನಾಶ್ಚ ಭವಂತಿ ಹಿ ।**

**ಇತಿ ಶ್ರೀ ಸ್ಕಾಂದ ಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ ಮಾಹಾತ್ಮ್ಯೇ ಸೋಮವಾರವ್ರತವಿಧಿರ್ನಾಮ ಏಕೋನವಿಂಶೋಽಧ್ಯಾಯಃ**

---

ಅವೆಲ್ಲವನ್ನೂ, ಮಗನ ತಪ್ಪುಗಳನ್ನು ತಂದೆಯು ಕ್ಷಮಿಸುವಂತೆ, ಕ್ಷಮಿಸಿ ರಕ್ಷಿಸಬೇಕು." ಎಂದು ಈ ಮಂತ್ರವನ್ನು ಹೇಳಿ ಪ್ರಾರ್ಥಿಸಿಕೊಳ್ಳಬೇಕು. ಹೀಗೆ ಪ್ರಾರ್ಥನೆಯನ್ನು ಮಾಡಿದನಂತರ ಪೂಜೆಯನ್ನು ಮುಗಿಸಬೇಕು.

೧೦೪-೧೦೫. ಈ ವ್ರತವನ್ನು ಮಾಡಿದವನು ವಿದ್ಯಾರ್ಥಿಯಾಗಿದ್ದರೆ, ವಿದ್ಯಾ ಪ್ರಾಪ್ತಿಯಾಗುವುದು. ಧನಾರ್ಥಿಯಾಗಿದ್ದರೆ, ಧನವು ದೊರಕುವುದು. ರಾಜ್ಯವನ್ನು ಅಪೇಕ್ಷಿಸುತ್ತಿದ್ದರೆ ರಾಜ್ಯವೂ ಸಿಕ್ಕುವುದು. ಮೋಕ್ಷಹೊಂದಲು ಇಚ್ಛೆಯು ಇದ್ದಲ್ಲಿ ಮೋಕ್ಷವೂ ಉಂಟಾಗುವುದು. ವ್ರತಮಾಡುವವನಿಗೆ ಇಷ್ಟವಿರುವುದೆಲ್ಲವೂ ಈ ವ್ರತಾಚರಣೆಯಿಂದ ಉಂಟಾಗುವುದು. ಸೋಮವಾರ ವ್ರತದ ವಿಧಿಯನ್ನು ಕೇಳುವವರೂ, ಮತ್ತು ಹೇಳುವವರೂ ಇವರೆಲ್ಲರೂ ಪಾತಕಗಳನ್ನು ಕಳೆದುಕೊಂಡು ಐಶ್ವರ್ಯವಂತರಾಗುವರು.

ಸಂಪದ್ಯುಕ್ತವಾದ ಸ್ಕಾಂದಪುರಾಣದ ಅಗಸ್ತ್ಯಸಂಹಿತೆಯಲ್ಲಿ ಹಾಲಾಸ್ಯ ಮಾಹಾತ್ಮ್ಯೆಯಲ್ಲಿ ಸೋಮವಾರ ವ್ರತವಿಧಿ ಎಂದು ಹೆಸರುಳ್ಳ ಹತ್ತೊಂಭತ್ತನೆಯ ಅಧ್ಯಾಯವು ಮುಗಿದುದು



|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ವಿಂಶೋಽಧ್ಯಾಯಃ

|| ಅಗಸ್ತ್ಯ ಉವಾಚ ||

**ಶಕ್ತ್ಯಾ ವಿತ್ತಾನುಸಾರೇಣ ಕರ್ತವ್ಯಂ ವ್ರತಿನಾಂ ವರೈಃ ।**
**ನಿಯಮಾನಥ ವಕ್ಷ್ಯೇಽಹಂ ವ್ರತೋದ್ಯಾಪನಕರ್ಮಣಾಂ ॥ ೧ ॥**

**ಸೋಮವಾರೇ ವಿಶೇಷೇಣ ಧವಳೈರಂಬರೈರಪಿ ।**
**ಗಂಧೈಃ ಪುಷ್ಪೈಶ್ಚ ನೈವೇದ್ಯೈಃ ಪೂಜಯೇತ್ಸೋಮಸುಂದರಂ ॥ ೨ ॥**

**ವಿವಿಧಾನುಪಚಾರಾಂಶ್ಚ ಪರಸ್ಯ ಪರಮೇಷ್ಠಿನಃ ।**
**ದ್ರವ್ಯೈರ್ನ್ಯಾಯಾರ್ಜಿತೈಃ ಕುರ್ಯಾದ್ವಿತ್ತಶಾಠ್ಯವಿವರ್ಜಿತಃ ॥ ೩ ॥**

---

### ಇಪ್ಪತ್ತನೆಯ ಅಧ್ಯಾಯವು.

೧-೪. ಅಗಸ್ತ್ಯಋಷಿಯು ಹೇಳಿದನು :-"ಈ ವ್ರತವನ್ನು ಆಚರಿಸುವವರು, ತಮ್ಮ ಸಾಮರ್ಥ್ಯ, ಹಣದ ಅನುಕೂಲತೆ, ಇವುಗಳನ್ನು ನೋಡಿಕೊಂಡು ಅದಕ್ಕನುಸಾರವಾಗಿ ವ್ರತವನ್ನು ಮಾಡಬೇಕು. ಈ ವ್ರತದ ಮತ್ತು ಉದ್ಯಾಪನೆಯಲ್ಲಿ ಆಚರಿಸಬೇಕಾದ ನಿಯಮಗಳನ್ನು ಹೇಳುತ್ತೇನೆ. ಸೋಮವಾರದ ದಿವಸ ಶುಭ್ರವಾದ ವಸ್ತ್ರ, ಗಂಧ, ಅಕ್ಷತೆ, ಪುಷ್ಪ, ನೈವೇದ್ಯ ಇವುಗಳಿಂದ ಶಿವನನ್ನು ಅತಿಶಯವಾಗಿ ಪೂಜಿಸಬೇಕು. ಅನೇಕ ವಿಧವಾದ ಉಪಚಾರಗಳಿಂದ ಪರಮಪುರುಷನಾದ ಶಿವನನ್ನು ಪೂಜಿಸತಕ್ಕದ್ದು. ಶಿವನ ಪೂಜೆಗೆ ಉಪಯೋಗಿಸುವ ಸಾಮಗ್ರಿಯೂ,

ಸೋಮವಾರೇ ಸುಂದರೇಶಧಾಮ್ನಿ ಸಮ್ಮಾರ್ಜನಾದಿಕಂ ।
ಯಃ ಕರೋತಿ ಸಕೃದ್ಭಕ್ತ್ಯಾ ಸೋಕ್ಷಯಂ ಫಲಮಶ್ನುತೇ ॥ ೪ ॥

ತದ್ವಾರೇ ಚಿತ್ರವಸ್ತ್ರಾದ್ಯೈಸ್ಸೋಮಸುಂದರಮಂದಿರಂ ।
ಅಲಂಕರೋತಿ ಯೋ ಭಕ್ತ್ಯಾ ತಸ್ಯ ತುಷ್ಯತಿ ಶಂಕರಃ ॥ ೫ ॥

ಸೋಮಸುಂದರಲಿಂಗಸ್ಯ ಪ್ರಾಸಾದಂ ದಂತಿಭಿರ್ವೃತಂ ।
ಅಂತರ್ಬಹಿಶ್ಚ ಸಂಕ್ಷಾಳ್ಯ ಘರ್ಷಯಿತ್ವಾ ಪುನಃ ಪುನಃ ॥ ೬ ॥

ಸೋಮವಾರೇ ಗಂಧಪಂಕ್ಯೈಃ ಪ್ರಲಿಪ್ಯಾಥ ಪ್ರಧೂಪಯೇತ್ ।
ಸ ಸರ್ವಪಾಪವಿನಿರ್ಮುಕ್ತಸ್ಸರ್ವಾ ಕಾಮಾನವಾಪ್ನುಯಾತ್ ॥ ೭ ॥

ಹಾಲಾಸ್ಯೇಶಸ್ಯ ತದ್ವಾರೇ ತೈಲಾಭ್ಯಂಗಂ ಕರೋತಿ ಯಃ
ಘೃತಾಭ್ಯಂಗಂ ತು ವಾ ಭಕ್ತ್ಯಾ ತಸ್ಯ ಸಂಪತ್ಸಮೇಧತೇ ॥ ೮ ॥

---

ದ್ರವ್ಯವೂ ನ್ಯಾಯವಾದ ರೀತಿಯಿಂದ ಸಂಪಾದಿಸಿದ್ದಾಗಿರಬೇಕು. ದ್ರವ್ಯವು ಬಹಳವಾಗಿದೆಯೆಂದು ದುಂದುಗಾರಿಕೆಯನ್ನು ಮಾಡಬಾರದು. ಸೋಮವಾರದ ದಿವಸ ಸುಂದರೇಶ್ವರನ ದೇವಸ್ಥಾನದಲ್ಲಿ ಚೆನ್ನಾಗಿ ತೊಳೆದು, ಆ ಪ್ರದೇಶವು ಶುದ್ಧವಾಗಿರುವಂತೆ ಮಾಡುವವನು ಅಕ್ಷಯವಾದ ಫಲವನ್ನು ಹೊಂದುವನು.

೫–೬. ಸೋಮವಾರದ ದಿವಸ ಭಕ್ತಿಯಿಂದ ಆ ದೇವಸ್ಥಾನದ ದ್ವಾರ ಪ್ರದೇಶವನ್ನು ಅನೇಕ ವಿಧವಾದ ವಸ್ತ್ರಗಳಿಂದ ಅಲಂಕಾರಮಾಡುವವನು ಸುಂದರೇಶ್ವರನ ಅನುಗ್ರಹಕ್ಕೆ ಪಾತ್ರನಾಗುವನು. ಸೋಮಸುಂದರೇಶ್ವರ ಲಿಂಗವಿರುವ ಗರ್ಭಗೃಹವನ್ನು ಒಳಗೂ, ಹೊರಗೂ ಚೆನ್ನಾಗಿ ತೊಳೆದು, ಸುವಾಸನೆಯಾದ ದ್ರವ್ಯಗಳನ್ನು ಅನುಲೇಪಿಸಿ ಅನಂತರ ಸುಂದರೇಶ್ವರನನ್ನು ಪೂಜಿಸಬೇಕು. ಹೀಗೆ ಪೂಜಿಸಿದವನಿಗೆ ಅವನ ಇಷ್ಟಗಳೆಲ್ಲವೂ ಸಿದ್ಧಿಸುವುವು.

೭–೧೧. ಹಾಲಾಸ್ಯೇಶ್ವರ ದೇವಸ್ಥಾನದ ಬಾಗಿಲುಗಳಿಗೆ ಎಣ್ಣೆಯಿಂದಲಾಗಲಿ ತುಪ್ಪದಿಂದಲಾಗಲಿ ಅಭ್ಯಂಜನವನ್ನು ಭಕ್ತಿಯಿಂದ ಮಾಡಿಸುವವನು ಐಶ್ವರ್ಯವಂತನಾಗಿ ದಿನೇ ದಿನೇ ವೃದ್ಧಿಯನ್ನು ಹೊಂದುವನು. ಸೋಮವಾರದ ದಿನ ಪಂಚಗವ್ಯಗಳಿಂದ ಸುಂದರೇಶ್ವರನಿಗೆ ಭಕ್ತಿಯಿಂದ ಅಭಿಷೇಕಮಾಡಿಸುವವನು ಏಳು ಜನ್ಮಗಳ ಪಾಪಗಳಿಂದಲೂ ಮುಕ್ತನಾಗುವನು. ಸುಂದರೇಶ್ವರನಿಗೆ ಸೋಮವಾರದ

**ಯಃ ಪಂಚಗವ್ಯೈಸ್ತದ್ವಾರೇ ಸ್ನಾಪಯೇತ್ ಸೋಮಸುಂದರಂ ।**
**ಸ ಸಪ್ತಜನ್ಮಸಂಭೂತೈ ಸ್ಸರ್ವೈಃ ಪಾಪೈಃ ಪ್ರಮುಚ್ಯತೇ ॥ ೯ ॥**

**ಸುಂದರೇಶಂ ಸೋಮವಾರೇ ಸ್ನಾಪಯೇತ್ಪಯಸಾ ಚ ಯಃ ।**
**ಸ ಜಿತ್ವಾ ಸಕಲಾಂಶ್ಛತ್ರೂನ್ ಸರ್ವೈಶ್ವರ್ಯಮವಾಪ್ನುಯಾತ್ ॥ ೧೦ ॥**

**ವಾರರಾಜೇ ಮಹಾಲಿಂಗಂ ಯೋ ದಧ್ನಾ ಸ್ನಾಪಯೇತ್ಸಕೃತ್**
**ಸರ್ವಸದ್ಗುಣಸಂಯುಕ್ತ ಸ್ಸರ್ವಮಂಗಳವಾನ್ ಭವೇತ್ ॥ ೧೧ ॥**

**ಯಃ ಕೃಷ್ಣಗೋಘೃತೇನಾಪಿ ಸ್ನಾಪಯೇತ್ಸುಂದರೇಶ್ವರಂ ।**
**ಇಹ ಭುಕ್ತ್ವಾ ಮಹಾಭೋಗಾನ್ ಶಂಭೋ ಸ್ಸಾಯುಜ್ಯ**
**ಮಾಪ್ನುಯಾತ್ ॥ ೧೨ ॥**

**ತದ್ವಾರೇ ಮಧುರಾನಾಥಂ ಮಧುನಾ ಸ್ನಾಪಯೇತ್ಸಕೃತ್ ।**
**ಸ ಪ್ರತಾಪೀ ಚ ಭೋಗೀ ಚ ಸರ್ವೋತ್ಕರ್ಷೇಣ ವರ್ತತೇ ॥ ೧೩ ॥**

---

ದಿವಸ ಹಾಲಿನಿಂದ ಅಭಿಷೇಕವನ್ನು ಮಾಡಿದವನು ಯುದ್ಧದಲ್ಲಿ ಶತ್ರುಗಳನ್ನು ಜಯಿಸಿ ಎಲ್ಲಾ ವಿಧವಾದ ಐಶ್ವರ್ಯವನ್ನೂ ಹೊಂದುವನು. ಸೋಮವಾರದ ದಿವಸ ಸುಂದರೇಶ್ವರನಿಗೆ ಮೊಸರಿನಿಂದ ಒಂದು ಸಾರಿಯಾದರೂ ಅಭಿಷೇಕವನ್ನು ಮಾಡುವವನು ಎಲ್ಲಾ ವಿಧವಾದ ಸದ್ಗುಣಗಳಿಂದ ಕೂಡಿದವನಾಗಿ ಶ್ರೇಯೋವಂತನಾಗಿರುವನು.

೧೨–೧೬. ಕಪಿಲಾ ಗೋಘೃತದಿಂದ ಸುಂದರೇಶ್ವರನಿಗೆ ಅಭಿಷೇಕವನ್ನು ಸೋಮವಾರದ ದಿವಸ ಮಾಡಿಸುವವನು ಈ ಲೋಕದಲ್ಲಿ ಬಹಳ ಭೋಗವನ್ನು ಅನುಭವಿಸಿ ಕೊನೆಗೆ, ಶಿವನ ಸಾಯುಜ್ಯವನ್ನು ಹೊಂದುವನು. ಸೋಮವಾರದ ದಿವಸ ಮಧುರೇಶ್ವರನಾದ ಸುಂದರೇಶ್ವರನಿಗೆ ಜೇನುತುಪ್ಪದಿಂದ ಅಭಿಷೇಕ ಮಾಡಿಸುವವನು ಪರಾಕ್ರಮಶಾಲಿಯಾಗಿಯೂ, ಭೋಗಿಯಾಗಿಯೂ ಎಲ್ಲರಿಗಿಂತಲೂ ಮೇಲಾಗಿರುವನು. ಸೋಮವಾರದ ದಿವಸ ಸುಂದರೇಶ್ವರನಿಗೆ ಸಕ್ಕರೆಯಿಂದ ಅಭಿಷೇಕವನ್ನು ಮಾಡಿಸುವವನು ಎಲ್ಲಾ ವಿಧವಾದ ಸಂಪತ್ತುಗಳಿಂದಲೂ ಕೂಡಿದವನಾಗಿ ಎಲ್ಲಾ ಕಡೆಯಲ್ಲಿಯೂ ಜಯಶಾಲಿಯಾಗಿರುವನು. ಸೋಮವಾರದ ದಿವಸ ಭಕ್ತಿಯಿಂದ ಕಬ್ಬಿನ ಹಾಲಿನಿಂದ ಸುಂದರೇಶ್ವರನಿಗೆ ಅಭಿಷೇಕ ಮಾಡಿಸುವವನು ಚಕ್ರವರ್ತಿ

ವಾರರಾಜೇ ಶರ್ಕರಯಾ ತಲ್ಲಿಂಗಂ ಯೋಽಭಿಷಿಂಚತಿ ।
ಸ ಸರ್ವಸಂಪದಾಧಾರಸ್ಸರ್ವತ್ರ ವಿಜಯೀ ಭವೇತ್ ॥ ೧೪ ॥

ಸ್ನಾನ ಮಿಕ್ಷುರಸೇನೈವ ತಲ್ಲಿಂಗಸ್ಯ ಕರೋತಿ ಯಃ ।
ವಾರೋತ್ತಮೇ ಸಕೃದ್ಭಕ್ತ್ಯಾ ಸಾರ್ವಭೌಮತ್ವ ಮಾಪ್ನುಯಾತ್ ॥ ೧೫ ॥

ತದ್ವಾರೇ ತಂ ಮಹಾಲಿಂಗಂ ಸ್ನಾಪಯೇ ನ್ನಾರಿಕೇಳಕೈಃ
ಸ ಭುಂಕ್ತೇ ಸಕಲಾ ಭೋಗಾ ಸದಾ ಪೂರ್ಣಮನೋರಥಃ ॥ ೧೬ ॥

ಲಾಂಗಲೀ ಕದಳೀ ಚೂತದ್ರಾಕ್ಷಾ ಪನಸಸಂಭವೈಃ ।
ಫಲಸಾರೈಶ್ಚ ಸಗುಡೈ ಸ್ತಲ್ಲಿಂಗೋದ್ವರ್ತನಂ ಸಕೃತ್ ॥ ೧೭ ॥

ಕರೋತಿ ಸೋಮವಾರೇ ಯಸ್ಸ ಶಾಸ್ತಿ ಮಹತೀಂ ಮಹೀಂ ।
ಗಂಧೋಧಕೇನ ತದ್ವಾರೇ ತಲ್ಲಿಂಗಂ ಯೋಭಿಷೇಚಯೇತ್ ॥ ೧೮ ॥

ಸ ದುಃಖಾಂಬುಧಿನಿರ್ಮುಕ್ತ ಸ್ಸೌಭಾಗ್ಯಾರೋಗ್ಯವಾ ಭವೇತ್ ।
ನಮಕಾದಿಸಹಸ್ರಾಂತೈಃ ಸ್ಥಾಪಿತೈಃ ಕಲಶೈಶ್ಚ ತಂ ॥ ೧೯ ॥

---

ಯಾಗುವನು. ಸೋಮವಾರದ ದಿವಸ ಹಾಲಾಸ್ಯೇಶ್ವರನಿಗೆ ಎಳನೀರಿನಿಂದ ಅಭಿಷೇಕ ಮಾಡಿಸುವವನು ತನ್ನ ಇಷ್ಟಸಿದ್ಧಿಯನ್ನು ಹೊಂದಿ ಎಲ್ಲಾ ವಿಧವಾದ ಭೋಗಗಳನ್ನೂ ಅನುಭವಿಸುವನು.

೧೭–೨೦. ಸೋಮವಾರದ ದಿವಸ ಎಳನೀರು, ಬಾಳೆಯಹಣ್ಣು, ಮಾವಿನ ಹಣ್ಣು, ದ್ರಾಕ್ಷಿ, ಹಲಸಿನಹಣ್ಣು, ಇವುಗಳಿಂದ ಪಂಚಾಮೃತವನ್ನು ಮಾಡಿ ಹಾಲಾಸ್ಯೇಶ್ವರನಿಗೆ ಅಭಿಷೇಕ ಮಾಡಿಸುವವನು ವಿಸ್ತಾರವಾದ ಈಭೂಮಿಗೆ ರಾಜನಾಗುವನು. ಸೋಮವಾರದ ದಿವಸ ಗಂಧೋದಕದಿಂದ ಹಾಲಾಸ್ಯೇಶ್ವರನಿಗೆ ಅಭಿಷೇಕವನ್ನು ಮಾಡಿಸುವವನು ದುಃಖಗಳೆಲ್ಲವನ್ನೂ ಕಳೆದು ಶ್ರೀಯೋವಂತನೂ, ಆರೋಗ್ಯವುಳ್ಳವನೂ, ಆಗುವನು. ಸೋಮವಾರದ ದಿವಸ ಸಹಸ್ರ ಕಲಶಾಭಿಷೇಕವನ್ನು ನಮಕಾದಿ ಮಂತ್ರಗಳಿಂದ ಮಾಡಿಸುವವನು ಎಲ್ಲಾ ವಿಧವಾದ ಇಷ್ಟಸಿದ್ಧಿಗಳನ್ನೂ

ಅಭಿಷಿಚ್ಯ ಚ ತದ್ವಾರೇ ಸರ್ವಾನ್ ಕಾಮಾನ ವಾಪ್ನುಯಾತ್ ।
ಕದಂಬವನನಾಥಸ್ಯ ಸುಗಂಧಾಲೇಪನಂ ಸಕೃತ್ ॥ ೨೦

ಯಃ ಕರೋತಿ ಚ ತದ್ವಾರೇ ಸ ಸುಖೀ ಸರ್ವದಾ ಭವೇತ್ ।
ಸೋಮವಾರೇ ತು ವಿವಿಧೈ ರ್ವಸ್ತ್ರೈ ರಾಭರಣೈರಪಿ ॥ ೨೧ ॥

ಸುಗಂಧಪುಷ್ಪೈ ಸ್ತಲ್ಲಿಂಗಮಭ್ಯರ್ಚ್ಯ ಶ್ರೀಪತಿರ್ಭವೇತ್ ।
ಯೋರ್ಚಯೇ ತ್ಸೋಮವಾರೇ ತಮಖಂಡೈ ರ್ಬಿಲ್ವಪತ್ರಕೈಃ ॥ ೨೨ ॥

ಆಯುಷ್ಮಾನ್ ಬಲವಾನ್ ಶ್ರೀಮಾನ್ ಗೋಮಾನ ರ್ಥಪತಿ ರ್ಭವೇತ್ ।
ಸಾಜ್ಯಗುಗ್ಗುಲುಧೂಪಸ್ಯ ದಾನತ ಸ್ಸೋಮವಾಸರೇ ॥ ೨೩ ॥

ಅಪರಾಧಸಹಸ್ರಾಣಿ ಕ್ಷಮತೇ ಸೋಮಸುಂದರಃ ।
ಸುಂದರೇಶಾಯ ತದ್ವಾರೇ ಘೃತದೀಪಂ ದದಾತಿ ಯಃ ॥ ೨೪ ॥

ಅಚಲಾಂ ಶ್ರಿಯಮಾಪ್ನೋತಿ ಮಹತಾ ತೇಜಸಾ ಸಹ ।
ನೈವೇದ್ಯಂ ಭಕ್ಷ್ಯಭೋಜ್ಯಾದ್ಯಂ ಯಸ್ತಸ್ಮೈ ಚ ನಿವೇದಯೇತ್ ॥ ೨೫ ॥

---

ಹೊಂದುವನು. ಸೋಮವಾರದ ದಿವಸ ಸುಂದರೇಶ್ವರನಿಗೆ ಒಂದಾವರ್ತಿಯಾದರೂ ಸುಗಂಧಾನುಲೇಪನವನ್ನು ಮಾಡಿಸುವವನು ಯಾವಾಗಲೂ ಸುಖಿಯಾಗಿರುವನು.

೨೧–೨೪. ಸೋಮವಾರದ ದಿವಸ ಅನೇಕ ವಿಧವಾದ ವಸ್ತ್ರಾಭರಣಗಳಿಂದಲೂ ಸುವಾಸನೆಯಾದ ಹೂವುಗಳಿಂದಲೂ ಸುಂದರೇಶ್ವರ ಲಿಂಗವನ್ನು ಪೂಜಿಸಿದವನು ಐಶ್ವರ್ಯಕ್ಕೆ ಅಧಿಪತಿಯಾಗುವನು. ಅಖಂಡವಾದ ಬಿಲ್ವಪತ್ರೆಗಳಿಂದ ಪೂಜಿಸಿದವನು ಆಯುಷ್ಯವಂತನೂ, ಬಲವಂತನೂ, ಐಶ್ವರ್ಯವಂತನೂ, ಪಶುಧನ ಸಮೃದ್ಧಿಯುಳ್ಳವನೂ ಆಗುವನು. ಆಜ್ಯ, ಗುಗ್ಗುಲುಗಳೇ ಮೊದಲಾದ ದ್ರವ್ಯಗಳಿಂದ ಸಿದ್ಧಮಾಡಿದ ಧೂಪವನ್ನು ದಾನಮಾಡಿದವನ ಅಪರಾಧಗಳೆಲ್ಲವನ್ನೂ ಸುಂದರೇಶ್ವರನು ಕ್ಷಮಿಸುವನು.

೨೪–೨೬. ಸೋಮವಾರದ ದಿವಸ ತುಪ್ಪದ ದೀಪ ದಾನವನ್ನು ಮಾಡಿದವನಿಗೆ ಬಹಳ ತೇಜಸ್ಸು ಉಂಟಾಗುವುದು. ಮತ್ತು ಸ್ಥಿರವಾದ ಐಶ್ವರ್ಯವು ಉಂಟಾಗುವುದು. ಭಕ್ಷ್ಯಭೋಜ್ಯಾದಿಗಳಿಂದ ಕೂಡಿದ ನೈವೇದ್ಯವನ್ನು ಸುಂದರೇಶ್ವರನಿಗಾಗಿ ಸಮರ್ಪಿಸುವುದರಿಂದ ಸಪ್ತದ್ವೀಪಗಳಿಂದಲೂ ಸಮುದ್ರಗಳಿಂದಲೂ ಕೂಡಿರುವ

ಸಪ್ತದ್ವೀಪಸಮುದ್ರಾಯಾಃ ಕ್ಷಿತೇರಧಿಪತಿ ರ್ಭವೇತ್ ।
ತಸ್ಮೈ ಕರ್ಪೂರತಾಂಬೂಲಂ ತದ್ವಾರೇ ಯೋ ನಿವೇದಯೇತ್ ॥ ೨೬ ॥

ಸುರೂಪ ಸ್ಸುಭಗಶ್ಶ್ರೀಮಾನ್ ಸುಗಂಧಾತ್ಮಾ ಚ ಜಾಯತೇ ।
ಅನ್ನೇನ ತಂ ಮಹಾಲಿಂಗಂ ಪಾಯಸೇನ ಗುಡೇನ ವಾ ॥ ೨೭ ॥

ಶರ್ಕರಾಭಿ ಸ್ತಿಲೈ ರ್ವಾಪಿ ಸಾಕ್ಷತೈ ಸ್ಸತ್ಫಲೈಸ್ತು ವಾ ।
ದೂರ್ವಾಂಕುರೈ ಸ್ಸಪುಷ್ಪೈ ರ್ವಾ ಬಿಲ್ವಪತ್ರೈ ರಖಂಡಕೈಃ ॥ ೨೮ ॥

ಗೋಧೂಮಯವ ಶಾಲ್ಯಾದಿತಂಡುಲೈಃ ಪುಷ್ಪಸಂಯುತೈಃ ।
ಆಪೂರಯೇ ನ್ಮಹಾಭಕ್ತ್ಯಾ ಸ ರಾಜ್ಯಾಧಿಪತಿ ರ್ಭವೇತ್ ॥ ೨೯ ॥

ಯಾವಂತಸ್ತಂಡುಲಕಣಾ ಯಾವಂತೋ ನ್ನಾದಿಸಂಭವಾಃ ।
ತಾವದ್ಯುಗಸಹಸ್ರಾಣಿ ಶಿವಲೋಕೇ ಮಹೀಯತೇ ॥ ೩೦ ॥

ಸಚಂದ್ರಚಂದನೈಶ್ಚೈವ ಪ್ರಲಿಪ್ಯ ದ್ವಿಜಸತ್ತಮಾಃ ।
ಲಿಂಗಂ ಸವೇದಿಕಂ ಚೈವ ಪಶ್ಚಾಲ್ಲಿಂಗಂ ಪ್ರಪೂಜಯೇತ್ ॥ ೩೧ ॥

---

ಭೂಮಿಯ ಆಧಿಪತ್ಯವು ದೊರಕುವುದು. ಆ ದಿವಸದಲ್ಲಿ ಕರ್ಪೂರ ಸಹಿತವಾದ ತಾಂಬೂಲವನ್ನು ಸುಂದರೇಶ್ವರನಿಗೆ ನಿವೇದನಮಾಡುವುದರಿಂದ ರೂಪವಂತನೂ, ಸೌಭಾಗ್ಯಶಾಲಿಯೂ ಆಗುವುದಲ್ಲದೆ, ಐಶ್ವರ್ಯವಂತನೂ ಆಗುವನು.

೨೭–೩೦. ಸೋಮವಾರದ ದಿವಸ ಸುಂದರೇಶ್ವರ ಲಿಂಗವನ್ನು ಅನ್ನ, ಬೆಲ್ಲದ ಪಾಯಸ, ಸಕ್ಕರೆ, ತಿಲಾಕ್ಷತೆಗಳು, ದೂರ್ವಾಂಕುರ, ಬಿಲ್ವಪತ್ರೆ, ಗೋಧಿ, ಯುವಧಾನ್ಯ, ಹೂವಿನ ಜೊತೆಯಲ್ಲಿರುವ ಅಕ್ಕಿ, ಇವುಗಳಿಂದ ಭಕ್ತಿಯಿಂದ ಅಭಿಷೇಕಮಾಡಿ ಪೂಜಿಸಿದವನು ರಾಜನಾಗುವನು. ಅವನು ಅರ್ಪಿಸಿದ ಅನ್ನದ ಕಣಗಳು ಎಷ್ಟು ಇರುವವೋ ಅಷ್ಟುಸಾವಿರ ಯುಗಗಳವರೆಗೂ ಶಿವಲೋಕದಲ್ಲಿ ಪೂಜೆಯನ್ನು ಹೊಂದುತ್ತಿರುವನು.

೩೧–೩೩. ಶೀತಲವಾದ ಪಚ್ಚಕರ್ಪೂರದಿಂದ ಕೂಡಿರುವ ಗಂಧದಿಂದ ಪೀಠ ಸಹಿತವಾಗಿರುವ ಸುಂದರೇಶ್ವರ ಲಿಂಗವನ್ನು ಅನುಲೇಪಮಾಡಿ ಅನಂತರದಲ್ಲಿ ಪೂಜೆ

**ಸುಗಂಧಪುಷ್ಪಮಾಲಾಭಿ ರ್ವೇಷ್ಟಯಿತ್ವಾ ಸುಗಂಧಿಭಿಃ ।**
**ಪುಷ್ಪಾದ್ಯೈ ರ್ಯುಕ್ತಕುಸುಮೈಃ ಪೂಜಯೇತ್ ಸೋಮಸುಂದರಂ॥ ೩೨ ॥**

**ಸೋಮವಾರೇ ಚ ನಿಯಮಾತ್ಪತ್ರಪುಷ್ಪಫಲಾದಿಭಿಃ ।**
**ಪ್ರಶಸ್ತಂ ಪೂಜನಂ ತಚ್ಚ ಭೋಗಮೋಕ್ಷಪ್ರದಾಯಕಂ ॥ ೩೩ ॥**

**ಉಪರಾಗಾದಿಕಾಲೇಷು ಮಹಾಪುಣ್ಯಪ್ರದೇಷು ಚ ।**
**ಸೋಮಸುಂದರಲಿಂಗಸ್ಯ ಯಾಃ ಪೂಜಾ ವಿವಿಧಾಃ ಕೃತಾಃ ॥ ೩೪ ॥**

**ಸೋಮವಾರೇ ಕೃತಾರ್ಚಾಯಾಃ ಕೋಟ್ಯಂಶೇನಾಪಿ ನೋ ಸಮಾಃ ।**
**ಕಿಮತ್ರ ಬಹುನೋಕ್ತೇನಾ ಸ್ವಶಕ್ತ್ಯಾ ಯೋ ವ್ರತಂ ಚರೇತ್ ॥ ೩೫ ॥**

**ಸ ಗೋಭೂಧನಧಾನ್ಯಾದ್ಯೈಸ್ಸಹಿತ ಸ್ಸುಖ ಮೇಧತೇ ।**
**ಯ ಸ್ಸುಂದರೇಶಸ್ಯ ಚ ಸೋಮವಾರೇ ನಾಮ್ನಾಂ ಸಹಸ್ರೇಣ ಕರೋತಿ ಪೂಜಾಂ ।**
**ಸ ಮುಕ್ತಪಾಪ ಸ್ಸಕಲಾರಿಜೇತಾ ಸದಾ ಚ ಭೋಗೀ ಲಭತೇ ಚ ಕಾಮಾ೯ ॥ ೩೬ ॥**

---

ಮಾಡಬೇಕು. ಸುವಾಸನೆಯಾದ ಹೂವಿನ ಮಾಲೆಗಳಿಂದ ಸೋಮಸುಂದರನಿಗೆ ಮಾಲೆಯನ್ನು ಹಾಕಿ, ಶಾಸ್ತ್ರೋಕ್ತವಾದ ಹೂವುಗಳಿಂದ ಪೂಜಿಸಬೇಕು. ಸೋಮವಾರ ನಿಯಮದಿಂದ ಇದ್ದು, ಪತ್ರ, ಪುಷ್ಪ, ಫಲ ಇವೇ ಮೊದಲಾದುವುಗಳಿಂದ ಸೋಮಸುಂದರೇಶ್ವರನಿಗೆ ಪೂಜೆಮಾಡುವುದು ಉತ್ತಮವು. ಅದರಿಂದ ಭುಕ್ತಿ ಮುಕ್ತಿಗಳಾಗುವುವು.

೩೪-೩೬. ಬಹಳ ಪುಣ್ಯವನ್ನು ಉಂಟುಮಾಡುವ ಗ್ರಹಣಕಾಲವೇ ಮೊದಲಾದ ಕಾಲಗಳಲ್ಲಿ ಸೋಮಸುಂದರೇಶ್ವರನಿಗೆ ಮಾಡಿದ ಬಹಳ ವಿಧವಾದ ಪೂಜಾದಿಗಳು, ಸೋಮವಾರದ ದಿವಸ ಮಾಡಿದ ಪೂಜೆಯಲ್ಲಿ ಕೋಟಿಯ ಅಂಶಕ್ಕಿಂತಲೂ ಕಡಿಮೆಯಾಗಿರುವುವು. ಬಹಳ ಹೇಳಿದ್ದರಿಂದ ಏನು ? ತನ್ನ ಶಕ್ತ್ಯನುಸಾರವಾಗಿ ಸೋಮವಾರ ವ್ರತಾಚರಣೆಯನ್ನು ಮಾಡಿದವನು ಗೋವು, ಭೂಮಿ, ಧನ ಧಾನ್ಯ ಇವುಗಳನ್ನು ಹೊಂದಿ, ಸುಖವನ್ನು ಅನುಭವಿಸುವನು. ಸೋಮವಾರದ ದಿವಸ ಸುಂದರೇಶ್ವರನಿಗೆ ಸಹಸ್ರನಾಮಗಳಿಂದ ಪೂಜಿಸಿದವನು ಪಾಪಗಳನ್ನು ಕಳೆದುಕೊಂಡು, ಶತ್ರುಗಳನ್ನು ಜಯಿಸಿ, ಮಹಾಭೋಗವಂತನಾಗಿ ಇಷ್ಟಗಳೆಲ್ಲವನ್ನೂ ಹೊಂದುವನು.

ಸೋಮಸುಂದರಲಿಂಗಸ್ಯ ಸೋಮವಾರೇ ವಿಶೇಷತಃ ।
ಪ್ರದಕ್ಷಿಣನಮಸ್ಕಾರಸ್ತೋತ್ರಾಣಿ ಚ ಕರೋತಿ ಯಃ ॥ ೩೭ ॥

ತಸ್ಯ ಸಿಧ್ಯಂತಿ ಸರ್ವಾಣಿ ಸಿದ್ಧಯ ಸ್ತ್ವಣಿಮಾದಿಕಾಃ ।
ಭಕ್ತ್ಯಾ ಪತ್ರೈಃ ಫಲೈಃ ಪುಷ್ಪೈ ಸ್ತೋಯೈರಪಿ ಯಜೇಚ್ಛಿವಂ ॥ ೩೮ ॥

ತದನಂತಫಲಂ ಪ್ರೋಕ್ತಂ ಭಕ್ತಿ ರೇವಾತ್ರ ಕಾರಣಂ ।
ಬ್ರಹ್ಮಹಾ ವಾ ಸುರಾಪೋ ವಾ ಸ್ತೇಯೀ ವಾ ಗುರುತಲ್ಪಗಃ ॥ ೩೯ ॥

ಯಃ ಪೂಜಯೇನ್ಮಹಾದೇವಂ ಮುಚ್ಯತೇ ಸರ್ವಪಾತಕೈಃ ।
ನಿರ್ಮಾಲ್ಯಂ ಧಾರಯೇದ್ಭಕ್ತ್ಯಾ ಶಿರಸಾ ಪಾರ್ವತೀಪತೇಃ ॥ ೪೦ ॥

ರಾಜಸೂಯಸ್ಯ ಯಜ್ಞಸ್ಯ ಫಲಂ ಪ್ರಾಪ್ನೋತ್ಯನುತ್ತಮಂ ।
ಶಿರಸಾ ಶಿವನಿರ್ಮಾಲ್ಯಂ ಯೋ ಧತ್ತೇ ಭಕ್ತಿಸಂಯುತಃ ॥ ೪೧ ॥

---

೩೭–೩೮. ಸೋಮಸುಂದರೇಶ್ವರನಿಗೆ ಸೋಮವಾರದಲ್ಲಿ ಅತಿಶಯವಾಗಿ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡುವವನಿಗೆ ಅಣಿಮಾದಿಸಿದ್ಧಿಗಳು ಎಲ್ಲವೂ ಉಂಟಾಗುವುವು. ಪತ್ರ, ಪುಷ್ಪ, ಫಲ, ಉದಕ ಇವುಗಳಿಂದ ಶಿವನನ್ನು ಪೂಜಿಸಿದರೆ ಅದರಿಂದ ಬಹಳ ಪುಣ್ಯವು ಉಂಟಾಗುವುದು. ಇದಕ್ಕೆ ಭಕ್ತಿಯೇ ಕಾರಣವಾಗಿ ಇರುವುದು.

೩೯–೪೧. ಬ್ರಹ್ಮಹತ್ಯೆಯನ್ನು ಮಾಡಿದವನು, ಮದ್ಯಪಾನಮಾಡಿದವನು, ಕಳ್ಳತನವನ್ನು ಮಾಡಿದವನು, ಗುರುವಿನ ಪತ್ನಿಯನ್ನು ಭೋಗಿಸಿದವನು, ಇವರುಗಳು ಯಾರೇ ಆದರೂ ಮಹಾದೇವನನ್ನು ಪೂಜಿಸಿದ ಮಾತ್ರದಿಂದಲೇ ಅವರ ಪಾತಕಗಳು ನಾಶವಾಗುವವು. ಪಾರ್ವತೀಪತಿಯಾದ ಪರಮೇಶ್ವರನ ಪ್ರಸಾದವನ್ನು ಯಾವಾಗಲೂ ಭಕ್ತಿಯಿಂದ ಶಿರಸ್ಸಿನಲ್ಲಿ ಧರಿಸಬೇಕು. ಇದರಿಂದ ರಾಜಸೂಯಯಾಗ ಮಾಡಿದ ಫಲವು ಬರುವುದು. ಶಿವನ ನಿರ್ಮಾಲ್ಯವನ್ನು ಭಕ್ತಿಯಿಂದ ಶಿರಸ್ಸಿನಲ್ಲಿ ಧರಿಸಿದವನು ಪರಿಶುದ್ಧನಾಗುವನು. ಶಿವಜ್ಞಾನಿಯಾಗುವನು. ಭುಕ್ತಿಮುಕ್ತಿಗಳಿಗೆ ಅರ್ಹನಾಗುವನು.

ಸ ಶುಚಿಸ್ಸ ಶಿವಜ್ಞಾನೀ ಭುಕ್ತಿಮುಕ್ತ್ಯೋಃ ಸ್ಸ ಭಾಜನಂ ।
ಪೃಥೂದಕಂ ಮಹಾತೀರ್ಥಂ ಗಂಗಾ ಚ ಯಮುನಾನದೀ ॥ ೪೨ ॥

ಸರಸ್ವತೀ ನರ್ಮದಾ ಚ ನದ್ಯೋಃ ಗೋದಾವರೀಮುಖಾಃ ।
ಸದ್ಯ ಸ್ಸನ್ನಿಹಿತಾ ಸ್ತ್ರೇತ್ವತಾ ಶ್ಶಂಭೋಃಸ್ನಾನೋದಕೇ ಶುಭೇ ॥ ೪೩ ॥

ತಸ್ಮಾತ್ಸ್ನಾನೋದಕಂ ಸೇವ್ಯಂ ಸರ್ವತೀರ್ಥಮಯಂ ಹಿ ಯತ್ ।
ಮಜ್ಜನಾತ್ತು ಮಹಾಪಾಪೈ ಸ್ತತ್ಕ್ಷಣಾದೇವ ಮುಚ್ಯತೇ ॥ ೪೪ ॥

ಸ್ನಾನೋದಕಂ ಚ ನಿರ್ಮಾಲ್ಯಂ ಭಕ್ತ್ಯಾ ಧಾರ್ಯಂ ಪ್ರಯತ್ನತಃ
ನ ತಾಸ್ಸ್ಪೃಶಂತಿ ಪಾಪಾನಿ ಮನೋವಾಕ್ಕಾಯಜಾನಿ ಚ ॥ ೪೫ ॥

ಏಕಭುಕ್ತವ್ರತಂ ಶ್ರೇಷ್ಠಂ ತತೋ ನಕ್ತವ್ರತಂ ಪರಂ ।
ತಸ್ಮಾದುಪೋಷಣಂ ಮುಖ್ಯಂ ತಚ್ಚ ಜಾಗರಣಾದಿಕಂ ॥ ೪೬ ॥

---

೪೨–೪೫. ಜಲಸಮೃದ್ಧಿಯುಳ್ಳ ಪವಿತ್ರವಾದ ಗಂಗಾ, ಯಮುನಾ, ಸರಸ್ವತೀ ನರ್ಮದಾ, ಗೋದಾವರೀ ಇವೇ ಮೊದಲಾದ ನದಿಗಳು ಮಹಾತೀರ್ಥವೆಂದು ಶಿವನ ಅಭಿಷೇಕಕ್ಕೆ ಸಿದ್ಧವಾಗಿರುವುವು. ಆದ್ದರಿಂದ ಈ ನದಿಗಳು ತೀರ್ಥರೂಪದಿಂದ ಇರುವ ಕಾರಣ ಸ್ನಾನಕ್ಕೂ ಅರ್ಹವಾದವುಗಳು. ಇವುಗಳಲ್ಲಿ ಸ್ನಾನಮಾಡುವುದರಿಂದ ಆ ಕ್ಷಣದಲ್ಲಿಯೇ ಪಾತಕಗಳೆಲ್ಲವೂ ಪರಿಹಾರವಾಗುವುವು. ಶಿವಾಭಿಷೇಕಾರ್ಹವಾದ ನದೀತೀರ್ಥವೂ, ಶಿವನಿರ್ಮಾಲ್ಯವೂ ಪ್ರಯತ್ನದಿಂದ ಸಂಪಾದಿಸಿ ಭಕ್ತಿಯಿಂದ ಧರಿಸಲು ಅರ್ಹವಾದವುಗಳು. ಇವುಗಳಿಂದ ಮನಸ್ಸು, ವಾಕ್ಕು ಶರೀರಗಳ ಪಾತಕ ಗಳೆಲ್ಲವೂ ನಾಶವಾಗುವುವು.

೪೬–೪೭. ಏಕಭುಕ್ತ (ಒಂದು ಹೊತ್ತು ಊಟಮಾಡುವುದು.) ವ್ರತವು ಉತ್ತಮವು. ನಕ್ತಕಾಲದಲ್ಲಿ ಭೋಜನಮಾಡುವುದು ಅದಕ್ಕಿಂತಲೂ ಉತ್ತಮವು. (ಹಗಲಿನಲ್ಲಿ ಪ್ರಾತಃಕಾಲ, ಸಂಗಮಕಾಲ, ಮಧ್ಯಾಹ್ನ, ಅಪರಾಹ್ಣ, ನಕ್ತ, ಸಾಯಂಕಾಲ ಗಳೆಂದು ಆರುಭಾಗವು ಒಂದೊಂದು ಭಾಗಕ್ಕೆ ಐದೈದು ಘಳಿಗೆಗಳು. ಇದರಲ್ಲಿ ಐದನೆಯ ಕಾಲವು ನಕ್ತವೆನಿಸುವುದು.) ಉಪವಾಸಮಾಡಿ, ಜಾಗರಣೆಮಾಡುವುದು, ಅದಕ್ಕಿಂ ತಲೂ ಉತ್ತಮವು. ಅದಕ್ಕಿಂತಲೂ ನಾಲ್ಕುಯಾಮಗಳಲ್ಲಿಯೂ ಪೂಜಿಸುವುದು

ತಸ್ಮಾಚ್ಚತುರ್ಷು ಯಾಮೇಷು ಪೂಜಯಾ ಯುಕ್ತಮುತ್ತಮಂ ।
ಏವಂ ಪಂಚವಿಧಂ ಖ್ಯಾತಂ ವ್ರತಂ ಸರ್ವೋತ್ತಮೋತ್ತಮಂ ॥ ೪೭ ॥

ಏಕವರ್ಷಂ ದ್ವಿವರ್ಷಂ ವಾ ವರ್ಷತ್ರಯಮಥಾಪಿ ವಾ ।
ವರ್ಷದ್ವಾದಶಪರ್ಯಂತಂ ಕಾಮಾನ್ ಸಂಕಲ್ಪ್ಯ ವಾ ಚರೇತ್ ॥ ೪೮ ॥

ಶರೀರಪಾತಪರ್ಯಂತ ಮವಶ್ಯಂ ತತ್ಸುಖಂ ಚರೇತ್ ।
ಪೂರ್ಣೇ ಸಂಕಲ್ಪಿತೇ ಕಾಲೇ ಕುರ್ಯಾದುದ್ಯಾಪನಂ ವ್ರತೀ ॥ ೪೯ ॥

ಶರೀರಪಾತಪರ್ಯಂತಂ ಯಃ ಕರೋತಿ ಮಹಾವ್ರತಂ ।
ಉದ್ಯಾಪನಕ್ರಿಯಾ ತೇನ ನ ಕರ್ತವ್ಯಾ ಫಲಾಪ್ತಯೇ ॥ ೫೦ ॥

ಅಸ್ಯ ಉದ್ಯಾಪನಂ ಕುರ್ಯಾತ್ಸಂಕಲ್ಪಿತದಿನಾವಧೌ ।
ತದ್ವಿಧಾನಮಥೋ ವಕ್ಷ್ಯೇ ಸಂಕ್ಷೇಪೇಣ ಮುನೀಶ್ವರಾಃ ॥ ೫೧ ॥

---

ಉತ್ತಮವು. ಸರ್ವೋತ್ತಮವಾದ ಈ ಸೋಮವಾರ ವ್ರತವನ್ನು ಏಕಭುಕ್ತವ್ರತ, ನಕ್ತವ್ರತ, ಉಪವಾಸವ್ರತ, ಜಾಗರಣವ್ರತ, ನಾಲ್ಕು ಯಾಮ ಪೂಜಿಸುವುದು, ಎಂದು ಐದು ವಿಧವಾಗಿ ಆಚರಿಸತಕ್ಕದ್ದು ಉತ್ತಮವು.

೪೮–೫೧. ಒಂದು ವರ್ಷ, ಎರಡು ವರ್ಷ, ಮೂರು ವರ್ಷ ವ್ರತಾಚರಣೆಯನ್ನು ಮಾಡುವುದು ಅಥವಾ ಹನ್ನೆರಡು ವರ್ಷಗಳವರಿಗೂ ವ್ರತವನ್ನು ಆಚರಿಸುವ ಹಾಗೆ ಸಂಕಲ್ಪವನ್ನು ಮಾಡಿ, ವ್ರತವನ್ನು ಆಚರಿಸುವುದು ಉತ್ತಮವು. ವ್ರತವನ್ನು ಆಚರಿಸಲು ಸಂಕಲ್ಪಮಾಡಿ ಮರಣ ಪರ್ಯಂತವೂ ವ್ರತಾಚರಣೆಯು ಸುಖಕರವು. ಕ್ಲುಪ್ತವಾದ ಕಾಲದವರಿಗೆ ವ್ರತಾಚರಣೆಯನ್ನು ಮಾಡಿದನಂತರ ಉದ್ಯಾಪನೆಯನ್ನು ಮಾಡಬೇಕು. ಉದ್ಯಾಪನೆಯನ್ನು ಮಾಡುವ ದಿನವನ್ನು ಗೊತ್ತುಮಾಡಿಕೊಂಡು ಆ ದಿವಸ ಅದನ್ನು ಮಾಡಬೇಕು. ಸಂಕ್ಷೇಪವಾಗಿ ಉದ್ಯಾಪನೆಯನ್ನು ಮಾಡುವ ಕ್ರಮವನ್ನು ತಿಳಿಸುವೆನು. ಎಲೈ ಮುನೀಶ್ವರರೇ ನೀವೆಲ್ಲರೂ ಕೇಳಿರಿ.

ವ್ರತಾಂತೇ ಪ್ರತಿಮಾಂ ಶಂಭೋ ಸ್ಸಾಂಬಾಂ ರೌಪ್ಯಮಯೀಂ ಶುಭಾಂ ।
ಅಧಮಾಂ ದಶನಿಷ್ಕೈಶ್ಚ ವಿಂಶನ್ನಿಷ್ಕೈಶ್ಚ ಮಧ್ಯಮಾಂ· ॥ ೫೨ ॥

ತ್ರಿಂಶನ್ನಿಷ್ಕೈರುತ್ತಮಾಂ ಚ ಕಾರಯೇತ್‌ಶಿಲ್ಪಿನಾ ಸುಧೀಃ ।
ಚತುರ್ಭುಜಾಂ ತ್ರಿಣೇತ್ರಾಂ ಚ ಮೃಗೀಂ ಪರಶುಧಾರಿಣೀಂ ॥ ೫೩ ॥

ಅಭೀತಿವರದೋಪೇತಾಂ ಚಂದ್ರರೇಖಾವತಂಸಗಾಂ ।
ಭವಾನೀಮಪಿ ತದ್ವಾಮೇ ಭುಜದ್ವಯವಿರಾಜಿತಾಂ ॥ ೫೪ ॥

ದಧತೀಂ ಫಲ್ಲಕಲ್ಹಾರಂ ಪ್ರಸೃತಾನ್ಯಕರಾಂಬುಜಾಂ ।
ಕಾರಯಿತ್ವಾ ವಿಧಾನೇನ ಪಶ್ಚಾತ್ಕರ್ಮ ಸಮಾಚರೇತ್ ॥ ೫೫ ॥

ಏಕಭುಕ್ತಂ ಪೂರ್ವದಿನೇ ಕೃತ್ವಾವಶ್ಯಂ ಜಿತೇಂದ್ರಿಯಃ ।
ಶ್ವಸ್ಸೋಮವಾರೇ ಸಂಪ್ರಾಪ್ತೇ ಕುರ್ಯಾತ್‌ಸಮ್ಯಗುಪೋಷಣಂ ॥ ೫೬ ॥

---

೫೨-೫೫. ವ್ರತಾಚರಣೆಯನ್ನು ಮಾಡುವವನು ತನ್ನ ಸಂಕಲ್ಪಾನುಸಾರವಾಗಿ ವ್ರತವನ್ನು ಮಾಡಬೇಕಾದ ಕಾಲವು ಮುಗಿದನಂತರ ಉದ್ಯಾಪನೆಯನ್ನು ಮಾಡುವುದಕ್ಕಾಗಿ ಉಮಾಮಹೇಶ್ವರನ ಪ್ರತಿಮೆಯನ್ನು ಬೆಳ್ಳಿಯಿಂದ ಮಾಡಿಸಬೇಕು. ಈ ಪ್ರತಿಮೆಯು ಮೂವತ್ತು ನಿಷ್ಕಗಳ ತೂಕವಿದ್ದರೆ ಉತ್ತಮವು. ಇಪ್ಪತ್ತು ನಿಷ್ಕಗಳ ತೂಕವಿದ್ದರೆ ಮಧ್ಯಮವು. ಹತ್ತು ನಿಷ್ಕಗಳ ತೂಕವಿದ್ದರೆ ಅಧಮವು. ಈ ಪ್ರತಿಮೆಯು ನಾಲ್ಕು ಭುಜವುಳ್ಳದ್ದಾಗಿರಬೇಕು. ಪ್ರತಿಮೆಯ ಹಸ್ತಗಳಲ್ಲಿ ಜಿಂಕೆ, ಪರಶು, ಅಭಯ ಹಸ್ತ, ವರದ ಹಸ್ತಗಳಿರಬೇಕು. ಮಹೇಶ್ವರನ ಪ್ರತಿಮೆಯ ಶಿರಸ್ಸಿನಲ್ಲಿ ಚಂದ್ರಾಭರಣವಿರಬೇಕು. ಎಡಭಾಗದಲ್ಲಿ ಎರಡು ಭುಜಗಳಿಂದ ಕೂಡಿ ಒಂದು ಹಸ್ತದಿಂದ ಕಲ್ಹಾರ ಪುಷ್ಪವನ್ನು ಧರಿಸಿ, ಇನ್ನೊಂದು ಹಸ್ತವನ್ನು ನೀಡಿಕೊಂಡು ಇರುವ ಹಾಗೆ ಪಾರ್ವತಿಯ ಪ್ರತಿಮೆಯು ಇರುವಂತೆ ಶಿಲ್ಪಿಗಳಿಂದ ಮಾಡಿಸಿ, ಅನಂತರದಲ್ಲಿ ಶಾಸ್ತ್ರಕ್ರಮವಾಗಿ ಉದ್ಯಾಪನೆಯ ಕರ್ಮವನ್ನು ಮಾಡಬೇಕು.

೫೬-೫೯. ಉದ್ಯಾಪನೆಯನ್ನು ಮಾಡುವ ದಿವಸವು ಸೋಮವಾರವೇ ಆಗುವುದರಿಂದ ಅದರ ಹಿಂದಿನ ದಿವಸ ಏಕ ಭುಕ್ತವನ್ನು ಮಾಡಿಕೊಂಡು ಜಿತೇಂದ್ರಿಯನಾಗಿ ಇದ್ದು, ಪರದಿನದಲ್ಲಿ ಸಂಪೂರ್ಣವಾಗಿ ಉಪವಾಸ ಮಾಡಬೇಕು. ಒಂಭತ್ತು ಹಸ್ತಗಳ ಪ್ರಮಾಣದಿಂದ ಇರುವಂತೆ ಹದಿನಾರು ಸ್ತಂಭಗಳಿಂದಲೂ, ನಾಲ್ಕು ಬಾಗಿಲುಗಳಿಂದಲೂ, ಇರುವ ಮಂಟಪವನ್ನು ಮಾಡಿಸಿ, ಅದರ ಮಧ್ಯದಲ್ಲಿ ಸಮತಲವಾಗಿರುವ

ನವಹಸ್ತಪ್ರಮಾಣೇನ ಷೋಡಶಸ್ತಂಭಸಂಯುತಂ ।
ಮಂಟಪಂ ಕಾರಯಿತ್ವಾ ತು ಚತುರ್ದ್ವಾರವಿರಾಜಿತಂ ॥ ೫೭ ॥

ಮಧ್ಯೇ ಸಂಕಲ್ಪ್ಯ ದೇವೀಂ ಚ ದರ್ಪಣೋದರಸನ್ನಿಭಾಂ ।
ವಿತಾನಾದ್ಯೈಸ್ತೋರಣಾದ್ಯೈರಲಂಕೃತ್ಯ ತು ಮಂಟಪಂ ॥ ೫೮ ॥

ಪೂರ್ವಸ್ಯಾಂ ದಿಶಿ ವೈಶಾನ್ಯಾಂ ಕುರ್ಯಾತ್ಕುಂಡಂ ಸಲಕ್ಷಣಂ ।
ವೃತ್ತಂ ವಾ ಚತುರಸ್ರಂ ವಾ ಮೇಖಲಾತ್ರಯಸಂಯುತಂ ॥ ೫೯ ॥

ಪ್ರಾತಃ ಸ್ನಾನಾದಿಕಂ ನಿತ್ಯಕರ್ಮ ನಿರ್ವೃತ್ಯ ಸಾಧಕಃ ।
ಪುರಾಣಶ್ರವಣಾದ್ಯೈಶ್ಚ ದಿವಾಶೇಷಂ ವ್ಯಪೋಹ್ಯ ಚ ॥ ೬೦ ॥

ರಾತ್ರೌ ಚ ಪ್ರಾರಭೇದ್ಧೀಮಾನ್ ಪ್ರತಿಯಾಮಂ ಶಿವಾರ್ಚನಂ ।
ವೇದಿಕೋಪರಿ ಪೀಠಸ್ಥೇ ಲಿಂಗೇ ವಾ ಸ್ಥಂಡಿಲೋಪರಿ ॥ ೬೧ ॥

ಸ್ಥಾಪಿತೇ ಸ್ವರ್ಧುನೀಯುಕ್ತೇ ಕುಂಭೇ ವಾ ಮಂಟಪೇಪಿ ವಾ ।
ಪ್ರತಿಮಾಸು ಶಿವಸ್ಯಾಪಿ ಕೃತಾಸು ಕನಕಾದಿಭಿಃ ॥ ೬೨ ॥

---

ಪ್ರದೇಶದಲ್ಲಿ ವೇದಿಯನ್ನು ನಿರ್ಮಿಸಬೇಕು. ಮಂಟಪಕ್ಕೆ ಎಲ್ಲಾ ಕಡೆಯಲ್ಲಿಯೂ ಅಲಂಕಾರವನ್ನು ಮಾಡಬೇಕು. ಪೂರ್ವದಿಕ್ಕಿನಲ್ಲಿಯಾಗಲಿ, ಈಶಾನ್ಯದಲ್ಲಿಯಾಗಲಿ, ದುಂಡಗಿರುವ ಅಥವಾ ಚಚ್ಚೌಕವಾಗಿರುವ ಮೂರು ಮೇಖಲೆಗಳಿಂದ ಕೂಡಿದ, ಅಂದವಾಗಿರುವಂತೆ ಹೋಮ ಕುಂಡವನ್ನು ಮಾಡಬೇಕು.

೬೦–೬೩. ಉದ್ಯಾಪನೆಯನ್ನು ಮಾಡುವವನು ಪ್ರಾತಃಕಾಲ ಸ್ನಾನಾದಿಗಳನ್ನೂ, ನಿತ್ಯ ಕರ್ಮಗಳನ್ನೂ ನೆರವೇರಿಸಿದ ನಂತರ, ಪುರಾಣ ಶ್ರವಣಾದಿಗಳಿಂದ ಹಗಲೆಲ್ಲವನ್ನೂ ಕಳೆದು ರಾತ್ರಿಯಾದ ಕೂಡಲೆ ಪ್ರತಿಮೆಯಲ್ಲಿ ಪ್ರತಿಯೊಂದುಯಾಮದಲ್ಲಿಯೂ ಶಿವನನ್ನು ಪೂಜಿಸಲು ಪ್ರಾರಂಭಿಸಬೇಕು. ವೇದಿಕೆಯ ಮೇಲುಗಡೆಯಲ್ಲಿ ಸ್ಥಾಪಿತವಾದ ಶಿವಲಿಂಗದಲ್ಲಿಯಾಗಲೀ, ವೇದಿಕೆಯಲ್ಲಿ ಸ್ಥಾಪಿತವಾದ ಗಂಗಾದಿ ತೀರ್ಥಯುಕ್ತವಾದ ಕಲಶದಲ್ಲಿಯಾಗಲಿ, ಚಿನ್ನವೇ ಮೊದಲಾದ ಲೋಹಗಳಿಂದ ನಿರ್ಮಾಣ ಮಾಡಿಸಿದ ಉಮಾಮಹೇಶ್ವರ ಪ್ರತಿಮೆಯಲ್ಲಿಯಾಗಲಿ, ಸೋಮಸುಂದರೇಶ್ವರನನ್ನು

ವಸ್ತ್ರೈರಾಭರಣೈ ರ್ಗಂಧೈ ರ್ಮಾಲ್ಯೈ ರ್ಧೂಪೈಶ್ಚ ದೀಪಕೈಃ ।
ನಾನಾವಿಧೈಶ್ಚ ನೈವೇದ್ಯೈ ಸ್ತಾಂಬೂಲೈಶ್ಚ ಸುವಾಸಿತೈಃ ॥ ೮೫ ॥

ಪೂಜಿತಾಂ ಪ್ರತಿಮಾಂ ತಸ್ಮೈ ಸವಸ್ತ್ರಾಂ ಚ ಸದಕ್ಷಿಣಾಂ ।
ಪ್ರದದ್ಯಾದ್ಗುರವೇ ಸೋಮಸುಂದರಃ ಪ್ರೀಯತಾಮಿತಿ ॥ ೮೬ ॥

ಯದಾ ಸಾಂಬಂ ಸುಂದರೇಶಂ ಭಕ್ತ್ಯಾ ಪೂಜಯತಿ ವ್ರತೀ ।
ತದ್ವ್ಯಾಚಾರ್ಯಂ ಚ ಮತಿಮಾನ್ಯಜೇದ್ಭಾರ್ಯಾಸಮನ್ವಿತಂ ॥ ೮೭ ॥

ವಿಚಿತ್ರಾಣಿ ಚ ವಸ್ತ್ರಾಣಿ ಸೌವರ್ಣಾಭರಣಾನಿ ಚ ।
ಅಮೂಲ್ಯಾನಿ ಚ ರತ್ನಾನಿ ಕ್ಷೇತ್ರಗ್ರಾಮಪುರಾಣಿ ಚ ॥ ೮೮ ॥

ನಗರಾಣಿ ಚ ರಾಷ್ಟ್ರಾಣಿ ದಾಸೀದಾಸಧನಾನಿ ಚ ।
ವಾಹನಾನಿ ವಿಚಿತ್ರಾಣಿ ರಥವಾಜಿಗಜಾನಿ ಚ ॥ ೮೯ ॥

ಅನ್ಯಾನಿ ಯಾನ್ಯಭೀಷ್ಟಾನಿ ತಾನಿ ಸರ್ವಾಣಿ ದಾಪಯೇತ್ ।
ಧೇನುಂ ಪಯಸ್ವಿನೀಂ ದದ್ಯಾ ದಾದ್ಯವತ್ಸಾಂ ಸ್ವರ್ಣಶೃಂಗಿಕಾಂ ॥ ೯೦ ॥

---

ಮಾಡತಕ್ಕವನು ವಸ್ತ್ರಾಭರಣ ಗಂಧಾದಿ ಷೋಡಶೋಪಚಾರ ಕ್ರಮದಿಂದ ಪೂಜಿಸಿದ ಪ್ರತಿಮೆಯನ್ನು "ಸುಂದರೇಶ್ವರನು ಪ್ರೀತನಾಗಲಿ" ಎಂದು ಹೇಳಿ ಗುರುವಿಗೆ ದಾನ ಮಾಡಬೇಕು.

೮೭–೮೯. ವ್ರತಾಚರಣೆಯನ್ನು ಮಾಡಿದವನು ಮೀನಾಕ್ಷೀ ಸಹಿತನಾದ ಸುಂದರೇಶ್ವರನನ್ನು ಭಕ್ತಿಯಿಂದ ಪೂಜಿಸಿದಂತೆಯೇ ಪತ್ನೀ ಸಹಿತನಾದ ಗುರುವನ್ನೂ ಪೂಜಿಸಬೇಕು. ಅನೇಕ ವಿಧವಾದ ವಸ್ತ್ರಗಳು, ಚಿನ್ನದ ಆಭರಣಗಳು, ಬೆಲೆಬಾಳುವ ರತ್ನಗಳು, ಭೂಮಿ, ಗ್ರಾಮ, ಪಟ್ಟಣ, ನಗರ, ದಾಸಿಯರು, ದಾಸರು, ದ್ರವ್ಯ ಅನೇಕ ವಿಧವಾದ ವಾಹನಗಳು ಇವುಗಳನ್ನು ಗುರುವು ಅಪೇಕ್ಷಿಸಿದ ಇತರ ವಸ್ತುಗಳು ಎಲ್ಲವನ್ನೂ ಗುರುವಿಗೆ ದಾನವಾಗಿ ಕೊಡಬೇಕು.

೯೦–೯೩. ಅನಂತರದಲ್ಲಿ ಒಂದು ಕರು ಹಾಕಿರುವ ಗೋವಿನ ಕೊಂಬುಗಳಿಗೆ ಚಿನ್ನದಿಂದಲೂ ಬೆನ್ನಿಗೆ ತಾಮ್ರದಿಂದಲೂ, ಗೊರಸುಗಳಿಗೆ ಬೆಳ್ಳಿಯಿಂದಲೂ, ಬಾಲಕ್ಕೆ ಮುತ್ತಿನಿಂದಲೂ ಅಲಂಕರಿಸಿ, ಗೋವನ್ನು ಕಟ್ಟುವ ಸರಪಣಿ, ಅದನ್ನು ಕರೆಯುವ ಪಾತ್ರೆ, ಅದಕ್ಕೆ ಹೊದ್ದಿಸಿರುವ ವಸ್ತ್ರ, ಇವುಗಳೊಡನೆ ಗೋವನ್ನು ಪೂಜಿಸಿ,

ತಾಮ್ರಪೃಷ್ಠಾಂ ರೌಪ್ಯಖುರಾಂ ಮುಕ್ತಾಲಾಂಗೂಲಭೂಷಿತಾಂ ।
ದೋಹಶೃಂಖಲಯಾ ಯುಕ್ತಾಂ ವಸ್ತ್ರಾದ್ಯೈಃ ಪರಿಪೂಜಿತಾಂ ॥ ೯೧ ॥

ದೋಹಪಾತ್ರಯುತಾಂ ಸೌಮ್ಯಾಂ ಸರ್ವಾಲಂಕಾರಶೋಭಿತಾಂ ।
ಸದಕ್ಷಿಣಾಂ ಚ ಗುರವೇ ವ್ರತಸಂಪೂರ್ತಿಹೇತವೇ ॥ ೯೨ ॥

ಸರ್ವಧಾನ್ಯಂ ಯಥಾಶಕ್ತ್ಯಾ ದಾಪಯೇಚ್ಛಕ್ತಿತೋ ವ್ರತೀ ।
ದೀಪದಾನಂ ಪ್ರಕರ್ತವ್ಯಂ ಗುರವೇ ಜ್ಞಾನದಾಯಿನೇ ॥ ೩೯ ॥

ಯೇ ಯೇ ಕೃತಾಸ್ಸ್ಯುರ್ನಿಯಮಾ ಸ್ತೇಷಾಂ ತೇಷಾಂ ಫಲಾಪ್ತಯೇ ।
ಸೋಮಮುದ್ದಿಶ್ಯ ದಾತವ್ಯಮೇಷ ಧರ್ಮ ಸ್ಸನಾತನಃ ॥ ೯೪ ॥

ಪಂಚಾಮೃತಸ್ಯ ನಿಯಮಾದ್ಗೋದಾನಂ ಚ ಪ್ರಶಸ್ಯತೇ ।
ಪುಷ್ಪಾಣಾಂ ನಿಯಮೇನೈವ ಸೌವರ್ಣಂ ಕುಸುಮಂ ಭವೇತ್ ॥ ೯೫ ॥

ಧಾನ್ಯಾನಾಂ ಪೂರಣಂ ಯೇಷಾಂ ಧಾನ್ಯದಾನಂ ಪ್ರಶಸ್ಯತೇ ।
ಫಲಾನಾಂ ನಿಯಮೇ ದದ್ಯಾತ್ಸೌವರ್ಣಾನಿ ಫಲಾನಿ ಚ ॥ ೯೬ ॥

---

ತಾನು ಆಚರಿಸಿದ ವ್ರತವು ಸಂಪೂರ್ಣವಾಗುವ ಉದ್ದೇಶದಿಂದ ಗುರುವಿಗೆ ದಾನಮಾಡಬೇಕು. ಈ ಗೋದಾನದ ಸಂಗಡ, ದಕ್ಷಿಣೆಯನ್ನೂ ಎಲ್ಲಾ ವಿಧವಾದ ಧಾನ್ಯವನ್ನೂ ತನ್ನ ಶಕ್ತಿಗೆ ಅನುಸಾರವಾಗಿ ದಾನಮಾಡಬೇಕು. ಅನಂತರದಲ್ಲಿ ಜ್ಞಾನೋಪದೇಶವನ್ನು ಮಾಡಿದ ಗುರುವಿಗೆ ದೀಪವನ್ನು ದಾನ ಮಾಡಬೇಕು.

೯೪–೯೭. ವ್ರತವನ್ನು ಆಚರಿಸಿ ಉದ್ಯಾಪನೆಯನ್ನು ಮಾಡಿದವನು ತಾನು ಅಂಗೀಕರಿಸಿ ನಡಸಿದ ನಿಯಮಗಳ ಫಲಪ್ರಾಪ್ತಿಗಾಗಿ ಪಾರ್ವತೀ ಸಹಿತನಾದ ಪರಮೇಶ್ವರನನ್ನು ಉದ್ದೇಶ ಮಾಡಿಕೊಂಡು ಆಯಾಯ ಪದಾರ್ಥಗಳನ್ನು ದಾನ ಮಾಡಬೇಕೆಂದು ನಿತ್ಯವಾದ ಧರ್ಮವು ಇರುವುದು. ಪಂಚಾಮೃತದ ನಿಯಮಕ್ಕಾಗಿ ಗೋದಾನವನ್ನು ಮಾಡುವುದು ಉತ್ತಮವು. ಪುಷ್ಪಗಳ ನಿಯಮಕ್ಕಾಗಿ ಚಿನ್ನದ ಹೂವುಗಳನ್ನು ದಾನ ಮಾಡುವುದು ಪ್ರಶಸ್ತವು. ಧಾನ್ಯಗಳ ನಿಯಮಕ್ಕಾಗಿ ಧಾನ್ಯಗಳ

ಸಂಪೂರ್ಣಾಂಶ್ಚ ಸುಭಕ್ಷ್ಯೈಶ್ಚ ವಂಶಪಾತ್ರಾಣಿ ಚ ವ್ರತೀ ।
ತೇಷಾಮುಪರಿ ಸಂಸ್ಥಾಪ್ಯ ಶಿವಭಕ್ತಿಯುತಾನ್ ದ್ವಿಜಾನ್ ॥ ೭೪ ॥

ಕೃತೋಪವಾಸಾನ್ ಸಂಪೂಜ್ಯ ಗಂಧಸ್ರಗ್ವಸ್ತ್ರಭೂಷಣೈಃ ।
ತ್ರಯೋದಶಘಟಾನ್ ದದ್ಯಾದ್ಗಾಶ್ಚ ಶ್ವೇತಾಸ್ತ್ರಯೋದಶ ॥ ೭೫ ॥

ಛತ್ರೋಪಾನತ್ಕುಂಡಿಕಾಶ್ಚ ವ್ರತಸಂಪೂರ್ತಿಹೇತವೇ ।
ತತೋ ಗುರುಂ ಭಕ್ತಿಪೂರ್ವಮಾಸನೇ ಚೋಪವೇಶ್ಯ ಚ ॥ ೭೬ ॥

ಅರ್ಚಯೇತ್ ಗಂಧಪುಷ್ಪಾದ್ಯೈರ್ಗಂಧೈರಾಭರಣೈರಪಿ ।
ನ ಗುರೋಸ್ಸದೃಶೀ ಮಾತಾ ನ ಗುರೋಸ್ಸದೃಶಃ ಪಿತಾ ॥ ೭೭ ॥

ಸಂಸಾರಾದುದ್ಧರೇತ್ ಸೋ ಹಿ ವ್ರತಜ್ಞಾನೋಪದೇಶತಃ ।
ಗುರುಸ್ಸಂಪೂಜಿತೋ ಯೇನ ಪಾರ್ವತ್ಯಾ ಸಹಿತಶ್ಶಿವಃ ॥ ೭೮ ॥

---

ಗಂಧ, ವಸ್ತ್ರ, ಮಾಲ್ಯ, ಭೂಷಣಗಳಿಂದ ಪೂಜಿಸಿದ ನಂತರ ಅವರಿಗೆ ಈ ಕಲಶಗಳನ್ನು ದಾನಮಾಡಬೇಕು. ಬಿಳಿಯ ಬಣ್ಣದ ಹದಿಮೂರು ಗೋವುಗಳನ್ನು ದಾನ ಮಾಡಬೇಕು.

೭೬–೭೮. ಛತ್ರಿ, ಪಾದರಕ್ಷೆ, ನೀರು ಕುಡಿಯುವ ಪಾತ್ರೆ, ಇವುಗಳನ್ನು ತಾನು ಆಚರಿಸಿದ ವ್ರತವು ಪೂರ್ತಿಯಾಗುವ ಉದ್ದೇಶದಿಂದ ದಾನಮಾಡಬೇಕು. ಅನಂತರದಲ್ಲಿ ಭಕ್ತಿಯಿಂದ ಗುರುವನ್ನು ಪೀಠದಲ್ಲಿ ಕೂರಿಸಿ, ಗಂಧ, ಪುಷ್ಪ, ವಸ್ತ್ರ ಆಭರಣ ಇವುಗಳಿಂದ ಪೂಜಿಸಬೇಕು. ತಾಯಿಯೂ ತಂದೆಯೂ ಕೂಡ ಗುರುವಿಗೆ ಸಮಾನರಾಗುವುದಿಲ್ಲ. ಗುರುವು ವ್ರತ ಮತ್ತು ಜ್ಞಾನವನ್ನು ಉಪದೇಶ ಮಾಡುವುದರಿಂದ (ಸಂಸಾರ) ಜನನ, ಮರಣ ರೂಪವಾದ ಬಂಧನದಿಂದ ಬಿಡಿಸುವನು. ಈ ರೀತಿಯಾದ ಮಹಿಮೆಯುಳ್ಳ ಗುರುವನ್ನು ಪೂಜಿಸಿದ್ದರಿಂದ ಪಾರ್ವತೀ ಸಹಿತನಾದ ಪರಮೇಶ್ವರನನ್ನು ಪೂಜಿಸಿದಂತೆಯೇ ಆಗುವುದು. ಇದರಲ್ಲಿ ಕೊಂಚವೂ ಸಂದೇಹಕ್ಕೆ ಅವಕಾಶವಿಲ್ಲವು.

ತೇನ ಪೂಜಿತ ಏವ ಸ್ಯಾನ್ನಾತ್ರ ಸಂದೇಹಕಾರಣಂ ।
ಸೋಮವಾರೇ ತು ರಾತ್ರೌ ಸ್ಯಾತ್ಪೂಜಾಯಾಂ ತುಂ ದ್ವಿಯಾಮಕೇ॥ ೭೯ ॥

ದಂಪತ್ಯೋಃ ಪೂಜನಂ ಕುರ್ಯಾ ತ್ಪಾರ್ವತೀಶಿವರೂಪಯೋಃ ।
ವಸ್ತ್ರಯಜ್ಞೋಪವೀತೈಶ್ಚ ಉತ್ತಮಾಭರಣೈರಪಿ ॥ ೮೦ ॥

ಷೋಡಶೈ ರುಪಚಾರೈಶ್ಚ ಗಂಧಾದ್ಯೈಶ್ಚ ಸದಕ್ಷಿಣೈಃ ।
ನೈವೇದ್ಯೈಶ್ಚ ಸತಾಂಬೂಲೈಃ ಪೂಜಯಿತ್ವಾ ವಿಧಾನತಃ ॥ ೮೧ ॥

ಏವಂ ದೇವಂ ಚ ದೇವೀಂ ಚ ಭಕ್ತಿಶ್ರದ್ಧಾಪುರಸ್ಸರಂ ।
ಅಥ ಪ್ರಯತ ಆಚಾರ್ಯಃ ಪ್ರಭಾತೇ ಉದಿತೇ ರವೌ ॥ ೮೨ ॥

ಸ್ನಾನಾದಿನಿತ್ಯಕರ್ಮಾಣಿ ನಿರ್ವೃತ್ಯ ಚ ಗುರು ಸ್ತದಾ ।
ಷೋಡಶಸ್ತಂಭಸಂಯುಕ್ತೇ ಮಂಟಪೇ ಸಮಲಂಕೃತೇ ॥ ೮೩ ॥

ಚತುರ್ಭುಜಾಂ ಪ್ರಸನ್ನಾಸ್ಯಾ ಮುಮಯಾ ಸಹಿತಾಂ ವರಾಂ ।
ಪ್ರತಿಮಾಂ ತಾಂ ರೌಪ್ಯಮಯೀಂ ಅಭಿಷಿಚ್ಯಾಥ ಪೂಜಯೇತ್ ॥ ೮೪ ॥

---

೭೯–೮೨. ಸೋಮವಾರ ವ್ರತೋದ್ಯಾಪನೆಯನ್ನು ಮಾಡುವಾಗ ರಾತ್ರಿ ಎರಡನೆಯ ಯಾಮದ ಪೂಜೆಯನ್ನು ಮಾಡುವ ಕಾಲದಲ್ಲಿ ದಂಪತಿಗಳ ಪೂಜೆಯನ್ನು ಮಾಡಬೇಕು. ಶಿವ ಮತ್ತು ಪಾರ್ವತಿ ಇವರುಗಳು ಈ ರೂಪದಿಂದ ಇರುವರು. ಇವರನ್ನು ವಸ್ತ್ರ, ಯಜ್ಞೋಪವೀತ, ಉತ್ತರೀಯ, ಆಭರಣಗಳಿಂದಲೂ ಗಂಧ, ನೈವೇದ್ಯ ತಾಂಬೂಲ, ದಕ್ಷಿಣೆ ಇವೇ ಮೊದಲಾದ ಶೋಡ ಶೋಪಚಾರ ದ್ರವ್ಯ ಗಳಿಂದಲೂ ವಿಧಿಗನುಸಾರವಾಗಿ ಪೂಜಿಸಬೇಕು.

೮೩–೮೬. ಶಿವ ಪಾರ್ವತಿಯರನ್ನು ಭಕ್ತಿ ಮತ್ತು ಆದರಗಳಿಂದ ಪ್ರಯತ್ನ ಪೂರ್ವಕವಾಗಿ ಈ ಪ್ರಕಾರದಿಂದ ಪೂಜಿಸಿದ ನಂತರ, ಸೂರ್ಯನು ಉದಯಿಸಿದ ಮೇಲೆ ಗುರುವಾಗಿರುವ ಆಚಾರ್ಯನು ಸ್ನಾನವೇ ಮೊದಲಾದ ನಿತ್ಯ ಕರ್ಮಗಳನ್ನು ನೆರವೇರಿಸಿಕೊಂಡು, ಮೊದಲು ಸ್ಥಾಪಿಸಿದ ಉಮಾಮಹೇಶ್ವರ ಪ್ರತಿಮೆಯನ್ನು ಗಂಧವೇ ಮೊದಲಾದ ಶೋಡ ಶೋಪಚಾರ ದ್ರವ್ಯಗಳಿಂದ ಪೂಜಿಸಬೇಕು. ಉದ್ಯಾಪನೆ

ಸೋಮಸುಂದರಮೀಶಾನಂ ಸಮಾವಾಹ್ಯ ಪ್ರಪೂಜಯೇತ್ ।
ಸಂಸ್ಥಾಪ್ಯ ಸನ್ನಿಧೌ ತಸ್ಯ ಪ್ರತಿಮಾಮಪಿ ತಾಂ ಯಜೇತ್ ॥ ೬೩ ॥

ಪಂಚಗವ್ಯೇನ ಸಂಸ್ನಾಪ್ಯ ತತಃ ಪಂಚಾಮೃತೇನ ಚ ।
ಗಂಧಾದ್ಯೈರುಪಚಾರೈಶ್ಚ ಪೂಜಾಂ ಪೂರ್ವವ ದಾಚರೇತ್ ॥ ೬೪ ॥

ಚತುರ್ಯಾಮೇಷು ಪೂಜಾಂತೇ ಹೋಮಕರ್ಮ ಸಮಾಚರೇತ್ ।
ಅಗ್ನ್ಯಾಧಾನಾಧಿಕಂ ಸರ್ವಂ ಸ್ವಸೂತ್ರೋಕ್ತೇನ ವರ್ತ್ಮನಾ ॥ ೬೫ ॥

ನಿರ್ವರ್ತ್ಯ ವಹ್ನೌ ಹೃದಯೇ ಭಾವನಾಕಲ್ಪಿತಾಸನೇ ।
ಸಾಂಬಂ ದೇವಂ ಸಮಾವಾಹ್ಯ ಗಂಧಾದ್ಯೈಃ ಪರಿಪೂಜ್ಯ ಚ ॥ ೬೬ ॥

ತ್ರಿಯಂಬಕೇನ ಮಂತ್ರೇಣ ಶತಮಷ್ಟೋತ್ತರಂ ಹುನೇತ್ ।
ಗೌರೀಮಿಮಾಯೇತಿ ಋಚಾ ಹುನೇದಷ್ಟೋತ್ತರಂ ಶತಂ ॥ ೬೭ ॥

---

ಆವಾಹನೆಮಾಡಿ ಪೂಜಿಸಬೇಕು. ಶಿವಲಿಂಗ, ಕುಂಭ ಇವುಗಳಲ್ಲಿ ಆವಾಹನೆ ಮಾಡಿದಾಗ ಅದರ ಹತ್ತಿರದಲ್ಲಿ ಪ್ರತಿಮೆಯನ್ನು ಸ್ಥಾಪಿಸಿ ಅದಕ್ಕೂ ಪೂಜಿಸಬೇಕು.

೬೪-೬೯. ಪಂಚಗವ್ಯದಿಂದ ಅಭಿಷೇಕವನ್ನು ಮೊದಲು ಮಾಡಿ ಪಂಚಾಮೃತದಿಂದಲೂ ಅಭಿಷೇಕವನ್ನು ಮಾಡಿದ ನಂತರ, ಗಂಧಪುಷ್ಪಾದಿಗಳಿಂದ ಪೂಜಿಸಬೇಕು. ನಾಲ್ಕು ಯಾಮಗಳೂ ಪೂಜೆಯನ್ನು ನೆರವೇರಿಸಿದ ನಂತರ ಹೋಮಕ್ಕೆ ಸಂಬಂಧಪಟ್ಟ ಕೆಲಸಗಳನ್ನು ಪ್ರಾರಂಭಿಸಬೇಕು. ಉದ್ಯಾಪನೆಯನ್ನು ಆಚರಿಸುವವನ ಗೃಹ್ಯ ಸೂತ್ರಾನುಸಾರವಾದ ಕ್ರಮದಿಂದ ಅಗ್ನಿ ಪ್ರತಿಷ್ಠಾಪನೆಯನ್ನು ಮಾಡಿ, ಹೃದಯದಲ್ಲಿ ಕಲ್ಪಿತವಾದ ಆಸನದಲ್ಲಿ ಸುಂದರೇಶ್ವರನನ್ನು ಧ್ಯಾನಮಾಡಿ ಕೊಂಡು ಗಂಧಾದಿಗಳಿಂದ ಅಗ್ನಿಯನ್ನು ಪೂಜಿಸಿ, ತ್ರಿಯಂಬಕ ಮಂತ್ರದಿಂದ ನೂರೆಂಟು ಹೋಮಗಳನ್ನೂ 'ಗೌರೀರ್ಮಿಮಾಯ' ಎಂಬ ಮಂತ್ರದಿಂದ ನೂರೆಂಟು ಹೋಮಗಳನ್ನೂ ಮಾಡತಕ್ಕದ್ದು. ಪ್ರಥಮ ಯಾಮದಲ್ಲಿ ಆಜ್ಯವು ಹೋಮದ್ರವ್ಯವು. ಎರಡನೆಯ ಯಾಮದಲ್ಲಿ ಸಕ್ಕರೆಯು ಹೋಮದ್ರವ್ಯವಾಗಿರುವುದು. ಮೂರನೆಯ ಯಾಮದಲ್ಲಿ ತಿಲ ಮತ್ತು ಆಜ್ಯಗಳು ಹೋಮ ದ್ರವ್ಯಗಳಾಗಿರುವುವು. ನಾಲ್ಕನೆಯ ಯಾಮದಲ್ಲಿ ಪಾಯಸವು ಹೋಮ ದ್ರವ್ಯವಾವುಗಿರುವುದು. ನಾಲ್ಕು ಯಾಮಗಳ ಲ್ಲಿಯೂ ಶಾಸ್ತ್ರಕ್ಕನುಸಾರವಾಗಿ ಹೋಮವನ್ನು ಮಾಡಬೇಕು. ಬೆಳಗಾದ ಕೂಡಲೆ

ಆಜ್ಯೇನ ಪ್ರಥಮೇ ಯಾಮೇ ಶರ್ಕರಾಭಿ ರ್ದ್ವಿತೀಯಕೇ ।
ಸಾಜ್ಯೈ ಸ್ತಿಲೈಸ್ತೃತೀಯೇ ತು ಪಾಯಸೇನ ಚತುರ್ಥಕೇ ॥ ೬೮ ॥

ಏವಂ ಚತುರ್ಷು ಯಾಮೇಷು ಕುರ್ಯಾದ್ಧೋಮಂ ವಿಧಾನತಃ ।
ತತಃ ಪ್ರಭಾತೇ ಸಂಪ್ರಾಪ್ತೇ ಸ್ನಾನಾದ್ಯಂ ನಿತ್ಯಕರ್ಮ ಚ ॥ ೬೯ ॥

ಕೃತ್ವಾ ಚ ಸುಂದರೇಶಸ್ಯ ಪೂಜಾಂ ಸಮ್ಯಗ್ವಿಧಾಯ ಚ ।
ಸಾಜ್ಯೇನಾನ್ನೇನ ಮಂತ್ರಾಭ್ಯಾಂ ಪ್ರತ್ಯೇಕಂ ಸಾಧಕೋತ್ತಮಃ ॥ ೭೦ ॥

ಅಷ್ಟೋತ್ತರಶತಂ ಹುತ್ವಾ ವಹ್ನಿಕರ್ಮ ಸಮಾಪಯೇತ್ ।
ಶ್ರೋತ್ರಿಯಂ ವಿದುಷಂ ಶಾಂತಂ ಶಿವಶಾಸ್ತ್ರವಿಶಾರದಂ ॥ ೭೧ ॥

ಗುರುಂ ಸಂಕಲ್ಪ್ಯ ಮತಿಮಾನ್ ಕುರ್ಯಾತ್ತೇನೋಕ್ತಮಾದರಾತ್ ।
ತ್ರಯೋದಶಘಟಾನ್ ಶ್ವೇತವಸ್ತ್ರಯುಗ್ಮವಿಭೂಷಿತಾನ್ ॥ ೭೨ ॥

ಕ್ಷೀರೇಣ ಪರಿಪೂರ್ಣಾಂಶ್ಚ ಸ್ಥಾಪಯೇತ್ ಸ್ಥಂಡಿಲೇಷು ಚ ।
ಸುಸ್ನಿಗ್ಧೇನ ಸುಭಕ್ತೇನ ಘೃತಶಾಕಗುಡೈರಪಿ ॥ ೭೩ ॥

---

ಸ್ನಾನವನ್ನು ಮಾಡಿ, ನಿತ್ಯ ಕರ್ಮಗಳನ್ನು ಮಾಡಿಕೊಂಡು ಸುಂದರೇಶ್ವರನಿಗೆ ಪೂಜಾದಿಗಳನ್ನು ಮಾಡಿದ ನಂತರ, ಅನ್ನ ಮತ್ತು ಆಜ್ಯ ಇವುಗಳಿಂದ ನೂರೆಂಟು ಹೋಮಗಳನ್ನು ಮಾಡಿ ಹೋಮದ ಕೆಲಸವನ್ನು ಪೂರ್ತಿಮಾಡಬೇಕು.

೭೦–೭೫. ವೇದ ಮತ್ತು ಶಾಸ್ತ್ರಗಳಲ್ಲಿ ಚೆನ್ನಾಗಿ ತಿಳುವಳಿಕೆಯುಳ್ಳ ಉಪ ಶಾಂತನಾದ ಶಿವೋಪಾಸನೆಯ ಕ್ರಮವನ್ನು ತಿಳಿದಿರುವವನನ್ನು ಗುರುವನ್ನಾಗಿ ಭಾವಿಸಿ, ಅವನು ಹೇಳಿದ ಕಾರ್ಯವನ್ನು ಆದರದಿಂದ ನೆರವೇರಿಸಬೇಕು. ಹದಿ ಮೂರು ಕೊಡಗಳಿಗೆ ಹಾಲನ್ನು ತುಂಬಿ, ಅವುಗಳನ್ನು ಶುಭ್ರವಾದ ವಸ್ತ್ರಗಳಿಂದ ಅಲಂಕಾರಮಾಡಿ, ಶುದ್ಧವಾದ ಪ್ರದೇಶಗಳಲ್ಲಿ ಅವುಗಳನ್ನು ಇರಿಸಬೇಕು. ಈ ಕಲಶ ಗಳ ಮೇಲುಗಡೆಯಲ್ಲಿ ಬಿದರು ಪಾತ್ರೆಗಳಲ್ಲಿ (ಮೊರವೇ ಮೊದಲಾದವು) ಭಕ್ಷ್ಯಗಳನ್ನು ತುಂಬಿ ಇರಿಸಿ, ಶಿವನಲ್ಲಿ ಭಕ್ತಿಯುಳ್ಳವರಾದ ಉಪವಾಸದಿಂದ ಇರುವ ಬ್ರಾಹ್ಮಣರನ್ನು

|| ಶ್ರೀಃ ||

|| ಶ್ರೀ ಶಿವಾಯ ನಮಃ ||

# ಹಾಲಾಸ್ಯ ಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ

## ಏಕವಿಂಶೋಽಧ್ಯಾಯಃ

|| ಅಗಸ್ತ್ಯ ಉವಾಚ ||

ಇತ್ಥಮುಗ್ರೋ ಮಹಾಧೀರ ಸ್ಸುಂದರೇಶಶಿವಾತ್ಮಜಃ ।
ಸೋಮವಾರವ್ರತಂ ಚಕ್ರೇ ಸೋಮಸುಂದರಸನ್ನಿಧೌ || ೧ ||

ತೇನ ವ್ರತಪ್ರಭಾವೇನ ನಿಶ್ಚಲಾ ಭಕ್ತಿರುತ್ತಮಾ ।
ಶ್ರೀಮಚ್ಚರಣಯೋಶ್ಶಂಭೋ ರಭೂದುಗ್ರಮಹೀಪತೇಃ || ೨ ||

ಅನನ್ಯಲಬ್ಧಯಾ ಭಕ್ತ್ಯಾ ಕುಮಾರಂ ಸದ್ಗುಣಾನ್ವಿತಂ ।
ವೀರಪಾಂಡ್ಯ ಇತಿ ಖ್ಯಾತಂ ಜಯಂತಮಿವ ದೇವರಾಟ್ || ೩ ||

---

### ಇಪ್ಪತ್ತೊಂದನೆಯ ಅಧ್ಯಾಯವು.

೧–೨. ಅಗಸ್ತ್ಯಋಷಿಯು ಹೇಳಿದನು:— ಶಿವಪುತ್ರನಾದ ಮಹಾಧೀರನಾದ ಉಗ್ರಪಾಂಡ್ಯರಾಜನು ಸುಂದರೇಶ್ವರನ ಸನ್ನಿಧಿಯಲ್ಲಿ ಈ ಕ್ರಮದಿಂದ ಸೋಮವಾರ ವ್ರತವನ್ನು ಮಾಡಿದನು. ಇದರಿಂದ ಆ ರಾಜನಿಗೆ ಶಿವನ ಪಾದಪದ್ಮಗಳಲ್ಲಿ ದೃಢವಾದ ಮತ್ತು ಉತ್ತಮವಾದ ಭಕ್ತಿಯು ವಿಶೇಷವಾಗಿ ಉಂಟಾಯಿತು.

೩–೪. ಯಾರಿಗೂ ಉಂಟಾಗದೆ ಇರುವ ಭಕ್ತಿಯುಳ್ಳ ಆ ಉಗ್ರಪಾಂಡ್ಯ ರಾಜನು, ಜಯಂತನೆಂಬ ಮಗನನ್ನು ಇಂದ್ರನು ಪಡೆದಂತೆ, ಬಹಳ ಗುಣವಂತನಾದ

ಮಹಿಷ್ಯಾಂ ಕಾಂತಿಮತ್ಯಾಂ ಚ ಲಬ್ಧವಾನುಗ್ರಭೂಪತಿಃ ।
ಯೇಸ ಕಾಂತಿಮತೀ ಸಾ ಚ ವೀರಸೂರಿತಿ ಪಪ್ರಥೇ ॥ ೪ ॥

ಅಹೋ ಭಕ್ತಿಪ್ರಭಾವಂ ಚ ಕೋ ವಾ ವಕ್ತು ಮಿಹ ಕ್ಷಮಃ ।
ಯೇನ ದೇವಾಸುರಾದೀನಾಂ ಸಂಭವಂತಿ ವಿಭೂತಯಃ ॥ ೫ ॥

ಭಕ್ತಿರ್ಹಾಲಾಸ್ಯನಾಥಾಂಘ್ರ್ಯೋರ್ದುರ್ಲಭಾ ಖಲು ದೇಹಿನಾಂ ।
ಕಥಂ ಚಿತ್ತಂ ಲಭಂತೇ ಯೇ ತೇಷಾಂ ನೈ ನಾಸ್ತಿ ದುರ್ಲಭಂ ॥ ೬ ॥

ಭಕ್ತಿರ್ಮಾರಾಜ್ಯಮೈಶ್ವರ್ಯ ಮಿಂದ್ರತ್ವಂ ಬ್ರಹ್ಮಣಃ ಪದಂ ।
ವಿಷ್ಣುತ್ವಮಪಿ ಮುಕ್ತಿಂ ಚ ನೂನಂ ಪ್ರಾಪ್ನೋತ್ಯಸಂಶಯಃ ॥ ೭ ॥

ಕರ್ಮಣಾ ಮಶುಭಾನಾಂ ಚ ಶುಭಾನಾಂ ಚಾಪಿ ಸಂಚಯಂ ।
ಕರೋತಿ ಭಸ್ಮಸಾದ್ಭಕ್ತಿ ರ್ಭವಸ್ಯಾ ಗ್ನಿರಿವೇಂಧನಂ ॥ ೮ ॥

---

ವೀರಪಾಂಡ್ಯನೆಂದು ಹೆಸರುಳ್ಳ ಮಗನನ್ನು ಪಟ್ಟಮಹಿಷಿಯಾದ ಕಾಂತಿಮತಿಯಲ್ಲಿ ಪಡೆದನು. ಆ ಕಾಂತಿಮತಿಯೂ ಕೂಡ ವೀರಪ್ರಸೂ ಎಂದು ಮಗನಿಂದ ಪ್ರಸಿದ್ಧಿಯನ್ನು ಹೊಂದಿದಳು.

೫–೭. ಭಕ್ತಿಯ ಮಹಿಮೆಯನ್ನು ಯಾರಿಂದ ತಾನೇ ವರ್ಣಿಸಲು ಆಗುವುದು. ಭಕ್ತಿಯ ಮಹಿಮೆಯಿಂದಲೇ ದೇವತೆಗಳೂ, ಅಸುರರರೂ ಇವರೆಲ್ಲರೂ ಅಷ್ಟ ಸಿದ್ಧಿಗಳನ್ನು ಹೊಂದಿರುವರು. ಪ್ರಾಣಿಗಳಿಗೆ ಹಾಲಾಸ್ಯೇಶ್ವರನಲ್ಲಿ ಭಕ್ತಿಯು ಉಂಟಾಗುವುದು ಕಷ್ಟವು. ಹಾಲಾಸ್ಯೇಶ್ವರನಲ್ಲಿ ಭಕ್ತಿಯು ಉಂಟಾದರೆ, ಆ ದೇವ ದೇವನು ಭಕ್ತಿಯಿಂದ ಸೇವೆಯನ್ನು ಅಂಗೀಕರಿಸಿ, ರಾಜ್ಯವನ್ನೂ ಇಂದ್ರನಾಗುವಿಕೆಯನ್ನೂ ಬ್ರಹ್ಮನಸ್ಥಾನವನ್ನೂ, ವಿಷ್ಣುವಿನ ಸ್ಥಿತಿಯನ್ನೂ, ಕೊನೆಗೆ ಮುಕ್ತಿಯನ್ನೂ ಅನುಗ್ರಹಿಸುವನು. ಈ ವಿಷಯದಲ್ಲಿ ಸಂಶಯುವು ಇಲ್ಲವು.

೮–೧೧. ಹಾಲಾಸ್ಯೇಶ್ವರನಲ್ಲಿ ಉಂಟಾದ ಭಕ್ತಿಯು ಒಳ್ಳೆಯದಾದ ಅಥವಾ ಕೆಟ್ಟ ಕರ್ಮಗಳ ಸಮೂಹವನ್ನು ಅಗ್ನಿಯು ಕಟ್ಟಿಗೆಯನ್ನು ದಹಿಸುವಂತೆ ನಾಶಪಡಿಸುವುದು. ಮ್ಲೇಚ್ಛನಾದರೂ ಶಿವನಲ್ಲಿ ಭಕ್ತಿಯುಳ್ಳವನಾಗಿದ್ದರೆ, ನಾಲ್ಕು ವೇದಗಳನ್ನು ಅಧ್ಯಯನ ಮಾಡಿದವನೂ, ಅಗ್ನಿಷ್ಟೋಮವೇ ಮೊದಲಾದ ಯಜ್ಞಮಾಡಿದವನೂ ಅವನಿಗೆ ಸಮನಾಗುವುದಿಲ್ಲ. ಎಲೈ ಮುನಿಗಳಿರಾ ! ಕೇಳಿರಿ. ನಿತ್ಯನಾದ ಜೀವನ್ಮುಕ್ತಿ

ವ್ರತತ್ಯಾಗಾನ್ಮಹಾದ್ರೋಹ ಇತಿ ಜ್ಞಾತ್ವಾ ಸಮಾಚರೇತ್ ।
ಗುರೋಸ್ಸಮೀಪೇ ಕುರ್ವೀತ ವ್ರತಮೇತದ್ವ್ರತೀ ಸದಾ ॥ ೧೦೭ ॥

ಅನ್ಯಥಾ ಗುರುಹೀನಸ್ಯ ನಿಷ್ಫಲಂ ಜಾಯತೇ ವ್ರತಂ ।
ಸಂದೇಹಸ್ಸರ್ವಕಾರ್ಯೇಷು ಗುರುಹೀನಸ್ಯ ವೈ ಭವೇತ್ ॥ ೧೦೮ ॥

ತಸ್ಮಾತ್ಸರ್ವಪ್ರಯತ್ನೇನ ಗುರುಮೇವ ಸಮಾಶ್ರಯೇತ್ ।
ಅಥ ಸಂಕ್ಷೇಪತೋ ವಕ್ಷ್ಯೇ ವ್ರತಮಾಹಾತ್ಮ್ಯಮುತ್ತಮಂ ॥ ೧೦೯ ॥

ಯೇ ಚರಂತಿ ನರಾ ಭಕ್ತ್ಯಾ ಸ್ತ್ರಿಯೋ ವಾ ಮುನಿಪುಂಗವಾಃ ।
ತೇಷಾಂ ಜನ್ಮಸಹಸ್ರೇಷು ನ ಶೋಕೋ ಜಾಯತೇ ಕ್ವಚಿತ್ ॥ ೧೧೦ ॥

ನ ದಾರಿದ್ರ್ಯಂ ನ ರೋಗಶ್ಚ ಸಂತತಿಚ್ಛೇದ ಏವ ಚ ।
ಕುಲಕೋಟಿಂ ಸಮುಧೃತ್ಯ ಸ್ಥಾಪಯಂತೀಂದ್ರಸದ್ಮನಿ ॥ ೧೧೧ ॥

ಇತ್ಥಂ ಶೃಣೋತಿ ಮಾಹಾತ್ಮ್ಯಂ ಪಠ್ಯಮಾನಂ ವ್ರತಸ್ಯ ಯಃ ।
ಶ್ರಾವಯೇದ್ಭಕ್ತಿಸಂಯುಕ್ತೋ ರುದ್ರಸ್ಯಾನುಚರೋ ಭವೇತ್ ॥ ೧೧೨ ॥

---

ಬರುವುದೆಂದು ತಿಳಿದು ತಪ್ಪದೆ ವ್ರತವನ್ನು ಆಚರಿಸಬೇಕು. ವ್ರತವನ್ನು ಆಚರಿಸುವವನು ಯಾವಾಗಲೂ ಈ ವ್ರತವನ್ನು ಗುರುವಿನ ಎದುರಿನಲ್ಲಿಯೇ ಆಚರಿಸಬೇಕು. ಗುರುವಿಲ್ಲದಿದ್ದರೆ ಯಾವ ಕಾರ್ಯವೇ ಆದಾಗ್ಯೂ ಆಚರಿಸುವ ಕಾಲದಲ್ಲಿ ಸಂದೇಹವುಂಟಾಗಿ ಅದನ್ನು ನಿಲ್ಲಿಸಬೇಕಾಗಿರುವುದರಿಂದ ಗುರುವಿಲ್ಲದಿದ್ದರೆ ಈ ವ್ರತವನ್ನು ಮಾಡಿದರೂ ಫಲವಿಲ್ಲವು. ಆದ್ದರಿಂದ ಪ್ರಯತ್ನಪೂರ್ವಕವಾಗಿ ಗುರುವನ್ನು ಆಶ್ರಯಿಸಬೇಕು. ಇನ್ನು ಮುಂದೆ ಸಂಕ್ಷೇಪವಾಗಿ ಈ ವ್ರತದ ಮಹಾತ್ಮೆಯನ್ನು ಹೇಳುವೆನು.

೧೧೦–೧೧೨. ಪುರುಷರಾಗಲಿ, ಹೆಂಗಸರಾಗಲಿ ಭಕ್ತಿಯಿಂದ ಈ ವ್ರತವನ್ನು ಆಚರಿಸಿದವರು ಸಾವಿರ ಜನ್ಮಗಳಲ್ಲಿಯಾದರೂ ಯಾವ ವಿಧವಾದ ದುಃಖವನ್ನೂ ಅನುಭವಿಸುವುದಿಲ್ಲ, ಇವರಿಗೆ ಬಡತನವು ಬರುವುದಿಲ್ಲ. ರೋಗಭಯವು ಉಂಟಾಗುವುದಿಲ್ಲ. ಇವರ ಸಂತತಿಯು ನಿಂತುಹೋಗುವುದಿಲ್ಲ. ಈ ವ್ರತದ ಆಚರಣೆಯಿಂದ

ಕ್ರಿಯಮಾಣಂ ತಥಾ ಪಶ್ಯೇದ್ವ್ರತಮೇತಚ್ಛಿವಪ್ರಿಯಂ ।
ಭಕ್ತಿಯುಕ್ತೋ ನರಶ್ಶ್ರುತ್ವಾ ಯಶ್ಚೈವಾನುಪ್ರಮೋದತೇ॥ ॥ ೧೧೩ ॥

ಮತಿಂ ದದಾತಿ ಯಶ್ಚಾಪಿ ವ್ರತಸ್ಯ ಕರಣಾಯ ಚ ।
ಸ್ವರ್ಗೇ ವಸಂತಿ ತೇ ಸರ್ವೇ ಯಾವದಿಂದ್ರಾಶ್ಚತುರ್ದಶ ॥ ೧೧೪ ॥

ಇತಿ ಶ್ರೀ ಸ್ಕಾಂದೇ ಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ
ಮಾಹಾತ್ಮ್ಯೇ ಸೋಮವಾರೋದ್ಯಾಪನಂ ನಾಮ
ವಿಂಶೋಽಧ್ಯಾಯಃ

---

ಉಂಟಾದ ಮಹಿಮೆಯು ಇವರ ಕುಲಕೋಟಿಯನ್ನು ಉದ್ಧರಿಸಿ ಇಂದ್ರನ ಮನೆಯಲ್ಲಿರಿಸುವುದು. ಈ ವ್ರತದ ಮಹಿಮೆಯನ್ನು ಭಕ್ತಿಯಿಂದ ಓದುವವನೂ, ಕೇಳುವವನೂ ರುದ್ರನ ಅನುಚರನಾಗುವನು.

೧೧೩–೧೧೪. ಈ ವ್ರತವನ್ನು ಆಚರಿಸುವುದನ್ನು ನೋಡುವವನೂ, ಭಕ್ತಿಯಿಂದ ಶಿವಪ್ರಿಯವಾದ ಈ ವ್ರತವನ್ನು ಕೇಳಿ ಆಚರಿಸಲು ಅನುಮೋದಿಸುವವನೂ ವ್ರತವನ್ನು ಆಚರಿಸಲು ದೃಢವಾದ ನಿಶ್ಚಯವನ್ನು ಉಂಟುಮಾಡುವವನೂ, ಇವರೆಲ್ಲರೂ ಹದಿನಾಲ್ಕು ಜನ ಇಂದ್ರರು ಇರುವವರೆಗೂ ಸ್ವರ್ಗದಲ್ಲಿ ವಾಸ ಮಾಡುವರು.

ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯ ಮಹಾತ್ಮ್ಯೆಯಲ್ಲಿ
ಸೋಮವಾರ ವ್ರತೋದ್ಯಾಪನವೆಂದು ಹೆಸರುಳ್ಳ
ಇಪ್ಪತ್ತನೆಯ ಅಧ್ಯಾಯವು ಮುಗಿದುದು.

ಘೃತಕಂಬಳಪೂಜಾಯಾಂ ಘೃತದೀಪಪ್ರದಾನಕಂ ।
ಸರ್ವೇಷಾಂ ನಿಯಮಾನಾಂ ಚ ಸ್ವರ್ಣದಾನಮಥಾಪಿ ವಾ　　॥ ೯೭ ॥

ಗೋದಾನಂ ವಾ ವ್ರತೀ ಕುರ್ಯಾದ್ವ್ರತಸ್ಯ ಫಲಸಿದ್ಧಯೇ ।
ಏವಂ ವಿತ್ತಾನುಸಾರೇಣ ಕುರ್ಯಾದುದ್ಯಾಪನಂ ತಥಾ　　॥ ೯೮ ॥

ಉದ್ಯಾಪನೇನ ಸಿದ್ಧಿಸ್ಸ್ಯಾನ್ನಾನ್ಯಥಾ ಮುನಿಸತ್ತಮಾಃ ।
ಏವಮುದ್ಯಾಪನವಿಧಿಂ ನಿರ್ವರ್ತ್ಯ ನಿಯಮೀ ಯಮೀ　　॥ ೯೯ ॥

ಪಾರಣಾಂ ಚ ತತಃ ಕುರ್ಯಾದ್ಬಂಧುಭಿಶ್ಚ ಸಮಂ ದ್ವಿಜೈಃ ।
ಏವಂ ವಿಧಿಸಮಾಯುಕ್ತ ಸ್ಸ್ವರ್ಗಲೋಕಸುಪೂಜಿತಃ　　॥ ೧೦೦ ॥

---

ದಾನ ಮಾಡುವುದು ಉತ್ತಮವು. ಫಲಗಳ ನಿಯಮಕ್ಕಾಗಿ ಚಿನ್ನದ ಫಲದಾನವು ಪ್ರಶಸ್ತವು. ಆಜ್ಯ ಮತ್ತು ಕಂಬಳಿ ಇವುಗಳ ನಿಯಮಕ್ಕಾಗಿ ಆಜ್ಯವನ್ನು ಹಾಕಿ ಹತ್ತಿಸಿದ ದೀಪ ದಾನವು ಉತ್ತಮವು. ಇವೆಲ್ಲಕ್ಕೂ ಬದಲಾಗಿ ಸುವರ್ಣ ದಾನ ಮಾಡುವುದು ಪ್ರಶಸ್ತವೆಂದು ಮತಾಂತವಿರುವುದು.

೯೮-೧೦೦. ವ್ರತಾಚರಣೆಯನ್ನು ಮಾಡಿದವನು ವ್ರತದ ಫಲವು ಸಿದ್ಧಿಸುವುದಕ್ಕಾಗಿ ಗೋದಾನವನ್ನು ಮಾಡಬೇಕು. ತನ್ನ ದ್ರವ್ಯಾನುಕೂಲತೆಗೆ ಅನುಸಾರವಾಗಿ ಈ ಪ್ರಕಾರದಿಂದ ಉದ್ಯಾಪನೆಯನ್ನು ಮಾಡಬೇಕು. ಎಲೈ ಮುನಿಗಳೇ ಕೇಳಿರಿ, ಯಾವ ವ್ರತವೇ ಆದಾಗ್ಯೂ ಉದ್ಯಾಪನೆಯನ್ನು ಮಾಡಿದರೆ ಅದರ ಫಲ ಪ್ರಾಪ್ತಿಯೇ ಹೊರತು ಅನ್ಯಥಾ ಫಲವು ಉಂಟಾಗುವುದಿಲ್ಲ. ವ್ರತವನ್ನು ಆಚರಿಸಿದವನು ಈ ರೀತಿಯಿಂದ ಜಿತೇಂದ್ರಿಯನಾಗಿ ಉದ್ಯಾಪನೆಯ ಕರ್ಮವನ್ನು ಮುಗಿಸಿದ ನಂತರ ತನ್ನ ಬಂಧುಗಳು ಮತ್ತು ಬ್ರಾಹ್ಮಣರ ಜೊತೆಯಲ್ಲಿ ಪಾರಣೆಯನ್ನು ಮಾಡಬೇಕು. ಈ ಕ್ರಮದಿಂದ ಸೋಮವಾರ ವ್ರತವನ್ನೂ ಉದ್ಯಾಪನೆಯನ್ನೂ ಮಾಡಿದವನು, ಈ ಲೋಕದಲ್ಲಿ ಎಲ್ಲರಿಂದಲೂ ಗೌರವವನ್ನು ಹೊಂದಿ, ಇರುವನು. ಪರಲೋಕದಲ್ಲಿ ನೂರುಕೋಟಿ ಯುಗಗಳವರೆಗೂ ಭೋಗವನ್ನು ಅನುಭವಿಸುತ್ತಾ ಅಪ್ಸರಸ್ತ್ರೀಯರೊಡನೆ, ತನ್ನ ಇಚ್ಛೆ ಬಂದ ಹಾಗೆ ಯಾವಾಗಲೂ ಸಂಚರಿಸುತ್ತಿರುವನು. ಕೊನೆಗೆ ಸೋಮವಾರದ ಮಹಿಮೆಯಿಂದ ಮುಕ್ತಿಯನ್ನು ಹೊಂದುವನು. ಈ ವ್ರತವನ್ನೂ ಉದ್ಯಾಪನೆಯನ್ನೂ ಮೊದಲು ಬ್ರಹ್ಮನೂ, ಕೃಷ್ಣನೂ ಕೂಡ ಮಾಡಿರುವರು.

ಸ ಭೋಗಾನ್ ಭುಂಜತೇ ಲೋಕೇ ಶತಕೋಟಿಯುಗಾಂತರಂ ।
ಅಪ್ಸರೋಭಿರ್ನಿಷೇವಿತಸ್ಸನ್ ರಮತೇ ಸ್ವೇಚ್ಛಯಾನಿಶಂ ॥ ೧೦೧ ॥

ಮಾಹಾತ್ಮ್ಯಾತ್ ಸೋಮವಾರಸ್ಯ ಚಾಂತೇ ಮುಕ್ತಿಮವಾಪ್ನುಯಾತ್ ।
ಪೂರ್ವಂ ಕೃಷ್ಣೇನ ಸಂಚೀರ್ಣಂ ತಥಾ ವೈ ಪದ್ಮಯೋನಿನಾ ॥ ೧೦೨ ॥

ದೇವದಾನವಗಂಧರ್ವಪಿಶಾಚೋರಗರಾಕ್ಷಸೈಃ ।
ಮುನಿಭಿ ರ್ಮನುಭಿ ಸ್ತದ್ವತ್ಸ್ವಾಯಂಭುವಮುಖೈರಪಿ ॥ ೧೦೩ ॥

ಅನ್ಯೈಶ್ಚ ಮಾನವೈ ಶ್ಶುದ್ಧೈ ರಾಸ್ತಿಕೈ ರ್ಧರ್ಮತತ್ಪರೈಃ ।
ನ ದೇಯಂ ದುಷ್ಟಚಿತ್ತಾಯ ಶ್ರದ್ಧಾಹೀನಾಯ ನ ಕ್ವಚಿತ್ ॥ ೧೦೪ ॥

ಶಾಸ್ತ್ರಧರ್ಮದ್ವಿಷೇ ನೈವ ವಿಡಂಬಕಜನಾಯ ಚ ।
ಆಚಾರ್ಯವೇದವಿಪ್ರಾಣಾಂ ಸತೀನಾಂ ವ್ರತಶಾಲಿನಾಂ ॥ ೧೦೫ ॥

ವಹ್ನಿದೇವಸುತೀರ್ಥಾನಾಂ ನಿಂದಕಾಯ ನ ವೈ ಕ್ವಚಿತ್ ।
ಕದಾಚಿದಪಿ ನ ತ್ಯಾಜ್ಯಂ ವ್ರತಂ ನಾಮ ಸುದುರ್ಲಭಂ ॥ ೧೦೬ ॥

---

೧೦೧–೧೦೩. ದೇವತೆಗಳೂ, ದಾನವರೂ, ಗಂಧರ್ವರೂ, ಪಿಶಾಚರೂ, ಉರಗಗಳೂ, ರಾಕ್ಷಸರೂ ಸ್ವಾಯಂಭುವನೇ ಮೊದಲಾದ ಮನುಗಳು ಇತರ ಮುನಿಗಳೂ ಕೂಡ ವ್ರತವನ್ನೂ, ಉದ್ಯಾಪನೆಯನ್ನೂ ಮಾಡಿರುವರು. ಧರ್ಮಾತ್ಮರಾದ ಮನುಷ್ಯರೂ, ಪರಿಶುದ್ಧರಾದ ಆಸ್ತಿಕರೂ ಕೂಡ ಈ ವ್ರತವನ್ನು ಆಚರಿಸುವರು.

೧೦೪–೧೦೫. ಈ ವ್ರತಾಚರಣೆಯ ಕ್ರಮವನ್ನು ದುಷ್ಟವಾದ ಮನಸ್ಸುಳ್ಳವನಿಗೂ, ಭಕ್ತಿಯಿಲ್ಲದವನಿಗೂ, ಗುರುವನ್ನೂ, ವೇದವನ್ನೂ, ಶಾಸ್ತ್ರಧರ್ಮಗಳನ್ನೂ, ದ್ವೇಷಮಾಡುವವನಿಗೂ,ಉಪದೇಶ ಮಾಡಬಾರದು. ವೇದಾಭ್ಯಾಸಮಾಡುವ ಬ್ರಾಹ್ಮಣನನ್ನೂ, ಪತಿವ್ರತೆಯನ್ನೂ ವ್ರತವೇ ಮೊದಲಾದ ನಿಯಮವಂತರನ್ನೂ, ಅಗ್ನಿ, ದೇವತೆ, ತೀರ್ಥ, ಇವರನ್ನು ಹಾಸ್ಯಮಾಡುತ್ತಾ ನಗುವವನಿಗೂ ತಿಳಿಸಬಾರದು.

೧೦೬–೧೦೯. ವ್ರತವೆಂಬುದು ಆಚರಿಸಲು ಸುಲಭವಾದುದಲ್ಲವು. ಆದ್ದರಿಂದ ಇದನ್ನು ಆಚರಿಸಲು ಪ್ರಾರಂಭಿಸಿದನಂತರ ಬಿಟ್ಟರೆ ಬಹಳ ಪಾತಕವು

ಮ್ಲೇಚ್ಛೋಽಪಿ ವಾ ಯದಿ ಭವೇತ್ ಭವಭಕ್ತಿಸಮನ್ವಿತಃ ।
ನ ತತ್ಸಮಶ್ಚತುರ್ವೇದೀ ನಾಗ್ನಿಷ್ಟೋಮಾದಿಯಜ್ಞಕೃತ್ ॥ ೯ ॥

ಆದಿಮಧ್ಯಾಂತರಹಿತೇ ಜೀವನ್ಮುಕ್ತಿಪುರೇಶ್ವರೇ ।
ಸದಾ ಮನೀಷಿಭಿಃ ಕಾರ್ಯಾ ಭಕ್ತಿರೇವ ಮುನೀಶ್ವರಾಃ ॥ ೧೦ ॥

ಅಪಿ ಪಾಪಾನಿ ಘೋರಾಣಿ ಸದಾ ಕುರ್ವನ್ನರೋ ಯದಿ ।
ನ ಲಿಪ್ಯತೇ ಸರ್ವಪಾಪೈಃ ಭಕ್ತ್ಯಾ ಯುಕ್ತಸ್ತು ಶಂಕರೇ ॥ ೧೧ ॥

ಶಿವಭಕ್ತ್ಯಾ ಮಹಾತ್ಮಾನೋ ಮುಚ್ಯಂತೇ ತತ್ತು ನಾದ್ಭುತಂ ।
ಅಪಿ ದುಷ್ಕೃತಕರ್ಮಾಣೋ ಮುಚ್ಯಂತೇ ಭಕ್ತಿಲೇಶತಃ ॥ ೧೨ ॥

ಸಕೃತ್ಪೂಜಯತೇ ಯಸ್ತು ಭಕ್ತ್ಯಾ ಹಾಲಾಸ್ಯನಾಯಕಂ ।
ಅಶ್ವಮೇಧಾ ದಧಿಕಂ ಫಲಂ ಪ್ರಾಪ್ನೋತಿ ಸ ಧ್ರುವಂ ॥ ೧೩ ॥

ಕುರುಕ್ಷೇತ್ರೇ ನಿವಸತಾಂ ಯತ್ಫಲಂ ನೈಮಿಶೇ ಸದಾ ।
ಪ್ರಯಾಗೇ ಚ ಪ್ರಭಾಸೇ ಚ ಗಂಗಾಸಾಗರಸಂಗಮೇ ॥ ೧೪ ॥

---

ಪುರಿಗೆ ಅಧಿಪನಾದ ಹಾಲಾಸ್ಯೇಶ್ವರನಲ್ಲಿ ಬುದ್ಧಿವಂತರಾದವರು ಭಕ್ತಿಯನ್ನು ಇಡಬೇಕು. ಮನುಷ್ಯನು (ಪಾಪಕರ್ಮಗಳನ್ನು) ಕೆಟ್ಟ ಕೆಲಸಗಳನ್ನು ಮಾಡುವ ಸ್ವಭಾವದವನಾದರೂ ಶಿವನಲ್ಲಿ ಅವನು ಭಕ್ತಿಯುಳ್ಳವನಾಗಿದ್ದರೆ, ತನ್ನ ಕೆಟ್ಟ ಕೆಲಸ ಮಾಡುವ ಸ್ವಭಾವವನ್ನು ಬಿಟ್ಟು ತಾನು ಮಾಡಿದ ದುಷ್ಕರ್ಮಗಳಿಂದ ಬಿಡುಗಡೆಯನ್ನು ಹೊಂದುವನು.

೧೨-೧೩. ಶಿವನಲ್ಲಿ ಭಕ್ತಿಯಿಂದ ಇರುವ ಮಹನೀಯರು ಮುಕ್ತರಾಗುವುದು ಆಶ್ಚರ್ಯವಲ್ಲ. ಕೆಟ್ಟ ಕೆಲಸ ಮಾಡುವವರು ಶಿವನಲ್ಲಿ ಕೊಂಚಮಟ್ಟಿನ ಭಕ್ತಿಯನ್ನು ಹೊಂದಿದ ಮಾತ್ರಕ್ಕೆ ಮುಕ್ತರಾಗುವುದು ಆಶ್ಚರ್ಯಕರವಾಗಿರುವುದು. ಹಾಲಾಸ್ಯೇಶ್ವರನನ್ನು ಒಂದು ಸಾರಿಯಾದರೂ ಭಕ್ತಿಯಿಂದ ಪೂಜಿಸಿದವನೂ ಕೂಡ ಅಶ್ವಮೇಧವೇ ಮೊದಲಾದ ಯಜ್ಞಗಳ ಫಲವನ್ನು ಹೊಂದುವುದು ನಿಶ್ಚಯವು.

೧೪-೧೭. ಕುರುಕ್ಷೇತ್ರ, ನೈಮಿಶಾರಣ್ಯ, ಪ್ರಯಾಗ, ಪ್ರಭಾಸಕ್ಷೇತ್ರ, ಗಂಗಾ, ಸಮುದ್ರಗಳ ಸಂಗಮ ಸ್ಥಾನ. ರುದ್ರಕೋಟಿಕ್ಷೇತ್ರ, ಗಯಾಕ್ಷೇತ್ರ, ಸಾಲಿಗ್ರಾಮ,

ರುದ್ರಕೋಟ್ಯಾಂ ಗಯಾಯಾಂ ಚ ಸಾಲಗ್ರಾಮೇಮರೇಶ್ವರೇ ।
ಪುಷ್ಕರೇ ಭಾರಭೂತೇಶೇ ಗೋಕರ್ಣೇ ಮಂಡಲೇಶ್ವರೇ ॥ ೧೫ ॥

ಕಾಶ್ಯಾಂ ಶ್ರೀಪರ್ವತಕ್ಷೇತ್ರೇ ಶ್ರೀಮದ್ವ್ಯಾಘ್ರಪುರೇ ವರೇ ।
ಶ್ರೀಮದ್ದಕ್ಷಿಣಕೈಲಾಸಪ್ರಮುಖೇಷ್ವಖಿಲೇಷ್ವಪಿ ॥ ೧೬ ॥

ತತ್ಫಲಂ ದಿವಸೇನೈವ ಹಾಲಾಸ್ಯಕ್ಷೇತ್ರವಾಸಿನಾಂ ।
ಭವಿಷ್ಯತಿ ನ ಸಂದೇಹ ಸ್ಸತ್ಯವಾದೀ ಯತೋ ಗುಹಃ ॥ ೧೭ ॥

ಹಾಲಾಸ್ಯೇಶಾರ್ಚನಾತ್ಪುಣ್ಯ ಮಧಿಕಂ ಭುವನತ್ರಯೇ ।
ನಾಸ್ತೀತಿ ಮತ್ವಾ ಮತಿಮಾನ್ಯಥಾಶಕ್ತ್ಯಾ ತಮರ್ಚಯೇತ್ ॥ ೧೮ ॥

ಸರ್ವತ್ರ ಯಾನಿ ತೀರ್ಥಾನಿ ಪುಣ್ಯಾನ್ಯಾಯತನಾನಿ ಚ ।
ಶ್ರೀಹಾಲಾಸ್ಯೇಶ್ವರೇ ಲಿಂಗೇ ವಸಂತ್ಯೇವ ನ ಸಂಶಯಃ ॥ ೧೯ ॥

---

ಅಮರೇಶ್ವರಕ್ಷೇತ್ರ, ಪುಷ್ಕರಕ್ಷೇತ್ರ, ಭಾರಭೂತೇಶ್ವರಕ್ಷೇತ್ರ, ಗೋಕರ್ಣ, ಮಂಡಲೇಶ್ವರಕ್ಷೇತ್ರ, ಕಾಶಿ, ಶ್ರೀಪರ್ವತ, ಚಿದಂಬರಕ್ಷೇತ್ರ, ದಕ್ಷಿಣ ಕೈಲಾಸಕ್ಷೇತ್ರ, ಇವೇ ಮೊದಲಾದ ಕ್ಷೇತ್ರಗಳಲ್ಲಿ ವಾಸಮಾಡುವ ಫಲವು ಹಾಲಾಸ್ಯ ಕ್ಷೇತ್ರದಲ್ಲಿ ಒಂದು ದಿನ ವಾಸಮಾಡುವುದರಿಂದ ಉಟಾಗುವುದು. ಇದರಲ್ಲಿ ಸಂಶಯವಿಲ್ಲ ಎಂದು ಸತ್ಯವನ್ನು ಹೇಳುವ ಕುಮಾರಸ್ವಾಮಿಯು ಹೇಳಿರುವನು.

೧೮–೨೩. ಬುದ್ಧಿವಂತನು ಹಾಲಾಸ್ಯೇಶ್ವರನ ಪೂಜೆಗಿಂತಲೂ ಹೆಚ್ಚು ಫಲಕಾರಿಯಾದ ಇನ್ನೊಂದು ಸೇವೆಯು ಮೂರು ಲೋಕದಲ್ಲಿಯೂ ಇಲ್ಲವೆಂದು ತಿಳಿದುಕೊಂಡು ತನ್ನ ಶಕ್ತ್ಯನುಸಾರವಾಗಿ ಪೂಜಿಸಬೇಕು. ಭೂಮಿಯಲ್ಲಿ ಪವಿತ್ರಕರಗಳಾದ ತೀರ್ಥಗಳೂ, ಕ್ಷೇತ್ರಗಳೂ ಎಲ್ಲವೂ ಈ ಹಾಲಾಸ್ಯಲಿಂಗದಲ್ಲಿರುವುವು. ಹಾಲಾಸ್ಯೇಶ್ವರ ಲಿಂಗವನ್ನು ಭಕ್ತಿಯಿಂದ ಒಂದು ಸಾರಿಯಾದರೂ ಪೂಜಿಸಿದವನು ಎಲ್ಲಾ ತೀರ್ಥಗಳ ಮತ್ತು ಕ್ಷೇತ್ರಯಾತ್ರೆಯ ಫಲವನ್ನು ಹೊಂದುವನು. ಎಲ್ಲಾ ಯಜ್ಞಗಳಲ್ಲಿಯೂ

ಆರಾಧಯತಿ ತಲ್ಲಿಂಗಂ ಭಕ್ತಿಭಾವೇನ ಯಸ್ಸಕೃತ್ ।
ಸ ಸ್ನಾತ ಸ್ಸರ್ವತೀರ್ಥೇಷು ಸರ್ವಯಜ್ಞೇಷು ದೀಕ್ಷಿತಃ ॥ ೨೦ ॥

ಇಹ ಭುಕ್ತ್ವಾ ಮಹಾಭೋಗಾನಂತೇ ಸಾಯುಜ್ಯ ಮಾಪ್ನುಯಾತ್ ।
ಚತುರ್ದಶ್ಯಾ ಮಥಾ ಷ್ಟಮ್ಯಾಂ ಪೌರ್ಣಮಾಸ್ಯಾಂ ವಿಶೇಷತಃ ॥ ೨೧ ॥

ಅಮಾಯಾಂ ಚ ವ್ಯತೀಪಾತೇ ಗ್ರಹಣೇ ಸೋಮಸೂರ್ಯಯೋಃ ।
ಸಂಕ್ರಾಂತ್ಯಾದಿಷು ಕಾಲೇಷು ಮಹಾಪುಣ್ಯಪ್ರದೇಷು ಚ ॥ ೨೨ ॥

ಸೋಮವಾರೇ ಚ ಯೋ ಭಕ್ತ್ಯಾ ಪೂಜಯೇತ್ ಸೋಮಸುಂದರಂ ।
ಸ ಮಹಾಪಾತಕಾನ್ಮುಕ್ತೋ ಮಹತ್ಪದ ಮವಾಪ್ನುಯಾತ್ ॥ ೨೩ ॥

ಏತೇಷು ಪುಣ್ಯಕಾಲೇಷು ವಿಶೇಷಾ ದುಗ್ರಭೂಪತಿಃ ।
ಶಂಭೋಃ ಕೃತ್ವಾ ತು ವಿವಿಧಾಂ ಪೂಜಾಂ ಪೂರ್ಣಮನೋರಥಃ ॥ ೨೪ ॥

ಸದಾ ಸರ್ವಾನರೀನ್ ಜಿತ್ವಾ ಧನದೇನ ಸಮೋಽರ್ಥಿನಾಂ ।
ಪುತ್ರೇಣ ವೀರಪಾಂಡ್ಯೇನ ಸಹಿತ ಶ್ಚಿರಮೇಧತೇ । ॥ ೨೫ ॥

---

ದೀಕ್ಷೆಯನ್ನು ವಹಿಸುವನು. ಇಲ್ಲಿ ಎಲ್ಲಾ ವಿಧವಾದ ಭೋಗಗಳನ್ನು ಅನುಭವಿಸಿ, ಕೊನೆಯಲ್ಲಿ ಶಿವನ ಸಾಯುಜ್ಯವನ್ನು ಅವನು ಹೊಂದುವನು.

೨೧–೨೩. ಚತುರ್ದಶಿ, ಅಷ್ಟಮಿ, ಪೂರ್ಣಿಮಾ, ಅಮಾವಾಸ್ಯಾ, ವ್ಯತೀಪಾತದಿಂದ ಕೂಡಿರುವ ದಿವಸ, ಚಂದ್ರಗ್ರಹಣದ ದಿವಸ, ಸೂರ್ಯಗ್ರಹಣದ ದಿವಸ, ಇವೇ ಮೊದಲಾದ ಬಹಳ ಪುಣ್ಯಕರವಾದ ಕಾಲಗಳಲ್ಲಿಯೂ, ಸೋಮವಾರದ ದಿವಸವೂ, ಭಕ್ತಿಯಿಂದ ಸೋಮಸುಂದರೇಶ್ವರನನ್ನು ಪೂಜಿಸಿದವನು ಮಹಾಪಾತಕಗಳಿಂದ ಮುಕ್ತನಾಗಿ, ಉತ್ತಮವಾದ ಪದವಿಯನ್ನು ಹೊಂದುವನು.

೨೪–೨೬. ಉಗ್ರಪಾಂಡ್ಯರಾಜನು ಈ ಪ್ರಕಾರವಾದ ಪುಣ್ಯಕಾಲಗಳಲ್ಲಿ ಹಾಲಾಸ್ಯೇಶ್ವರನ ಪೂಜೆಯನ್ನು ಭಕ್ತಿಯಿಂದ ಅತಿಶಯವಾಗಿ ಆಚರಿಸಿದನು. ಅವನ ಇಷ್ಟಗಳೆಲ್ಲವೂ ನೆರವೇರಿದವು. ಅವನು ಶತ್ರುಗಳನ್ನು ಯಾವಾಗಲೂ ಜಯಿಸುತ್ತಾ, ಯಾಚಕರ ವಿಷಯದಲ್ಲಿ ಕುಬೇರನಿಗೆ ಸಮನಾಗಿರುತ್ತಾ, ವೀರಪಾಂಡ್ಯನೆಂಬ ಪುತ್ರನೊಡನೆ ಸಂತೋಷದಿಂದ ದಿನೇ ದಿನೇ ಅಭಿವೃದ್ಧಿಯನ್ನು ಹೊಂದುತ್ತಿದ್ದನು. ಹೀಗೆ

ಏವ ಮುಗ್ರಮಹೀಪಾಲೇ ಮಹೀಂ ಶಾಸತಿ ಸಾದರಂ ।
ಅನಾವೃಷ್ಟಿಃ ಪುನರಭೂ ತ್ಪ್ರಾಣಿನಾಮತಿದಾರುಣಾ ॥ ೨೬ ॥

ದ್ವಿಜಾ ನಾಹೂಯ ಪಪ್ರಚ್ಛ ವೃಷ್ಟ್ಯಭಾವ ನಿದಾನಕಂ ।
ಉಗ್ರಃ ಪ್ರತಾಪೀ ಭೂಪಾಲ ಸ್ತೇಪ್ಯೂಚು ಸ್ತಸ್ಯ ಕಾರಣಂ ॥ ೨೭ ॥

ಗ್ರಹಾ ಸ್ಸರ್ವೇ ರವಿಮುಖಾ ವಕ್ರಶೀಲಾಶ್ಚ ದುಸ್ಸ್ಥಿತಾಃ ।
ತಸ್ಮಾದನಾವೃಷ್ಟಿ ರಭೂದಿತಿ ಮನ್ಯಾಮಹೇ ವಯಂ ॥ ೨೮ ॥

ಇತ್ಯುಕ್ತ್ವಾ ನುಜ್ಞಯಾ ತಸ್ಯ ವಿಪ್ರಾ ದೇಶಾಂತರಂ ಯಯುಃ ।
ಧಾನ್ಯಾಭಾವಾ ತ್ಪ್ರಯಾತೇಷು ವಿಪ್ರೇಷು ಧರಣೀಪತಿಃ ॥ ೨೯ ॥

ಅವಾಪ ಚಿಂತಾಂ ಮಹತೀಂ ಮಂತ್ರಿಭಿಸ್ತು ನಿರಂತರಂ ।
ಧನಿನೋ ಯೇ ದ್ವಿಜಾ ದೇವಾ ನ್ಯಜಂತಿ ವಿವಿಧಾನ್ಯದಾ ॥ ೩೦ ॥

---

ಉಗ್ರಪಾಂಡ್ಯರಾಜನು ಆದರದಿಂದ ರಾಜ್ಯಪರಿಪಾಲನೆಯನ್ನು ಮಾಡುತ್ತಿರುವಾಗ ಪ್ರಾಣಿಗಳಿಗೆ ಬಹಳ ಹಿಂಸೆಯನ್ನುಂಟುಮಾಡುವ ಕ್ರೂರವಾದ ಅನಾವೃಷ್ಟಿಯು ಪ್ರಾಪ್ತವಾಯಿತು.

೨೭-೨೮. ಪರಾಕ್ರಮಶಾಲಿಯಾದ ರಾಜನು ಬ್ರಾಹ್ಮಣರನ್ನು ಬರಮಾಡಿಕೊಂಡು "ಮಳೆಯಾಗದಿರಲು ಕಾರಣವೇನು" ಎಂದು ಪ್ರಶ್ನೆಮಾಡಿದನು. ಅವರು "ಗ್ರಹಗಳೆಲ್ಲವೂ ಸೂರ್ಯನಿಗೆ ಎದುರಾಗಿ ವಕ್ರಗತಿಯಿಂದ ಸಂಚರಿಸುತ್ತಿರುವರು. ಗ್ರಹಗಳ ಗತಿಯು ದುಷ್ಟವಾಗಿರುವುದರಿಂದ ಈ ಅನಾವೃಷ್ಟಿಯು ಬಂದಿರುವುದು ಎಂದು ನಮಗೆ ತಿಳಿಯುವುದು" ಎಂದು ಹೇಳಿ ರಾಜನ ಅನುಜ್ಞೆಯಿಂದ ಆ ದೇಶವನ್ನು ಬಿಟ್ಟು ಬೇರೆಯ ದೇಶಕ್ಕೆ ಹೊರಟುಹೋದರು.

೨೯-೩೩. ಧಾನ್ಯವಿಲ್ಲದಿರುವುದರಿಂದ ಬ್ರಾಹ್ಮಣರು ಹೊರಟುಹೋದದ್ದನ್ನು ನೋಡಿ, ರಾಜನು ತನ್ನ ಮಂತ್ರಿಗಳೊಡನೆ ಯಾವಾಗಲೂ ಯೋಚನೆಯನ್ನು ಮಾಡುತ್ತಿದ್ದನು. "ಧನವಂತರಾದವರು ಅನೇಕ ವಿಧರಾಗಿರುವ ಬ್ರಾಹ್ಮಣರನ್ನೂ, ದೇವತೆಗಳನ್ನೂ ಭಕ್ತಿಯಿಂದ ಪೂಜಿಸಿದಾಗ ಮಳೆಯು ಬರುವುದು ಎಂದು ಹಿಂದಿನವರು ಹೇಳುತ್ತಿದ್ದರು. ನನ್ನ ದೇಶದಲ್ಲಿ ಧನವೂ, ಧಾನ್ಯವೂ ಸಿಕ್ಕುವುದಿಲ್ಲ. ಹೀಗಿರುವಾಗ ಮಳೆಯು ಬರದಿರುವುದಕ್ಕೆ ತಕ್ಕ ಪ್ರತೀಕಾರವನ್ನು ನಾನು ಹೇಗೆ ಮಾಡಲಿ,

ತದಾ ವರ್ಷಂತಿ ಮೇಘಾಶ್ಚ ಕಥಯಂತಿ ಪುರಾವಿದಃ ।
ಮದೀಯೇ ದೇಶಮಧ್ಯೇ ತು ಧನಂ ಧಾನ್ಯಂ ಚ ದುರ್ಲಭಂ　　॥ ೩೧ ॥

ಕಥಂ ಚ ಪ್ರಕ್ರಿಯಾಂ ಕರ್ತುಂ ಶಕ್ತೋಽಹಂ ವೃಷ್ಟಿಸಾಧನೇ ।
ಸುಮೀನಾಕ್ಷೀಸುಂದರೇಶೌ ಭಕ್ತಕಲ್ಪಮಹೀರುಹೌ　　॥ ೩೨ ॥

ತಯೋ ರನುಗ್ರಹೋ ಯತ್ರ ತತ್ರ ಶೋಕೋ ನ ವಿದ್ಯತೇ ।
ಏವಮಾರ್ತೋ ಲಪನ್ನೇವ ಶೇತೇ ಕೇವಲ ಭೂತಲೇ　　॥ ೩೩ ॥

ಭಕ್ತಾನುಕಂಪೀ ದೇವೇಶಃ ಸ್ವಪ್ನ ಏವಂ ತಮಬ್ರವೀತ್ ।
ಆಶ್ರಿತಾನಾಂ ಚ ಸೇನಾನಾಂ ತ್ವದೀಯಾನಾಂ ಚ ರಕ್ಷಣೇ　　॥ ೩೪ ॥

ಉಪಾಯ ಮಥ ವಕ್ಷ್ಯೇಽಹಂ ಶೃಣು ಭೂಪಾಲ ಮತ್ಪ್ರಿಯ ।
ಶೀಘ್ರಂ ಗತ್ವಾ ಮಹಾಮೇರುಂ ವೇಗಾ ಚ್ಚಂಡಾಯುಧೇನ ತಂ　　॥ ೩೫ ॥

ಪ್ರಹೃತ್ಯ ಚ ಯಥೇಚ್ಛಂ ತು ಗೃಹೀತ್ವಾ ಬಹುಲಂ ಧನಂ ।
ಕೋಶವತ್ತ್ವಂ ಮುದ್ರಯಿತ್ವಾ ಸಮಾನೀಯ ಚ ತದ್ಧನಂ　　॥ ೩೬ ॥

---

ಮೀನಾಕ್ಷೀದೇವಿಯೂ, ಸುಂದರೇಶ್ವರನೂ ಭಕ್ತರಾದವರ ವಿಷಯದಲ್ಲಿ ಕಲ್ಪವೃಕ್ಷದಂತೆ ಬೇಕಾದ್ದನ್ನು ಅನುಗ್ರಹಿಸುವರು. ಅವರ ಅನುಗ್ರಹವು ಇದ್ದ ಕಡೆಯಲ್ಲಿ ದುಃಖವು ಉಂಟಾಗುವುದಿಲ್ಲ ಎಂದು ಹೇಳುತ್ತಾ, ಉಗ್ರಪಾಂಡ್ಯರಾಜನು ನೆಲದಮೇಲೆಯೇ ಮಲಗಿದ್ದನು.

೩೪–೩೬. ಆಗ ಭಕ್ತರ ವಿಷಯದಲ್ಲಿ ದಯೆಯುಳ್ಳವನಾದ ಹಾಲಾಸ್ಯೇಶ್ವರನು ಅವನ ಸ್ವಪ್ನದಲ್ಲಿ ಕಾಣಿಸಿಕೊಂಡು “ ಎಲೈ ರಾಜನೆ, ನೀನು ನನಗೆ ಪ್ರೀತಿಪಾತ್ರನಾಗಿ ರುತ್ತೀಯೆ. ಆದ್ದರಿಂದ ನೀನು ನಿನ್ನ ಆಶ್ರಿತರನ್ನೂ, ನಿನ್ನ ಸೇನೆಯನ್ನೂ ರಕ್ಷಿಸುವ ಉಪಾಯವನ್ನು ಹೇಳುವೆನು. ನೀನು ಜಾಗ್ರತೆಯಾಗಿ ಮೇರುಪರ್ವತದ ಹತ್ತಿರಕ್ಕೆ ಹೋಗು. ಚಂಡಾಯುಧದಿಂದ ಮೇರುಪರ್ವತವನ್ನು ಬಲವಾಗಿ ಹೊಡೆದು ಅಪರಿಮಿತ ಧನವನ್ನು ನಿನ್ನ ಇಷ್ಟಪ್ರಕಾರದಂತೆ ತೆಗೆದುಕೊಂಡು ಬಂದು, ಭಂಡಾರ ವನ್ನು ರಕ್ಷಿಸುವಂತೆ ಕಾಪಾಡಿಕೊ. ಉತ್ತಮವಾದ ರೀತಿಯಿಂದ ನಿನ್ನ ಆಶ್ರಿತರಿಗೆಲ್ಲರಿಗೂ ಅದನ್ನು ದಾನಮಾಡು. ನೀನು ಈ ಕೆಲಸವನ್ನು ಮಾಡಿದ್ದರಿಂದ ಸುಖವಾಗಿ ಬಹಳ ಕಾಲದವರಿಗೂ ಬದುಕುತ್ತೀಯೆ.

ಸರ್ವೇಭ್ಯ ಶ್ಚಾಶ್ರಿತಾದಿಭ್ಯಃ ಪ್ರದತ್ವಾ ಧನಮುತ್ತಮಂ ।
ತ್ವಮುಪ್ಯತಿಸುಖಂ ಲಬ್ಧ್ವಾ ಚಿರಂಜೀವೀ ಭವಿಷ್ಯಸಿ ॥ ೩೭ ॥

ವರ್ಷಮಾತ್ರಾ ದನಾವೃಷ್ಟಿ ರ್ಗಮಿಷ್ಯತಿ ನ ಸಂಶಯಃ ।
ಸಂಸ್ಥಾಪ್ಯ ಬ್ರಾಹ್ಮಣಂ ತ್ವೇಕಂ ಬಹುಮನ್ಯಸ್ವ ಮಾಮಿವ ॥ ೩೮ ॥

ಇತ್ಯುಕ್ತ್ವಾಂತರ್ದಧೇ ಶಂಭೂ ರಾಜಾ ಚ ಸಹಸೋತ್ಥಿತಃ ।
ಕಥಯಿತ್ವಾ ನ ಕಸ್ಮೈಚಿದ್ಬಹುಸೇನಾಸಮನ್ವಿತಃ ॥ ೩೯ ॥

ಪಥಿಕಾಶ್ಚ ನದೀಸ್ತೀರ್ತ್ವಾ ಮೇರುಪಾರ್ಶ್ವಗತೇ ಪುರೇ ।
ಸೇನಾ ಸ್ಸರ್ವಾಶ್ಚ ಸಂಸ್ಥಾಪ್ಯ ಚಂಡಾಯುಧಲಸತ್ಕರಃ ॥ ೪೦ ॥

ಮೇರುಂ ಪ್ರದಕ್ಷಿಣೀಕೃತ್ಯ ಮನೋವೇಗಾತಿವೇಗತಃ ।
ಗಿರೇ ಸ್ತಸ್ಯ ಪುರೋಭಾಗೇ ತಸ್ಥಾವುಗ್ರಃ ಪ್ರತಾಪವಾ ॥ ೪೧ ॥

---

೩೮. ಈ ಅನಾವೃಷ್ಟಿಯು ಒಂದು ವರ್ಷಮಾತ್ರವಿರುವುದು. ಅನಂತರ ಇದು ನಾಶವಾಗಿ ಸುಭಿಕ್ಷವಾಗುವುದು. ಆದರೆ ನೀನು ಧನವನ್ನು ತರುವುದಕ್ಕೆ ಹೊರಟಕಾಲ ಮೊದಲುಗೊಂಡು ಒಬ್ಬ ಬ್ರಾಹ್ಮಣನನ್ನು ಮಾತ್ರ ನನ್ನನ್ನು ಭಕ್ತ್ಯಾದರದಿಂದ ಪೂಜಿಸುವಂತೆ ಪೂಜಿಸುತ್ತಾ ಅವನ ವಿಷಯದಲ್ಲಿ ಗುರುಭಾವನೆಯಿಂದ ಇರು '' ಎಂದು ಹೇಳಿ ಅದೃಶ್ಯನಾದನು.

೩೯-೪೩. ಆಗ ಪಾಂಡ್ಯರಾಜನು ಬೇಗನೆ ಎದ್ದು, ತನಗೆ ಸ್ವಪ್ನದಲ್ಲಿ ಕಂಡು ಬಂದ ವಿಷಯವಾವುದನ್ನೂ ಯಾರಿಗೂ ಹೇಳದೆ, ಬಹಳ ಸೇನೆಯನ್ನು ಕೂಡಿಸಿಕೊಂಡು, ಹೊರಟನು. ಅವನು ದಾರಿಯಲ್ಲಿ ಸಿಕ್ಕಿದ ನದಿಗಳನ್ನೂ, ದಾರಿಗರನ್ನೂ ದಾಟಿಕೊಂಡು ಮೇರುಪರ್ವತದ ಪಕ್ಕದಲ್ಲಿರುವ ಒಂದು- ಪಟ್ಟಣದಲ್ಲಿ ಸೇನೆಯನ್ನು ನಿಲ್ಲಿಸಿದನು. ಅನಂತರದಲ್ಲಿ ಪರಾಕ್ರಮಶಾಲಿಯಾದ ಉಗ್ರಪಾಂಡ್ಯರಾಜನು ಚಂಡಾಯುಧವನ್ನು ಕೈಯ್ಯಲ್ಲಿ ಹಿಡಿದುಕೊಂಡು ಮೇರುಪರ್ವತಕ್ಕೆ ಪ್ರದಕ್ಷಿಣೆ ಬಂದನು. ಅವನು ಮನೋವೇಗಕ್ಕಿಂತಲೂ ಹೆಚ್ಚಾದ ವೇಗದಿಂದ ಆ ಪರ್ವತದ ಮುಂದುಗಡೆಗೆ ಬಂದು ನಿಂತುಕೊಂಡನು. ಮೇರುಪರ್ವತವು ಸುಮ್ಮನೆ ಇತ್ತು. ಉಗ್ರಪಾಂಡ್ಯರಾಜನು ಚಂಡಾಯುಧದಿಂದ ಬಲವಾಗಿ ಪರ್ವತಕ್ಕೆ ಹೊಡೆದನು. ಆಗ ಆ ಪರ್ವತವು

ತೂಷ್ಣೀ ಮಾಸ್ತೇ ಸುಮೇರುಶ್ಚ ತದಾ ಚಂಡಾಯುಧೇನ ತಂ ।
ಪ್ರಾಹರನ್ಮಹತೋ ವೇಗಾತ್ ಸೋಽಪಿ ಕಂತುಕವತ್‌ಭ್ರಮನ್ ॥ ೪೨ ॥

ಸಾನ್ನಿಧ್ಯ ಮಕರೋ ತ್ತಸ್ಯ ಸಹಸಾ ಭೀತಮಾನಸಃ ।
ಕಲ್ಯಾಣಶಿಖರೀ ತಸ್ಮೈ ದೇವೋಕ್ತ ಮವದನ್ ನೃಪಃ ॥ ೪೩ ॥

ತಚ್ಛ್ರುತ್ವಾ ಸ ಮಹಾಮೇರು ರ್ದೇವತಾತ್ಮಾ ತಮ ಬ್ರವೀತ್ ।
ರೂಪದ್ವಯಂ ವಿದ್ಯತೇ ಮೇ ಜಂಗಮಂ ಸ್ಥಾವರಾತ್ಮಕಂ ॥ ೪೪ ॥

ಪ್ರಾತಃ ಪ್ರಾತಃ ಪ್ರತಿದಿನಂ ವಪುಷಾ ಜಂಗಮೇನ ಚ ।
ಹಾಲಾಸ್ಯೇಶ್ವರಸೇವಾಂ ಚ ಕರೋಮಿ ನಿಯಮೇನ ಚ ॥ ೪೫ ॥

ಇದಾನೀಂ ಮೋಹತ ಸ್ಸಾ ಚ ನ ಕೃತಾ ವಿಧಿನಾ ಮಯಾ
ತತ್ಫಲಂ ತ್ವದ್ಯ ಸುವ್ಯಕ್ತ ಮಾಸೀತ್ ಪಾಂಡ್ಯಮಹೀಪತೇ ॥ ೪೬ ॥

---

ಚಂಡಿನಂತೆ ತಿರುಗುತ್ತಿತ್ತು. ಅದು ಅತ್ಯಂತವಾಗಿ ಹೆದರಿ, ಬೇಗನೆ ಆ ರಾಜನಿಗೆ ಪ್ರತ್ಯಕ್ಷವಾಯಿತು. ರಾಜನು ಹಾಲಾಸ್ಯೇಶ್ವರನು ಹೇಳಿದ ಮಾತನ್ನು ಆ ಪರ್ವತಕ್ಕೆ ತಿಳಿಸಿದನು.

೪೪-೪೬. ಆ ಮಾತನ್ನು ಕೇಳಿ ದೇವತೆಯ ರೂಪದಿಂದ ಇರುವ ಆ ಪರ್ವತವು ರಾಜನ ಸಂಗಡ "ನನಗೆ ಎರಡು ಆಕಾರಗಳಿರುವವು. ಅದರಲ್ಲಿ ಪರ್ವತದ ಆಕಾರವು ನನ್ನ ಸ್ಥಿರವಾದ ಒಂದು ರೂಪವು. ನನ್ನ ಚರರೂಪದಿಂದ ಪ್ರತಿದಿನವೂ ಪ್ರಾತಃಕಾಲದಲ್ಲಿ ಹಾಲಾಸ್ಯೇಶ್ವರನ ಸೇವೆಯನ್ನು ನಿಯಮದಿಂದ ನಾನು ಮಾಡುತ್ತಾ ಇದ್ದೆನು. ಈಗ ಆ ನಿಯಮವನ್ನು ಬಿಟ್ಟು, ಅಜ್ಞಾನದಿಂದ ದೇವದೇವನ ಸೇವೆಯನ್ನು ಮಾಡಲಿಲ್ಲ. ಈಗ ಅದಕ್ಕೆ ಉಂಟಾದ ಫಲವು ನನ್ನ ಅನುಭವಕ್ಕೆ ಬಂದಿತು. ಎಲೈ ಪಾಂಡ್ಯರಾಜನೆ, ನೀನು ಆ ದೇವನಿಗೆ ಸಾಕ್ಷಾತ್ಪುತ್ರನಾಗಿರುತ್ತೀಯೆ. ಯಶಸ್ಸು. ಪರಾಕ್ರಮ, ತೇಜಸ್ಸು, ಶಂಕರನಲ್ಲಿ ಭಕ್ತಿ, ವಿದ್ಯಾ ಇವುಗಳಲ್ಲಿ ನಿನಗೆ ಸಮಾನರಾದವರು ಮೂರು ಲೋಕದಲ್ಲಿಯೂ ಯಾರೂ ಇರುವುದಿಲ್ಲ.

ತ್ವಂ ತು ತದ್ದೇವಪುತ್ರೋಽಸಿ ವೀರ್ಯೇಣ ಯಶಸಾ ಶ್ರಿಯಾ ।
ಶಂಭುಭಕ್ತ್ಯಾ ವಿದ್ಯಯಾ ಚ ತ್ವತ್ಸಮೋ ನ ಜಗತ್ತ್ರಯೇ ॥ ೪೭ ॥

ದುರ್ಲಭಂ ಭಕ್ತಿಯುಕ್ತಾನಾಂ ನಾಸ್ತಿ ಸರ್ವತ್ರ ಸನ್ಮತೇ ।
ಮದೀಯಂ ಸ್ಥಾವರಂ ರೂಪಂ ನಿರ್ಮಲಂ ಸಮಲಂ ದ್ವಿಧಾ ॥ ೪೮ ॥

ಕುತ್ರಚಿತ್ಕುತ್ರಚಿದ್ದೇಶೇ ವಸುಮತ್ಯಾಂ ಚ ವಿದ್ಯತೇ ।
ಅತಿನಿರ್ಮಲ ಮಾಶ್ಚರ್ಯ ಮರುಣಾರುಣ ಸನ್ನಿಭಂ ॥ ೪೯ ॥

ಮದೀಯ ಮತಿಶುದ್ಧಂ ಚ ಸ್ಥಾವರಂ ರೂಪಮುತ್ತಮಂ ।
ಬಹುಧಾ ಖಂಡಿತಂ ಹೇಮ ಪೂತಸ್ಥಾನೇತ್ರ ವಿದ್ಯತೇ ॥ ೫೦ ॥

ಭಿತ್ವಾ ಸ್ಥಪತಿಸಂಘೈಶ್ಚ ಶಿಲಾ ಮುಪರಿ ಸಂಸ್ಥಿತಾಂ ।
ಗೃಹಾಣ ತ್ವಂ ಯಥಾಕಾಮಂ ಬಹುಳಂ ಧನ ಮುತ್ತಮಂ ॥ ೫೧ ॥

ಇತ್ಯುಕ್ತ್ವಾಂತರ್ಹಿತೋ ಮೇರು ರಾಧಾರೋ ಜಗತಾಂ ಮಹಾನ್ ।
ತಚ್ಛ್ರುತ್ವಾ ವಚನಂ ಮೇರೋ ರತ್ಯಂತಮುದಿತೋ ನೃಪಃ ॥ ೫೨ ॥

---

೪೭–೫೧. ಎಲೈ ಬುದ್ಧಿವಂತನೆ, ಹಾಲಾಸ್ಯೇಶ್ವರನಲ್ಲಿ ಭಕ್ತಿಯುಳ್ಳವರಿಗೆ ಯಾವ ವಿಷಯದಲ್ಲಿಯೂ ಅಸಾಧ್ಯವಾದದ್ದು ಇಲ್ಲ. ನನ್ನ ಸ್ಥಿರವಾದ ರೂಪವು ಸಮಲ, ನಿರ್ಮಲ ಎಂದು ಎರಡು ವಿಧವಾಗಿರುವುದು ಅದು ಭೂಮಿಯಲ್ಲಿ ಅಲ್ಲಲ್ಲಿ ಇರುವುದು. ಬಹಳ ನಿರ್ಮಲವಾದ ಆಶ್ಚರ್ಯಕರವಾದ, ಬಾಲಸೂರ್ಯನಂತೆ ಇರುವ, ಬಹಳ ಪರಿಶುದ್ಧವಾದ ಸ್ಥಾವರ ರೂಪವು ಚಿನ್ನವೆಂದು ಹೆಸರನ್ನು ಹೊಂದಿ ಪರಿಶುದ್ಧವಾದ ಈ ಪ್ರದೇಶದಲ್ಲಿ ಬಹಳ ಚೂರು ಚೂರಾಗಿ ಇರುವುದು. ಬಹಳ ಜನ ಶಿಲ್ಪಿಗಳನ್ನು ಕರದುಕೊಂಡು ಬಂದು ಅದರ ಮೇಲೆ ಇರುವ ಕಲ್ಲನ್ನು ಭೇದಿಸಿ, ನಿನಗೆ ಬೇಕಾದಷ್ಟನ್ನು ತೆಗೆದುಕೊಂಡರೆ ಅದು ಬಹಳ ಉತ್ತಮವಾದ ಧನವಾಗುವುದು."

೫೨–೫೫. ಪ್ರಪಂಚಕ್ಕೆಲ್ಲಕ್ಕೂ ದೊಡ್ಡ ಆಧಾರವಾದ ಮೇರುಪರ್ವತವು ಹೀಗೆ ಹೇಳಿ ಅದೃಶ್ಯವಾಯಿತು. ರಾಜನು ಆ ಮಾತನ್ನು ಕೇಳಿ ಬಹಳ ಸಂತೋಷ ವನ್ನು ಹೊಂದಿದನು. ಶಕ್ತಿವಂತರಾದ ಬಹಳ ಜನರಿಂದಲೂ, ಶಿಲ್ಪಿಗಳಿಂದಲೂ ಕಲ್ಲುಗಳನ್ನು ಭೇದಿಸಿ ಚೂರುಚೂರಾದ ಚಿನ್ನವನ್ನು ತೆಗಿಸಿದನು. ಚಿನ್ನವನ್ನು ತೆಗೆದಿರುವ ಪ್ರದೇಶಗಳನ್ನು ಮೊದಲಿನಂತೆಯೇ ಆ ಕಲ್ಲುಗಳಿಂದ ತುಂಬಿಸಿದನು. ಎರಡು

**ಶಿಲಾಂ ಸ್ಥಪತಿಭಿರ್ಭಿತ್ವಾ ಯಥೇಷ್ಟಂ ಭಿನ್ನಹಾಟಕಂ ।**
**ಗ್ರಾಹಯಿತ್ವಾ ತು ಬಲಿಭಿ ರನ್ಯೈಕೈಃ ಪುರುಷೈರಪಿ　　॥ ೫೩ ॥**

**ಶಿಲಾಭಿ ಸ್ತದ್ಬಿಲಂ ಸದ್ಯೋ ನೀರಂಧ್ರಂ ಚ ಪಿಧಾಯ ಚ ।**
**ಶಫರದ್ವಯಯುಕ್ತೇನ ಭೂಪ ಶ್ಚಂಡಾಯುಧೇನ ತಂ　　॥ ೫೪ ॥**

**ಮುದ್ರಯಿತ್ವಾ ವಾಹಕಾದ್ಯೈ ರ್ಧನಾನಿ ಬಹುಳಾನಿ ಚ ।**
**ಸೇನಾನಿವೇಶಂ ಸ್ವಂ ಪ್ರಾಪ ಸುಂದರೇಶಂ ಹೃದಿ ಸ್ಮರನ್　　॥ ೫೫ ॥**

**ರಾಶೀಕರೋತಿ ತತ್ಸರ್ವಂ ಹಾಟಕಂ ಪರ್ವತೋಪಮಂ ।**
**ಜನಾ ಸ್ಸರ್ವೇ ಮುಮುದಿರೇ ತದಾ ಲೋಕ್ಯ ಕುಚಿಸ್ಮಿತಾಃ　　॥ ೫೬ ॥**

**ಸರ್ವೇಷಾ ಮೇಕವರ್ಷಸ್ಯ ಭುಕ್ತ್ಯೈ ಸ್ವರ್ಣ ಮುದಾದಲಂ ।**
**ಆದಾಯ ತದ್ಧನಂ ಸರ್ವೇ ಪ್ರಶಂಸಂತಿ ಚ ಸುಂದರಂ　　॥ ೫೭ ॥**

**ಗೋಣೀಶ್ಚ ಬಹ್ವೀ ಸ್ಸಂಪೂರ್ಯ ಗಜೋಷ್ಟ್ರತುರಗಾದಿಷು ।**
**ಆರೋಪ್ಯ ತದ್ಧನಂ ಸರ್ವಂ ವಿಮಾನ ಮಧಿರುಹ್ಯ ಚ　　॥ ೫೮ ॥**

---

ಮೀನುಗಳ ಆಕಾರದಿಂದ ಇದ್ದ ಚಂಡಾಯುಧದ ಚಿಹ್ನೆಯಿಂದ ಆ ಚಿನ್ನಕ್ಕೆ ಮುದ್ರೆಯನ್ನು ಹಾಕಿಸಿದನು. ಸುಂದರೇಶ್ವರನನ್ನು ಮನಸ್ಸಿನಲ್ಲಿ ಧ್ಯಾನಮಾಡುತ್ತಾ ಆ ಸುವರ್ಣವೆಲ್ಲವನ್ನೂ ತೆಗೆಸಿಕೊಂಡು ತಾನು ಸೇನೆಯನ್ನು ಇರಿಸಿದ್ದ ಪ್ರದೇಶಕ್ಕೆ ಬಂದನು.

೫೬–೫೮. ರಾಜನು ತನ್ನ ವಾಸಸ್ಥಾನದಲ್ಲಿ ಅದೆಲ್ಲವನ್ನೂ ರಾಶಿಯಾಗಿ ಸುರಿಸಿದನು. ಬೆಟ್ಟದಂತೆ ಇರುವ ಚಿನ್ನದ ರಾಶಿಯನ್ನು ನೋಡಿ ಜನರೆಲ್ಲರೂ ಬಹಳ ಆಶ್ಚರ್ಯದಿಂದ ಸಂತೋಷವನ್ನು ಹೊಂದಿದರು. ತನ್ನ ಸಂಗಡ ಬಂದ ಜನರೆಲ್ಲರಿಗೂ ಒಂದು ವರ್ಷಕ್ಕೆ ಬೇಕಾಗುವಷ್ಟು ಚಿನ್ನವನ್ನು ಅವರು ಉಪಯೋಗಿಸುವುದಕ್ಕಾಗಿ ಉಚಿತವಾಗಿ ಕೊಟ್ಟನು. ಅವರೆಲ್ಲರೂ ಅದನ್ನು ತೆಗೆದುಕೊಂಡು ಸುಂದರೇಶ್ವರನನ್ನು ಶ್ಲಾಘಿಸಿದರು. ಪಾಂಡ್ಯರಾಜನು ಸುವರ್ಣವೆಲ್ಲವನ್ನೂ ಗೋಣೀಚೀಲದಲ್ಲಿ ತುಂಬಿಸಿ ಆನೆ, ಕುದುರೆ, ಒಂಟೆಯೇ ಮೊದಲಾದವುಗಳ ಮೇಲೆ ಹೇರಿಸಿಕೊಂಡು ಕೊಂಚವೂ ಆಯಾಸಪಡದೆ ವಿಮಾನದಲ್ಲಿ ಕುಳಿತುಕೊಂಡು, ತನ್ನ ಪರಿವಾರದವರನ್ನೂ ಕರೆದುಕೊಂಡು ಮಧುರಾನಗರಕ್ಕೆ ಬಂದನು.

ಜಗಾಮ ಪಾಂಡ್ಯೋ ಮಧುರಾಮುಶ್ರಾಂತಸ್ಸಪರಿಚ್ಛದಃ ।
ವಿಮಾನಂ ಗೋಪುರಾ ದ್ಯಂಚ ಸುಂದರೇಶಾಲಯಾಶ್ರಯಂ ॥ ೫೯ ॥

ಕಾರಯಾಮಾಸ ಭೂಪಾಲಃ ಕನಕೇನ ವಿಚಿತ್ರಿತಂ ।
ದ್ವಿಜಾಂಶ್ಚ ತೋಷಯಾಮಾಸ ಗ್ರಹಾನ್ರವಿಮುಖಾ ನಪಿ ॥ ೬೦ ॥

ಅನಾವೃಷ್ಟಿ ರ್ಗತಾ ಸದ್ಯ ಸ್ಸುವೃಷ್ಟಿಶ್ಚ ಸಮಾಗತಾ ।
ಪುನರ್ವಿಶೇಷತೋ ರಾಜಾ ದ್ವಿಜಾ ರ್ದೇವಾನ ತರ್ಪಯತ್ ॥ ೬೧ ॥

ರಾಜ್ಯಂ ಚಕಾರ ಧರ್ಮಾತ್ಮಾ ಪ್ರಜಾ ಸ್ಸರ್ವಾಶ್ಚ ಪಾಲಯನ್ ।
ಉಗ್ರೇಣ ಕೃತಯಾ ನೀತ್ಯಾ ಜಗದಾಸೀನ್ಮುದಾನ್ವಿತಂ ॥ ೬೨ ॥

ಸ ತು ಸಂಕಲ್ಪಸಿದ್ಧಸ್ಸ ಸರ್ವಸದ್ಗುಣಸಂಯುತಃ ।
ನಿಸ್ಸಪತ್ನಾಂ ಮಹೀಂ ಭುಕ್ತ್ವಾ ಚತುಸ್ಸಾಗರಮಧ್ಯಗಾಂ ॥ ೬೩ ॥

ಪುತ್ರಸ್ಯ ವೀರಪಾಂಡ್ಯಸ್ಯ ಕೃತ್ವಾ ರಾಜ್ಯಾಭಿಷೇಚನಂ ।
ಶಿವಸಾಯುಜ್ಯ ಮಾಪ್ನೋತಿ ಸುಂದರೇಶ ಪ್ರಸಾದತಃ ॥ ೬೪ ॥

---

೫೯–೬೨. ಅನಂತರದಲ್ಲಿ ಅವನು ಸುಂದರೇಶ್ವರನು ಇರುವ ದೇವಸ್ಥಾನದ ಗೋಪುರವೇ ಮೊದಲಾದವೆಲ್ಲಕ್ಕೂ ಚಿನ್ನದಿಂದಲೇ ಅನೇಕ ವಿಧವಾಗಿ ಅಲಂಕಾರ ಮಾಡಿಸಿದನು. ಬ್ರಾಹ್ಮಣರನ್ನು ಕರೆಸಿ,ಅವರ ಮೂಲಕವಾಗಿ ಸೂರ್ಯನೇ ಮೊದಲಾದ ಗ್ರಹಗಳಿಗೆ ಸಂತೋಷವು ಉಂಟಾಗುವಂತೆ ಮಾಡಿದ್ದರಿಂದ, ರಾಜ್ಯದಲ್ಲಿ ಎಲ್ಲಾ ಕಡೆಯಲ್ಲಿಯೂ ಸರಿಯಾಗಿ ಮಳೆಯು ಬಿದ್ದಿತು. ಕ್ಷಾಮವು ಹೋಗಿ ಸುಭಿಕ್ಷವು ಉಂಟಾಯಿತು. ಉಗ್ರಪಾಂಡ್ಯರಾಜನು ದೇವತೆಗಳನ್ನೂ ಬ್ರಾಹ್ಮಣರನ್ನೂ ಅತಿಶಯವಾಗಿ ಸಂತೋಷಗೊಳಿಸಿದನು. ಧರ್ಮದಿಂದ ಪ್ರಜೆಗಳನ್ನು ರಕ್ಷಿಸುತ್ತಾ ರಾಜ್ಯವನ್ನು ಪರಿಪಾಲಿಸಿದನು. ಉಗ್ರಪಾಂಡ್ಯರಾಜನು ಆಗ ಆಚರಿಸಿದ ನೀತಿಯಿಂದ ಪ್ರಪಂಚಕ್ಕೆಲ್ಲಕ್ಕೂ ಸಂತೋಷವುಂಟಾಯಿತು.

೬೩–೬೪. ಉಗ್ರಪಾಂಡ್ಯರಾಜನು ಎಲ್ಲಾ ವಿಧವಾದ ಒಳ್ಳೆಯ ಗುಣಗಳುಳ್ಳವನಾಗಿದ್ದನು. ಸಿದ್ಧವಾದ ಸಂಕಲ್ಪವುಳ್ಳವನಾಗಿ, ನಾಲ್ಕು ಸಮುದ್ರಗಳ ಮಧ್ಯದಲ್ಲಿರುವ ಭೂಮಿಯನ್ನು ಶತ್ರುಗಳ ಕಾಟವಿಲ್ಲದಂತೆ ರಕ್ಷಿಸಿದನು. ಕೆಲವು ಕಾಲವು ಕಳೆದ ನಂತರ ಮಗನಾದ ವೀರ ಪಾಂಡ್ಯರಾಜನಿಗೆ ಪಟ್ಟಾಭಿಷೇಕವನ್ನು ಮಾಡಿ, ಸುಂದರೇಶ್ವರನ ಅನುಗ್ರಹದಿಂದ ಶಿವನಲ್ಲಿ ಐಕ್ಯನಾದನು.

**ಲೀಲಾ ಪಂಚದಶೀ ಪ್ರೋಕ್ತಾ ಶ್ರೀಮದ್ಧಾಲಾಸ್ಯವಾಸಿನಃ ।**
**ಯಃ ಕೀರ್ತಯೇ ದಿಮಾಂ ಭಕ್ತ್ಯಾ ಶೃಣುಯಾದ್ವಾ ಸಮಾಹಿತಃ ॥ ೬೫ ॥**

**ಸಮಸ್ತದುಃಖ ನಿರ್ಮುಕ್ತ ಸ್ಸರ್ವಸಂಪತ್ಸಮನ್ವಿತಃ ।**
**ಇಹ ಲೋಕೇ ಮಹಾಭೋಗಾ ಪ್ರಾಪ್ಯಾಂತೇ ಚ ಶಿವಂ ವ್ರಜೇತ್ ॥ ೬೬ ॥**

**ಇತಿ ಶ್ರೀ ಸ್ಕಾಂದ ಪುರಾಣೇ ಅಗಸ್ತ್ಯ ಸಂಹಿತಾಯಾಂ ಹಾಲಾಸ್ಯ ಮಾಹಾತ್ಮ್ಯೇ ಮೇರೋಃ ಕಾಂಚನ ಹರಣಂ ನಾಮ ಏಕವಿಂಶೋಽಧ್ಯಾಯಃ**

---

೬೫-೬೬. ಹಾಲಾಸ್ಯೇಶ್ವರನು ಮಾಡಿರುವ ಹದಿನೈದನೆಯ ಲೀಲೆಯನ್ನು ಹೇಳಿರುವೆನು. ಈ ಲೀಲೆಯನ್ನು ಭಕ್ತಿಯಿಂದಲೂ, ಸಮಾಧಾನವಾದ ಮನಸ್ಸಿನಿಂದಲೂ ಪಾರಾಯಣ ಮಾಡಿದವನೂ, ಕೇಳಿದವನೂ ಕೂಡ ಎಲ್ಲಾ ವಿಧವಾದ ದುಃಖಗಳಿಂದ ಬಿಡುಗಡೆಯನ್ನು ಹೊಂದುವರು. ಎಲ್ಲಾ ವಿಧವಾದ ಐಶ್ವರ್ಯವನ್ನು ಹೊಂದುವರು. ಈ ಲೋಕದಲ್ಲಿ ಭೋಗವನ್ನು ಅನುಭವಿಸಿ ಕೊನೆಯಲ್ಲಿ ಶಿವನ ಸಮೀಪವನ್ನು ಹೊಂದುವರು.

ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯ ಮಾಹಾತ್ಮ್ಯೆಯಲ್ಲಿ ಮೇರು ಕಾಂಚನ ಹರಣವೆಂಬ ಹೆಸರುಳ್ಳ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.



|| ಶ್ರೀಃ ||
|| ಶ್ರೀ ಶಿವಾಯ ನಮಃ ||

# ಹಾಲಾಸ್ಯಮಾಹಾತ್ಮ್ಯಂ

## ಅಥ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ
## ದ್ವಾವಿಂಶೋಽಧ್ಯಾಯಃ

॥ ಅಗಸ್ತ್ಯ ಉವಾಚ ॥

**ಸಮಷ್ಟಿವಿದ್ಯಾನಗರೀನಾಯಕ ಸ್ಸೋಮಸುಂದರಃ ।**
**ವಿದ್ಯಾನಾ ಮಾದಿ ಭೂತಾನಾಂ ವೇದಾನಾ ಮರ್ಥಮಾದೃತಂ ॥ ೧ ॥**

**ಕಣ್ವಾದೀನಾಂ ಮುನೀನಾಂ ಚ ಯಯಾ ಪ್ರಾಹ ಮಹೇಶ್ವರಃ ।**
**ತಾಂ ಲೀಲಾಂ ಸಂಪ್ರವಕ್ಷ್ಯಾಮಿ ಮುನೀಂದ್ರಾ ಸ್ಸಂಗ್ರಹೇಣ ತು ॥ ೨ ॥**

**ಬ್ರಹ್ಮಾಂಡಸೃಷ್ಟಿಕಾಲೇ ತು ಸಮಾರಬ್ಧೇ ಕೃತೇ ಯುಗೇ ।**
**ವೇದಾ ಸ್ಸಮಸ್ತಾ ಸ್ಸಂಜಾತಾಃ ಪ್ರಣವಾ ಚ್ಛಂಭುವಾಚಕಾತ್ ॥ ೩ ॥**

---

### ಇಪ್ಪತ್ತೆರಡನೆಯ ಅಧ್ಯಾಯವು.

೧-೨. ಅಗಸ್ತ್ಯಋಷಿಯು ಹೇಳಿದನು:—ಸಮಷ್ಟಿ ವಿದ್ಯಾನಗರಿಗೆ ಅಧಿಪನಾದ ಸೋಮಸುಂದರೇಶ್ವರನು ವಿದ್ಯೆಗಳೆಲ್ಲಕ್ಕೂ ಆದಿಯಾಗಿರುವ ವೇದಗಳ ಅರ್ಥವನ್ನು ಕಣ್ವನೇ ಮೊದಲಾದ ಋಷಿಗಳಿಗೆ ಆದರದಿಂದ ಉಪದೇಶ ಮಾಡಿದ ಲೀಲೆಯನ್ನು ಸಂಕ್ಷೇಪದಿಂದ ಹೇಳುವೆನು, ಕೇಳಿರಿ.

೩-೫. ಬ್ರಹ್ಮಾಂಡವು ಸೃಷ್ಟಿಯಾದಾಗ, ಕೃತಯುಗವು ಪ್ರಾರಂಭವಾಯಿತು. ಶಂಭುವಿನ ವಾಚಕವಾದ ಪ್ರಣವದಿಂದ ವೇದಗಳೆಲ್ಲವೂ ಉತ್ಪನ್ನವಾದವು. ಶಿವನ

ಅಧೀತಾಶ್ಚ ದ್ವಿಜೈ ಸ್ಸರ್ವೈ ಶ್ಶಂಕರಸ್ಯ ಪ್ರಸಾದತಃ ।
ನ ಜ್ಞಾಯಂತೇ ತದರ್ಥಾಶ್ಚ ಸರ್ವೈ ಸ್ತೈ ರ್ಮುನಿಪುಂಗವೈಃ ॥ ೪ ॥

ಅಧೀತಾಶೇಷವಿದ್ಯಾ ಶ್ಚ ನೈಮಿಶಾರಣ್ಯವಾಸಿನಃ ।
ಕಣ್ವಶಾಂಡಿಲ್ಯಗರ್ಗಾದ್ಯಾ ಸ್ಸಮವೇತಾ ವಿಚಾರಯನ್ ॥ ೫ ॥

ಅಸ್ಮಾಭಿ ಸ್ಸಕಲಾವ್ನಾಯಾ ಸ್ಸಮಧೀತಾ ಸ್ಸಲಕ್ಷಣಾಃ ।
ತೇಷಾ ಮರ್ಥಾ ನ ಸಂಸ್ಪೃಷ್ಟಾ ಸ್ಸದ್ಗುರೋ ರಪ್ಯದರ್ಶನಾತ್ ॥ ೬ ॥

ಜ್ಞಾತಾರ್ಥಾಶ್ಚ ಭವಿಷ್ಯಾಮಃ ಕಥಂ ಲಬ್ಧ್ವಾ ಚ ತಂ ಗುರುಂ ।
ಇತಿ ಚಿಂತಯತಾಂ ತೇಷಾಂ ಮುನೀನಾಂ ಪುರತೋ ಮಹಾನ್ ॥ ೭ ॥

ಆವಿರಾಸೀ ನ್ಮಹಾತೇಜಾ ಹರಭಕ್ತೋ ಮಹಾತಪಾಃ ।
ತಂ ದೃಷ್ಟ್ವಾ ಮುನಯ ಸ್ಸರ್ವೇ ಪ್ರಣಮ್ಯ ದದು ರಾಸನಂ ॥ ೮ ॥

---

ಅನುಗ್ರಹದಿಂದ ದ್ವಿಜರೆಲ್ಲರೂ ವೇದಗಳನ್ನು ಅಭ್ಯಾಸಮಾಡಿದರು. ಅದರ ಅರ್ಥವನ್ನು ಎಲ್ಲಾ ಮುನಿಗಳೂ ಸೇರಿ ತಿಳಿಯಲಾಗಲಿಲ್ಲ. ಎಲ್ಲಾ ವಿದ್ಯೆಗಳನ್ನೂ ಕಲಿತುಕೊಂಡಿರುವ ನೈಮಿಶಾರಣ್ಯದಲ್ಲಿ ವಾಸಮಾಡುವ ಕಣ್ವಋಷಿ, ಶಾಂಡಿಲ್ಯಋಷಿ, ಗರ್ಗಋಷಿಯೇ ಮೊದಲಾದವರೆಲ್ಲರೂ ಒಟ್ಟಾಗಿ ಸೇರಿ ವೇದಾರ್ಥವನ್ನು ವಿಚಾರ ಮಾಡಿದರು.

೬–೮. ಹೀಗೆ ವಿಚಾರ ಮಾಡಿದಾಗ್ಯೂ ವೇದಾರ್ಥಗಳು ಚೆನ್ನಾಗಿ ತಿಳಿಯದೆ ಇದ್ದ ಕಾರಣ, ಅವರೆಲ್ಲರೂ "ನಾವು ವೇದಗಳೆಲ್ಲವನ್ನೂ ಅವುಗಳ ಲಕ್ಷಣ ಸಹಿತವಾಗಿ ಅಧ್ಯಯನವನ್ನು ಮಾಡಿದೆವು. ಸರಿಯಾದ ಗುರುವು ನಮಗೆ ಸಿಕ್ಕದಿರುವುದರಿಂದ ಅರ್ಥವು ಸರಿಯಾಗಿ ತಿಳಿಯಲಿಲ್ಲವು. ವೇದಾರ್ಥಗಳನ್ನು ಸರಿಯಾಗಿ ತಿಳಿಸುವ ಗುರುವು ನಮಗೆ ಯಾವಾಗ ಸಿಕ್ಕುವನು? ಅರ್ಥವು ನಮಗೆ ಚೆನ್ನಾಗಿ ಯಾವಾಗ ತಿಳಿಯುವುದು?" ಎಂದು ಯೋಚಿಸುತ್ತಿರುವ ಕಾಲಕ್ಕೆ ಸರಿಯಾಗಿ ಬಹಳ ತೇಜಶ್ಶಾಲಿಯಾದ ಮಹಾತಪಸ್ವಿಯಾದ ಶಿವಭಕ್ತನೊಬ್ಬನು ಅವರ ಎದುರಿಗೆ ಬಂದನು. ಈ ಋಷಿಗಳೆಲ್ಲರೂ ಅವನನ್ನು ಕಂಡು ಅವನಿಗೆ ನಮಸ್ಕಾರಮಾಡಿ ಆಸನವನ್ನು ಕೊಟ್ಟರು.

ಹರಭಕ್ತಸ್ತೂಪವಿಷ್ಟ ಸ್ತೇಷಾಂ ವಕ್ತ್ರಾಣಿ ವೀಕ್ಷ್ಯ ಚ ।
ಪ್ರಾಹಪ್ರಗಲ್ಭಯಾ ವಾಚಾ ಕಿಮರ್ಥಂ ಚಿಂತಯಾನ್ವಿತಾಃ ॥ ೯ ॥

ಯೂಯಂ ಸರ್ವೇ ಮಹಾತ್ಮಾನ ಸ್ಸಮರ್ಥಾ ಸ್ಸರ್ವಕರ್ಮಸು ।
ಇತಿ ಶ್ರುತ್ವಾ ವಚಸ್ತಸ್ಯ ಪ್ರಾಹು ಸ್ಸರ್ವೇ ಮುದಾನ್ವಿತಾಃ ॥ ೧೦ ॥

ವೇದಾರ್ಥಂ ತು ವಯಂ ಜ್ಞಾತುಂ ಮಹತ್ಯಾ ಶ್ರದ್ಧಯಾ ಯುತಾಃ ।
ತದರ್ಥಜ್ಞಾ ಭವಿಷ್ಯಾಮಃ ಕೇನೋಪಾಯೇನ ಸುವ್ರತ ॥ ೧೧ ॥

ತ ಮುಪಾಯಂ ವದಾ ಸ್ಮಾಕಂ ಭಗವನ್ ಕರುಣಾನಿಧೇ ।
ಮುನೀನಾಂ ತು ವಚಃ ಶ್ರುತ್ವಾ ಹರಭಕ್ತ ಸ್ತದಾಬ್ರವೀತ್ ॥ ೧೨ ॥

॥ ಹರಭಕ್ತ ಉವಾಚ ॥

ಶೃಣ್ವಂತು ಮುನಿಶಾರ್ದೂಲಾ ಸ್ಸರ್ವಲೋಕಹಿತಾವಹಂ ।
ಯದತ್ರ ದುರ್ಲಭಂ ಲೋಕೇ ತತ್ಸಾಧ್ಯಂ ತಪಸೋ ಬಲಾತ್ ॥ ೧೩ ॥

---

೯-೧೦. ಅವನು ಕುಳಿತುಕೊಂಡು, ಅವರ ಮುಖವನ್ನು ನೋಡಿ, ಪ್ರೌಢವಾದ ಮಾತಿನಿಂದ, "ನೀವು ಎಲ್ಲರೂ ಮಹಿಮೆಯುಳ್ಳವರು, ಎಲ್ಲಾ ಕಾರ್ಯಗಳನ್ನು ಮಾಡುವುದರಲ್ಲಿಯೂ ಸಮರ್ಥರು. ಹೀಗಿದ್ದಾಗ್ಯೂ ನಿಮ್ಮನ್ನು ನೋಡಿದರೆ ಯೋಚನೆಯುಳ್ಳವರಂತೆ ಕಾಣುತ್ತದೆ. ಆದ್ದರಿಂದ ನೀವು ಯಾತಕ್ಕೆ ಯೋಚನೆ ಮಾಡುತ್ತಿದ್ದೀರಿ?" ಎಂದು ಕೇಳಿದನು.

೧೧-೧೨. ಋಷಿಗಳೆಲ್ಲರೂ ಅವನ ಮಾತನ್ನು ಕೇಳಿ ಸಂತೋಷದಿಂದ, "ಎಲೈ ದಯಾಶಾಲಿಯೆ, ವೇದಾರ್ಥವನ್ನು ತಿಳಿಯುವುದಕ್ಕೆ ನಮಗೆ ಬಹಳ ಆದರವಿರುವುದು. ಯಾವ ಉಪಾಯದಿಂದ ನಮ್ಮ ಇಷ್ಟವು ನೆರವೇರುವುದು. ವೇದಾರ್ಥಗಳನ್ನು ತಿಳಿಯುವ ಉಪಾಯನ್ನು ನಮಗೆ ತಿಳಿಸು." ಎಂದು ಪ್ರಶ್ನೆ ಮಾಡಿದರು. ಋಷಿಗಳ ಮಾತನ್ನು ಕೇಳಿ ಶಿವಭಕ್ತನು ಹೇಳಿದನು.

೧೩-೧೭. ಶಿವಭಕ್ತನು ಹೇಳಿದನು:—ಋಷಿಶ್ರೇಷ್ಠರಾದ ನೀವೆಲ್ಲರೂ ಲೋಕಕ್ಕೆ ಹಿತವನ್ನುಂಟು ಮಾಡುವ ನನ್ನ ಮಾತನ್ನು ಕೇಳಿರಿ. ಈ ಲೋಕದಲ್ಲಿ ಸಾಮಾನ್ಯವಾಗಿ ಆಗದಿರುವ ಕೆಲಸವನ್ನು ತಪಸ್ಸಿನ ಶಕ್ತಿಯಿಂದ ಸಾಧಿಸಬಹುದು. ತಪಸ್ಸನ್ನು ಆಚರಿಸುವವರಿಗೆ ಎಲ್ಲಾ ವಿಧವಾದ ಸಿದ್ಧಿಗಳೂ ಉಂಟಾಗುವುವು. ಒಂದು

ತಪಸ್ವಿನಾಂ ಜನಾನಾಂ ಚ ಸರ್ವಾ ಸ್ಸಿಧ್ಯಂತಿ ಸಿದ್ಧಯಃ ।
ಕೃತಾದನ್ಯತ್ರ ತಪಸಃ ಪುಣ್ಯಕ್ಷೇತ್ರಕೃತಂ ತಪಃ ॥ ೧೪ ॥

ಸದ್ಯ ಸ್ಸಿಧ್ಯತಿ ತದ್ಭೂಯಂ ಕರುದ್ಧ್ವಂ ತಪ ಉತ್ತಮಂ ।
ಶಿವಕ್ಷೇತ್ರಾಣಿ ಸರ್ವಾಣಿ ಪುಣ್ಯಕ್ಷೇತ್ರಾಧಿಕಾತ ಚ ॥ ೧೫ ॥

ತಾರತಮ್ಯೇನ ತಾನ್ಯತ್ರ ವಿಶಿಷ್ಟಾನಿ ಭವಂತಿ ಹಿ ।
ಕ್ಷೇತ್ರಾಣಾಂ ಶಾಂಭವಾನಾಂ ಚ ವೇದಾಂತೈ ರ್ಘೋಷಿತಾತ್ಮನಾಂ ॥ ೧೬ ॥

ಮಧ್ಯೇ ವಿಶಿಷ್ಟಂ ಪರಮಂ ಶ್ರೀಮದ್ಧಾಲಾಸ್ಯ ಸಂಜ್ಞಿತಂ ।
ತತ್ರ ಸಿಧ್ಯಂತಿ ಧರ್ಮಾದ್ಯಾಃ ಪದಾರ್ಥಾ ಸ್ತ್ವವಿಲಂಬಿತಂ ॥ ೧೭ ॥

ಯೋಗಸಿದ್ಧಿಶ್ಚ ತತ್ರೈವ ವಿದ್ಯಾಸಿದ್ಧಿ ರ್ವಿಶೇಷತಃ ।
ಸಮಷ್ಟಿವಿದ್ಯಾನಗರೀ ತಸ್ಯಾಃ ಪುರ್ಯಾಶ್ಚ ನಾಮ ಹಿ ॥ ೧೮ ॥

---

ಕ್ಷೇತ್ರದಲ್ಲಿ ತಪಸ್ಸನ್ನು ಮಾಡುವವರಿಗೆ ಅದಕ್ಕಿಂತಲೂ ಹೆಚ್ಚು ಪುಣ್ಯಕರವಾದ ಕ್ಷೇತ್ರದಲ್ಲಿ ತಪಸ್ಸನ್ನು ಮಾಡುವುದರಿಂದ, ತಪಸ್ಸು ಹೆಚ್ಚುವುದು. ಅದರಿಂದ ಆ ಕ್ಷಣದಲ್ಲಿಯೇ ಸಿದ್ಧಿಯುಂಟಾಗುವುದು. ಪುಣ್ಯಕರವಾಗಿರುವ ಕ್ಷೇತ್ರಗಳು ಶಿವಕ್ಷೇತ್ರಗಳೇ ಆಗಿದ್ದರೂ ಅವುಗಳಲ್ಲಿ ನ್ಯೂನಾಧಿಕ ಭಾವವಿರುವುದು. (ವೇದಾಂತ) ಉಪನಿಷತ್ತುಗಳಲ್ಲಿ ಪ್ರಸಿದ್ಧವಾಗಿರುವ ಶಿವಕ್ಷೇತ್ರಗಳಲ್ಲಿ ಹಾಲಾಸ್ಯ ಕ್ಷೇತ್ರವು ಎಲ್ಲಕ್ಕಿಂತಲೂ ಅತಿಶಯವಾಗಿ ಫಲವನ್ನು ಕೊಡತಕ್ಕದ್ದು. ಹಾಲಾಸ್ಯ ಕ್ಷೇತ್ರದಲ್ಲಿ ಧರ್ಮವೇ ಮೊದಲಾದ ಪುರುಷಾರ್ಥಗಳೆಲ್ಲವೂ ಬೇಗನೆ ಸಿದ್ಧಿಸುವುವು.

೧೮–೨೨. ಹಾಲಾಸ್ಯ ಕ್ಷೇತ್ರದಲ್ಲಿ ಯೋಗಸಿದ್ಧಿಯೂ, ಅತಿಶಯವಾದ ವಿದ್ಯಾಸಿದ್ಧಿಯೂ, ಉಂಟಾಗುವುದು. ಆ ಕ್ಷೇತ್ರಕ್ಕೆ ಸಮಷ್ಟಿ ವಿದ್ಯಾನಗರೀ (ಎಲ್ಲಾ ವಿದ್ಯೆಗಳುಳ್ಳ ನಗರವು) ಎಂದು ಹೆಸರು ಬಂದಿರುವುದು. ಆ ನಗರದಲ್ಲಿರುವ ಬಹಳ ಜನಗಳು, ಹೊಂದಲಶಕ್ಯವಾದ ವಿದ್ಯೆಯನ್ನು ದಕ್ಷಿಣಾಮೂರ್ತಿ ದೇವನ ದಯೆಯಿಂದ ಹೊಂದಿ, ತಮ್ಮ ತಮ್ಮ ಇಷ್ಟಗಳನ್ನು ಹೊಂದಿರುವರು. ಮೀನಾಕ್ಷೀದೇವಿ, ಸುಂದರೇಶ್ವರರು ಭಕ್ತರ ಇಷ್ಟಗಳೆಲ್ಲವನ್ನೂ ಕಲ್ಪವೃಕ್ಷದಂತೆ ಯಾವಾಗಲೂ ನಡೆಸಿಕೊಡು

ಜನಾಶ್ಚ ಬಹವಸ್ತತ್ರ ವಿದ್ಯಾಂ ಪ್ರಾಪ್ಯಾ ತಿದುರ್ಲಭಾಂ ।
ದಯಯಾ ದಕ್ಷಿಣಾಮೂರ್ತೇಃ ಪ್ರಾಪುಸ್ಸರ್ವಾ ನ್ಮನೋರಥಾ ॥ ೧೯ ॥

ಸುಮೀನಾಕ್ಷೀಸುಂದರೇಶೌ ಭಕ್ತಕಲ್ಪಮಹೀರುಹೌ ।
ನಿತ್ಯಂ ನಿವಸತಾಂ ತತ್ರ ಭಕ್ತಾನಾಮನುಕಂಪಯಾ ॥ ೨೦ ॥

ಯೂಯಂ ಚ ತತ್ರ ಗತ್ವಾಶು ದೇವಂ ದೇವೀಂ ಪ್ರಣಮ್ಯ ಚ ।
ದೇವದಕ್ಷಿಣಭಾಗಸ್ಥ ದಕ್ಷಿಣಾಮೂರ್ತಿ ಸನ್ನಿಧೌ ॥ ೨೧ ॥

ತಪಶ್ಚರಂತು ವೇದಾರ್ಥಜ್ಞಾನಾರ್ಥಂ ಮುನಿಪುಂಗವಾಃ ।
ಅರ್ಥಾ ತ್ವಾಶೇಷವೇದಾನಾಂ ವ್ಯಕ್ತ್ಯೋ ಯುಷ್ಮಾಕಮಸ್ತು ಚ ॥ ೨೨ ॥

ಇತಿ ಶ್ರುತ್ವಾ ಮುನಿವರಾ ಹರಭಕ್ತಂ ಪ್ರಣಮ್ಯ ಚ ।
ತಂ ಮುನಿಂ ಚ ಪುರಸ್ಕೃತ್ಯ ಹಾಲಾಸ್ಯಂ ಸಂಪ್ರವಿಶ್ಯ ಚ ॥ ೨೩ ॥

ಮಹಾತೀರ್ಥೇ ಚ ಸಂಸ್ನಾಯ ಮಹಾದೇವಿಂ ಪ್ರಣಮ್ಯ ಚ ।
ಮಹಾದೇವಂ ಚ ನತ್ವಾಥ ಭಕ್ತ್ಯಾ ಸ್ತುತ್ವಾ ವಿಶೇಷತಃ ॥ ೨೪ ॥

---

ವರು. ಆ ಕ್ಷೇತ್ರದಲ್ಲಿ ಯಾವಾಗಲೂ ವಾಸಮಾಡುತ್ತಿರುವ ಹಾಲಾಸ್ಯೇಶ್ವರನಿಗೆ ಭಕ್ತರಾದವರ ದಯವನ್ನು ನೀವು ಹೊಂದಿ ಆ ಕ್ಷೇತ್ರಕ್ಕೆ ಬೇಗ ಹೋಗಿ, ಅಲ್ಲಿ ಮೀನಾಕ್ಷೀ ಸುಂದರೇಶ್ವರರಿಗೆ ನಮಸ್ಕರಿಸಿ, ಹಾಲಾಸ್ಯೇಶ್ವರ ದೇವನ ದಕ್ಷಿಣ ಭಾಗದಲ್ಲಿರುವ ದಕ್ಷಿಣಾಮೂರ್ತಿ ದೇವನ ಸನ್ನಿಧಿಯಲ್ಲಿ ವೇದಾರ್ಥ ಜ್ಞಾನವು ಸರಿಯಾಗಿ ತಿಳಿಯಲು ತಪಸ್ಸನ್ನು ಮಾಡಿರಿ. ಹೀಗೆ ಮಾಡಿದರೆ ಎಲ್ಲಾ ವೇದಗಳ ಅರ್ಥವೂ ಸ್ಪಷ್ಟವಾಗಿ ತಿಳಿಯುವುದು.

೨೩–೨೪. ಋಷಿಗಳು ಶಿವಭಕ್ತನು ಹೇಳಿದ ಮಾತನ್ನು ಕೇಳಿ, ಅವನಿಗೆ ನಮಸ್ಕಾರ ಮಾಡಿ, ಅವನನ್ನು ತಮ್ಮ ಮುಂದಿಟ್ಟುಕೊಂಡು ಹಾಲಾಸ್ಯ ಕ್ಷೇತ್ರಕ್ಕೆ ಬಂದು ಮಹಾ ತೀರ್ಥದಲ್ಲಿ ಸ್ನಾನಮಾಡಿ ಮಹಾದೇವ ದೇವಿಯರಿಗೆ ನಮಸ್ಕರಿಸಿ ದೇವಿಯನ್ನು ಸ್ತೋತ್ರಮಾಡಿ, ಹಾಲಾಸ್ಯೇಶ್ವರನನ್ನು ಅತಿಶಯವಾದ ಭಕ್ತಿಯಿಂದ ಅನೇಕವಿಧವಾಗಿ ಸ್ತುತಿಸಿದರು..

ವಿಮಾನದಕ್ಷಿಣೇ ಭಾಗೇ ಸಮಾಗತ್ಯ ಮುನೀಶ್ವರಾಃ ।
ಶುದ್ಧಸ್ಫಟಿಕಸಂಕಾಶಂ ವಟಮೂಲನಿವಾಸಿನಂ ॥ ೨೫ ॥

ಬ್ರಹ್ಮಾದಿದೇವಸಂಘೈಶ್ಚ ಮುನೀಂದ್ರೈಶ್ಚ ಸಮಾವೃತಂ ।
ವ್ಯಾಖ್ಯಾಪೀಠೇ ನಿವಿಷ್ಟಂ ತಂ ವೇದವ್ಯಾಖ್ಯಾನತತ್ಪರಂ ॥ ೨೬ ॥

ಚತುರ್ಭುಜಂ ತ್ರಿಣೇತ್ರಂ ಚ ಮೌಕ್ತಿಕೀ ಮಕ್ಷಮಾಲಿಕಾಂ ।
ಸುಧಾಪೂರ್ಣಂ ಹೇಮಕುಂಭಂ ಜ್ಞಾನಮುದ್ರಾಂ ಚ ಪುಸ್ತಕಂ ॥ ೨೭ ॥

ದಧಾನಂ ವರದಂ ದೇವಂ ದಕ್ಷಿಣಾಮೂರ್ತಿ ಮವ್ಯಯಂ ।
ವಿಲೋಕ್ಯ ವಿಸ್ಮಿತಾಸ್ಸಂತಃ ಪ್ರಣಿಪತ್ಯ ಪುನಃಪುನಃ ॥ ೨೮ ॥

ಸ್ತುತ್ವಾ ನಾನಾವಿಧೈಃ ಸ್ತೋತ್ರೈ ರ್ವೇದೋಕ್ತೈ ರ್ಲೌಕಿಕೈರಪಿ ।
ತತ್ಸನ್ನಿಧೌ ಸಮಾಸೀನಾ ಸ್ಸರ್ವೇ ತೇ ಮುನಿಪುಂಗವಾಃ ॥ ೨೯ ॥

---

೨೫-೨೬. ವಿಮಾನದ ದಕ್ಷಿಣ ಭಾಗದಲ್ಲಿ ದಕ್ಷಿಣಾಮೂರ್ತಿ ದೇವನು ಶುದ್ಧವಾದ ಸ್ಫಟಿಕದ ಕಾಂತಿಯನ್ನು ಹೊಂದಿರುವನು. ವಟವೃಕ್ಷದ (ಆಲದ ಮರದ) ಬುಡದಲ್ಲಿ ಇರುತ್ತಾ ಬ್ರಹ್ಮನೇ ಮೊದಲಾದ ದೇವತಾ ಸಮೂಹದಿಂದಲೂ, ಋಷಿಗಳ ಸಮೂಹದಿಂದಲೂ ಸುತ್ತುವರಿದವನಾಗಿ ವ್ಯಾಖ್ಯಾನ ಪೀಠದಲ್ಲಿ ಕುಳಿತುಕೊಂಡು ವೇದಾರ್ಥಗಳನ್ನು ವ್ಯಾಖ್ಯಾನ ಮಾಡಿ ವಿವರಿಸುತ್ತಿರುವನು.

೨೭-೨೮. ದಕ್ಷಿಣಾಮೂರ್ತಿದೇವನು ತನಗೆ ಇರುವ ನಾಲ್ಕು ಭುಜಗಳಲ್ಲಿ ಕ್ರಮವಾಗಿ ಮುತ್ತಿನ ಜಪಸರ, ಅಮೃತದಿಂದ ತುಂಬಿದ ಚಿನ್ನದ ಕಲಶ, ಜ್ಞಾನ ಮುದ್ರಾ, ಪುಸ್ತಕ, ಇವುಗಳನ್ನು ಧರಿಸಿರುವನು. ಮೂರು ಕಣ್ಣುಗಳಿಂದ ಕೂಡಿದವನಾಗಿ ಭಕ್ತರ ಇಷ್ಟಾರ್ಥಗಳನ್ನು ಕೊಡುತ್ತಿರುವನು. ಪರಿಪೂರ್ಣನಾದ ದಕ್ಷಿಣಾಮೂರ್ತಿದೇವನನ್ನು ನೋಡಿ ಋಷಿಗಳು ಆಶ್ಚರ್ಯಪಟ್ಟು ಆ ದೇವನಿಗೆ ನಮಸ್ಕರಿಸಿ, ವೇದೋಕ್ತವಾದ ಮತ್ತು ಲೌಕಿಕವಾದ ಅನೇಕ ಸ್ತೋತ್ರಗಳಿಂದ ಸ್ತುತಿಮಾಡಿದರು.

೨೯-೩೧. ಅನಂತರದಲ್ಲಿ ಆ ಋಷಿಗಳೆಲ್ಲರೂ ದಕ್ಷಿಣಾಮೂರ್ತಿದೇವನ ಹತ್ತಿರದಲ್ಲಿ ಕುಳಿತುಕೊಂಡು, ಉತ್ತಮವಾದ ಜ್ಞಾನವನ್ನು ಕೊಡುವ, ಇಪ್ಪತ್ತೆರಡು

ಶ್ರೀಮತೋ ದಕ್ಷಿಣಾಮೂರ್ತೇರ್ ಮೇಧಾವಿದ್ಯಾಂ ಸುದುರ್ಲಭಾಂ ।
ಸರ್ವಜ್ಞಾನ ಪ್ರದಾಂ ಸಮ್ಯಕ್ ದ್ವಾವಿಂಶದ್ಬೀಜರೂಪಿಣೀಂ ॥ ೩೦ ॥

ಹರಭಕ್ತೇನೋಪದಿಷ್ಟಾಂ ಜಪಂತಿ ಚ ಮುದಾನ್ವಿತಾಃ ।
ತ್ರಿಕಾಲಮರ್ಹಣಾಂ ಚಕ್ರು ರ್ಗಂಧಾದ್ಯೈ ರ್ಭಕ್ತಿಪೂರ್ವಕಂ ॥ ೩೧ ॥

ಯಥಾಸಂಖ್ಯಂ ತರ್ಪಣಂ ಚ ಹವನಂ ದ್ವಿಜಭೋಜನಂ ।
ಪಂಚಾಂಗೋಪಾಸನೇನೈವ ಮುಪವಾಸಪರಾಯಣಾಃ ॥ ೩೨ ॥

ತಪಶ್ಚರಂತಿ ವಿಪುಲ ಮಾಮ್ನಾಯಾರ್ಥಪ್ರಸಿದ್ಧಯೇ ।
ಕಾರ್ತಿಕ್ಯಾಂ ಪೌರ್ಣಮಾಸ್ಯಾಂ ಚ ಸಮಾರಭ್ಯ ಮಹತ್ತಪಃ ॥ ೩೩ ॥

ಪುನ ಸ್ತತ್ಪೌರ್ಣಮಾಸ್ಯಂತಂ ಚಕ್ರು ರ್ವಿಘ್ನವಿವರ್ಜಿತಾಃ ।
ಅಥ ಪ್ರಸನ್ನೋ ಭಗವಾನ್ ದಕ್ಷಿಣಾಮೂರ್ತಿರೀಶ್ವರಃ ॥ ೩೪ ॥

---

ಬೀಜಾಕ್ಷರಗಳಿಂದ ಕೂಡಿರುವ, ಶಿವಭಕ್ತನು ತಮಗೆ ಉಪದೇಶಮಾಡಿದ ಮೇಧಾವಿದ್ಯೆಯನ್ನು ಜಪಮಾಡಿದರು. ಪ್ರತಿದಿನವೂ ಮೂರು ಕಾಲಗಳಲ್ಲಿಯೂ ದಕ್ಷಿಣಾಮೂರ್ತಿದೇವನಿಗೆ ಭಕ್ತಿಯಿಂದ ಗಂಧಪುಷ್ಪಾದಿಗಳಿಂದ ಪೂಜೆಯನ್ನು ಮಾಡಿದರು.

೩೨-೩೩. ಶಾಸ್ತ್ರದಲ್ಲಿ ಹೇಳಿರುವಷ್ಟು ಸಂಖ್ಯೆಯುಳ್ಳ ಮಂತ್ರಜಪವು ಆದನಂತರ, ತರ್ಪಣ, ಹೋಮ, ಬ್ರಾಹ್ಮಣ ಭೋಜನಗಳನ್ನು ಋಷಿಗಳೆಲ್ಲರೂ ನೆರವೇರಿಸಿದರು. ಅವರು ಮಂತ್ರೋಪಾಸನಾ ಸಾಮಾನ್ಯ ಕ್ರಮವನ್ನು ಅನುಸರಿಸಿದರು. ಮಂತ್ರದ ವಿಷಯದಲ್ಲಿ ಉಕ್ತವಾಗಿರುವ ಕವಚ, ಮಾಲಾ, ಸಹಸ್ರನಾಮವೇ ಮುಂತಾದ ಪಂಚಾಂಗ ಕ್ರಮಾಚರಣೆಯನ್ನು ಮಾಡಿದರು. ಉಪವಾಸ ವ್ರತವನ್ನು ಆಚರಿಸುತ್ತಾ, ವೇದಾರ್ಥಗಳನ್ನು ತಿಳಿಯುವುದಕ್ಕಾಗಿ ಹೆಚ್ಚಾದ ತಪಸ್ಸನ್ನು ಮಾಡಲು ಆರಂಭಿಸಿದ ಆ ಋಷಿಗಳು ಮುಂದಿನ ಕಾರ್ತಿಕ ಶುದ್ಧ ಪೂರ್ಣಿಮೆಯವರಿಗೂ ಯಾವ ವಿಧವಾದ ವಿಘ್ನವೂ ಇಲ್ಲದಹಾಗೆ ತಪಸ್ಸನ್ನು ಮಾಡಿದರು.

೩೪-೩೭. ಅನಂತರದಲ್ಲಿ ತಪಸ್ಸನ್ನು ಮಾಡುತ್ತಿರುವ ಕಣ್ವನೇ ಮೊದಲಾದ ಋಷಿಗಳು ಒಬ್ಬ ಬ್ರಾಹ್ಮಣನನ್ನು ನೋಡಿದರು. ಅವನು ಪಂಚೆಯನ್ನು ಹೊದ್ದುಕೊಂಡು ರುಮಾಲನ್ನು ಹಾಕಿಕೊಂಡು, ಭಸ್ಮರುದ್ರಾಕ್ಷಿಗಳಿಂದ ಅಲಂಕೃತನಾಗಿದ್ದನು. ಕುಂಡಲಾದ್ಯಾಭರಣಯುಕ್ತನಾಗಿ, ಹದಿನಾರು ವರ್ಷ ವಯಸ್ಸುಳ್ಳವನಾಗಿದ್ದನು.

**ಸರ್ವಜ್ಞ ಸ್ಸರ್ವವೇದಾರ್ಥಸ್ಸರೂಪೀ ಭಕ್ತವತ್ಸಲಃ ।**
**ವಿಪ್ರವೇಷಧರೋ ಭೂತ್ವಾ ಸೋಽಷ್ಣೀಷ ಸ್ಸೋತ್ತರೀಯಕಃ ॥ ೩೫ ॥**

**ತ್ರಿಪುಂಡ್ರಾಂಕಿತಸರ್ವಾಂಗೋ ರುದ್ರಾಕ್ಷಾಲಂಕೃತಾಕೃತಿಃ ।**
**ಮಂದಸ್ಮಿತಲಸದ್ವಕ್ತ್ರಃ ಕುಂಡಲಾದಿವಿಭೂಷಿತಃ ॥ ೩೬ ॥**

**ಷೋಡಶಾಬ್ದವಯೋಯುಕ್ತ ಸ್ಸೋಮವತ್ಪ್ರಿಯದರ್ಶನಃ ।**
**ಉಚ್ಚರನ್ವೇದವಾಕ್ಯಾನಿ ಸುವ್ಯಕ್ತಂ ಸುಸ್ವರಂ ಯಥಾ ॥ ೩೭ ॥**

**ಕಣ್ವಾದೀನಾಂ ಮುನೀನಾಂ ಚ ಮಧ್ಯೇ ಚಾವಿರಭೂಚ್ಛಿವಃ ।**
**ತತಸ್ತು ಮುನಯಸ್ಸರ್ವೇ ವಿಪ್ರವೇಷಧರಂ ಶಿವಂ ॥ ೩೮ ॥**

**ವಿವಶಾ ಅಭವನ್ ದೃಷ್ಟ್ವಾ ಸಂತೋಷಾತಿಶಯೇನ ಚ ।**
**ಪೂರ್ಣಚಂದ್ರೋದಯಂ ಲಬ್ಧ್ವಾ ವರ್ಧಂತೇ ಸಾಗರಾ ಯಥಾ ॥ ೩೯ ॥**

**ತಥಾಽಽನಂದಪ್ರವಾಹಾಶ್ಚ ಮುನೀನಾಮಪಿ ವರ್ಧತೇ ।**
**ಸರ್ವಾಪತ್ಪರಿಹರ್ತೃಭ್ಯಾಂ ನಮತಾಂ ಪ್ರಾಣಿನಾಂ ಸಕೃತ್ ॥ ೪೦ ॥**

---

ಅವನು ಚಂದ್ರನಂತೆ ಸಂತೋಷವನ್ನು ಉಂಟುಮಾಡುತ್ತಾ, ವೇದವಾಕ್ಯನಗಳ್ನು ಸ್ಪಷ್ಟವಾಗಿ, ಸರಿಯಾದ ಸ್ವರಗಳಿಂದ, ಹೇಳುತ್ತಿರುವುದನ್ನು ನೋಡಿದರು. ಅವನು ತಪಸ್ಸನ್ನು ಮಾಡುತ್ತಿರುವ ತಮ್ಮ ಗುಂಪಿನ ಮಧ್ಯದಲ್ಲಿಯೇ ಇರುವುದನ್ನು ನೋಡಿದ್ದರಿಂದ ಶಿವನು ತಮ್ಮ ತಪಸ್ಸಿಗೆ ಮೆಚ್ಚಿ ಪ್ರತ್ಯಕ್ಷವಾಗಿರುವನೆಂದು ತಿಳಿದರು.

೩೮-೪೧. ಆಗ ಋಷಿಗಳೆಲ್ಲರೂ ಬ್ರಾಹ್ಮಣನ ಆಕೃತಿಯಿಂದ ಶಿವನು ಪ್ರತ್ಯಕ್ಷವಾಗಿ ಇರುವುದನ್ನು ಕಂಡು ಬಹಳ ಸಂತೋಷದಿಂದ ಸಮುದ್ರನು ಪೂರ್ಣ ಚಂದ್ರನ ದರ್ಶನದಿಂದ ಉಬ್ಬುವಂತೆ ಉಬ್ಬಿದರು. ಋಷಿಗಳ ಸಂತೋಷಕ್ಕೆ ಆಗ ಕೊನೆಯೇ ಇರಲಿಲ್ಲ. ಆಗ ಋಷಿಗಳು, "ಒಂದುಸಾರಿ ನಮಸ್ಕಾರಮಾಡಿದ ಮಾತ್ರದಿಂದ ಪ್ರಾಣಿಗಳ ಎಲ್ಲಾ ವಿಧವಾದ ವಿಪತ್ತುಗಳನ್ನೂ ಪರಿಹರಿಸಿ ವಿದ್ಯೆಯನ್ನು ದಾನ

ವಿದ್ಯಾದಾನರತಾಭ್ಯಾಂ ಚ ಚರಣಾಭ್ಯಾಂ ನಮೋನಮಃ ।
ಇತ್ಯುಕ್ತ್ವಾ ಮುನಯ ಸ್ಸರ್ವೇ ಪ್ರಣೇಮುರ್ದಂಡವತ್ಕ್ಷಿತೌ ॥ ೪೧ ॥

ತಾನ್ವಿಲೋಕ್ಯ ಮುನೀನ್ಸರ್ವಾನ್ ಕೃಪಾದೃಷ್ಟ್ಯಾ ಜಗದ್ಗುರುಃ ।
ಪ್ರಾಹ ಶೀತಲಯಾ ವಾಚಾ ಯುಷ್ಮಾಕಂ ಯದಭೀಪ್ಸಿತಂ ॥ ೪೨ ॥

ತತ್ಪ್ರಾರ್ಥಯಂತು ಸಹಸಾ ಮಧ್ಭಕ್ತಾ ಮುನಿಪುಂಗವಾಃ ।
ದೇವೇನೋದಿತ ಮಾಕರ್ಣ್ಯ ಸದ್ಯ ಉತ್ಥಾಯ ಭೂಸುರಾಃ ॥ ೪೩ ॥

ಸರ್ವೇ ಸಾಂಜಲಿಹಸ್ತಾಸ್ತಂ ಪ್ರಾಹು ರ್ಮುದಿತಮಾನಸಾಃ ।
ಅನುಗ್ರಹಾರ್ಥ ಮಸ್ಮಾಕಂ ಸರ್ವೇಷಾಂ ಜಗತಾಮಪಿ ॥ ೪೪ ॥

ಸರ್ವವೇದಾರ್ಥ ಮಧುನಾ ವದ ಸರ್ವಜಗದ್ಗುರೋ ।
ಇತ್ಯುಕ್ತೇವತ್ಸು ಮುನಿಷು ಗುರುಮೂರ್ತಿ ರ್ಘೃಣಾನಿಧಿಃ ॥ ೪೫ ॥

ಶ್ರೀಮದ್ಧಾಲಾಸ್ಯನಾಥಸ್ಯ ಮಹಾಲಿಂಗಸ್ವರೂಪಿಣಃ ।
ಸನ್ನಿಧಿಂ ಪ್ರಾಪ್ಯ ತೈ ಸ್ಸರ್ವೈ ಸ್ಸಹಿತೋ ಮುನಿಪುಂಗವೈಃ ॥ ೪೬ ॥

---

ಮಾಡುವುದರಲ್ಲಿ ಆಸಕ್ತವಾಗಿರುವ ನಿಮ್ಮ ಪಾದಗಳಿಗೆ ನಮಸ್ಕಾರವು." ಎಂದು ಹೇಳುತ್ತಾ ಭೂಮಿಯಲ್ಲಿ ದಂಡಾಕಾರವಾಗಿ ನಮಸ್ಕಾರವನ್ನು ಮಾಡಿದರು.

೪೨–೪೪. ಪ್ರಪಂಚಕ್ಕೇ ಗುರುವಾಗಿರುವ ದಕ್ಷಿಣಾಮೂರ್ತಿದೇವನು ದಯೆಯಿಂದ ಕೂಡಿರುವ ದೃಷ್ಟಿಯಿಂದ ಅವರೆಲ್ಲರನ್ನೂ ನೋಡಿ, "ನೀವೆಲ್ಲರೂ ನನಗೆ ಭಕ್ತರಾಗಿರುತ್ತೀರಿ. ನಿಮ್ಮ ಇಷ್ಟವು ಯಾವುದು. ಬೇಗ ಅದನ್ನು ಕೇಳಿರಿ." ಎಂದು ಮೃದುವಾದ ಮಾತಿನಿಂದ ಹೇಳಿದನು. ದೇವನು ಹೇಳಿದ ಮಾತನ್ನು ಕೇಳಿದ ಕೂಡಲೇ, ಬ್ರಾಹ್ಮಣರೆಲ್ಲರೂ ಮೇಲಕ್ಕೆ ಎದ್ದು ನಿಂತು, ಸಂತೋಷದಿಂದ ಬಗಸೆಯನ್ನು ಕಟ್ಟಿಕೊಂಡು, "ನಮ್ಮನ್ನೂ ಪ್ರಪಂಚವೆಲ್ಲವನ್ನೂ ಅನುಗ್ರಹಿಸುವುದಕ್ಕಾಗಿ ಜಗದ್ಗುರುವಾದ ನೀನು ಈಗ ವೇದಗಳ ಅರ್ಥವನ್ನು ವಿವರವಾಗಿ ತಿಳಿಸಬೇಕು." ಎಂದು ಕೇಳಿದರು.

೪೫–೪೬. ಋಷಿಗಳು ಹೀಗೆ ಹೇಳಿದ್ದನ್ನು ಕೇಳಿ ದಯಾಶಾಲಿಯಾದ ದಕ್ಷಿಣಾಮೂರ್ತಿದೇವನು ಮಹಾಲಿಂಗ ಸ್ವರೂಪದಿಂದ ಇರುವ ಹಾಲಾಸ್ಯೇಶ್ವರನ ಸಮೀಪಕ್ಕೆ ಋಷಿಗಳೊಡನೆ ಬಂದು ಯಾರಿಗೂ ತಿಳಿಯದಿರುವ ವೇದಾರ್ಥಗಳನ್ನು ಉಪದೇಶ ಮಾಡಲು ಪ್ರಾರಂಭಿಸಿದನು.

ವಕ್ತುಮಾರಭತೇ ಸರ್ವವೇದಾರ್ಥ ಮತಿದುರ್ಲಭಂ ।

॥ ಗುರುಮೂರ್ತಿರುವಾಚ ॥

ಶೃಣುಧ್ವಂ ಭೂಸುರಾ ಸ್ಸರ್ವೇ ರಹಸ್ಯಂ ಸರ್ವವೇದಜಂ ।
ಶ್ರುತಮಾತ್ರೇಣ ಸರ್ವೇಷಾಂ ಸರ್ವದುಃಖ ನಿಕೃಂತನಂ ॥ ೪೬ ॥

ಇದಂ ಪರತರಂ ಲಿಂಗಂ ಸ್ವಯಂಭೂತೋತ್ತಮೋತ್ತಮಂ ।
ನಿದಾನಂ ಸರ್ವವೇದಾನಾ ಮರ್ಥಭೂತಂ ಚ ಸತ್ಯತಃ ॥ ೪೭ ॥

ಏಕಮೇವಾದ್ವಿತೀಯಂ ಚ ಪರಂ ಬ್ರಹ್ಮ ಪರಾತ್ಪರಂ ।
ಸತ್ಯಂ ವಿಜ್ಞಾನ ಮಾನಂದಂ ಪರಿಪೂರ್ಣಂ ಪರಂ ಮಹಃ ॥ ೪೮ ॥

ಇತಿ ಪ್ರಾಹುಶ್ಚ ವೇದಾಂತಾಃ ಸುಂದರೇಶಂ ಸನಾತನಂ ।
ಏಕ ಏವ ಹಿ ವೇದಶ್ಚ ವೇದಾರ್ಥಸ್ತ್ವೇಕ ಏವ ಹಿ ॥ ೪೯ ॥

---

೪೭. ಗುರುಮೂರ್ತಿಯಾದ ದಕ್ಷಿಣಾಮೂರ್ತಿದೇವನು ಹೇಳಿದನು:---ಎಲ್ಲಾ ವೇದಗಳ ರಹಸ್ಯವಾದ ಅರ್ಥವನ್ನು ಹೇಳುವೆನು. ನೀವೆಲ್ಲರೂ ಕೇಳಿರಿ. ಇದನ್ನು ಕೇಳಿದ ಮಾತ್ರದಿಂದ ಎಲ್ಲರಿಗೂ ದುಃಖವು ನಾಶವಾಗುವುದು. ಈ ಲಿಂಗವು ಶಿವಲಿಂಗ ಗಳೆಲ್ಲಕ್ಕಿಂತಲೂ ಬಹಳ ಉತ್ತಮವಾದದ್ದು. ಇದು ವೇದಗಳೆಲ್ಲಕ್ಕೂ ಮೂಲಕಾರಣ ವಾಗಿರುವುದು. (ಇದರ ಸತ್ತೆಯು) ಸನ್ಮಾತ್ರ ಸ್ವರೂಪವೇ ವೇದಾರ್ಥವಾಗಿರುವುದು.

೪೮-೫೦ "ಸುಂದರೇಶ್ವರನು ನಿತ್ಯನಾಗಿರುವನು. ಇವನು ಒಬ್ಬನೇ, ಈ ಪ್ರಪಂಚದಲ್ಲಿ ಪದಾರ್ಥವು. ಇವನಿಗಿಂತ ಎರಡನೆಯ ವಸ್ತುವು ಇರುವುದಿಲ್ಲ. ಇವನು ಪರಬ್ರಹ್ಮನಾಗಿರುವನು. ಶ್ರೇಷ್ಠವಾದವಸ್ತುಗಳೆಲ್ಲಕ್ಕಿಂತಲೂ ಶ್ರೇಷ್ಠನು. ಸಚ್ಚಿದಾನಂದ ರೂಪದಿಂದ ಇರುವನು. ಸತ್ತಾಮಾತ್ರಸ್ವರೂಪನಾಗಿರುವನು. ಜ್ಞಾನ, ಆನಂದಗಳು ಇವನ ಆಕಾರಗಳು. ಯಾವಾಗಲೂ ಇವನು ಪೂರ್ಣನಾಗಿರುವನು. ಪ್ರಕೃತಿಗಿಂತಲೂ ಬೇರೆಯಾಗಿರುವ ತೇಜಸ್ಸಿನ ರೂಪದಿಂದ ಇರುವನು" ಎಂದು ವೇದಗಳ ನಿಶ್ಚಯವು

ತಥಾಪಿ ಶಾಖಾಭೇದೇನ ಬಹುಭೇದಸಮನ್ವಿತಾಃ ।
ವೇದಾಸ್ತ್ವನಂತಾ ಅಭವನ್ ವೇದಾರ್ಥಾಶ್ಚ ತಥೈವ ಹಿ ॥ ೫೦ ॥

ಮಾಯಯಾ ಸುಂದರೇಶಸ್ಯ ನ ಸ್ವರೂಪೇಣ ಭೂಸುರಾಃ ।
ಸೃಷ್ಟ್ವಾ ವಿರಿಂಚಿಮಾದೌ ತು ದೇವೋ ಹಾಲಾಸ್ಯನಾಯಕಃ ॥ ೫೧ ॥

ದತ್ತವಾನ ಖಿಲಾನ್ನಾಮ್ನಾಯಾಂಸ್ವ ಸ್ವರೂಪಸಮುದ್ಭವಾನ್ ।
ಪಶ್ಚಾ ಜ್ಜಗತ್ರಯಂ ತೇನ ವೇದವಿಜ್ಞಾನವದ್ಭವೇತ್ ॥ ೫೨ ॥

ಜ್ಯೋತಿರ್ಮಯಂ ಮಹಾಲಿಂಗ ಮಾದಿಮಧ್ಯಾಂತವರ್ಜಿತಂ ।
ತದಾ ಕಾಶಶರೀರಂ ಚ ಬ್ರಹ್ಮೇತಿ ಪ್ರತಿಪಾದಿತಂ ॥ ೫೩ ॥

ಸೃಷ್ಟ್ಯಾದಿಕಾರಣತ್ವೇನ ವಿಭಕ್ತ ಮಭವತ್ತ್ರಿಧಾ ।
ಆತ್ಮತತ್ತ್ವ ಮಧೋಭಾಗೇ ವಿದ್ಯಾತತ್ತ್ವಂ ಚ ಮಧ್ಯಮೇ ॥ ೫೪ ॥

ತದಗ್ರೇ ಶಿವತತ್ತ್ವಂ ಚ ಕ್ರಮಾತ್ತತ್ತ್ವಾನಿ ಸಂತಿ ಹಿ ।
ಸರ್ವೇಷ್ವೇತೇಷು ಭಾಗೇಷು ಸರ್ವತತ್ತ್ವಂ ಸಮುತ್ಥಿತಂ ॥ ೫೫ ॥

---

ಇರುವುದು. ವೇದವೂ ಒಂದೇ ಆಗಿ, ವೇದಾರ್ಥವೂ ಒಂದೇ ಆಗಿರುವುದು. ವೇದದಲ್ಲಿ ಶಾಖೆಗಳ ಭೇದದಿಂದ ವೇದಗಳು ಅನೇಕಗಳಾದವು. ವೇದಾರ್ಥಗಳೂ ಬೇರೆ ಬೇರೆಯಾದವು. ಸುಂದರೇಶ್ವರನ ಮಾಯೆಯಿಂದ ಈ ಭೇದವು ಉಂಟಾಗಿರುವುದು. ಪರಮಾರ್ಥದಲ್ಲಿ ಮಾತ್ರ ಭೇದವು ಇರುವುದಿಲ್ಲ.

೫೧–೫೫. ಹಾಲಾಸ್ಯ ಕ್ಷೇತ್ರಕ್ಕೆ ಪ್ರಭುವಾಗಿರುವ ಸುಂದರೇಶ್ವರನು, ಬೇರೆಯಾಗಿರುವ ಮಾಯೆಯಿಂದ ಮೊದಲು ಬ್ರಹ್ಮನನ್ನು ಸೃಷ್ಟಿಮಾಡಿ, ತನ್ನ ಜ್ಞಾನರೂಪದಿಂದ ಇರುವ ವೇದಗಳನ್ನು ಅವನಿಗೆ ಉಪದೇಶ ಮಾಡಿದನು. ಅದರಿಂದ ಪ್ರಪಂಚವು ವೇದಜ್ಞಾನವುಳ್ಳದ್ದಾಯಿತು. ಆದಿ, ಮಧ್ಯ, ಅಂತಗಳು ಇಲ್ಲದಿರುವ, ತೇಜೋರೂಪದಿಂದ ಇರುವ ಮಹಾಲಿಂಗವು, ಆಕಾಶ ಶರೀರ ರೂಪದಿಂದ ಇರುವುದೆಂದು ನಿಶ್ಚಯ ಮಾಡಿರುವರು. ಇದು ಸೃಷ್ಟಿಯೇ ಮೊದಲಾದ ಕಾರ್ಯಗಳಿಗೆ ಕಾರಣವೆಂದು ಮೂರು ಭಾಗವಾಗಿ ವಿಂಗಡವಾಗಿರುವುದು. ಈ ಮಹಾಲಿಂಗದ ಅಧೋಭಾಗವು ಆತ್ಮ ತತ್ತ್ವವೆನಿಸಿಕೊಂಡಿರುವುದು. ಮಧ್ಯಭಾಗವು ವಿದ್ಯಾ ತತ್ತ್ವವೆಂದು ಹೆಸರನ್ನು ಹೊಂದಿರುವುದು. ಮೇಲುಭಾಗವು ಶಿವತತ್ತ್ವವಾಗಿ ಇರುವುದು. ಈ ಮೂರು ವಿಧವಾದ ಭಾಗಗಳಿಂದ ಎಲ್ಲಾ ತತ್ತ್ವಗಳೂ ಹುಟ್ಟಿರುವವು.

ಬ್ರಹ್ಮಾ ವಿಷ್ಣುಶ್ಚ ರುದ್ರಶ್ಚ ಸರ್ವಕಾರಣ ಮೀಶ್ವರಃ ।
ಕ್ರಮಾತ್ತತ್ತ್ವಾಧಿಪಾಃ ಪ್ರೋಕ್ತಾಃ ಸರ್ವವೇದೇಷು ಸುವ್ರತಾಃ ॥ ೫೬ ॥

ಆತ್ಮತತ್ತ್ವಾದಕಾರಶ್ಚ ವಿದ್ಯಾತತ್ತ್ವಾದುಕಾರಕಃ ।
ಶಿವತತ್ತ್ವಾ ನ್ಮಕಾರಶ್ಚ ಸರ್ವತತ್ತ್ವಾ ನ್ಮನೀಶ್ವರಾಃ ॥ ೫೭ ॥

ನಾದ ಸ್ಸಬಿಂದು ರಭವತ್ಪ್ರಣವೋತ್ಪತ್ತಿ ರೀರಿತಾ ।
ವ್ಯಕ್ತಾ ಸ್ಸಮಸ್ತಾಃ ಪ್ರಣವಾದ್ವ್ಯಸ್ತಾ ಅಪಿ ಸಮಸ್ತಕಾಃ ॥ ೫೮ ॥

ಭೂರಾದಯೋ ವ್ಯಾಹೃತಯ ಸ್ಸಂಭವಂತಿ ಶಿವಾಜ್ಞಯಾ ।
ಪುನ ಸ್ತಾಭ್ಯ ಸ್ಸಮುದ್ಭೂತಾ ಸಮಷ್ಟಿವ್ಯಷ್ಟಿರೂಪಿಣೀ ॥ ೫೯ ॥

ತ್ರಿಪದಾ ವೇದಜನನೀ ಗಾಯಿತ್ರೀ ಚಿಂತಿತಾರ್ಥದಾ ।
ತಸ್ಯಾ ವೇದಾ ಸ್ಸಮುತ್ಪನ್ನಾ ಋಗ್ಯಜುಸ್ಸಾಮಸಂಜ್ಞಿತಾಃ ॥ ೬೦ ॥

---

೫೬-೫೭. ಬ್ರಹ್ಮ, ವಿಷ್ಣು, ರುದ್ರ, ಇವರಿಗೂ ಎಲ್ಲಕ್ಕೂ ಈಶ್ವರನು ಕಾರಣವಾಗಿರುವನು. ಎಲ್ಲಾ ವೇದಗಳಲ್ಲಿಯೂ ಬ್ರಹ್ಮ, ವಿಷ್ಣು, ಮಹೇಶ್ವರರು ಕ್ರಮವಾಗಿ ತತ್ತ್ವಗಳಿಗೆ ಅಧಿಪತಿಗಳೆಂದು ಹೇಳಿರುವುದು. ಪ್ರಣವ ಮಂತ್ರಗತವಾದ ಅಕಾರ, ಉಕಾರ, ಮಕಾರ, ನಾದ, ಬಿಂದುಗಳಲ್ಲಿ ಅಕಾರವು ಆತ್ಮ ತತ್ತ್ವವುಳ್ಳದ್ದಾಗಿರುವುದು. ಉಕಾರವು ವಿದ್ಯಾ ತತ್ತ್ವವುಳ್ಳದ್ದಾಗಿರುವುದು. ಮಕಾರವು ಶಿವತತ್ತ್ವವುಳ್ಳದ್ದಾಗಿರುವುದು. ನಾದವು ಎಲ್ಲಾ ತತ್ತ್ವಗಳನ್ನೂ ಒಳಗೊಂಡಿರುವುದು. ನಾದವೇ ಬಿಂದುವಾಗಿರುವುದು. ಪ್ರಣವಮಂತ್ರದ ಉತ್ಪತ್ತಿಕ್ರಮವು ಈ ಪ್ರಕಾರದಿಂದ ಇರುವುದು. ಸಮಷ್ಟಿ ರೂಪದಿಂದ ಇರುವ ಪ್ರಣವ ಮಂತ್ರದಿಂದ ಸಮಷ್ಟಿಯಾಗಿ ಉತ್ಪನ್ನವಾದ ವ್ಯಾಹೃತಿ ಮಂತ್ರಗಳು ಶಿವನ ಆಜ್ಞೆಯಿಂದ ವ್ಯಷ್ಟಿರೂಪವನ್ನು ಹೊಂದಿರುವವು.

೫೮-೬೧. ವ್ಯಾಹೃತಿ ಮಂತ್ರಗಳಿಂದಲೇ ಸಮಷ್ಟಿ ವ್ಯಷ್ಟಿ ರೂಪದಿಂದ ಇರುವ ಮೂರು ಪಾದಗಳುಳ್ಳ,ವೇದಮಾತೆಯಾದ,ಇಷ್ಟಾರ್ಥವನ್ನು ಕೊಡುವ ಗಾಯಿತ್ರಿಯು

ಅಥರ್ವವೇದಸಹಿತಾ ಹಾಲಾಸ್ಯೇಶಶಿವಾಜ್ಞಯಾ ।
ಪುನರ್ಬಹುಪ್ರಭೇದೇನ ವೇದಾ ವಿಸ್ತಾರಿತಾ ದ್ವಿಜಾಃ ॥ ೬೧ ॥

ಪ್ರಣವಾದ್ಯಾ ಮಹಾಮಂತ್ರಾ ಅಕಾರಾದ್ಯಕ್ಷರಾಣಿ ಚ ।
ಶಿವಜ್ಞಾನಾನಿ ದಿವ್ಯಾನಿ ಕಾಮಿಕಾದೀನಿ ಭೂಸುರಾಃ ॥ ೬೨ ॥

ಶ್ರೀಮದ್ಧಾಲಾಸ್ಯನಾಥಸ್ಯ ಸಂಭವಂತ್ಯೂರ್ಧ್ವವಕ್ತ್ರತಃ ।
ಪುನ ಸ್ಸದೇವದೇವಸ್ಯ ಪುರುಷಾಖ್ಯೇನ ವಕ್ತ್ರತಃ ॥ ೬೩ ॥

ಏಕವಿಂಶತಿಭೇದೇನ ಯುಕ್ತ ಮೃಗ್ವೇದ ಮಬ್ರವೀತ್ ।
ಯಜುರ್ವೇದಂ ತ್ವೇಕಶತಭೇದಯುಕ್ತ ಮಘೋರತಃ ॥ ೬೪ ॥

ಸಹಸ್ರಭೇದಸಹಿತಂ ಸಾಮವೇದಂ ತು ವಾಮತಃ ।
ಅಥರ್ವಂ ನವಧಾ ಭಕ್ತಂ ಸದ್ಯೋಜಾತೇನ ಚಾ ಬ್ರವೀತ್ ॥ ೬೫ ॥

---

ಉತ್ಪನ್ನವಾಯಿತು. ಹಾಲಾಸ್ಯೇಶ್ವರನಾದ ಶಿವನ ಆಜ್ಞೆಯಿಂದ ಋಕ್, ಯಜುಸ್, ಸಾಮ, ಅಥರ್ವ ಎಂದು ಹೆಸರುಳ್ಳ ವೇದಗಳು ಹುಟ್ಟಿದವು. ಅವುಗಳು ಬಹಳ ಭೇದಗಳಿಂದ ಕೂಡಿದವುಗಳಾಗಿ ದೊಡ್ಡವುಗಳಾದವು.

೬೨-೬೫. ಹಾಲಾಸ್ಯೇಶ್ವರನ ಊರ್ಧ್ವ ಮುಖದಿಂದ ಪ್ರಣವವೇ ಮೊದಲಾದ ಮಹಾಮಂತ್ರಗಳೂ, ಅಕಾರವೇ ಮೊದಲಾದ ಅಕ್ಷರಗಳೂ, ಕಾಮಿಕವೇ ಮೊದಲಾದ ಶಿವಜ್ಞಾನವನ್ನು ಬೋಧಿಸುವ ಆಗಮಗಳೂ ಹುಟ್ಟಿರುವವು. ಹಾಲಾಸ್ಯೇಶ್ವರನ ತತ್ಪುರುಷ ಎಂಬ ಹೆಸರುಳ್ಳ ಮುಖದಿಂದ ಇಪ್ಪತ್ತೊಂದು ವಿಧವಾಗಿರುವ ಋಗ್ವೇದವನ್ನು ಉಪದೇಶ ಮಾಡಿದನು. ಅಘೋರವೆಂಬ ಹೆಸರುಳ್ಳ ವದನದಿಂದ ನೂರೆಂಟು ಭೇದವುಳ್ಳ ಯಜುರ್ವೇದವನ್ನು ಉಪದೇಶ ಮಾಡಿದನು. ವಾಮದೇವ ಎಂಬ ಹೆಸರುಳ್ಳ ಮುಖದಿಂದ ಸಾವಿರ ಭೇದವುಳ್ಳ ಸಾಮವೇದವನ್ನು ಹೇಳಿದನು. ಸದ್ಯೋಜಾತವೆಂದು ಹೆಸರುಳ್ಳ ಮುಖದಿಂದ ಒಂಬತ್ತು ವಿಧವಾದ ಅಥರ್ವಣವೇದವನ್ನು ಉಪದೇಶ ಮಾಡಿದನು.

ಚತುರ್ವಿಧೇನ ಭೇದೇನ ವರ್ಣಾಶ್ಚತ್ವಾರ ಆಶ್ರಮಾಃ ।
ಧರ್ಮಾಶ್ಚ ವಿವಿಧಾ ಯಜ್ಞಾ ಪ್ರವೃತ್ತಾ ವೇದವೈಭವಾತ್ ॥ ೬೬ ॥

ತಾನ್ ಕುರ್ವಂತಿ ಬುಧಶ್ರೇಷ್ಠಾ ವೇದಾರ್ಥತ್ವಂ ಮುದಾನ್ವಿತಾಃ ।
ವೇದಾನಾಂ ಚ ಸಮುಸ್ತಾನಾಂ ಭಾಗಸ್ತು ದ್ವಿವಿಧೋ ಮತಃ ॥ ೬೭ ॥

ಪ್ರಥಮಃ ಕರ್ಮಕಾಂಡಾಖ್ಯೋ ಜ್ಞಾನಕಾಂಡೋ ದ್ವಿತೀಯಕಃ ।
ಏತನ್ಮಹಾಲಿಂಗಪೂಜಾಂ ಕರ್ಮಕಾಂಡಗತಾನಿ ಹಿ ॥ ೬೮ ॥

ಬೋಧಯಂತಿ ಚ ವಾಕ್ಯಾನಿ ಸತ್ಯಮೇವ ಮುನೀಶ್ವರಾಃ ।
ಜ್ಞಾನಕಾಂಡಜವಾಕ್ಯಾನಿ ರೂಪಂ ಸಚ್ಚಿತ್ಸುಖಾತ್ಮಕಂ ॥ ೬೯ ॥

ಶ್ರೀಮದ್ಧಾಲಾಸ್ಯನಾಥಸ್ಯ ವದಂತ್ಯತ್ಯಾದರೇಣ ತು ।
ವಿಷ್ಣ್ವಾದಿದೇವತಾ ಸ್ಸರ್ವಾಸ್ತ್ವಂಶಭೂತಾಃ ಪಿನಾಕಿನಃ ॥ ೭೦ ॥

---

೬೬–೬೯. ವೇದಗಳು ನಾಲ್ಕು ವಿಧವಾಗಿರುವುದರಿಂದ ಅವುಗಳ ಭೇದಕ್ಕನು ಸಾರವಾಗಿ ಅವುಗಳ ಮಹಿಮೆಯಿಂದ ನಾಲ್ಕು ವರ್ಣಗಳೂ, ನಾಲ್ಕು ಆಶ್ರಮಗಳೂ, ಉಂಟಾದವು. ಇವೆಲ್ಲವೂ ವೇದಗಳ ಅರ್ಥವೇ ಆಗಿರುವುದರಿಂದ ತಿಳಿದವರು ಸಂತೋಷದಿಂದ ಇವುಗಳನ್ನು ಆಚರಿಸುವರು. ಈ ನಾಲ್ಕು ವೇದಗಳೂ ಎರಡು ಭಾಗವಾಗಿ ಇರುವವು. ಮೊದಲನೆಯ ಭಾಗಕ್ಕೆ ಕರ್ಮ ಕಾಂಡವೆಂತಲೂ, ಎರಡ ನೆಯ ಭಾಗಕ್ಕೆ ಜ್ಞಾನಕಾಂಡವೆಂತಲೂ, ಹೆಸರು ಬಂದಿರುವುದು. ಕರ್ಮಕಾಂಡ ದಲ್ಲಿರುವ ವಾಕ್ಯಗಳು ಈ ಮಹಾಲಿಂಗದ ಉಪಾಸನಾ ಕ್ರಮವನ್ನು ಬೋಧಿಸುವವು. ಇದು ಸತ್ಯವಾದದ್ದು. ಜ್ಞಾನ ಕಾಂಡದಲ್ಲಿರುವ ವಾಕ್ಯಗಳು ಹಾಲಾಸ್ಯೇಶ್ವರನ ಸಚ್ಚಿ ದಾನಂದ ರೂಪವನ್ನು ಆದರದಿಂದ ತಿಳಿಸುವವು. ವಿಷ್ಣುವೇ ಮೊದಲಾದ ದೇವತೆಗಳು ಶಿವನ ಅಂಶವಾಗಿ ಇರುವರು.

೭೦–೭೪. ಮಹಾದೇವನು ಎಲ್ಲವನ್ನೂ ವ್ಯಾಪಿಸಿಕೊಂಡು, ಅಂಶಿಯಾಗಿರು ವನು. ಎಲ್ಲಾ ದೇವತೆಗಳನ್ನೂ ಉದ್ದೇಶವಾಡಿ ಹೋಮಮಾಡಿದ ಎರಡು ವಿಧವಾದ ಹವಿಸ್ಸನ್ನು ಅಂಶಿದೇವನಾಗಿರುವ ಹಾಲಾಸ್ಯೇಶ್ವರನು ಸ್ವೀಕರಿಸಿ, ತಾನೇ ಹೋಮ

ಸರ್ವವ್ಯಾಪೀ ಮಹಾದೇವಃ ಸ್ವಯಮಂಶೀ ಪ್ರಕೀರ್ತಿತಃ ।
ಸರ್ವಾಸಾಂ ದೇವತಾನಾಂ ಚ ಹೂತಂ ಯದ್ದ್ವಿವಿಧಂ ಹವಿಃ ॥ ೭೧ ॥

ತತ್ಸರ್ವ ಮಂಶೀ ಗೃಹ್ಣಾಂತಿ ಫಲಾನ್ಯಪಿ ದದಾತಿ ಚ ।
ಅಗ್ನಿಷ್ಟೋಮಾದಯೋ ಯಜ್ಞಾ ಸ್ತ್ವಶ್ವಮೇಧಾವಸಾನಕಾಃ ॥ ೭೨ ॥

ನಿತ್ಯಕೃತ್ಯಾನಿ ಸರ್ವಾಣಿ ತಥಾ ನೈಮಿತ್ತಿಕಾನ್ಯಪಿ ।
ಕಾಮ್ಯಾನ್ಯಪಿ ಚ ಕರ್ಮಾಣಿ ವೇದೋಕ್ತಾನಿ ಬಹೂನಿ ಚ ॥ ೭೩ ॥

ಶ್ರೀಮದ್ಧಾಲಾಸ್ಯನಾಥಸ್ಯ ಸರ್ವತತ್ತ್ವಾಲಯಸ್ಯ ಚ ।
ಸಪರ್ಯಾ ವಿವಿಧಾ ಏವ ನಾತ್ರ ಕಾರ್ಯಾ ವಿಚಾರಣಾ ॥ ೭೪ ॥

ಏಕಂ ಬ್ರಹ್ಮಾದ್ವಿತೀಯಂ ಚ ಸತ್ಯಜ್ಞಾನಸುಖಾತ್ಮಕಂ ।
ನಿಷ್ಕಲಂ ನಿರ್ಮಲಂ ಶುದ್ಧ ಶಿವಂ ಸೂಕ್ಷ್ಮಂ ನಿರಂಜನಂ ॥ ೭೫ ॥

---

ಮಾಡಿದವರಿಗೆ ಫಲಗಳನ್ನು ಕೊಡುವನು. ಅಗ್ನಿಷ್ಟೋಮವೇ ಮೊದಲಾದ ಅಶ್ವಮೇಧ ಯಜ್ಞವೇ ಕೊನೆಯಾಗಿರುವ ಎಲ್ಲಾ ಯಜ್ಞಗಳೂ, ನಿತ್ಯಕರ್ಮಗಳೂ, ನೈಮಿತ್ತಿಕವಾದ ಕರ್ಮಗಳೂ ವೇದೋಕ್ತವಾದ ಅನೇಕ ವಿಧವಾದ ಕಾಮ್ಯ ಕರ್ಮಗಳೂ ಇವೆಲ್ಲವೂ, ಎಲ್ಲಾ ತತ್ತ್ವಗಳಿಗೂ ಆಧಾರವಾಗಿರುವ ಹಾಲಾಸ್ಯೇಶ್ವರನ ಅನೇಕ ವಿಧವಾದ ಪೂಜೆಗಳಾಗಿರುವವು.

೭೫-೮೭. ಜ್ಞಾನಕಾಂಡಗತವಾದ ವಾಕ್ಯಗಳು ಜೀವನ್ಮುಕ್ತಿಪುರೀಶ್ವರನ ಸ್ವರೂಪವನ್ನು ಬೋಧಿಸುವವು. ಇವನು ಸಚ್ಚಿದಾನಂದ ರೂಪದಿಂದ ಇರುವ ಬ್ರಹ್ಮನಾಗಿರುವನು. ಬ್ರಹ್ಮನೆಂದು ಹೇಳಿಸಿಕೊಳ್ಳುವನು. ಇವನಿಗಿಂತಲೂ ಬೇರೆ ಇನ್ನೊಬ್ಬನು ಇರುವುದಿಲ್ಲವು. ಇವನು ಕಲಾರಹಿತನು. ಪರಿಶುದ್ಧನಾಗಿರುವನು. ಮಲಸಂಬಂಧ ರಹಿತನಾಗಿರುವನು. ಮಂಗಳಕರನು. ಸೂಕ್ಷ್ಮನಾಗಿರುವನು. ಯಾವ ವಿಧವಾದ ಕರ್ಮ ಲೇಪವೂ ಇಲ್ಲದವನು. ದೇವತೆಗಳಿಗೆಲ್ಲರಿಗೂ ಆದಿಯಾಗಿರುವ

**ದೇವಾನಾಮಾದಿಭೂತಂ ಚ ರುದ್ರಂ ವಿಶ್ವಾಧಿಕಂ ಪ್ರಭುಂ ।**
**ಸರ್ವಜ್ಞಂ ಸರ್ವಕರ್ತಾರಂ ಸರ್ವಕಾರಣ ಮೀಶ್ವರಂ　　॥ ೭೬ ॥**

**ಅನಾದಿನಿಧನಂ ವಸ್ತು ಪರಾಪರವಿಹೀನಕಂ ।**
**ಪರಮಾತ್ಮಸ್ವರೂಪಂ ಚ ಪರಂಜ್ಯೋತಿಃ ಪರಾತ್ಪರಂ　　॥ ೭೭ ॥**

**ನಿಷ್ಠಾಂ ಪ್ರಾಪ್ತಂ ಪರಂ ತತ್ತ್ವಮಪ್ರಮೇಯ ಮನೂಪಮಂ ।**
**ಕಥಯಂತೀತಿ ವೇದಾಂತಾ ಜೀವನ್ಮುಕ್ತಿಪುರಪ್ರಭುಂ　　॥ ೭೮ ॥**

**ತತ್ತ್ವಮಸ್ಯಾದಿವಾಕ್ಯೇನ ಪ್ರತಿಪಾದ್ಯೋಽಯಮೇವ ಹಿ ।**
**ಮಹಾಲಿಂಗಸ್ವರೂಪೀಶಃ ಕದಂಬವನನಾಯಕಃ　　॥ ೭೯ ॥**

**ಇತಿ ಜಾನಂತಿ ವೇದಾಂತೈಃ ಗುರೋಃ ಕಾರುಣ್ಯತಶ್ಚ ಯೇ ।**
**ಶೋಕಂ ತರಂತಿ ತೇ ಸರ್ವೇ ಹಾಲಾಸ್ಯೇಶಪ್ರಸಾದತಃ　　॥ ೮೦ ॥**

---

ಹಾಲಾಸ್ಯೇಶ್ವರನು ಪ್ರಪಂಚವೆಲ್ಲಕ್ಕೂ ಅಧಿಕನಾದ ರುದ್ರನಾಗಿ ಪ್ರಭುವಾಗಿರುವನು. ಎಲ್ಲವನ್ನೂ ತಿಳಿದು ಸರ್ವಜ್ಞನೆನಿಸಿಕೊಂಡಿರುವನು. ಎಲ್ಲವನ್ನೂ ನಿರ್ಮಿಸಿ, ಸರ್ವ ಕರ್ತೃವೆನಿಸಿರುವನು. ಎಲ್ಲಕ್ಕೂ ಕಾರಣನಾಗಿಯೂ, ಈಶ್ವರನಾಗಿಯೂ ಇರುವನು. ಪರ ಮತ್ತು ಅಪರ (ಉಚ್ಚ-ನೀಚ) ಎಂಬ ಭೇದಗಳಿಲ್ಲದೆ ಇರುವನು. ಆದಿ ಮಧ್ಯಾಂತವಿಲ್ಲದೆ ಇರುವನು. ಉತ್ಕೃಷ್ಟವಾದ ತೇಜಸ್ಸಿನ ರೂಪವನ್ನು ಹೊಂದಿ ಪ್ರಕಾಶಿಸುತ್ತಿರುವನು. ಎಲ್ಲಕ್ಕಿಂತಲೂ ಶ್ರೇಷ್ಠನಾದ ಪರಮಾತ್ಮನೆನಿಸಿಕೊಂಡಿರುವನು. ಮತ್ತು ಈ ಹಾಲಾಸ್ಯೇಶ್ವರನು ಎಲ್ಲಕ್ಕಿಂತಲೂ ಉತ್ತಮವಾದ ಸ್ಥಿತಿಯನ್ನು ಹೊಂದಿರುವ ಪ್ರಮಾಣಾಗೋಚರವಾದ ಹೋಲಿಕೆಯಿಲ್ಲದೆ ಇರುವ ತತ್ತ್ವರೂಪದಿಂದ ಇರುವನು.

೭೯–೮೦. ತತ್ತ್ವಮಸಿ ಎಂಬ ಇವೇ ಮೊದಲಾದ ವಾಕ್ಯಗಳೂ ಈ ಅರ್ಥವನ್ನೇ ಬೋಧಿಸುವವು. ಗುರುವಿನ ಅನುಗ್ರಹವನ್ನು ಹೊಂದಿದವರು ಕದಂಬ ವನಾಧಿಪನಾದ ಹಾಲಾಸ್ಯೇಶ್ವರನು ಮಹಾಲಿಂಗಸ್ವರೂಪದಿಂದ ಇರುವನು, ಎಂಬುದಾಗಿಯೂ, ವೇದಾಂತಗಳು ಬೋಧಿಸುವ-ಅರ್ಥವಾಗಿರುವನು, ಎಂಬುದಾಗಿಯೂ ತಿಳಿದು ಹಾಲಾಸ್ಯೇಶ್ವರನ ಅನುಗ್ರಹಕ್ಕೆ ಪಾತ್ರರಾಗಿ ದುಃಖವನ್ನು ನಾಶಪಡಿಸಿಕೊಳ್ಳುವರು.

ತಸ್ಮಾತ್ಕಾಂಡದ್ವಯಸ್ಯಾರ್ಥ ಸ್ಸಮೀನಾಕ್ಷೀಪತಿಃ ಪ್ರಭುಃ ।
ಸರ್ವಲೋಕಸಮುತ್ಪತ್ತೇಃ ಪುರಸ್ತಾಚ್ಚ ಸಮುತ್ಥಿತಃ ॥ ೮೧ ॥

ವೇದೋಕ್ತಸರ್ವಕೃತ್ಯಾನಾ ಮನುಷ್ಠಾನೇನ ಯತ್ಫಲಂ ।
ಜನ ಸ್ತತ್ಫಲ ಮಾಪ್ನೋತಿ ಹಾಲಾಸ್ಯೇಶ್ವರಪೂಜಯಾ ॥ ೮೨ ॥

ಧ್ಯಾನೇನಾಸ್ಯ ಚ ಲಿಂಗಸ್ಯ ವೇದಾಂತಜ್ಞಾನಜಂ ಫಲಂ ।
ಭವಿಷ್ಯತಿ ನ ಸಂದೇಹ ಸ್ಸತ್ಯಮುಕ್ತಂ ಮುನೀಶ್ವರಾಃ ॥ ೮೩ ॥

ಕರ್ಮಣಾ ಚಿತ್ತಶುದ್ಧಿ ಸ್ಸ್ಯಾತ್ತಯಾ ಜ್ಞಾನಾಂಗಸಂಭವಃ ।
ಧರ್ಮಾಶ್ಚ ಶಾಂತಿದಾಂತಾದ್ಯಾ ಯಮಾದ್ಯಷ್ಟಾಂಗಯೋಗಕಾಃ ॥ ೮೪ ॥

ಜ್ಞಾನಾಂಗಾನೀತಿ ವೇದಾಶ್ಚ ಕಥಯಂತಿ ಮಹೀಸುರಾಃ ।
ಜ್ಞಾನಾಂಗೇಷು ಸಮಸ್ತೇಷು ಭಕ್ತ್ಯಾ ಲಿಂಗೇ ಶಿವಾರ್ಚನಂ ॥ ೮೫ ॥

---

೮೧–೮೩. ಆದ್ದರಿಂದ ಕರ್ಮಕಾಂಡ ಮತ್ತು ಜ್ಞಾನಕಾಂಡಗಳೆರಡರಲ್ಲಿಯೂ ಮೀನಾಕ್ಷೀದೇವಿಗೆ ಪತಿಯಾಗಿರುವ ಹಾಲಾಸ್ಯೇಶ್ವರನು ಪ್ರತಿಪಾದ್ಯನಾಗಿರುವನು. ಪ್ರಪಂಚವೆಲ್ಲಕ್ಕೂ ಪ್ರಭುವಾದ ಈ ದೇವನು ಲೋಕಗಳು ಎಲ್ಲವೂ ಸೃಷ್ಟಿಯಾಗುವುದಕ್ಕಿಂತ ಮುಂಚಿನಿಂದಲೂ ಇರುವನು. ವೇದೋಕ್ತವಾದ ಕರ್ಮಗಳೆಲ್ಲವನ್ನೂ ಆಚರಿಸುವುದರಿಂದ ಉಂಟಾಗುವ ಫಲವು ಹಾಲಾಸ್ಯೇಶ್ವರನನ್ನು ಪೂಜಿಸುವುದರಿಂದ ಜನರಿಗೆ ಉಂಟಾಗುವುದು. ಈ ಮಹಾಲಿಂಗವನ್ನು ಧ್ಯಾನಮಾಡುವುದರಿಂದ ವೇದಾಂತ ಜ್ಞಾನದಿಂದ ಉಂಟಾಗುವ ಫಲವು ಉಂಟಾಗುವುದು. ಇದು ಸತ್ಯವಾದದ್ದು. ಈ ವಿಷಯದಲ್ಲಿ ಸಂದೇಹವು ಇಲ್ಲವು.

೮೪. ವೇದೋಕ್ತ ಕರ್ಮಾಚರಣೆಯಿಂದ ಚಿತ್ತ ಶುದ್ಧಿಯುಂಟಾಗುವುದು. ಅದರಿಂದ ಜ್ಞಾನಾಂಗಗಳು ಉಂಟಾಗುವವು. ಶಾಂತಿ, ದಾಂತಿಯೇ ಮೊದಲಾದವುಗಳೂ, ಯಮನಿಯಮವೇ ಮೊದಲಾದ ಅಷ್ಟಾಂಗ ಯೋಗಗಳೂ, ಜ್ಞಾನಾಂಗಗಳೆನಿಸುವವು. ಚಿತ್ತ ಶುದ್ಧಿಯಿಂದ ಈ ಜ್ಞಾನಾಂಗಗಳು ಉಂಟಾಗುವವು.

೮೫–೮೯. ಜ್ಞಾನಾಂಗಗಳೆಲ್ಲವನ್ನೂ ಪೂರ್ಣವಾಗಿ ಹೊಂದಿರುವವನು ಭಕ್ತಿಯಿಂದ ಶಿವನನ್ನು ಪೂಜಿಸುವನು. ಶಿವಲಿಂಗವನ್ನು ಪ್ರತಿಷ್ಠೆ ಮಾಡುವನು, ಶಿವಕ್ಷೇತ್ರಗಳಲ್ಲಿ ಯಾತ್ರೆ ಮಾಡುವನು, ಶಿವನಲ್ಲಿ ಭಕ್ತಿಯುಳ್ಳವರನ್ನು ಆದರದಿಂದ ಕಾಣು

**ಶಿವಲಿಂಗಪ್ರತಿಷ್ಠಾ ಚ ಶಿವಸ್ಥಾನನಿರೀಕ್ಷಣಂ ।**
**ಶಿವಭಕ್ತಪ್ರಪೂಜಾ ಚ ಶಿವೇ ಭಕ್ತಿಃ ಪರಾತ್ಪರೇ ॥ ೮೬ ॥**

**ರುದ್ರಾಕ್ಷಧಾರಣಂ ಮೂರ್ಧ್ನಿ ಕರ್ಣಯೋಃ ಕಂಧರೇಥವಾ ।**
**ಅಗ್ನಿರಿತ್ಯಾದಿಭಿ ರ್ಮಂತ್ರೈ ರ್ಭಸ್ಮನಾ ಚಾವಕುಂಠನಂ ॥ ೮೭ ॥**

**ಲಲಾಟಾದಿಪ್ರದೇಶೇಷು ತ್ರಿಪುಂಡ್ರಸ್ಯ ಚ ಧಾರಣಂ ।**
**ವೇದವೇದಾಂಗನಿಷ್ಠಸ್ಯ ಮಹಾಕಾರುಣ್ಯವಾರಿಧೇಃ ॥ ೮೮ ॥**

**ಗುರೋಃಶುಶ್ರೂಷಣಂ ನಿತ್ಯಂ ವರಿಷ್ಠಮಿತಿ ಕೀರ್ತಿತಂ ।**
**ಏವಂ ಜ್ಞಾತ್ವಾ ತು ಮತಿಮಾ ಜ್ಞಾನಾಂಗಾನಿ ಸದಾ ಚರೇತ್ ॥ ೮೯ ॥**

**ಮಾರ್ಗಾಂತರೋದಿತಾ ದ್ಧರ್ಮಾತ್‌ಸ್ಮಾರ್ತೋ ಧರ್ಮ ಸ್ಸುಶೋಭನಃ ।**
**ಸ್ಮಾರ್ತಾದ್ವೈದಿಕಧರ್ಮಸ್ತು ತಸ್ಮಾಚ್ಛ್ರೇಷ್ಠೋ ನ ವಿದ್ಯತೇ ॥ ೯೦ ॥**

---

ವನು. ಶಿವನಲ್ಲಿ ಭಕ್ತಿಯುಳ್ಳವನಾಗಿರುವನು. ಶಿವವ್ರತಾಂಗವಾದ ರುದ್ರಾಕ್ಷಧಾರಣ ಮಾಡುವನು. ಅಗ್ನಿರಿತ್ಯಾದಿ ಮಂತ್ರಗಳಿಂದ ಭಸ್ಮಾವಗುಂಠನೆಯನ್ನೂ ಭಸ್ಮಧಾರಣ ವನ್ನೂ ಮಾಡುವನು, ದಯೆಯುಳ್ಳವನಾದ ಜ್ಞಾನಿಯಾದ ಗುರುವನ್ನು ಶುಶ್ರೂಷೆ ಮಾಡುವನು. ಆದ್ದರಿಂದ ಇವೆಲ್ಲವೂ ಉತ್ತಮೋತ್ತಮವಾದ ಧರ್ಮವೆಂದು ಹೇಳಿರುವುದು. ಬುದ್ಧಿವಂತನು ಹೀಗೆ ತಿಳಿದುಕೊಂಡು ಯಾವಾಗಲೂ ಜ್ಞಾನಾಂಗಗಳನ್ನು ಆಚರಿಸಬೇಕು.

೯೦–೯೧. ಶ್ರೌತಸ್ಮಾರ್ತ ಧರ್ಮಗಳಿಂದ ಬೇರೆಯಾದ ತಂತ್ರಗಳಲ್ಲಿ ಹೇಳಿರುವ ಧರ್ಮಾಚರಣೆಗಿಂತ ಸ್ಮೃತಿಯಲ್ಲಿ ಹೇಳಿರುವ ಧರ್ಮವನ್ನು ಆಚರಿಸುವುದು ಉತ್ತಮವು. ಸ್ಮಾರ್ತಧರ್ಮಾಚರಣೆಗಿಂತ ವೇದೋಕ್ತ ಧರ್ಮಾಚರಣೆಯು ಇನ್ನೂ ಶ್ರೇಯಸ್ಕರವಾದದ್ದು. ಇದಕ್ಕಿಂತಲೂ ಶ್ರೇಷ್ಠವಾದ ಧರ್ಮವು ಬೇರೆ ಇನ್ನೊಂದಿಲ್ಲವು. ಎಲ್ಲಕ್ಕೂ ಶಿವನೇ ಕಾರಣನಾಗಿರುವಾಗ "ಇದು ಧರ್ಮವು ಅದು ಅಧರ್ಮವು" ಎಂದು

ಧರ್ಮಾಧರ್ಮವಿಭಾಗೇ ತು ಶಿವೇ ಪರಮಕಾರಣೇ ।
ಶ್ರುತಿರೇವ ಪ್ರಮಾಣಂ ಸ್ಯಾತ್ ಸ್ಮೃತಿ ಸ್ತದನುಸಾರತಃ ॥ ೯೧ ॥

ಸರ್ವಂ ಜಗಚ್ಛಿವ ಇತಿ ಜ್ಞಾನಂ ಭೋಗಾಪವರ್ಗದಂ ।
ತತ್ಜ್ಞಾನೇನ ಚ ತುಲ್ಯಂ ಚ ವರಂ ಕಿಂಚಿನ್ನ ವಿದ್ಯತೇ ॥ ೯೨ ॥

ಇತ್ಯುಕ್ತ್ವಾ ಗುರುಮೂರ್ತಿಸ್ತು ಮುನೀನಾಂ ಹೃದಯಾನಿ ಚ ।
ಸಂಸ್ಪೃಶ್ಯ ಸರ್ವವೇದಾರ್ಥಜ್ಞಾನಂ ಯುಷ್ಮಾಕ ಮಸ್ತ್ವಿತಿ ॥ ೯೩ ॥

ಉಕ್ತ್ವಾ ಚಾಂತರ್ದಧೇ ಲಿಂಗೇ ದೇವೋ ಭೂದೇವವಿಗ್ರಹಃ ।
ಅಥ ಕಣ್ವಾದಿಭೂದೇವಾ ಸ್ಸರ್ವವೇದಾರ್ಥ ಮದ್ಭುತಂ ॥ ೯೪ ॥

---

ನಿಂಗಡ ಮಾಡುವ ವಿಷಯದಲ್ಲಿ ವೇದವನ್ನು ಪ್ರಮಾಣವಾಗಿ ತಿಳಿಯಬೇಕು. ವೇದ ವನ್ನು ಅನುಸರಿಸಿ ಧರ್ಮಗಳನ್ನು ಸ್ಮೃತಿ ಗ್ರಂಥಗಳಲ್ಲಿ ಹೇಳಿರುವುದರಿಂದ ಸ್ಮೃತಿ ಗಳೂ ವೇದಗಳಂತೆಯೇ ಪ್ರಮಾಣಗಳಾಗಿ, ಇರುವವು.

೯೨-೯೫. ಜಗತ್ತೆಲ್ಲವೂ ಶಿವನ ರೂಪವಾಗಿರುವುದು. ಎಂಬ ಜ್ಞಾನವು ಅನುಭವಕ್ಕೆ ಬಂದಾಗ ಆ ಜ್ಞಾನವು ಭುಕ್ತಿ ಮುಕ್ತಿಗಳನ್ನು ಉಂಟುಮಾಡುವುದು ಈ ಜ್ಞಾನಕ್ಕೆ ಸಮನಾದ ಬೇರೆ ಇನ್ನೊಂದು ಜ್ಞಾನವು ಇರುವುದಿಲ್ಲ." ಎಂದು ಕಣ್ವನೇ ಮೊದಲಾದ ಋಷಿಗಳಿಗೆ ಪ್ರತ್ಯಕ್ಷವಾಗಿ ದಕ್ಷಿಣಾಮೂರ್ತಿ ದೇವನು ಉಪದೇಶ ಮಾಡಿದನು. ಆ ಋಷಿಗಳ ಹೃದಯವನ್ನು ಸ್ಪರ್ಶಮಾಡಿ, "ವೇದಾರ್ಥ ಜ್ಞಾನವು ನಿಮಗೆ ಉಂಟಾಗಲಿ" ಎಂದು ಹೇಳಿದನು. ಅನಂತರದಲ್ಲಿ ಬ್ರಾಹ್ಮಣನ ಆಕಾರದಿಂದ ಇದ್ದ ಅವನು ಆ ಮಹಾಲಿಂಗದಲ್ಲಿ ಐಕ್ಯವಾದನು. ಆಗ ಕಣ್ವಋಷಿಯೇ ಮೊದಲಾದವರು "ಕೈಯ್ಯಿನಲ್ಲಿರುವ ನಿರ್ಮಲವಾದ ನೀರನ್ನು ನೋಡಿ ಅದನ್ನು ತಿಳಿಯುವಂತೆ" (ಕರತಲಾಮಲಕದಂತೆ) ಆಶ್ಚರ್ಯಕರವಾದ ವೇದಾರ್ಥವನ್ನು ಆ ಕ್ಷಣ ದಲ್ಲಿಯೇ ತಿಳಿದುಕೊಂಡರು. ಹಾಲಾಸ್ಯೇಶ್ವರನ ಹದಿನಾರನೆಯ ಲೀಲೆಯನ್ನು ಹೀಗೆ

**ಜಾನಂತಿ ತತ್‌ಕ್ಷಣಾದೇವ ಕರಸ್ಥಾಮಲಕಂ ಯಥಾ ।**
**ಇತಿ ಲೀಲಾ ಷೋಡಶೀ ಚ ಪ್ರೋಕ್ತಾ ಹಾಲಾಸ್ಯವಾಸಿನಃ　　　॥ ೬೫ ॥**
**ಶೃಣ್ವತಾಂ ಚ ಸಕೃತ್‌ಪುಂಸಾಂ ಶಿವಜ್ಞಾನಪ್ರದಾಯಿನೀ ।**

**ಇತಿ ಶ್ರೀ ಸ್ಕಾಂದಪುರಾಣೇ ಅಗಸ್ತ್ಯಸಂಹಿತಾಯಾಂ ಹಾಲಾಸ್ಯ**
**ಮಾಹಾತ್ಮ್ಯೇ ವೇದಾರ್ಥೋಪದೇಶೋನಾಮ**
**ದ್ವಾವಿಂಶೋಽಧ್ಯಾಯಃ**

---

ಹೇಳಿರುವೆನು. ಇವನ್ನು ಒಂದು ಸಾರಿಯಾದರೂ ಕೇಳಿದವರಿಗೆ ಶಿವನಲ್ಲಿ ಸರಿಯಾದ ಜ್ಞಾನವು ಉಂಟಾಗುವುದು" ಎಂದು ಅಗಸ್ತ್ಯ ಋಷಿಯು ವಸಿಷ್ಠನೇ ಮೊದಲಾದ ಋಷಿಗಳಿಗೆ ಉಪದೇಶಮಾಡಿದನು.

ಸ್ಕಾಂದಪುರಾಣದ ಅಗಸ್ತ್ಯ ಸಂಹಿತೆಯಲ್ಲಿ ಹಾಲಾಸ್ಯ ಮಾಹಾತ್ಮ್ಯೆಯಲ್ಲಿ
ವೇದಾರ್ಥೋಪದೇಶವೆಂದು ಹೆಸರುಳ್ಳ ಇಪ್ಪತ್ತೆರಡನೆಯ
ಅಧ್ಯಾಯವು ಮುಗಿದುದು.

